अङ्कप्रवेशकाव्यं भवति हि तन्नाटकं नाम ॥ ११ ॥
नृपतीनां यच्चरितं नानारसभावसंभृतं बहुधा ।
सुखदुःखोत्पत्तिकृतं भवति हि तन्नाटकं नाम ॥ १२ ॥



# ದಶರೂಪಕ

ಅನುವಾದ : ಕೆ. ಎ. ಸುಬ್ಬಣ್ಣ

अङ्कावस्थोपेत काय प्रसमीक्ष्य बिन्दुविस्तारात् ।
कर्तव्योऽङ्कस्तज्ज्ञैः स तु सम्यङ् नाटके विधिवत् ॥ १३ ॥
अङ्क इति रूढिशब्दो भावैश्च रसैश्च रोहयत्यर्थान् ।
नानाविधानयुक्तो यस्मात्तस्माद्भवेदङ्कः ॥ १४ ॥
[ अङ्कसमाप्तिः काव्यच्छेदो न बीजसंहारः ।
वस्तुव्यापी बिन्दुः काव्यसमुत्थोऽत्र नित्यं स्यात् ॥ १५ ॥ ]
यत्रार्थस्य समाप्तिर्यत्र च बीजस्य भवति संहारः ।
किंचिदवलग्नबिन्दुः सोऽङ्क इति सदाऽवगन्तव्यः ॥ १६ ॥
ये नायका निगदितास्तेषां प्रत्यक्षचरितसंयोगः ।
नानावस्थान्तरितः कार्यस्त्वङ्को विकृष्टस्तु ॥ १७ ॥

ದಿ। ಮೃತ್ಯುಂಜಯ ಸಾರಂಗಮಠ
ಸ್ಮಾರಕ ಪ್ರಶಸ್ತಿ-೧೯೯೪
ಕೊಡುಗೆ

೧೯೯೪ ಮಾರ್ಚ ೧೧ ಶುಕ್ರವಾರ



ಧನಂಜಯ ವಿರಚಿತ

# ದಶರೂಪಕ

ಕನ್ನಡ ಅನುವಾದ

ಧನಂಜಯ ವಿರಚಿತ

# ದಶರೂಪಕ

(ಮೂಲ ಮತ್ತು ಕನ್ನಡ ಅನುವಾದ)

ಧನಿಕಕೃತ ದಶರೂಪಾವಲೋಕವ್ಯಾಖ್ಯೆಯ ಅನುವಾದ
ಹಾಗೂ ಇತರ ಸಹಾಯಕ ಸಾಮಗ್ರಿಗಳ ಸಮೇತ

ಅನುವಾದಕ

ಕೆ. ವಿ. ಸುಬ್ಬಣ್ಣ



ನೀನಾಸಮ್ ರಂಗಶಿಕ್ಷಣ ಕೇಂದ್ರ,
ಮತ್ತು
ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ) ಕರ್ನಾಟಕ

*DASHAROOPAKA: (Kannada) Translation of the sanskrit treatise on dramaturgy by Dhananjaya and Commentary by Dhanika (both 10 cen.A.D.) with detailed introduction, notes etc., by K.V. Subbanna; Published by Ninasam Rangashikshana Kendra and Akshara Prakashana, Heggodu (Sagar) Karnataka - 577 417;*
*Printed at Shobha Process Printers, Darbe, Puttur, Da. Ka.*

*2nd edition (1st 1958); 1992 March, 1000 copies*

*Pages : lxxiii + ೨೯೯*



*ಕೃತಜ್ಞತೆ :*

**ಕರ್ನಾಟಕ ನಾಟಕ ಅಕಾಡೆಮಿ**
**ಬೆಂಗಳೂರು**

**ಬೆಲೆ : ತೊಂಬತ್ತು ರೂಪಾಯಿ**

# ಅರಿಕೆ

ಶ್ರೀ ಕೆ.ವಿ. ಸುಬ್ಬಣ್ಣನವರಿಗೆ ಕರ್ನಾಟಕ ನಾಟಕ ಅಕಾಡೆಮಿಯು ಗೌರವ ಪ್ರಶಸ್ತಿಯನ್ನು ನೀಡಲು ನಿರ್ಧರಿಸಿದಾಗ, ಸುಬ್ಬಣ್ಣನವರು ವಿನಯಪೂರ್ವಕವಾಗಿ ನಿರಾಕರಿಸಿದರು. ಏಷ್ಯಾದ ಅತ್ಯಂತ ಪ್ರತಿಷ್ಠಿತ 'ಮ್ಯಾಗ್ಸೆಸೆ' ಪ್ರಶಸ್ತಿ ಬಂದಾಗ, ಮತ್ತೆ ಅಕಾಡೆಮಿಯು ಸುಬ್ಬಣ್ಣನವರನ್ನು ಸನ್ಮಾನಿಸಲು ಉದ್ದೇಶಿಸಿತು – ಸುಬ್ಬಣ್ಣ ಪುನಃ ಅಷ್ಟೇ ವಿನಯವಾಗಿ ನಿರಾಕರಿಸಿದರು.

ಸುಬ್ಬಣ್ಣನವರನ್ನು ಚೆನ್ನಾಗಿ ಬಲ್ಲವರಿಗೆ ಅವರ ಈ ವರ್ತನೆ ಆಶ್ಚರ್ಯ ತರುವಂತಹದಲ್ಲ.

ಪ್ರಶಸ್ತಿಗಳನ್ನು ಬೆನ್ನಟ್ಟಿ ಓಡುವ ಈ ಕಾಲದಲ್ಲಿ ಪ್ರಶಸ್ತಿಗಳೇ, ತಮ್ಮ ಮೌಲ್ಯವನ್ನೇ ಹೆಚ್ಚಿಸಿಕೊಳ್ಳಲು ಅರ್ಹರನ್ನು ಹುಡುಕಿ ಹೋಗುವ ಅಪರೂಪದ ಪ್ರಸಂಗಗಳು; ಸುಬ್ಬಣ್ಣನವರಿಗೆ ಸಂದ ಪ್ರಶಸ್ತಿಗಳು.

ಇಡೀ ಸಾಂಸ್ಕೃತಿಕ ಜಗತ್ತಿನ ಗಮನವನ್ನು ಮಲೆನಾಡ ಮೂಲೆಯ ಪುಟ್ಟ ಹಳ್ಳಿ ಹೆಗ್ಗೋಡಿಗೆ ಸೆಳೆದ ಸುಬ್ಬಣ್ಣ, ಹೆಗ್ಗೋಡು, ಸ್ವಯಂ ಸಂಪೂರ್ಣವಾದ ಸಾಂಸ್ಕೃತಿಕ ಕೇಂದ್ರವಾಗಿರುವ ಹಿಂದಿನ ಪ್ರೇರಕ ಶಕ್ತಿ. ಈಗ ಸಾಂಸ್ಕೃತಿಕ ಪುನರುತ್ಥಾನದ ನೇತಾರರಾಗಿ ರೂಪುಗೊಂಡಿರುವ ಸುಬ್ಬಣ್ಣ ಬಹು ಎತ್ತರದ ವ್ಯಕ್ತಿ.

ಇಂತಹ ಸುಬ್ಬಣ್ಣನವರಿಗೆ ನಾಟಕ ಅಕಾಡೆಮಿಯಿಂದ ಸಲ್ಲಬೇಕಾದ ಗೌರವ ಸಂದಿಲ್ಲವೆಂಬ ವ್ಯಥೆ ಅಕಾಡೆಮಿಗೆ ಇದ್ದಿತು.

ಸುಬ್ಬಣ್ಣನವರ ಆಳವಾದ ಅಧ್ಯಯನ, ವಿಚಾರ ಮಂಥನಗಳ ಸಾರ ಸಂಗ್ರಹವಾದ 'ದಶರೂಪಕ' ಪುಸ್ತಕವು ವಿಮರ್ಶಕರಿಗೆ, ರಂಗಾಸಕ್ತರಿಗೆ ಬಹಳ ಉಪಯುಕ್ತ ಪರಾಮರ್ಶನ ಪುಸ್ತಕವಾಗಿತ್ತು. ಈಗ ಅದು ಸುಲಭವಾಗಿ ದೊರೆಯುತ್ತಿಲ್ಲ. ಈ ಸಮಸ್ಯೆಯನ್ನು ನಿವಾರಿಸಲು ಅಕಾಡೆಮಿಯು ಮುಂಗಡ ಹಣ ಕೊಟ್ಟು 450 ಪ್ರತಿಗಳನ್ನು ನಿಜಬೆಲೆಯಲ್ಲಿ ಕೊಂಡುಕೊಳ್ಳುವ ಮೂಲಕ ಸುಬ್ಬಣ್ಣನವರಿಗೆ ಗೌರವ ಸಲ್ಲಿಸಲು ನಿರ್ಧರಿಸಿತು. ಇದಕ್ಕೆ ಒಪ್ಪಿಗೆಯನ್ನು ಕೊಟ್ಟ ಸುಬ್ಬಣ್ಣನವರಿಗೆ ಅಕಾಡೆಮಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ವಿಷಯ ಅಕಾಡೆಮಿಯ ಪಾಲಿಗೆ ಹೆಮ್ಮೆಯ ಹಾಗೂ ಸಂತೋಷದ ವಿಷಯವಾಗಿದೆ.

ಅಕಾಡೆಮಿಯು ಈ ಯೋಜನೆಗೆ ಸಹಕರಿಸಿದ ಅಕ್ಷರ ಪ್ರಕಾಶನ, ಸಾಗರ ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತದೆ.

ಈ ಪುಸ್ತಕವು ಕನ್ನಡ ರಂಗ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿದೆ ಎನ್ನುವುದನ್ನು ಪ್ರತ್ಯೇಕ ಹೇಳಬೇಕಿಲ್ಲ.

ಶ್ರೀನಿವಾಸ್ ಜಿ. ಕಪ್ಪಣ್ಣ — ಪದ್ಮಶ್ರೀ ಚಿಂದೋಡಿ ಲೀಲಾ

# ವಿನಂತಿ

ನಮ್ಮ ನೀನಾಸಮ್ ರಂಗಶಿಕ್ಷಣ ಕೇಂದ್ರವನ್ನು ಪ್ರಾರಂಭಿಸಿ, ಸಾಧ್ಯವಾದ ಮಟ್ಟಿಗೂ ಕನ್ನಡದಲ್ಲೇ ಶಿಕ್ಷಣವನ್ನು ಒದಗಿಸಲು ನಿರ್ಧರಿಸಿದಾಗ ಅಗತ್ಯವಾದ ರಂಗಶಿಕ್ಷಣ ಸಾಹಿತ್ಯವನ್ನು ತಯಾರಿಸಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ತಯಾರಿಸಿಕೊಂಡದ್ದನ್ನು ಆಸಕ್ತರ ಉಪಯೋಗಕ್ಕಾಗಿ ಅಕ್ಷರ ಪ್ರಕಾಶನದ ನೆರವಿನಿಂದ ಪ್ರಕಟಿಸಲು ಯೋಚಿಸಿ, ಈಗಾಗಲೇ ಹಲವು ಪುಸ್ತಕಗಳನ್ನು ಪ್ರಕಟಿಸಿದ್ದೇವೆ. ಈ ಸರಣಿಯಲ್ಲಿ ಉಪಯುಕ್ತವಾಗಬಹುದಾದ 'ದಶರೂಪಕ'ದ ಎರಡನೇ ಮುದ್ರಣವನ್ನು ಈಗ ಹೊರತರುತ್ತಿದ್ದೇವೆ.

ಕರ್ನಾಟಕ ರಾಜ್ಯ ನಾಟಕ ಅಕಾಡೆಮಿಯು ಈ ಪ್ರಕಟಣೆಯಲ್ಲಿ ನೆರವಾಗಲು ಮುಂದೆ ಬಂದಿದೆ. ಮುಂಗಡ ಹಣಕೊಟ್ಟು 400ಕ್ಕೂ ಮಿಕ್ಕ ಪ್ರತಿಗಳನ್ನು ಸಗಟಾಗಿ ನಿಜಬೆಲೆಗೆ ಕೊಂಡುಕೊಳ್ಳುತ್ತಿದೆ. ಈ ಸಹಾಯಕ್ಕಾಗಿ ಅಕಾಡೆಮಿಗೆ ನಾವು ಕೃತಜ್ಞರು.

ಹೆಗ್ಗೋಡು
ಮಾರ್ಚ್ 1992

**ನೀನಾಸಮ್ ರಂಗಶಿಕ್ಷಣ ಕೇಂದ್ರ**

# ಅನುವಾದಕನ ಅರಿಕೆ

1958ರಲ್ಲಿ ಮೊದಲು ಪ್ರಕಟವಾದ ಈ ಪುಸ್ತಕದ ಎರಡನೇ ಯಥಾಮುದ್ರಣ ಈಗ ಹೊರಬರುತ್ತಿದೆ. ಮೊದಲ ಮುದ್ರಣದ ಪ್ರತಿಗಳು 4-5 ವರ್ಷಗಳಲ್ಲೇ ತೀರಿದರೂ ಈ ತನಕ ಪುನರ್ಮುದ್ರಣ ಸಾಧ್ಯವಾಗಿರಲಿಲ್ಲ. ಮಿತ್ರ ಚಿದಂಬರರಾವ್ ಜಂಬೆ, ಶ್ರೀ ಸತ್ಯನಾರಾಯಣ ರಾವ್, ಶ್ರೀ ಜಿ. ಶ್ರೀನಿವಾಸ್ (ಕಪ್ಪಣ್ಣ) ಮುಂತಾದ ಗೆಳೆಯರ ಆಸಕ್ತಿ ಒತ್ತಾಯಗಳಿಂದ ಅದೀಗ ಸಾಧ್ಯವಾಗುತ್ತಿದೆ. ಕರ್ನಾಟಕರಾಜ್ಯ ನಾಟಕ ಅಕಾಡೆಮಿ ಈ ಪ್ರಕಟಣೆಯನ್ನು ಸಾಧ್ಯಮಾಡಿ ಕೊಟ್ಟಿದೆ. ಈ ಎಲ್ಲರಿಗೆ, ಮತ್ತು ಅಂದವಾಗಿ ಮುದ್ರಿಸಿಕೊಟ್ಟ ಪುತ್ತೂರಿನ ಶೋಭಾ ಪ್ರೊಸೆಸ್ ಪ್ರಿಂಟರ್ಸ್‌ನ ಎಮ್.ಎಸ್. ರಘುನಾಥ ರಾವ್ ಮತ್ತು ಬಳಗದವರಿಗೆ ನಾನು ಕೃತಜ್ಞ.

ಇನ್ನುಳಿದಂತೆ ಮೊದಲ ಮುದ್ರಣದ 'ಅರಿಕೆ'ಯನ್ನು ಇಲ್ಲಿ ಪುನರುದ್ಧರಿಸಿ ಕೊಡುತ್ತಿದ್ದೇನೆ :

ಸ್ವಪರಂಪರೆಯನ್ನವಲಂಬಿಸದ ಬೆಳವಣಿಗೆ ಸಹಜವಾಗದು, ಸುಪುಷ್ಟವಾಗದು. ಅಂತೆಯೇ, ಲಲಿತಕಲಾಶಾಸ್ತ್ರದ ನಮ್ಮ ಪೂರ್ವಪರಂಪರೆಯನ್ನು ತಿಳಿದಲ್ಲದೆ ನಮಗೆ ಇಂದು ಅಗತ್ಯವಾದ ನೂತನ ಕಲಾಶಾಸ್ತ್ರ, ಸಹಜ ಅರಳಿದಂತೆ, ಹುಟ್ಟಿ ಬೆಳೆಯಲಾರದು. ನಾಟ್ಯಕಲೆಯ ವಿಷಯವನ್ನು ತೆಗೆದುಕೊಂಡರೂ ಅಷ್ಟೆ : ನಮ್ಮಲ್ಲಿ ಈ ಶತಮಾನದ ನೂತನ ನಾಟ್ಯಶಾಸ್ತ್ರ ಹುಟ್ಟಿ ಬೆಳೆಯಬೇಕಾದರೆ ಮೊದಲಿಗೆ ನಮ್ಮ ಭಾರತೀಯ ನಾಟ್ಯಶಾಸ್ತ್ರದ ಪರಂಪರೆ ಸ್ಪಷ್ಟ ತಿಳಿಯಬೇಕು. ಅದಕ್ಕೆ ಮುಖ್ಯವಾಗಿ, ಸಂಸ್ಕೃತದಲ್ಲಿರುವ ನಾಟ್ಯವಿಷಯಕ ಗ್ರಂಥಗಳೆಲ್ಲವೂ ಪ್ರಾದೇಶಿಕ ಭಾಷೆಗಳಲ್ಲಿ ಅನುವಾದವಾಗಬೇಕು.

ಸಂಸ್ಕೃತದ ನಾಟ್ಯಶಾಸ್ತ್ರಗ್ರಂಥಗಳಲ್ಲಿ ಮುಖ್ಯ ಒಂದಾದ 'ದಶರೂಪಕ'ವನ್ನು ಅನುವಾದಿಸಿ ಪ್ರಕಟಿಸುವುದರಲ್ಲಿ ಮೇಲಿನ ಪ್ರಯೋಜನದ ದೃಷ್ಟಿಯೊಂದಿದೆ. ಜೊತೆಗೆ, ಅದಕ್ಕಿಂತ ಕಡಿಮೆಯಲ್ಲದ ಇನ್ನೊಂದು ಪ್ರಯೋಜನವೂ ಈ ಪ್ರಕಟಣೆಯಲ್ಲಿ ಲಕ್ಷ್ಯವಾಗಿದೆ : ಜ್ಞಾನೇಚ್ಛುಗಳಿಗೆ ಇಂಥ ಗ್ರಂಥಗಳು ವೇದೋಪವಸತಿಯನ್ನು ಕಲ್ಪಿಸಿಕೊಡುತ್ತವೆಂಬುದು. ಪ್ರಾಯಃ, ಮೂಲಗ್ರಂಥಕಾರ ಉದ್ದೇಶಿಸಿದ ಪ್ರಯೋಜನ ಕೂಡ ಇಂಥದೇ : ಗ್ರಂಥಾರಂಭದ 'ವ್ಯಾಕೀರ್ಣೇ ಮಂದಬುದ್ಧೀನಾಂ ಜಾಯತೇ ಮತಿವಿಭ್ರಮಃ ತಸ್ಯಾರ್ಥಸ್ತತ್ಪದೈಸ್ತೇನ ಸಂಕ್ಷಿಪ್ಯ ಕ್ರಿಯತೇಂಜಸಾ' (೧-೫) ಎಂಬ ಶ್ಲೋಕದಲ್ಲಿ ಹಾಗೂ ಗ್ರಂಥಾಂತ್ಯದ 'ವಿಷ್ಣೋಃ ಸುತೇನಾಪಿ ......' ಇ., (೪-೯೧) ಶ್ಲೋಕದ 'ವಿದ್ವನ್ಮನೋರಾಗನಿಬಂಧಹೇತುಃ' ಎಂಬ ಮಾತಿನಲ್ಲಿ ಅದು ವ್ಯಕ್ತವಾಗಿದೆಯೆಂದು ನನ್ನ ಗ್ರಹಿಕೆ.

........ಐದು ವರ್ಷಗಳ ಹಿಂದೆ, ನನ್ನ ಮಾನ್ಯ ಮಿತ್ರರಾದ ವಿದ್ವಾನ್ ಶ್ರೀ ನಾರಾಯಣ ಕೃಷ್ಣ ಶರ್ಮಾ, ಬುಚ್ಚನ್ ಅವರು ಮತ್ತು ನಾನು ಕೂಡಿ ಈ ಗ್ರಂಥದ ಕಾರಿಕೆಗಳ ಸಾರವನ್ನು ಮಾತ್ರ ಸಂಕ್ಷೇಪವಾಗಿ ಕನ್ನಡದಲ್ಲಿ ಕೊಡುವುದೆಂದು ಯೋಜಿಸಿಕೊಂಡೆವು. ಗ್ರಂಥವನ್ನು ಓದುತ್ತ ಜೊತೆಜೊತೆಯಲ್ಲೆ ಕಾರಿಕೆಗಳ ಹಾಗೂ ವ್ಯಾಖ್ಯೆಯ ಮುಖ್ಯಾಂಶಗಳ ಸಾರವನ್ನು ಕನ್ನಡದಲ್ಲಿ ಗುರುತಿಸಿಕೊಂಡೆವು. ಮುಂದೆ ನಾವಿಬ್ಬರೂ ಒಟ್ಟಿಗೆ ಸೇರುವುದಾಗಲಿಲ್ಲ.

ಆದಾದಮೇಲೆ, ಅವರ ಹಿಂದಿನ ಮಾರ್ಗದರ್ಶನದಿಂದ ನಾನು ಪುನಃ ಗ್ರಂಥವನ್ನು ಅಭ್ಯಾಸ ಮಾಡಿದೆ. ನೆರವಿಗೆ ಈ ಗ್ರಂಥದ ಇಂಗ್ಲಿಷ್ ಅನುವಾದಗಳು, ಹಿಂದೀ ಅನುವಾದ ಹಾಗೂ ಇತರ ಹಲವು ಗ್ರಂಥಗಳು ಒದಗಿದವು. ಕಳೆದ ಮೂರು ವರ್ಷಗಳ ಅವಧಿಯಲ್ಲಿ ಸಮಗ್ರ ಗ್ರಂಥದ ಅನುವಾದವನ್ನು ಕೈಗೊಂಡು ಮುಗಿಸಿದ್ದೇನೆ. ಹೀಗೆ, ಈಗ ಪ್ರಕಟವಾಗುತ್ತಿರುವ ಗ್ರಂಥ ಮೊದಲು ನಾವು ಯೋಜಿಸಿಕೊಂಡದ್ದಕ್ಕಿಂತ ತೀರ ಭಿನ್ನವಾಗಿದೆ; ಗಾತ್ರದಲ್ಲಿ ಬಹುಪಾಲು ಬೆಳೆದಿದೆ. ಮೇಲಾಗಿ, ಈ ವಿಸ್ತೃತ ಗ್ರಂಥವನ್ನು ಸಿದ್ಧಪಡಿಸುವಾಗ ನನ್ನ ಮಾನ್ಯ ಮಿತ್ರರ ಸಹಾಯ ಪಡೆಯುವ ಅವಕಾಶ ಒದಗಲಿಲ್ಲ. ಈ ಕಾರಣ ಗ್ರಂಥದಲ್ಲಿನ ಎಲ್ಲ ವಿಷಯಗಳಿಗೂ ದೋಷಾದಿಗಳಿಗೂ ನಾನೇ ಹೊಣೆಯಾಗಿದ್ದೇನೆ. ಆದರೂ ವಿದ್ವಾಂಸರಾದ ನನ್ನ ಮಿತ್ರ ಶ್ರೀ ಶರ್ಮರ ಪ್ರೇಮ ಹಾಗೂ ಸದಾಶಯಗಳಿಂದ ಪ್ರಚೋದಿತನಾಗಿ ಮತ್ತು ಗ್ರಂಥದ ಅಭ್ಯಾಸದಲ್ಲಿ ಅವರು ಮೊದಲು ನೀಡಿದ ಸಹಾಯದಿಂದ ಉಪಕೃತನಾಗಿ ಈ ಅನುವಾದವನ್ನು ಪ್ರಕಟಿಸುತ್ತಿದ್ದೇನೆ.

ನನ್ನ ಬಂಧುಗಳೂ ಹಿರಿಯರೂ ಆದ ಶ್ರೀ ಕ. ನರಸಿಂಹಶಾಸ್ತ್ರೀ ಅವರು ಈ ಗ್ರಂಥದ ಹಸ್ತಪ್ರತಿಯನ್ನು ಆಮೂಲಾಗ್ರ ಶೋಧಿಸಿಕೊಟ್ಟಿದ್ದಾರೆ; ಅನೇಕ ಉಪಯುಕ್ತ ಸಲಹೆಗಳನ್ನು ನೀಡಿದ್ದಾರೆ; ನನ್ನ ಸೋಮಾರಿತನವನ್ನು ಕೆಣಕಿ ಕೆಣಕಿ, ಗ್ರಂಥ ಇಷ್ಟಾದರೂ ಬೇಗ ಹೊರಬರಲು ಕಾರಣರಾಗಿದ್ದಾರೆ. ಮಿತ್ರರುಗಳಾದ ವಿದ್ವಾನ್ ಶ್ರೀ ಯಜ್ಞೇಶ್ವರ ಶಾಸ್ತ್ರೀ ಹಾಗೂ ವಿದ್ವಾನ್ ಶ್ರೀ ಕೆ. ಗಣಪಭಟ್ಟರು ಇವರುಗಳು ಕೆಲವು ಉಪಯುಕ್ತ ಸೂಚನೆಗಳನ್ನು ಕೊಟ್ಟು ಉಪಕರಿಸಿದ್ದಾರೆ. ಅನೇಕ ಹಿರಿಯರು ಮತ್ತು ಗೆಳೆಯರು ಈ ಕಾರ್ಯದಲ್ಲಿ ನನಗೆ ಆಶೀರ್ವಾದ ವಿತ್ತಿದ್ದಾರೆ, ವಿಶ್ವಾಸ ಕೊಟ್ಟಿದ್ದಾರೆ. ಗ್ರಂಥಭಂಡಾರ ಹಾಗೂ ಮುದ್ರಾಲಯಗಳಿಂದ ನಾನು ತುಂಬ ದೂರನಾಗಿ ಇದ್ದೇನಾದಕಾರಣ ಈ ಗ್ರಂಥ ನಾನು ಯೋಚಿಸಿಕೊಂಡಷ್ಟು ಸಮರ್ಪಕ ವಾಗಲಿಲ್ಲ. ಆದರೂ, ಒಂದು ಕೊರತೆಯನ್ನು ನೀಗಿಸುವುದರಲ್ಲಿ ನನ್ನ ಪೂಜ್ಯ ಗುರುಗಳಾದ ಶ್ರೀ ಎಸ್.ವಿ. ಪರಮೇಶ್ವರ ಭಟ್ಟರು ಸಹಾಯ ಮಾಡಿದರು. ಮೈಸೂರಿನ ಉಷಾ ಪ್ರೆಸ್ಸಿನ ಒಡೆಯರಾದ ಶ್ರೀ ರಾ.ನಾ. ಹಬ್ಬು ಅವರು ವಹಿಸಿದ ವಿಶೇಷ ಆಸಕ್ತಿಯಿಂದ ಇನ್ನೊಂದು ಕೊರತೆ ಬಹುಮಟ್ಟಿಗೆ ನೀಗಿತು. ಪ್ರತಿಭಾವಂತ ಕಲಾವಿದರಾದ ಶ್ರೀ ಆರ್. ಸೀತಾಪತಿ ನಾಯಿಡು ಅವರ ವಿಶ್ವಾಸ ಕಾರಣವಾಗಿ ಚೆಲುವಾದ ಮುಖಚಿತ್ರ ದೊರೆಯಿತು. ಈ ಎಲ್ಲರಿಗೂ ನಾನು ಋಣಿ. ನನಗೆ ಆತ್ಮೀಯರಾದ ಇನ್ನೊಬ್ಬರು ಈ ಗ್ರಂಥವನ್ನು ಸಿದ್ಧಗೊಳಿಸುತ್ತಿರುವಾಗ ಉಂಟಾದ ಶ್ರಮ ಬೇಸರಗಳನ್ನು ಹಗುರಗೊಳಿಸಿಕೊಟ್ಟಿದ್ದಾರೆ. ಅವರ ಹೆಸರೆತ್ತುವ ಧೈರ್ಯವಿಲ್ಲವಾದರೂ ಇಲ್ಲಿ ಅವರನ್ನು ನೆನೆಯದಿರಲಾರೆ.

ಹೆಗ್ಗೋಡು
ಮಾರ್ಚ್ 1992

ಕೆ. ವಿ. ಸುಬ್ಬಣ್ಣ

# ಪೀಠಿಕೆ

ಭಾರತೀಯ ನಾಟ್ಯಕಲೆಯ ಇತಿಹಾಸವನ್ನು ಆಮೂಲವಾಗಿ ಶೋಧಿಸುವ ಪ್ರಯತ್ನಗಳು ಅನೇಕ ನಡೆದಿವೆ. ಕಳೆದ ನೂರೈವತ್ತು ವರ್ಷಗಳ ಸುಮಾರಿನಲ್ಲಿ ಹಲವಾರು ಪಾಶ್ಚಿಮಾತ್ಯ ಹಾಗೂ ಭಾರತೀಯ ವಿದ್ವಾಂಸರು ಈ ಕಾರ್ಯದಲ್ಲಿ ಶ್ರಮಿಸಿದ್ದಾರೆ. ಆದರೆ ಈವರೆಗೆ ದೊರಕಿರುವ ಸಾಮಗ್ರಿಗಳ ಆಧಾರದ ಮೇಲೆ, ಭಾರತೀಯ ನಾಟ್ಯಕಲೆಯ ಉಗಮವನ್ನು ನಿರ್ಧರಿಸುವುದು ಸಾಧ್ಯವಿಲ್ಲವಾಗಿದೆ. ಈಗ ನಮಗೆ ತಿಳಿದಿರುವಂತೆ, ಕ್ರಿಸ್ತಶಕ ಮೊದಲನೆಯ ಶತಮಾನದಲ್ಲಿದ್ದಿರಬಹುದಾದ ಅಶ್ವಘೋಷನೇ ಪ್ರಥಮ ನಾಟ್ಯಕವಿ. ಆತ ರಚಿಸಿದ ಮಹಾಕಾವ್ಯಗಳಲ್ಲಿ 'ಸೌಂದರನಂದ' ಹಾಗೂ 'ಬುದ್ಧಚರಿತ'ದ ಅರ್ಧಭಾಗ ಈಗ ದೊರೆತಿರುವುದಾದರೂ ಆತನ ನಾಟ್ಯಕಾವ್ಯಗಳಲ್ಲಿ ಯಾವುದೂ ಪೂರ್ಣ ಉಪಲಬ್ಧ ವಾಗಿಲ್ಲ. ದೊರೆತಿರುವ ಕೆಲವೇ ಕೆಲವು ತುಣುಕುಗಳಿಂದ ಆತ ಸಲಕ್ಷಣವಾದ ನಾಟ್ಯ ಕಾವ್ಯಗಳನ್ನು ರಚಿಸಿದ್ದನೆಂದು ಕಲ್ಪಿಸಬಹುದು. ಇದೇ ಆಧಾರದ ಮೇಲೆ, ಆತನ ಕಾಲಕ್ಕೆ ರೂಪಕಸಾಹಿತ್ಯ ಸುಪುಷ್ಟವಾಗಿ ಬೆಳೆದಿದ್ದಿರಬೇಕೆಂದು ಕೂಡ ಊಹಿಸುತ್ತಾರೆ.

ಹೇಗಿದ್ದರೂ, ಕ್ರಿ.ಶ. ಒಂದು ಎರಡನೆಯ ಶತಮಾನದ ವೇಳೆಗೆ ಭಾರತೀಯ ನಾಟ್ಯ ತನ್ನ ಪರಿಪೂರ್ಣ ರೂಪದಲ್ಲಿ ಅರಳಿದ್ದಿತೆಂದು ನಿಃಸಂಶಯ ಹೇಳಬಹುದು. ಈ ಮಾತಿಗೆ ಮುಖ್ಯವಾದ ಆಧಾರ, ಸುಮಾರು ಅದೇ ಕಾಲದಲ್ಲಿ ಅಥವಾ ಅದಕ್ಕಿಂತ ಹಿಂದೆ ರಚಿತವಾದ 'ನಾಟ್ಯಶಾಸ್ತ್ರ' ಎಂಬ ಗ್ರಂಥ.

## ಭಾರತೀಯ ನಾಟ್ಯಶಾಸ್ತ್ರ

**ಭರತಮುನಿಯ ನಾಟ್ಯಶಾಸ್ತ್ರ:** ಭರತಮುನಿಯಿಂದ ರಚಿತವಾದುದೆಂದು ಪ್ರತೀತಿ ಯಿರುವ 'ನಾಟ್ಯಶಾಸ್ತ್ರ' ನಾಟ್ಯಕಲೆಯ ಸರ್ವಾಂಗಗಳನ್ನೂ ವಿವರವಾಗಿ ಲಕ್ಷಿಸುವ ಒಂದು ಬೃಹತ್ ಲಕ್ಷಣಗ್ರಂಥ. ಈ ಲಕ್ಷಣಗ್ರಂಥ ತನಗೆ ಹಿಂದೆ ಇದ್ದ ಹಾಗೂ ಈಗ ಅಜ್ಞಾತ ವಾಗಿರುವ ಲಕ್ಷ್ಯಲಕ್ಷಣಸಂಪತ್ತನ್ನೂ ಸೂಚಿಸುತ್ತದೆಂಬ ಅಂಶ ಗಮನಾರ್ಹವಾದದ್ದು.

ಈಗ ದೊರೆತು ಪ್ರಕಟವಾಗಿರುವ 'ನಾಟ್ಯಶಾಸ್ತ್ರ'ದಲ್ಲಿ ಬೇರೆ ಬೇರೆ ಕಾಲದ ರಚನೆಗಳೂ ಪ್ರಕ್ಷಿಪ್ತವಾಗಿ ಕೂಡಿಕೊಂಡಿರಬಹುದೆಂಬ ಸಂಶಯವಿದೆ. ಆದರೂ ಈ ಗ್ರಂಥದ ಮುಖ್ಯ ಬಹುಭಾಗ ಕ್ರಿ.ಶ. ಒಂದು ಎರಡನೆಯ ಶತಮಾನಗಳಿಗೆ ಮೊದಲೇ ರಚಿತವಾಗಿದ್ದಿತೆಂದು ನಿರ್ಧಾರ ಹೇಳಬಹುದು. ಈ ಗ್ರಂಥದ ಕರ್ತೃ ಭರತಮುನಿಯೆಂದು ಪ್ರತೀತಿಯಿರುವು ದಾದರೂ, ಭರತ ಎಂಬ ಹೆಸರಿನ ಸುತ್ತ ಕವಿದುಕೊಂಡಿರುವ ಪೌರಾಣಿಕ ಛಾಯೆ ಮುಂತಾದುವುಗಳಿಂದ, ಕರ್ತೃ ಯಾರೆಂಬುದನ್ನು ನಿಶ್ಚಿತ ಹೇಳುವಂತಿಲ್ಲ.

---

೧ 'ಪೀಠಿಕೆ'ಯಲ್ಲಿ ಹಾಗೂ ಗ್ರಂಥದಲ್ಲಿ ಉದ್ಧೃತವಾದ ಗ್ರಂಥಗಳು ಮತ್ತು ಗ್ರಂಥಕರ್ತರು ಇವರುಗಳ ಪಟ್ಟಿ–ಅಗತ್ಯ ವಿವರಗಳೊಡನೆ–ಗ್ರಂಥದ ಅಂತ್ಯಭಾಗದಲ್ಲಿವೆ. ನೋಡಿ : 'ಉದ್ಧೃತ ಗ್ರಂಥಗಳು', 'ಉದ್ಧೃತ ಗ್ರಂಥಕರ್ತರು', 'ಇತರ ಸಹಾಯಕ ಗ್ರಂಥಗಳು'.

'ನಾಟ್ಯಶಾಸ್ತ್ರ' ಮೂವತ್ತಾರು–ಅಥವಾ ಮೂವತ್ತೇಳು–ಅಧ್ಯಾಯಗಳಲ್ಲಿ ಸುಮಾರು ಆರುಸಾವಿರ ಶ್ಲೋಕಗಳಿರುವ ಉದ್ಗ್ರಂಥ. ಗ್ರಂಥದ ಬಹುಭಾಗ ಅನುಷ್ಟುಪ್ ಶ್ಲೋಕಗಳಲ್ಲಿದೆ. ಅಲ್ಲಲ್ಲಿ ಜೊತೆಗೆ ಮಹಾಭಾಷ್ಯಶೈಲಿಯ ಗದ್ಯಭಾಗವೂ ಉಂಟು. ವಿಷಯಗಳನ್ನು ಹೇಳುವಲ್ಲಿ ಕೆಲವೆಡೆ ಅದಕ್ಕೆ ಆಧಾರವಾಗಿ ಆರ್ಯಾ ಶ್ಲೋಕಗಳನ್ನೂ ಉದ್ಧರಿಸಿರುವುದುಂಟು. ಹೀಗೆ ಉದ್ಧೃತವಾಗಿರುವ 'ಆನುವಂಶಿಕ' ಆರ್ಯೆ ಹಾಗೂ ಶ್ಲೋಕಗಳಿಂದ 'ನಾಟ್ಯಶಾಸ್ತ್ರ'ಕ್ಕೆ ಹಿಂದೆ ಬೇರೆ ನಾಟ್ಯಲಕ್ಷಣ ಗ್ರಂಥಗಳಿದ್ದುವೆಂಬ ಊಹೆಗೆ ಸಮರ್ಥನೆ ದೊರೆಯುತ್ತದೆ. ವಿಷಯಗಳು ತುಂಬ ಇಡಿಕಿರಿದುಕೊಂಡಿವೆಯಾಗಿ ಈ ಗ್ರಂಥದ ವಿಭಾಗಕ್ರಮ ಅಷ್ಟು ಸಮರ್ಪಕವಾಗಿಲ್ಲ. ಲಕ್ಷಣಗ್ರಂಥಗಳಿಗೆ ಸಹಜವಾದ ಭಾಷೆಯ ಬಿಗಿ ಅಡಕಗಳು ಇಲ್ಲಿ ಕಾಣವು. ಬದಲು, ಪುರಾಣಶೈಲಿಯಲ್ಲಿ ಸಾವಧಾನವಾಗಿ ಬಿಡಿಬಿಡಿಸಿ ಹೇಳುತ್ತ ಹೋಗುವ ಒಂದು ಬಗೆಯನ್ನು ಈ ಗ್ರಂಥದಲ್ಲಿ ಕಾಣಬಹುದು. ಗ್ರಂಥಕರ್ತೃ ಎಲ್ಲ ಕಲಾಪ್ರಕಾರಗಳಲ್ಲೂ ರಸೈಕದೃಷ್ಟಿಯನ್ನಿಟ್ಟುಕೊಂಡಿರುವುದು ಮತ್ತು ಒಂದೊಂದು ಕಲಾಪ್ರಕಾರದ ಬಂಧ ನಿಯಮಗಳಲ್ಲೂ ರಸಕಾರಣವಾದ ಪ್ರತಿಭಾ ಪ್ರಕಾಶನದ ವಿಸ್ತಾರಕ್ಕೆ ಉದಾರ ಅವಕಾಶ ಕೊಟ್ಟಿರುವುದು ಗ್ರಂಥದ ಉದ್ದಕ್ಕೂ ಎದ್ದು ತೋರುತ್ತದೆ.

ಈ ಗ್ರಂಥದಲ್ಲಿ ಲಕ್ಷಿತವಾಗಿರುವ ವಿಷಯಗಳನ್ನು–ತುಂಬ ಸ್ಥೂಲವಾಗಿ–ಹೀಗೆ ಸಂಗ್ರಹಿಸಬಹುದು : ಅಧ್ಯಾಯ ೧. ನಾಟ್ಯದ ಉತ್ಪತ್ತಿ; ೨. ರಂಗಮಂಟಪ; ೩. ರಂಗದೈವತಪೂಜೆ; ೪. ತಾಂಡವ ಲಕ್ಷಣ; ೫. ಪೂರ್ವರಂಗವಿಧಾನ; ೬, ೭. ರಸಭಾವಗಳು; ೮ರಿಂದ ೧೩. ಆಂಗಿಕಾಭಿನಯಗಳು; ೧೪. ಪ್ರವೃತ್ತಿಗಳು; ೧೫ರಿಂದ ೧೯. ವಾಚಿಕಾಭಿನಯ (ಛಂದಸ್ಸು, ವೃತ್ತಬಂಧಗಳು, ಲಕ್ಷಣಾಲಂಕಾರ ಗುಣದೋಷಾದಿಗಳು, ಭಾಷಾ ವಿಧಾನಗಳು, ಕಾಕುಸ್ವರವ್ಯಂಜನ ಇ.,); ೨೦, ೨೧. ದಶರೂಪಗಳು ಹಾಗೂ ವಸ್ತು ವಿಭಾಗಗಳು; ೨೨. ವೃತ್ತಿಗಳು; ೨೩ರಿಂದ ೨೬. ಆಹಾರ್ಯಾಭಿನಯ, ಸಾಮಾನ್ಯಾಭಿನಯ, ಬಾಹ್ಯೋಪಚಾರ, ಚಿತ್ರಾಭಿನಯ ಇ.; ೨೭. ನಾಟ್ಯಸಿದ್ಧಿ; ೨೮ರಿಂದ ೩೨. ಆತೋದ್ಯವಾದ್ಯ ಗಾನತಾಲಾದಿಗಳು; ೩೪, ೩೫. ಪಾತ್ರಪ್ರಕೃತಿಗಳು; ೩೬. ನಾಟ್ಯಾವತಾರ.

ಈ ಒಂದು ಸ್ಥೂಲ ವಿಷಯಕ್ರಮಪರಿಶೀಲನದಿಂದಲೇ 'ನಾಟ್ಯಶಾಸ್ತ್ರ'ದ ವಿಸ್ತಾರ ಎಷ್ಟೆಂಬುದು ತಿಳಿಯುತ್ತದೆ. ಎಲ್ಲ ಲಲಿತಕಲೆಗಳೂ ಅಂಗವಾಗಿರುವ ನಾಟ್ಯಕಲೆಯನ್ನು ಇಲ್ಲಿ ಸಮಗ್ರವಾಗಿ ವಿವೇಚಿಸಿರುವ ಕಾರಣ, ಕಾವ್ಯ ನೃತ್ಯ ಸಂಗೀತ ಶಿಲ್ಪ–ಈ ಎಲ್ಲವುಗಳ ಲಕ್ಷಣವೂ ಈ ಗ್ರಂಥದಲ್ಲಿ ಅಡಕವಾಗಿದೆ. ಇದು 'ನಾಟ್ಯಕಲಾಕೋಶ'ವಷ್ಟೆ ಅಲ್ಲದೆ 'ಲಲಿತಕಲಾಕೋಶ'ವಾಗಿದೆ; 'ನಾಟ್ಯಮೀಮಾಂಸೆ'ಯನ್ನಷ್ಟೆ ಅಲ್ಲದೆ 'ಲಲಿತಕಲಾ ಮೀಮಾಂಸೆ'ಯನ್ನೇ ಒಳಗೊಂಡಿದೆ. ಇಲ್ಲಿನ ರಸಭಾವ ವಿವೇಚನೆ ಲಲಿತಕಲಾ ಪ್ರಕಾರಗಳೆಲ್ಲವಕ್ಕೂ ಅನ್ವಯಿಸುವ ಮೂಲಸ್ತಂಭವಾಗಿದೆ; 'ಸೌಂದರ್ಯಮೀಮಾಂಸೆ' ಗೊಂದು ಆಕರವಾಗಿದೆ. 'ನಾಟ್ಯಶಾಸ್ತ್ರ'ದಲ್ಲಿನ 'ರಸಸೂತ್ರ'ವನ್ನು ವಿವರಿಸಲೆಂದೇ, ಮುಂದಿನ ಭಾರತೀಯ ಕಾವ್ಯಾಲಂಕಾರಶಾಸ್ತ್ರ ಪ್ರಸ್ಥಾನ ಪ್ರಸ್ಥಾನಗಳಲ್ಲಿ ಕ್ರಮಕ್ರಮವಾಗಿ ಅರಳಿಕೊಂಡಿತೆನ್ನಬಹುದು; ಮುಂದಿನ ಸಂಗೀತ ನೃತ್ಯಾದಿ ವಿಷಯಕವಾದ ಶಾಸ್ತ್ರೀಯ

ಗ್ರಂಥಗಳು ಕೂಡ ಬಹುವಾಗಿ 'ನಾಟ್ಯಶಾಸ್ತ್ರ'ವನ್ನು ಆಧಾರವಾಗಿಟ್ಟುಕೊಂಡವು, ಅದರ ಕರ್ತೃವಿಗೆ ವಿಶೇಷ ಗೌರವ ಸಲ್ಲಿಸಿದವು.

**ಮುಂದಿನ ಲಕ್ಷಣಗ್ರಂಥಗಳು :** 'ನಾಟ್ಯಶಾಸ್ತ್ರ'ದಂತೆ, ನಾಟ್ಯದ ಸರ್ವಾಂಗಗಳನ್ನೂ ಪರಿಪೂರ್ಣವಾಗಿ ವಿವೇಚಿಸುವ ಗ್ರಂಥಗಳು ಮತ್ತೆ ಬಂದಂತೆ ತೋರುವುದಿಲ್ಲ. ಬದಲು, ಅನಂತರದ ಗ್ರಂಥಗಳು ಹೆಚ್ಚಾಗಿ ಒಂದೊಂದೇ ಕಲಾಪ್ರಕಾರವನ್ನು ಕುರಿತು ರಚಿತವಾದವು. ನಾಟ್ಯಶಾಸ್ತ್ರವನ್ನು ವಿಷಯವಾಗಿಟ್ಟುಕೊಂಡ ಕೆಲವು ಗ್ರಂಥಗಳು ನಾಟ್ಯಕಲೆಯ ಯಾವುದೊಂದು ಅಥವಾ ಯಾವುದೋ ಕೆಲವು ಅಂಗಗಳನ್ನು ಪರಿಶೀಲಿಸಿದವು. 'ನಾಟ್ಯಶಾಸ್ತ್ರ'ದ ಅನಂತರ ಬಂದ ಅಂಥ ಕೆಲವು ಮುಖ್ಯ ನಾಟ್ಯವಿಷಯಕ ಶಾಸ್ತ್ರೀಯಗ್ರಂಥಗಳನ್ನು ಇಲ್ಲಿ ಸ್ಥೂಲವಾಗಿ ಗಮನಿಸಬಹುದು :

**೧. ದಶರೂಪಕ :** ಇದೇ, ನಾಟ್ಯವಿಷಯಕ ಶಾಸ್ತ್ರೀಯಗ್ರಂಥಗಳಲ್ಲಿ ಮುಖ್ಯ ಒಂದೆಂದು ಪರಿಗಣಿತವಾದ ಪ್ರಸ್ತುತ ಗ್ರಂಥ. ಈ ಗ್ರಂಥದ ವಿಷಯವನ್ನು ಮುಂದೆ ಪರಿಶೀಲಿಸುವುದಿದೆ.

**೨. ನಾಟಕಲಕ್ಷಣ ರತ್ನಕೋಶ :** ಪ್ರಾಯಃ, 'ದಶರೂಪಕ' ರಚಿತವಾದ ಕಾಲದಲ್ಲಿ ಅಥವಾ ಅದಕ್ಕೆ ಸ್ವಲ್ಪ ಮುಂಚೆ ಸಾಗರನಂದಿ (ಕಾಲ: ಕ್ರಿ.ಶ. ೯೨೦ರಿಂದ ೧೧೦೦ರ ನಡುವೆ.) ಎಂಬಾತನಿಂದ ಈ ಗ್ರಂಥ ರಚಿತವಾಯಿತು. 'ದಶರೂಪಕ'ದಂತೆಯೇ ಈ ಗ್ರಂಥವೂ ಮುಖ್ಯವಾಗಿ ರೂಪಕ (ನಾಟ್ಯಕಾವ್ಯ)ಶಾಸ್ತ್ರವನ್ನು ಕುರಿತದ್ದು.. ಆದರೆ ಅಗತ್ಯ ತೋರುವಲ್ಲೆಲ್ಲ ಈತ ಅಭಿನಯಾದಿಗಳ ಬಗೆಗೆ ಉಲ್ಲೇಖಿಸಿ ಹೇಳುತ್ತಾನೆ. ಹರ್ಷವಿಕ್ರಮ, ಮಾತೃಗುಪ್ತ, ಗರ್ಗ, ಅಶ್ಮಕುಟ್ಟ, ನಖಕುಟ್ಟ, ಬಾದರಿ, ಭರತ–ಇವರುಗಳೇ ತನ್ನ ಗ್ರಂಥಕ್ಕೆ ಆಧಾರವೆಂದು ಈತ ಹೇಳಿಕೊಂಡಿದ್ದಾನೆ. ಉಳಿದವರ ಕೃತಿಗಳು ಅನುಪಲಬ್ಧವಾಗಿ, ಅವರನ್ನು ಈತ ಎಷ್ಟರಮಟ್ಟಿಗೆ ಆಧರಿಸಿರುವನೆಂಬುದು ತಿಳಿಯದಾದರೂ ಆದ್ಯಂತ ಭರತನನ್ನು ಅನುಸರಿಸಿರುವುದು ಸ್ಪಷ್ಟ ತಿಳಿಯುತ್ತದೆ.

**೩. ನಾಟ್ಯದರ್ಪಣ ಅಥವಾ ನಾಟಕದರ್ಪಣ :** ಹೇಮಚಂದ್ರನ ಶಿಷ್ಯರಾದ ಗುಣಚಂದ್ರ ಮತ್ತು ರಾಮಚಂದ್ರ ಎಂಬ ಜೈನಕವಿಗಳಿಬ್ಬರು ಕೂಡಿ ಈ ಗ್ರಂಥವನ್ನು ರಚಿಸಿದ್ದಾರೆ. ಇವರ ಕಾಲ ಪ್ರಾಯಃ, ಕ್ರಿ.ಶ. ೧೧೦೦ರಿಂದ ೧೧೭೫. ಈ ಗ್ರಂಥದಲ್ಲಿ ನಾಲ್ಕು 'ವಿವೇಕ'ಗಳಿವೆ. ಕಾರಿಕೆಗಳು ಅನುಷ್ಟುಪ್ ಶ್ಲೋಕಗಳಲ್ಲಿದ್ದು 'ದಶರೂಪಕ'ದಲ್ಲಿನಂತೆಯೇ ತುಂಬ ಅಡಕವಾಗಿವೆ. ಗ್ರಂಥಕಾರರೇ ಈ ಕಾರಿಕೆಗಳಿಗೆ ಬಹು ಉಪಯುಕ್ತವಾದ ಗದ್ಯವೃತ್ತಿಗಳನ್ನು ಬರೆದಿದ್ದಾರೆ; ಉದ್ದಕ್ಕೂ–'ದಶರೂಪಕ'ದಲ್ಲಿಗಿಂತ ಹೆಚ್ಚಾಗಿ–ಉದಾಹರಣೆಗಳನ್ನು ಎತ್ತಿಕೊಟ್ಟಿದ್ದಾರೆ. ಈ ಗ್ರಂಥಕಾರರೂ ಮುಖ್ಯವಾಗಿ 'ನಾಟ್ಯಶಾಸ್ತ್ರ'ವನ್ನೇ ಆಧಾರವಾಗಿಟ್ಟುಕೊಂಡಿದ್ದಾರೆ. ವೃತ್ತಿಭಾಗದಲ್ಲಿ ಅಲ್ಲಲ್ಲಿ 'ನಾಟ್ಯಶಾಸ್ತ್ರ'ಕ್ಕೆ 'ಅಭಿನವಭಾರತೀ' ಎಂಬ ವ್ಯಾಖ್ಯೆಯನ್ನು ರಚಿಸಿದ ಅಭಿನವಗುಪ್ತ (ಕ್ರಿ.ಶ. ೯೮೦–೧೦೨೦)ನ ಅಭಿಪ್ರಾಯಗಳನ್ನು ಉದ್ಧರಿಸಿ ಬಳಸಿಕೊಂಡಿದ್ದಾರೆ. ತಮಗೆ ಹಿಂದಿನ ಹಲವಾರು ಗ್ರಂಥಗಳ ಅಭಿಪ್ರಾಯಗಳನ್ನು ಇವರು ಟೀಕಿಸಿದ್ದು ಹಾಗೆ ಟೀಕೆಗೊಂಡವುಗಳಲ್ಲಿ 'ದಶರೂಪಕ' ಮುಖ್ಯವಾಗಿದೆ.

ರಸಗಳಲ್ಲಿ 'ಸುಖಾತ್ಮಕ', ದುಃಖಾತ್ಮಕ' ರಸಗಳೆಂದು ಹೊಸದಾಗಿ ಎರಡು ಪಂಗಡಗಳನ್ನು ವಿಂಗಡಿಸಿರುವುದು ಈ ಗ್ರಂಥದ ಗಮನಾರ್ಹ ಅಂಶ.

**೪. ಭಾವಪ್ರಕಾಶನ ಅಥವಾ ಭಾವಪ್ರಕಾಶಿಕಾ :** ಕ್ರಿ.ಶ. ಹನ್ನೆರಡನೆಯ ಶತಮಾನ ದಲ್ಲಿ ಜೀವಿಸಿದ್ದ ಶಾರದಾತನಯ ಎನ್ನುವವನು ರಚಿಸಿದ ಗ್ರಂಥ ಇದು. ನಾಟ್ಯಪ್ರಯೋಗ ದಲ್ಲಿ ಕುಶಲನಾಗಿದ್ದ ದಿವಾಕರನೆಂಬುವವನ ಶಿಷ್ಯ ಈತ. ಈ ಗ್ರಂಥವನ್ನು ಹತ್ತು 'ಅಧಿಕಾರ'ಗಳಾಗಿ ವಿಂಗಡಿಸಿದೆ. ಭಾವ, ರಸ, ನಾಯಿಕಾಭೇದ, ಶಬ್ದಾರ್ಥಸಂಬಂಧ, ರೂಪಕೋಪರೂಪಕಭೇದಗಳು – ಇವನ್ನು ಈ ಗ್ರಂಥ ವಿವರವಾಗಿ ಪ್ರತಿಪಾದಿಸುತ್ತದೆ. 'ನಾಟ್ಯಶಾಸ್ತ್ರ'ದ ಅನಂತರದಲ್ಲಿ ಬಂದ ಮೇಲಿನ ಇತರ ಎಲ್ಲ ಗ್ರಂಥಗಳಿಗಿಂತ ಇದರಲ್ಲಿ ವಿಷಯಗಳು ಹೆಚ್ಚು ವಿವರವಾಗಿಯೂ ಸಮಗ್ರವಾಗಿಯೂ ಬಂದಿವೆ. ಶಾರದಾತನಯನೂ ಬಹುವಾಗಿ 'ನಾಟ್ಯಶಾಸ್ತ್ರ'ವನ್ನು ತನ್ನ ಗ್ರಂಥಕ್ಕೆ ಆಧಾರವಾಗಿಟ್ಟುಕೊಂಡಿದ್ದಾನೆ. ಆತ ಉಲ್ಲೇಖಿಸುವವರಲ್ಲಿ ಮಾತೃಗುಪ್ತ, ಕೋಹಲ, ಹರ್ಷ, ಸುಬಂಧು ಮೊದಲಾದ ಪ್ರಾಚೀನರೂ ಧ್ವನಿಕಾರ, ರುದ್ರಟ, ಧನಿಕ, ಅಭಿನವಗುಪ್ತ, ಭೋಜ ಮುಂತಾದ ಅರ್ವಾಚೀನರೂ ಇದ್ದಾರೆ. ಗ್ರಂಥಕರ್ತೃ ತನ್ನ ಅನೇಕ ಸ್ವಂತ ಅಭಿಪ್ರಾಯಗಳನ್ನೂ ಅಲ್ಲಲ್ಲಿ ಕೊಟ್ಟಿದ್ದಾನೆ.

**೫. ಸಾಹಿತ್ಯದರ್ಪಣ :** ಸುಮಾರು ಕ್ರಿ.ಶ. ಹದಿಮೂರನೆಯ ಶತಮಾನದಲ್ಲಿ ಜೀವಿಸಿದ್ದ ವಿಶ್ವನಾಥ ಕವಿರಾಜನಿಂದ ಈ ಗ್ರಂಥ ರಚಿತವಾಯಿತು. ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ವಿವೇಚಿಸುವ ಈ ಗ್ರಂಥದ ಮೂರು, ನಾಲ್ಕು, ಐದು ಮತ್ತು ಮುಖ್ಯವಾಗಿ ಆರು – ಈ ಪರಿಚ್ಛೇದಗಳು ನಾಟ್ಯಲಕ್ಷಣಗಳನ್ನು ಹೇಳುತ್ತವೆ. ಈತ ಸಾಮಾನ್ಯವಾಗಿ 'ನಾಟ್ಯಶಾಸ್ತ್ರ', 'ದಶರೂಪಕ', 'ದಶರೂಪಾವಲೋಕ' (ದಶರೂಪಕಕ್ಕೆ ಧನಿಕ ಬರೆದಿರುವ ವ್ಯಾಖ್ಯೆ) ಮೊದಲಾದ ಗ್ರಂಥಗಳನ್ನೂ ರುದ್ರಟಾದಿ ಗ್ರಂಥಕರ್ತರನ್ನೂ ಆಧಾರವಾಗಿಟ್ಟು ಕೊಂಡಿದ್ದಾನೆ.

**೬. ಪ್ರತಾಪರುದ್ರೀಯ :** ಕ್ರಿ.ಶ. ೧೩೦೦ರಲ್ಲಿದ್ದಿರಬಹುದಾದ ವಿದ್ಯಾನಾಥನಿಂದ ರಚಿತವಾದ ಗ್ರಂಥ ಇದು. ಸಮಗ್ರ ಕಾವ್ಯಶಾಸ್ತ್ರವನ್ನು ಲಕ್ಷಿಸ ಹೊರಟ ಈ ಗ್ರಂಥದಲ್ಲಿ ನಾಟ್ಯಕಾವ್ಯಲಕ್ಷಣಗಳೂ ಬಂದಿವೆ. ಅದಕ್ಕೆ ಲಕ್ಷ್ಯವಾಗಿ ಒಂದು 'ರೂಪಕ'ವನ್ನೇ ಇಡಿಯಾಗಿ ಸೇರಿಸಿರುವುದು ಇದರಲ್ಲಿನ ವೈಶಿಷ್ಟ್ಯ. ಈ ಗ್ರಂಥದಲ್ಲಿ 'ದಶರೂಪಕ'ವನ್ನೇ ಬಹುಮಟ್ಟಿಗೆ ಅವಲಂಬಿಸಿರುವುದನ್ನು ಹಾಗೂ ಅನೇಕ ಕಡೆಗಳಲ್ಲಿ ಅದರಿಂದ ಉದ್ಧೃತಿ ಕೊಂಡುದನ್ನು ಕಾಣಬಹುದು.

ಇವೇ ಅಲ್ಲದೆ ವಿದ್ಯಾಧರನ 'ಏಕಾವಳಿ' (ಸು. ಕ್ರಿ.ಶ. : ೧೩೦೦), ಭೋಜನ 'ಸರಸ್ವತೀ ಕಂಠಾಭರಣ' ಮತ್ತು 'ಶೃಂಗಾರಪ್ರಕಾಶ' (ಕ್ರಿ.ಶ. ೧೧ನೆಯ ಶತಕ), ಶಿಂಗಭೂಪಾಲನ 'ರಸಾರ್ಣವಸುಧಾಕರ' (ಕ್ರಿ.ಶ. ೧೪ನೆಯ ಶತಕ), ಶಾರ್ಙ್ಗದೇವನ 'ಸಂಗೀತರತ್ನಾಕರ' (ಕ್ರಿ.ಶ. ೧೩ನೆಯ ಶತಕ) – ಇವುಗಳಲ್ಲೂ ಸಂದರ್ಭಾನುಸಾರ ನಾಟ್ಯಕ್ಕೆ ಸಂಬಂಧಿಸಿದ ವಿಷಯಗಳು ಬಂದಿವೆ. ನಮಗೆ ದೊರಕದೆ ಹೋಗಿರುವ ಗ್ರಂಥಗಳೂ ಕೆಲವು ಇರಬೇಕು :

ಅಂಥವುಗಳಲ್ಲಿ ಹೆಸರು ಮಾತ್ರ ದೊರೆತಿರುವ ರುಯ್ಯಕನ 'ನಾಟ್ಯಮೀಮಾಂಸೆ' (ಕ್ರಿ.ಶ. ೧೨ನೆಯ ಶತಕ), ಶಿಂಗಭೂಪಾಲನ 'ನಾಟಕಪರಿಭಾಷಾ' (ಕ್ರಿ.ಶ. ೧೪ನೆಯ ಶತಕ) ಮೊದಲಾದವುಗಳನ್ನು ಎತ್ತಿಹೇಳಬಹುದು. ಅಲ್ಲದೆ, ನೃತ್ಯವಿಷಯಕಗ್ರಂಥಗಳಾದ 'ಅಭಿನಯದರ್ಪಣ' (ನಂದಿಕೇಶ್ವರ ವಿರಚಿತ) ಮುಂತಾದವುಗಳಲ್ಲಿ ಅಭಿನಯಾದಿಗಳ ಲಕ್ಷಣವಿದೆ; ನಾಟ್ಯಮಂದಿರ ರಚನೆ ಮೊದಲಾದುವನ್ನು ಹೇಳುವ ಶಿಲ್ಪವಿಷಯಕ ಗ್ರಂಥಗಳೂ ಬೇರೆಯೇ ಇವೆ.

ಒಟ್ಟಿನಲ್ಲಿ : ಸಂಸ್ಕೃತ ನಾಟ್ಯಕಾವ್ಯದ ಇತಿಹಾಸದಲ್ಲಿ, ಈಗ ನಿಂತಲ್ಲಿನಿಂದ ಕಾಣುವಂತೆ, ಕ್ರಿಸ್ತಶಕ ಮೊದಲನೆಯ ಶತಮಾನವೇ ಒಂದು ದಿಗಂತವಾಗಿದೆ. ಅದರ ಆಚಿನದು ಪೂರ್ಣ ಅಸ್ಪಷ್ಟ. ಅಶ್ವಘೋಷ ಬಾಳಿರಬಹುದಾದ ಮೊದಲ ಶತಮಾನದಲ್ಲಿ ಸಂಸ್ಕೃತ ನಾಟ್ಯಕಾವ್ಯದ ಒಂದು ಭವ್ಯ ಆರಂಭವನ್ನೂ ಅನಂತರದ ಐದಾರು ಶತಮಾನಗಳಲ್ಲಿ ಭಾಸ ಕಾಳಿದಾಸ ಭವಭೂತಿಗಳನ್ನು ಮೆರೆಸಿದ ಅದರ ಭರತದ ವೈಭವವನ್ನೂ ಅಲ್ಲಿಂದ ಮುಂದಿನ ಮೂರುನಾಲ್ಕು ಶತಕಗಳಲ್ಲಿ ಭಟ್ಟನಾರಾಯಣನಿಂದ ಕೃಷ್ಣಮಿಶ್ರನ ಕಡೆಗೆ ಸಾಗಿದ ಅದರ ಇಳಿತದ ಪರಿಯನ್ನೂ ಕಾಣಬಹುದು.

ಇನ್ನು ಸಂಸ್ಕೃತ ನಾಟ್ಯಶಾಸ್ತ್ರದ ಇತಿಹಾಸವನ್ನು ನೋಡಿದರೆ ಅದು ಕೂಡ ಸುಮಾರು ಕ್ರಿಸ್ತಶಕ ಒಂದನೆಯ ಶತಮಾನದಿಂದಲೇ ನಮಗೆ ಕಾಣಸುವಂತಿದೆ. ಅದಕ್ಕೆ ಹಿಂದೆ ಏನು ಇದ್ದಿತೋ, ಇದ್ದುದನ್ನು ಕಾಲ ಇಕ್ಕಿಮೆಟ್ಟಿತೋ ಇಲ್ಲವೆ ಆಗ ಹುಟ್ಟಿದ 'ನಾಟ್ಯಶಾಸ್ತ್ರ' ಒಳಗು ಮಾಡಿಕೊಂಡಿತೋ – ಈ ಎಲ್ಲ ಊಹೆಗೆ ತೆರೆದಿವೆಯಲ್ಲದೆ ನಿರ್ಧಾರಕ್ಕೆ ನಿಲುಕುವಂತಿಲ್ಲ. 'ನಾಟ್ಯಶಾಸ್ತ್ರ'ದ ಅನಂತರ ಸುಮಾರು ನಾಲ್ಕೈದು ಶತಮಾನಗಳ ಕಾಲ ಮತ್ತೆ ಕತ್ತಲೆ. ಆರು ಏಳು ಎಂಟು – ಈ ಶತಮಾನಗಳಲ್ಲಿ 'ನಾಟ್ಯಶಾಸ್ತ್ರ'ವನ್ನು ಕುರಿತು ಹಲವು ವ್ಯಾಖ್ಯೆಗಳು ಹುಟ್ಟಿದಂತೆ ಭಾಸವಾಗುತ್ತದೆ. ಅದಕ್ಕಾದರೂ ಬೇರೆಡೆ ದೊರೆಯುವ ಆಚಾರ್ಯ ಕೀರ್ತಿಧರ, ನಾನ್ಯದೇವ, ಉದ್ಭಟ ಮೊದಲಾದ ಗ್ರಂಥಕರ್ತರ ಹೆಸರಷ್ಟೇ ಸಾಕ್ಷಿ. ಒಂಬತ್ತು ಹತ್ತು ಹನ್ನೊಂದು – ಈ ಶತಮಾನಗಳಲ್ಲಿ ನಾಟ್ಯಶಾಸ್ತ್ರವಿಷಯಕವಾದ ಅನೇಕ ವ್ಯಾಖ್ಯೆಗಳೂ ವಿಮರ್ಶೆಗಳೂ ಸ್ವತಂತ್ರ ಗ್ರಂಥಗಳೂ ಹೊರಬಂದವು. ಭಟ್ಟಲೊಲ್ಲಟ, ಶ್ರೀಶಂಕುಕ, ಭಟ್ಟ ನಾಯಕ, ಭಟ್ಟಯಂತ್ರ, ಭಟ್ಟತೌತ, ಭಟ್ಟ ಅಭಿನವಗುಪ್ತ ಮೊದಲಾದವರಿಂದ ನಾಟ್ಯ ಶಾಸ್ತ್ರ ಒಂದು ಪರಿಷ್ಕೃತ ರೂಪವನ್ನು ಪಡೆದ ಹಾಗೂ ರಸಶಾಸ್ತ್ರಕ್ಕೆ ಕೂಡ ಒಂದು ನೆಲೆ ದೊರಕಿದ ಈ ಕಾಲದಲ್ಲೆ 'ದಶರೂಪಕ' ಆವಿಷ್ಕೃತವಾಯಿತು. ಅದಕ್ಕೂ ಮುಂದೆ ಬಂದ ಕಲಾಶಾಸ್ತ್ರಕ ಗ್ರಂಥಗಳೆಲ್ಲ – ಸಂಗೀತ ಹಾಗೂ ಶಿಲ್ಪ ವಿಷಯಕ ಗ್ರಂಥಗಳನ್ನು ಬಿಟ್ಟು – ಇಲ್ಲವೆ ಚರ್ವಿತ ಚರ್ವಣಗಳಾಗಿವೆ, ಇಲ್ಲವೆ ಸೂಕ್ಷ್ಮ ಅನುಶೋಧನೆಗಳನ್ನು ಒಳಗೊಂಡಿವೆ ಅಷ್ಟೆ.

ಕ್ರಿಸ್ತಶಕ ಮೊದಲನೆಯ ಶತಮಾನದಿಂದೀಚೆ ಬಂದ ಸಂಸ್ಕೃತದ ಕಲಾಶಾಸ್ತ್ರ ರಸಶಾಸ್ತ್ರಗಳ ಹಾಗೂ ವಿವಿಧ ಕಲಾಪ್ರಕಾರಗಳ ಬೆಳವಣಿಗೆಯನ್ನು ಪೃಥಕ್ಪೃಥಕ್ಕಾಗಿ ಮತ್ತು ಸಮಗ್ರ ತುಲನಾತ್ಮಕದೃಷ್ಟಿಯಿಂದ ಗುರುತಿಸುವ ಕಾರ್ಯವೊಂದು ಇನ್ನೂ ಆಗಬೇಕಾಗಿದೆ.

## ಪ್ರಸ್ತುತ ಗ್ರಂಥ

**ಗ್ರಂಥದ ಹೆಸರು :** ಈ ಗ್ರಂಥಕ್ಕೆ 'ದಶರೂಪಕ' ಎಂಬ ಹೆಸರು ಸಾಮಾನ್ಯವಾಗಿ ವಾಡಿಕೆಯಲ್ಲಿದೆ. ಗ್ರಂಥವನ್ನು ಮೊದಲಿಗೆ ಸಂಪಾದಿಸಿ ಪ್ರಕಟಿಸಿದ ಫಿಟ್ಸೆಡ್ ವರ್ಡ್‌ಹಾಲ್ ಅವರು ಮತ್ತು ಆಂಗ್ಲಭಾಷಾನುವಾದದೊಡನೆ ಪ್ರಕಟಿಸಿದ ಜಾರ್ಜ್ ಸಿ.ಒ. ಹ್ಯಾಸ್ ಅವರು 'ದಶರೂಪ' ಎಂಬ – 'ಕ' ಪ್ರತ್ಯಯರಹಿತವಾದ – ಹೆಸರೇ ಅಧಿಕೃತವಾದುದೆಂದು ಊಹಿಸಿ ಹಾಗೆಯೇ ಕರೆದಿದ್ದಾರೆ೧. ಇದಕ್ಕೆ ಅವರು ಕೊಟ್ಟಿರುವ ಕಾರಣ : ೧. ಗ್ರಂಥಕರ್ತೃವಾದ ಧನಂಜಯ ಗ್ರಂಥಾಂತ್ಯಶ್ಲೋಕದಲ್ಲಿ (೪–೯೧ ನೋಡಿ) **'....ದಶರೂಪಮೇತತ್** ' ಎಂದು ಅದರ ಹೆಸರನ್ನು ಸೂಚಿಸಿದ್ದಾನೆ. ೨. ಧನಿಕ ತನ್ನ ವ್ಯಾಖ್ಯಾಂತ್ಯದ ಪುಷ್ಪಿಕೆಯಲ್ಲಿ (೪–೯೧ ನೋಡಿ)೨ ತನ್ನದು **'ದಶರೂಪಾ** ವಲೋಕ'ವೆಂದಿದ್ದಾನೆ. ಈ ಅಭಿಪ್ರಾಯ ತಪ್ಪೆನ್ನುವಂತಿಲ್ಲ. 'ನಾಟ್ಯಶಾಸ್ತ್ರ'ದಲ್ಲಿ ಕೂಡ ಈ ವಿಷಯಕ್ಕೆ ಸಂಬಂಧಿಸಿದ ಅಧ್ಯಾಯದಲ್ಲಿ 'ದಶರೂಪ' ಎಂಬ ಹೆಸರು ಬಂದಿದೆ. ಇನ್ನು, ನಿರ್ಣಯಸಾಗರದವರು ಮುದ್ರಿಸಿರುವ ಗ್ರಂಥದಲ್ಲಿ ಹಿಂದೀ ಅನುವಾದ ಸಮೇತವಾದ ಗ್ರಂಥದಲ್ಲಿ ಹಾಗೂ ರಾಜವೈದ್ಯ ಜಿ.ಕೆ. ಶಾಸ್ತ್ರಿ ಅವರು ಆಂಗ್ಲಾನುವಾದ ಸಮೇತವಾಗಿ ಗ್ರಂಥದ ಮೊದಲ ಪ್ರಕಾಶವನ್ನು ಪ್ರಕಟಿಸಿರುವಲ್ಲಿ 'ದಶರೂಪಕ' ಎಂಬ ಹೆಸರೇ ಬಳಕೆಯಾಗಿದೆ. ಪ್ರಸ್ತುತ ಅನುವಾದದಲ್ಲಿ 'ದಶರೂಪಕ' ಎಂಬ ಹೆಸರನ್ನೆ ಇರಿಸಿಕೊಂಡಿರುವುದಕ್ಕೆ, ಆ ಹೆಸರು ಪ್ರಚುರವಾಗಿದೆ ಎಂಬುದು ಒಂದು ಕಾರಣ. ಇನ್ನೊಂದು ಕಾರಣ : ಗ್ರಂಥದಲ್ಲಿನ 'ರೂಪಕಂ ತತ್ ಸಮಾರೋಪಾತ್' ಎಂಬ ಕಾರಿಕಾಖಂಡವನ್ನು (೧–೯ ನೋಡಿ) ಗಮನಿಸಿದರೆ, 'ರೂಪ' ಎಂಬುದಕ್ಕಿಂತ 'ರೂಪಕ' ಎಂಬ ಪದವೇ ಇಲ್ಲಿ ಅಪೇಕ್ಷಿತವಾದ ಅರ್ಥವನ್ನು ನಿಷ್ಕೃಷ್ಟ ಕೊಡುವಂಥದೆಂಬುದು.

**ಗ್ರಂಥಕರ್ತೃ, ಆತನ ಆಶ್ರಯ ಮತ್ತು ಕಾಲ :** ಈ ಗ್ರಂಥದ ಕರ್ತೃವಿನ ಬಗೆಗೆ ಗ್ರಂಥಾಂತ್ಯದಲ್ಲಿ ಬಂದಿರುವ ಶ್ಲೋಕ ಇದು :

> 'ವಿಷ್ಣೋಃ ಸುತೇನಾಪಿ ಧನಂಜಯೇನ
> ವಿದ್ವನ್ಮನೋರಾಗನಿಬಂಧಹೇತುಃ ।
> ಆವಿಷ್ಕೃತಂ ಮುಂಜಮಹೀಶಗೋಷ್ಠೀ –
> ವೈದಗ್ಧ್ಯಭಾಜಾ ದಶರೂಪಮೇತತ್ ॥' (೪–೯೧ ನೋಡಿ.)

---

೧ ನೋಡಿ : ಹಾಲ್ : ಪು. ೪ ಮತ್ತು ಹ್ಯಾಸ್ : ಪು. xxi.

೨ ಇದೇ ಗ್ರಂಥದ ಭಾಗಗಳನ್ನು ಸೂಚಿಸುವಾಗ ಉದ್ದಕ್ಕೂ ಎರಡೆರಡು ಅಂಕೆಗಳನ್ನು ಕೊಟ್ಟಿದೆ. ಅದರಲ್ಲಿ ಮೊದಲನೆಯದು 'ಪ್ರಕಾಶ'ದ ಸಂಖ್ಯೆಯನ್ನೂ ಎರಡನೆಯದು ಆ ಪ್ರಕಾಶದಲ್ಲಿನ ಖಂಡದ ಸಂಖ್ಯೆಯನ್ನೂ ಸೂಚಿಸುತ್ತವೆ. ಖಂಡಸಂಖ್ಯೆ ಪುಟದ ಎಡಭಾಗದಲ್ಲಿದೆ; ಪುಟದ ಮೇಲುಭಾಗದಲ್ಲಿ ಕೂಡ ಆಯಾ ಪುಟದಲ್ಲಿರುವ ಖಂಡ ಸಂಖ್ಯೆಗಳು ನಮೂದಾಗಿವೆ.

ಇದರಲ್ಲಿ ತಿಳಿಯುವಂತೆ, ಧನಂಜಯ ಎನ್ನುವವ ಗ್ರಂಥಕರ್ತೃ; ಆತ ವಿಷ್ಣು ಎಂಬಾತನ ಪುತ್ರ, ವಿದ್ವದ್ಗೋಷ್ಠಿಯಿಂದ ಅಲಂಕೃತನಾಗಿದ್ದ ಮುಂಜರಾಜ ಎಂಬುವವನ ಆಸ್ಥಾನ ದಲ್ಲಿದ್ದವನು. ಈ ಮುಂಜರಾಜ ಯಾರು ಎನ್ನುವುದನ್ನು ಸೂಚಿಸುವುದಕ್ಕೆ ಒಂದು ಆಧಾರವಿದೆ : ಈ ಗ್ರಂಥಕ್ಕೆ ವ್ಯಾಖ್ಯೆ ಬರೆದ ಧನಿಕ ಒಂದೆಡೆ (೪-೬೬ ನೋಡಿ) ಉದಾಹರಣೆಗಾಗಿ ಒಂದು ಶ್ಲೋಕ ( 'ಪ್ರಣಯಕುಪಿತಾಂ ದೃಷ್ಟ್ವಾ....'ಇ.,) ಎತ್ತಿಕೊಂಡು ಅದು 'ಶ್ರೀವಾಕ್ಪತಿರಾಜದೇವ'ನದು ಎಂದಿದ್ದಾನೆ; ಪುನಃ ಮತ್ತೊಮ್ಮೆ (೪-೬೭ ನೋಡಿ) ಅದೇ ಶ್ಲೋಕವನ್ನು ಉದ್ಧರಿಸಿ ಅದು 'ಶ್ರೀಮುಂಜ'ನದು ಎಂದಿದ್ದಾನೆ. ಅದರಿಂದ , ಧನಿಕ ಹೇಳುವ ಆ ಶ್ಲೋಕದ ಕರ್ತೃ ಮುಂಜನಿಗೆ ವಾಕ್ಪತಿರಾಜದೇವನೆಂಬ ಹೆಸರೂ ಇದ್ದಿತೆಂಬುದು ಸ್ಪಷ್ಟವಾಗುತ್ತದೆ. ಧನಿಕ ಉದ್ಧರಿಸಿರುವ ಮುಂಜನೇ ಧನಂಜಯ ಪೆಸರಿಸಿರುವ ಮುಂಜನೆಂದು ಹೇಳಲು ಕೆಳಗಿನ ಕಾರಣಗಳಿವೆ : ಧನಂಜಯ ಧನಿಕರಿಬ್ಬರೂ ಒಂದೇ ಕಾಲದವರು ಹಾಗೂ ಪ್ರಾಯಃ ಅಣ್ಣತಮ್ಮಂದಿರು. (ಈ ವಿಷಯ ಮುಂದೆ ಧನಿಕನನ್ನು ಕುರಿತು ಹೇಳುವಾಗ ನೋಡಬಹುದು.) ಯಾವನ ವಿದ್ವದ್ಗೋಷ್ಠಿಯಲ್ಲಿ ಈ ಗ್ರಂಥ ಅರಳಿತೋ ಅವನು 'ಮುಂಜಮಹೀಶ'ನೆಂದು ಧನಂಜಯ ಹೇಳಿದ್ದಾನೆ; ಧನಿಕನೂ ಬೇರಾರಿಗೂ ಸಲ್ಲದ ಮಿಾಸಲು ಗೌರವದಿಂದ 'ಶ್ರೀವಾಕ್ಪತಿರಾಜದೇವ'ನೆಂದು, 'ಶ್ರೀಮುಂಜ'ನೆಂದು (ಶ್ರೀಕಾರಸಮೇತವಾಗಿ) ಹೆಸರಿಸಿದ್ದಾನೆ. ಯಾವನ ವಿದ್ವದ್ಗೋಷ್ಠಿ ಯಲ್ಲಿ 'ದಶರೂಪಕ'ದಂಥ ಗ್ರಂಥ ಆವಿಷ್ಕೃತವಾಯಿತೋ ಅಂಥವನು ಕವಿಯೂ ಆಗಿರುವುದು ತೀರ ಸಾಧ್ಯ.

ಮುಂಜ ಮತ್ತು ವಾಕ್ಪತಿರಾಜದೇವ – ಈ ಎರಡು ಹೆಸರುಗಳ ಸಹಾಯದಿಂದ ಮತ್ತು ಈ ಹೆಸರುಗಳನ್ನುಳ್ಳ ದೊರೆ ಕವಿಯಾಗಿದ್ದನೆಂಬ ಸೂಚನೆಯ ನೆರವಿನಿಂದ, ಧನಂಜಯ ನಿರ್ದೇಶಿಸಿರುವ ಆ ಮಹೀಶ 'ಪರಮಾರವಂಶ'ದ ಅರಸು ಮುಂಜನೆಂದು ಸುಲಭವಾಗಿ ಗುರುತಿಸಿದ್ದಾರೆ. ಗ್ರಂಥದ ಶೈಲಿ, ಗ್ರಂಥದಲ್ಲಿನ ಉದ್ಧೃತಿ ಹಾಗೂ ಗ್ರಂಥದ ನಾಲ್ಕನೆಯ ಪ್ರಕಾಶದಲ್ಲಿ ಬಂದಿರುವ ರಸವಿಷಯಕ ಚರ್ಚೆಗಳು – ಈ ಎಲ್ಲ ಅಂಶಗಳು ಗ್ರಂಥದ ಕಾಲವನ್ನು ಪರಮಾರವಂಶದ ಮುಂಜನ ಕಾಲಕ್ಕೇ ಸ್ಪಷ್ಟ ಹೊಂದಿಸಿಕೊಡುತ್ತವೆ.

'ಪರಮಾರವಂಶ'ದ ಕೆಲವು ಶಾಸನಗಳು೧ ಪ್ರಕಟವಾಗಿ ಈ ಕೆಳಗಿನ ವಿಷಯಗಳನ್ನು ಗುರುತಿಸಲು ಸಾಧ್ಯವಾಗಿದೆ :

ಮಾಳವ ದೇಶದಲ್ಲಿ ಆಳುತ್ತಿದ್ದ ಉಪೇಂದ್ರ ಎಂಬಾತನ ಅನಂತರದಲ್ಲಿ ಬಂದ ಪರಮಾರ ಎಂಬ ದೊರೆಯೇ 'ಪರಮಾರವಂಶ'ದ ಕಾರಣಪುರುಷ. ಆ ವಂಶವೃಕ್ಷ ಹೀಗಿದೆ :

---

೧ 'ಪರಮಾರವಂಶ'ವನ್ನು ಕುರಿತ ಶಾಸನಗಳಿಗೆ ನೋಡಿ : Epigraphia Indica : Vol.I-Pp. 222-238 ಮತ್ತು Vol. II- Pp. 180-195.

೧. ಪರಮಾರ
|
೨. ವೈರಿಸಿಂಹ I
|
೩. ಸೀಯಕ I
|
೪. ವಾಕ್ಪತಿ I
|
೫. ವೈರಿಸಿಂಹ II
|
೬. ಸೀಯಕ II (ಅಥವಾ ಶ್ರೀಹರ್ಷ)
|
೭. ವಾಕ್ಪತಿ II (ಹರ್ಷನ ಪುತ್ರ)
|
೮. ಸಿಂಧುರಾಜ (ವಾಕ್ಪತಿ IIನ ಸಹೋದರ)
|
೯. ಭೋಜ (ಸಿಂಧುರಾಜನ ಪುತ್ರ)
|
೧೦. ಉದಯಾದಿತ್ಯ (ಭೋಜನ ಸಂಬಂಧಿ) ಇ.,

ಮೇಲಿನ ವಂಶಾವಳಿಯಲ್ಲಿ ಏಳನೆಯವನಾದ, ಇಮ್ಮಡಿಸೀಯಕ (ಅಥವಾ ಶ್ರೀಹರ್ಷ)ನ ಪುತ್ರನಾದ ಎರಡನೆಯ ವಾಕ್ಪತಿಯೇ ಧನಂಜಯನಿಗೆ ಆಶ್ರಯವಿತ್ತ ಮುಂಜರಾಜ.[೧] ಮುಂಜ ವಾಕ್ಪತಿರಾಜದೇವ – ಈ ಎರಡು ಹೆಸರುಗಳಲ್ಲದೆ ಈತನಿಗೆ ಉತ್ಪಲರಾಜ ಅಮೋಘವರ್ಷ ಪೃಥ್ವೀವಲ್ಲಭ ಶ್ರೀವಲ್ಲಭ ಮುಂತಾದ ಹಲವು ಹೆಸರುಗಳೂ ಇದ್ದುವೆಂದು ತಿಳಿಯುತ್ತದೆ.[೨]

ಮುಂಜರಾಜನ ಕಾಲವನ್ನು ಗುರುತಿಸಲು ಕೂಡ ಶಾಸನಗಳೇ ಮುಖ್ಯಾಧಾರಗಳಾಗಿವೆ. ಅಹಿಚ್ಛತ್ರದಿಂದ ಬಂದ ಧನಿಕಪಂಡಿತನೆಂಬಾತನ ಪುತ್ರ ವಸಂತಾಚಾರ್ಯನಿಗೆ ನೆಲವನ್ನು ದತ್ತಿಯಾಗಿ ಕೊಟ್ಟತೆಂಬ ವಾಕ್ಪತಿರಾಜನ ಕ್ರಿ.ಶ. ೯೭೪ರ ಶಾಸನವೊಂದು ಪ್ರಕಟವಾಗಿದೆ.[೩]

---

೧ ಧನಪಾಲಕೃತ 'ತಿಲಕಮಂಜರೀ'ಯಲ್ಲಿಯೂ ಮೇಲಿನ ವಂಶಾವಳಿಯನ್ನು ಸಂಕ್ಷೇಪವಾಗಿ ಕೊಟ್ಟಿದೆ.

೨ ನೋಡಿ : Epigraphia Indica: Vol.I - P. 226.

'ಗೌಡವಾಹೋ' ಎಂಬ ಪ್ರಾಕೃತ ಗ್ರಂಥವನ್ನು ರಚಿಸಿದ 'ಮುಂಜ' ಎಂಬಾತನೊಬ್ಬನಿದ್ದಾನೆ. ಅವನ ಕಾಲ ಕ್ರಿ.ಶ. ಎಂಟನೆಯ ಶತಮಾನದ ಪೂರ್ವಾರ್ಧ. ಆತ ಯಶೋವರ್ಮನೆಂಬ ದೊರೆಯ ಆಶ್ರಯದಲ್ಲಿದ್ದವನು. 'ಪ್ರತ್ಯಾಭಿಜ್ಞಾನಸೂತ್ರ' ಕರ್ತೃವಾದ ಉತ್ಪಲದೇವ ಎಂಬುವವನೊಬ್ಬನಿದ್ದಾನೆ; ಆತ ಶೈವಗುರು; ಕಾಲ ಸುಮಾರು ಕ್ರಿ.ಶ. ಹತ್ತನೆಯ ಶತಮಾನ.

೩ ನೋಡಿ : Indian Antiquary : Vol. VI- Pp. 51-52.

ಉಜ್ಜಯಿನಿಯ ಭಟ್ಟೇಶ್ವರೀ ಎಂಬ ದೇವತೆಗೆ ಒಂದು ಗ್ರಾಮವನ್ನು ಬಿಟ್ಟುಕೊಟ್ಟಿದೆಯೆಂಬ ವಾಕ್ಪತಿರಾಜನ ಮತ್ತೊಂದು ತಾಮ್ರಪಟ – ಕ್ರಿ.ಶ. ೯೭೯ರದ್ದು – ಕೂಡ ಪ್ರಕಾಶಗೊಂಡಿದೆ.೧ ಅಮಿತಗತಿ ಎಂಬಾತ 'ಸುಭಾಷಿತರತ್ನಸಂದೋಹ' ಎಂಬ ಗ್ರಂಥವನ್ನು ಕ್ರಿ.ಶ. ೯೯೩–೯೪ರಲ್ಲಿ (ಸಂ. ೧೦೫೦) ಮುಂಜರಾಜನ ಆಳ್ವಿಕೆಯಲ್ಲಿ ಸಂಕಲಿಸಿದುದಾಗಿ ತಿಳಿಯುತ್ತದೆ. ಕೊನೆಯಲ್ಲಿ, ಚಾಳುಕ್ಯರಾಜನಾದ ಎರಡನೆಯ ತೈಲಪನು ಈ ಮುಂಜರಾಜನನ್ನು ಸೋಲಿಸಿ ಸೆರೆವಿಡಿದು ಕೊಲ್ಲಿಸಿದನೆಂದು ತಿಳಿದು ಬರುತ್ತದೆ. 'ಪ್ರಬಂಧಚಿಂತಾಮಣಿ'ಯ ಕರ್ತೃವಾದ ಮೇರುತುಂಗನ ಹೇಳಿಕೆಯಂತೆ, ಮುಂಜರಾಜ ಎರಡನೆಯ ತೈಲಪನನ್ನು ಮೊದಲು ಆರು ಬಾರಿ ಸೋಲಿಸಿದ್ದನೆಂದೂ ಅನಂತರ ಆತನಿಗೆ ಬಲಿಯಾದನೆಂದೂ ತಿಳಿಯುತ್ತದೆ. ಎರಡನೆಯ ತೈಲಪ ತೀರಿಕೊಂಡಿದ್ದು ಕ್ರಿ.ಶ. ೯೯೭–೯೮ರಲ್ಲಿ ಅಥವಾ ಅದಕ್ಕೂ ಮೊದಲು.೨ ಆದಕಾರಣ, ಮುಂಜರಾಜ ಕೊಲೆಯಾದದ್ದು 'ಸುಭಾಷಿತರತ್ನಸಂದೋಹ'ದ ರಚನೆಯ (ಕ್ರಿ.ಶ. (೯೯೩–೯೪) ಅನಂತರ ಹಾಗೂ ತೈಲಪ ತೀರಿಕೊಂಡದ್ದಕ್ಕೆ (ಕ್ರಿ.ಶ. ೯೯೭–೯೮) ಮೊದಲು. ಈಗ ದೊರೆತಿರುವ ಮುಂಜನ ಮೊದಲ ಶಾಸನದ ಕಾಲ ಕ್ರಿ.ಶ. ೯೭೪. ಆದ್ದರಿಂದ ಹಾಗೂ ಆತ ಕ್ರಿ.ಶ. ೯೯೭ಕ್ಕೆ ಮೊದಲೇ ಕೊಲೆಯಾದ್ದರಿಂದ ಆತನ ಆಳ್ವಿಕೆಯ ಕಾಲ ಸುಮಾರಾಗಿ ಕ್ರಿ.ಶ. ೯೭೪ರಿಂದ ೯೯೬ ಎಂದು ಇಟ್ಟುಕೊಳ್ಳಬಹುದು.

ಈ ಮುಂಜರಾಜ ಅಥವಾ ವಾಕ್ಪತಿದೇವ ವೀರಯೋಧನಾಗಿದ್ದವನು.೩ ಪರಮಾರ ವಂಶದ ದೊರೆಗಳಲ್ಲಿ ಸುಪ್ರಸಿದ್ಧರೊಳಗೆ ಒಬ್ಬನಾದ ಈತನನ್ನು ಕುರಿತು ಈಗ ಉಪಲಬ್ಧವಾಗಿರುವ ಉಲ್ಲೇಖಗಳೇ ಅನೇಕವಿವೆ. ಅವುಗಳಲ್ಲಿ ಮುಖ್ಯವಾಗಿ ಈ ಕೆಲವನ್ನು ಎತ್ತಿ ಹೇಳಬಹುದು : ಮೊದಲು ಮುಂಜರಾಜನ ಆಸ್ಥಾನದಲ್ಲೆ ಇದ್ದು ಮತ್ತೆ ಅವನ ಅನಂತರ ಸಿಂಹಾಸನವನ್ನೇರಿದ ಅವನ ತಮ್ಮ ಸಿಂಧುರಾಜನ ಆಶ್ರಯವನ್ನು ಹೊಂದಿದ ಪದ್ಮಗುಪ್ತ ಅಥವಾ ಪರಿಮಳನೆಂಬ ಕವಿ, ಸಿಂಧುರಾಜನ ಆದೇಶದಂತೆ ಆತನನ್ನೆ ಕುರಿತು ಬರೆದ 'ನವಸಾಹಸಾಂಕಚರಿತ' ಎಂಬ ಕಾವ್ಯದಲ್ಲಿ (೧–೭, ೮) ಮುಂಜರಾಜನನ್ನು ಉಲ್ಲೇಖಿಸಿದ್ದಾನೆ; ಮುಂಜರಾಜ 'ಕವಿಮಿತ್ರ'ನಾಗಿದ್ದನೆಂದೂ ಆತನ ಪ್ರಸಾದದಿಂದಲೇ ತಾನು ಕವೀಂದ್ರರ ಪಥದಲ್ಲಿ ಸಂಚರಿಸುವುದಾಯಿತೆಂದೂ ಹೇಳಿಕೊಂಡಿದ್ದಾನೆ.೪ ಮುಂಜನ ತಮ್ಮ (ಸಿಂಧುರಾಜ)ನ ಪುತ್ರನೂ ಇತಿಹಾಸದಿಂದ ಹಾಗೂ ವಿಶೇಷವಾಗಿ ದಂತಕಥೆಗಳಿಂದ ಪ್ರಸಿದ್ಧನಾದವನೂ ಆದ ಭೋಜರಾಜ (ಸು. ಕ್ರಿ.ಶ. ೧೦೧೦– ೧೦೫೪) ತನ್ನ 'ಸರಸ್ವತೀಕಂಠಾಭರಣ'ವೆಂಬ ಪ್ರೌಢ ಲಕ್ಷಣಗ್ರಂಥದಲ್ಲಿ ಒಂದೆಡೆ (೧–೮೩) ಮುಂಜನನ್ನು ಹೆಸರಿಸಿದ್ದಾನೆ. 'ಅಭಿಧಾನರತ್ನಮಾಲ'ವೇ ಮೊದಲಾದ ಗ್ರಂಥಗಳ

---

೧ ನೋಡಿ : Indian Antiquary : Vol. XIV- Pp. 159-161.

೨ ನೋಡಿ : Indian Antiquary : Vol. XII-P. 270; XVI- P. 18, 23; XXI-Pp. 167-168; XXXVI-P. 170 ಮತ್ತು Epigraphia Indica : Vol.II-Pp. 212-221.

೩ ವಿವರಗಳಿಗೆ ನೋಡಿ : Epigraphia Indica : 1-Pp. 227, 228.

೪ 'ನವಸಾಹಸಾಂಕಚರಿತ'ದಿಂದ ಎತ್ತಿಕೊಂಡ ಪದ್ಯವೊಂದು ಈ ಗ್ರಂಥದ ವ್ಯಾಖ್ಯೆಯಲ್ಲೊಂದೆಡೆ(೨–೭೫) ಉದಾಹರಣೆಯಾಗಿ ಬಂದಿದೆ.

ಕರ್ತೃವೂ, ಕೆಲವು ಕಾಲ ಮುಂಜನ ಆಸ್ಥಾನದಲ್ಲೇ ಇದ್ದವನೂ ಆದ ಭಟ್ಟ ಹಲಾಯುಧ ತನ್ನ 'ಪಿಂಗಲ ಛಂದಸ್ಸೂತ್ರ'ದಲ್ಲಿ ಈತನನ್ನು ಹೊಗಳಿದ್ದಾನೆ. ಕ್ರಿ.ಶ. ೧೩೦೮ರಲ್ಲಿ ಮೇರುತುಂಗ ಎಂಬಾತ ರಚಿಸಿದ 'ಪ್ರಬಂಧಚಿಂತಾಮಣಿ' ಎಂಬ ಗ್ರಂಥದೊಳಗೆ (ಪ್ರಥಮ ಪ್ರಕಾಶದ ಕೊನೆ) ಮುಂಜರಾಜನ ವಿಷಯ ಬಂದಿದೆ.

ಮುಂಜರಾಜ 'ಕವಿಮಿತ್ರ'ನೂ ಪಂಡಿತಗೋಷ್ಠಿಯಿಂದ ಅಲಂಕೃತನಾಗಿದ್ದವನೂ ಮಾತ್ರವಲ್ಲದೆ ಸ್ವತಃ ಕವಿಯಾಗಿದ್ದನು. ಪ್ರಸ್ತುತ ಗ್ರಂಥದ ವ್ಯಾಖ್ಯೆಯಲ್ಲಿ ಆತನ ಪದ್ಯವೊಂದು ಉದ್ಧೃತವಾಗಿರುವುದನ್ನು ನಾವು ಹಿಂದೆಯೇ ಗಮನಿಸಿದ್ದೇವೆ. ಕ್ರಿ.ಶ. ೧೦೩೭–೧೦೬೬ರಲ್ಲಿದ್ದ ಕ್ಷೇಮೇಂದ್ರ ತನ್ನ 'ಸುವೃತ್ತತಿಲಕ', 'ಕವಿಕಂಠಾಭರಣ', 'ಔಚಿತ್ಯವಿಚಾರಚರ್ಚಾ' – ಈ ಗ್ರಂಥಗಳಲ್ಲಿ ಶ್ರೀಮದುತ್ಪಲರಾಜನದೆಂದು ಈತನ ಒಂದೊಂದು ಶ್ಲೋಕಗಳನ್ನು ಉದ್ಧರಿಸಿದ್ದಾನೆ. ವಲ್ಲಭದೇವನ 'ಸುಭಾಷಿತಾವಲಿ'ಯಲ್ಲಿ 'ಶ್ರೀಹರ್ಷದೇವಾತ್ಮಜ ವಾಕ್ಪತಿ'ಯದೆಂದು ಎರಡು ಶ್ಲೋಕಗಳು ಉದ್ಧೃತವಾಗಿವೆ.೧ ಮೇರುತುಂಗ ತನ್ನ 'ಪ್ರಬಂಧಚಿಂತಾಮಣಿ'ಯಲ್ಲಿ ಮುಂಜನ ವಿಷಯ ಹೇಳುವಾಗ ಆತ ತೈಲಪನ ಸೆರೆಯಲ್ಲಿದ್ದು ಕೂಡ ತನ್ನ ಸ್ಥಿತಿಯನ್ನು ಪದ್ಯ ಕಟ್ಟಿ ಹೇಳಿಕೊಳ್ಳುತ್ತಿದ್ದನೆಂದು ತಿಳಿಸಿದ್ದಾನೆ. ಮುಖ್ಯವಾಗಿ ಭೋಜನನ್ನು ಕುರಿತು ದಂತಕಥೆಗಳಿರುವ ಹಾಗೂ ಪ್ರಾಸಂಗಿಕವಾಗಿ ಮುಂಜರಾಜನನ್ನೂ ಕುರಿತು ಹೇಳುವ 'ಭೋಜಪ್ರಬಂಧ'ದಲ್ಲಿ ಬಲ್ಲಾಳಕವಿ ಮುಂಜಕೃತವಾದುವೆಂದು ಅನೇಕ ಶ್ಲೋಕಗಳನ್ನು ಉದ್ಧರಿಸಿದ್ದಾನೆ. ಕ್ರಿ.ಶ. ಹದಿಮೂರನೆಯ ಶತಮಾನದ ಸುಮಾರಿನಲ್ಲಿ ಆಳುತ್ತಿದ್ದ ಪರಮಾರವಂಶದ ದೊರೆ ಅರ್ಜುನವರ್ಮ, ತನ್ನ 'ಅಮರುಶತಕ'ದ ವ್ಯಾಖ್ಯೆಯಾದ 'ರಸಿಕಸಂಜೀವಿನಿ'ಯಲ್ಲಿ ಮುಂಜನ ಪದ್ಯವೊಂದನ್ನು ಉದ್ಧರಿಸಿ 'ನಮ್ಮ ಪೂರ್ವಜನಾದ ವಾಕ್ಪತಿರಾಜ ಅಥವಾ ಮುಂಜದೇವನದು ಇದು' ಎಂದಿದ್ದಾನೆ. 'ಶಾರ್ಙ್ಗಧರಪದ್ಧತಿ' (ಕ್ರಿ.ಶ. ೧೩೬೩)ಯಲ್ಲಿ ಮುಂಜರಾಜನ ಎರಡು ಶ್ಲೋಕಗಳು ಉದ್ಧೃತವಾಗಿದ್ದು ಒಂದನ್ನು 'ವಾಕ್ಪತಿರಾಜ'ನ ದೆಂದೂ ಇನ್ನೊಂದನ್ನು 'ಉತ್ಪಲರಾಜ'ನದೆಂದೂ ಹೇಳಲಾಗಿದೆ.

ಮುಂಜರಾಜನ ಬಗೆಗೆ ದೊರೆಯುವ ವಿಷಯಗಳನ್ನು ಮೇಲೆ ಸಂಗ್ರಹಿಸಿಯಾಯಿತು.೨ ಇನ್ನು, ಧನಂಜಯ ಆತನ ಆಶ್ರಯದಲ್ಲಿದ್ದವನು ಎಂದು ಹೇಳಿಬಿಟ್ಟರೆ ಧನಂಜಯನ ಬಗೆಗೆ ಹೇಳಬಹುದಾದದ್ದನ್ನೆಲ್ಲ ಹೇಳಿದಂತಾಗುತ್ತದೆ. ಎಂದರೆ – ಧನಂಜಯನನ್ನು ಕುರಿತು

೧ ಇವುಗಳಲ್ಲಿ 'ಅಹೌ ವಾ ಹಾರೇ ವಾ...' ಎಂದು ಮೊದಲಾಗುವ ಶ್ಲೋಕ ಒಂದು. ಕ್ಷೇಮೇಂದ್ರನಿಂದ ಉದ್ಧೃತವಾದ ಶ್ಲೋಕಗಳಲ್ಲೂ ಇದು ಸೇರಿಕೊಂಡಿದೆ. ಭರ್ತೃಹರಿಯ 'ವೈರಾಗ್ಯಶತಕ'ದಲ್ಲಿ ಕೂಡ ಈ ಶ್ಲೋಕ ಪ್ರಕ್ಷಿಪ್ತವಾಗಿ ಸೇರಿಬಿಟ್ಟಿದೆ; ಅಂತೆಯೇ, 'ಶಾರ್ಙ್ಗಧರಪದ್ಧತಿ'ಯಲ್ಲಿ ಈ ಶ್ಲೋಕವನ್ನು ಭರ್ತೃಹರಿಯದೆಂದು ಹೇಳಿ ಉದ್ಧರಿಸಲಾಗಿದೆ.

೨ ಹೆಚ್ಚಿನ ವಿವರಗಳಿಗೆ ನೋಡಿ : Bombay Gazetteer, I (1896)ನಲ್ಲಿನ Fleet ಅವರ The Dynasties of Kanarese Districts ಮತ್ತು ಅವರಲ್ಲೇ ಇರುವ ಭಂಡಾರ್‌ಕರ್ ಅವರ Early History of Deccan; ಡಾ॥ ಡಿ.ಸಿ. ಗಂಗೂಲಿ ಅವರ History of the Paramara Dynasty; ಭಾರತೀಯ ವಿದ್ಯಾಭವನ (ಮುಂಬೈ) ಪ್ರಕಟಿಸಿರುವ History and Culture of Indian Peopleನ ನಾಲ್ಕನೆಯ ಸಂಪುಟವಾದ The Age of Imperial Kanauj.

ನಮಗೆ ದೊರೆಯುವ ವಿವರ ಅಷ್ಟೇ. ಶ್ರೀಧರದಾಸನ 'ಸದುಕ್ತಿಕರ್ಣಾಮೃತ'ದಲ್ಲಿ ಈತನ ಶ್ಲೋಕವೊಂದು ಉದ್ಧೃತವಾಗಿರುವುದೆಂದು ತಿಳಿಯುವುದಲ್ಲದೆ ಈತನನ್ನು ಕುರಿತು ಬೇರಾವ ಉಲ್ಲೇಖವೂ ಸದ್ಯ ದೊರೆಯುವುದಿಲ್ಲ.[೧] ಧನಂಜಯನ ಮತ್ತು ಆತನ ತಂದೆಯ ಹೆಸರು, 'ದಶರೂಪಕ'ದಲ್ಲಿನ ಕೆಲವು ಶ್ಲೋಕಗಳು (ನೋಡಿ : ೧–೧ರಿಂದ ೪ ಮತ್ತು ೨–೧೦೫ ಇ.,) ಇವುಗಳಿಂದ ಈತ ತ್ರಿಮೂರ್ತಿಗಳಲ್ಲಿ ಸಮಾನ ಪೂಜ್ಯಭಾವವನ್ನಿಟ್ಟುಕೊಂಡಿದ್ದ ವಿಷ್ಣುಭಕ್ತನೆಂದೂ ವೈದಿಕಸಂಪ್ರದಾಯದವನೆಂದೂ ಊಹಿಸಬಹುದಾಗಿದೆ.

**ಗ್ರಂಥದ ಸಾಮಾನ್ಯ ಪರಿಚಯ :** 'ದಶರೂಪಕ'ದ ವಿಷಯವ್ಯಾಪ್ತಿಯನ್ನು ಸ್ಥೂಲವಾಗಿ ಗ್ರಹಿಸಲು ಅದರಲ್ಲಿ ಕುರಿತಿರುವ ವಿಷಯಗಳನ್ನು ಇಲ್ಲಿ ಸಂಕ್ಷೇಪ ಅವಲೋಕಿಸಬಹುದು :

ಗ್ರಂಥವನ್ನು ನಾಲ್ಕು 'ಪ್ರಕಾಶ'ಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಪ್ರಕಾಶ : ಮೊದಲ ಶ್ಲೋಕದಲ್ಲಿ ವಿಘ್ನನಿವಾರಣಾರ್ಥವಾಗಿ ಗಣೇಶನ ಸ್ತುತಿಯಿದೆ. ಎರಡನೆಯ ಶ್ಲೋಕದಲ್ಲಿ ಶ್ಲೇಷೆಯಿಂದ ವಿಷ್ಣುಭರತರಿಬ್ಬರನ್ನೂ ಒಟ್ಟಿಗೆ ಸ್ತುತಿಸಲಾಗಿದೆ. ಬ್ರಹ್ಮಸೃಷ್ಟಿಯ 'ಸರ್ವವಿತ್' ವಿಷ್ಣುವಿನೊಡನೆ ಕಲಾಸೃಷ್ಟಿಯ 'ಸರ್ವವಿತ್' ಆದ ಭರತನನ್ನು ಕೂಡಿಸಿ ಸ್ತುತಿಸಿರುವುದು ಗ್ರಂಥಕಾರನಿಗೆ ಭರತಮುನಿಯ ಬಗ್ಗೆ ಇರುವ ಪೂಜ್ಯಭಾವವನ್ನು ತೋರಿಸುತ್ತದೆ. ಬ್ರಹ್ಮಸೃಷ್ಟಿಯ ಭಾವಕ(ಭಕ್ತ)ನಿಗಿರುವಷ್ಟೇ ಗೌರವ ಕಲಾಸೃಷ್ಟಿಯ ಭಾವಕ(ರಸಿಕ)ನಿಗೂ ಉಂಟೆಂಬ ಅಭಿಪ್ರಾಯ ಇಲ್ಲಿ ಸೂಚಿತವಾಗುವಂತಿದೆ. ಈ ಶ್ಲೋಕದಿಂದ ವಿಷ್ಣುವೇ ಧನಂಜಯನ ಇಷ್ಟದೈವತವಿರಬಹುದೆಂದು ತೋರುತ್ತದೆ; ಹಾಗೆಯೇ, ಧನಂಜಯನ ತಂದೆಯ ಹೆಸರೂ 'ವಿಷ್ಣು' ಎಂಬ ಅಂಶ ನೆನಪಿಗೆ ಬರುತ್ತದೆ. 'ಯಾವನಾದರೂ ಒಬ್ಬ ವಿದ್ವಾಂಸನಲ್ಲಿ ಯಾವಾಗಲಾದರೊಮ್ಮೆ ಯಾವುದಾದರೊಂದು ವಿಷಯವನ್ನು ಸರಸ್ವತಿಯು ಕೃಪೆಯಿಂದ ಹೊಂದಿಸುತ್ತಾಳೆ; ಅದರಿಂದ ಮತ್ತೊಬ್ಬನು ಪಾಂಡಿತ್ಯ ಪಡೆಯುತ್ತಾನೆ' ಎಂಬ ಅರ್ಥದ ಮೂರನೆಯ ಆರ್ಯೆ ಸರಸ್ವತಿಯ ಕೃಪೆಯನ್ನು ಹೊಗಳುವುದರ ಕೂಡ ಶ್ರೋತೃಪ್ರವೃತ್ತಿಯನ್ನು ಹೇಳುತ್ತದೆ. ನಾಲ್ಕನೆಯದಾದ ಬಹುಸುಂದರ ವೃತ್ತ ನಾಟ್ಯವೇದದ ಮಹಿಮೆಯನ್ನು ಉದ್ಧರಿಸುತ್ತದೆ; ಗ್ರಂಥಕಾರನ ವಿನಯವನ್ನು ಸೂಚಿಸುತ್ತದೆ; ಗ್ರಂಥದ ಪರಿಮಿತಿಯನ್ನು ಹೇಳುತ್ತದೆ. 'ನಾಟ್ಯಶಾಸ್ತ್ರ'ದಲ್ಲಿ ಹೇಳಿರುವ ವಿಷಯವನ್ನೆ ಇಲ್ಲಿ ಮತ್ತೆ ಏಕೆ ಹೇಳಿದೆ, ಹೇಗೆ ಹೇಳಿದೆ – ಎಂಬುದನ್ನು ಐದನೆಯ ಶ್ಲೋಕ ವರ್ಣಿಸುತ್ತದೆ. ರೂಪಕಗಳ (ಪರ್ಯಾಯವಾಗಿ ಕಲೆಯ) ಅನುಸಂಧಾನದಿಂದ ಭಾವಕರಿಗೆ ದೊರೆಯುವ ಪರಮಫಲ ಆನಂದವೇ ಎಂಬುದನ್ನು ಮಾರ್ಮಿಕವಾಗಿ ಮನೋಹರವಾಗಿ ಉದ್ಧರಣಕ್ಕೆ ಯೋಗ್ಯವಾದ ಮಾತುಗಳಲ್ಲಿ ಹೇಳುತ್ತದೆ ಅನಂತರದ ಶ್ಲೋಕ. ಇದಿಷ್ಟು ಗ್ರಂಥದ ಆರಂಭ. ಅದಾದಮೇಲೆ ಗ್ರಂಥಪೀಠಿಕೆ : ನಾಟ್ಯ

---

[೧] 'ದ್ವಿಸಂಧಾನ' ಅಥವಾ 'ರಾಘವಪಾಂಡವೀಯ' ಹಾಗೂ 'ನಾಮಮಾಲಾ' ಎಂಬ ಕೃತಿಗಳನ್ನು ರಚಿಸಿದ ಇನ್ನೊಬ್ಬ ಧನಂಜಯನಿದ್ದಾನೆ; ಈತ ವಾಸುದೇವ ಎಂಬುವವನ ಪುತ್ರ; ಪ್ರಾಯಃ, ಪ್ರಸ್ತುತ ಗ್ರಂಥಕರ್ತೃವಿಗಿಂತ ಈಚಿನವನು.

ರೂಪ ರೂಪಕ – ಇವುಗಳ ಲಕ್ಷಣ; ದಶರೂಪಕಗಳ ಹೆಸರು; ನಾಟ್ಯನೃತ್ಯನೃತ್ತಗಳಲ್ಲಿನ ಭೇದ – ಈ ಮುಂತಾದ ಕೆಲವು ಮೂಲಸೂತ್ರಗಳು.

ರೂಪಕಗಳಲ್ಲಿ ಮುಖ್ಯವಾಗಿ ಹತ್ತು ಬಗೆ. ಎಲ್ಲ ರೂಪಕಗಳೂ ಅನುಕರಣಾತ್ಮಕವಾಗಿರುವಾಗ ಅವುಗಳಲ್ಲಿ ಭೇದಕಲ್ಪನೆ ಏಕೆ ಎಂಧರೆ, ವಸ್ತು ನಾಯಕ ರಸ – ಈ ಮೂರು ಅಂಶಗಳಲ್ಲಿನ ಭೇದದಿಂದ ದಶರೂಪಕಗಳಲ್ಲಿ ಭೇದವುಂಟಾಗುತ್ತದೆ ಎನ್ನಬಹುದು. ಅಥವಾ, ರೂಪಕಪರೀಕ್ಷೆಗೆ ಹೊರಟಾಗ ಅದನ್ನು ವಿಚ್ಛೇದಿಸಿ ವಿಚ್ಛೇದಿಸಿ ನೋಡಬೇಕಷ್ಟೆ. ರೂಪಕದ ಮೊದಲ ಸ್ಥೂಲ ವಿಚ್ಛೇದನೆಯಿಂದ ಅದರಲ್ಲಿ ವಸ್ತು ನಾಯಕ ರಸ – ಈ ಮೂರು ಮುಖ್ಯ ಆಂಶಗಳಿರುವುದು ತೋರುತ್ತದೆ. ಅಂತೆಯೇ ಈ ಗ್ರಂಥದ ಪ್ರಥಮ ಪ್ರಕಾಶದಲ್ಲಿ ವಸ್ತುವನ್ನೂ, ದ್ವಿತೀಯ ಪ್ರಕಾಶದಲ್ಲಿ ನಾಯಕಾದಿ ವಿಷಯವನ್ನೂ, ಚತುರ್ಥ ಪ್ರಕಾಶದಲ್ಲಿ ರಸವಿಷಯವನ್ನೂ ಗಮನಿಸಲಾಗುತ್ತದೆ; ಈ ಮೂರು ಅಂಶಗಳ ಆಧಾರದ ಮೇಲೆ ಕಲ್ಪಿತವಾಗುವ ರೂಪಕದ ಹತ್ತು ಮುಖ್ಯ ಭೇದಗಳನ್ನು ತೃತೀಯ ಪ್ರಕಾಶದಲ್ಲಿ ಲಕ್ಷಿಸಲಾಗುತ್ತದೆ.

ವಸ್ತು : ಕಥಾವಸ್ತುವನ್ನು ಸ್ಥೂಲವಾಗಿ ಮುಖ್ಯಕಥೆ ಹಾಗೂ ಉಪಕಥೆಗಳು ಎಂದು ಎರಡು ವಿಭಾಗ ಮಾಡಬಹುದು. ಮುಖ್ಯಕಥೆಗೆ 'ಆಧಿಕಾರಿಕ'ವೆಂದೂ ಉಪಕಥೆಗೆ 'ಪ್ರಾಸಂಗಿಕ' ಎಂದೂ ಸಂಜ್ಞೆ. 'ಪ್ರಾಸಂಗಿಕ'ದಲ್ಲಿ ಪುನಃ ಎರಡು ವಿಧಗಳಿವೆ : ಮುಖ್ಯಕಥೆಯ ಕೂಡ ಹೊಂದಿಕೊಂಡು ಬಹುದೂರ ಸಾಗುವಂಥದು ಒಂದು, ಮಧ್ಯೆ ನಿರ್ದಿಷ್ಟ ಸ್ಥಾನವೊಂದರಲ್ಲಿ ಮಿಂಚಿ ಮರೆಯಾಗುವಂಥದು ಇನ್ನೊಂದು. ಮೊದಲನೆಯದಕ್ಕೆ 'ಪತಾಕಾ' ಎಂದೂ ಎರಡನೆಯದಕ್ಕೆ 'ಪ್ರಕರೀ' ಎಂದೂ ಹೆಸರು. ಇನ್ನು 'ಆಧಿಕಾರಿಕ'ವು 'ಬೀಜ' (ಕಥೆಯ ಮೂಲ) 'ಬಿಂದು' (ಕಥಾಪ್ರವಾಹ) 'ಕಾರ್ಯ' (ಸಿದ್ಧಿ) – ಈ ಮೂರು ಅಂಶಗಳಿಂದ ಕೂಡಿದೆ. ಅಲ್ಲಿಗೆ, ಸಮಗ್ರವಸ್ತುವಿನ ಅಂಶಗಳು ಈ ಐದು ಆಗುತ್ತವೆ : ಪತಾಕಾ, ಪ್ರಕರೀ, ಬೀಜ, ಬಿಂದು, ಕಾರ್ಯ. ಈ ಅಂಶಗಳಿಗೆ 'ಅರ್ಥಪ್ರಕೃತಿಗಳು' ಎಂಬ ಹೆಸರಿದೆ. ಈ ವಿವರಗಳು ೧೭ನೆಯ ಖಂಡದಲ್ಲಿ ಆರಂಭವಾಗಿ ೨೭ನೆಯ ಖಂಡದಲ್ಲಿ ಮುಗಿಯುತ್ತವೆ. ಇವುಗಳ ನಡುವೆ ಮತ್ತೆರಡು ವಿಷಯಗಳೂ ಬಂದಿವೆ : ೧. 'ಪತಾಕಾ'ವನ್ನು ಲಕ್ಷಿಸುವಾಗ, ರೂಪಕಗಳಲ್ಲಿ ಭಾವೀವಸ್ತುವನ್ನು ಸೂಚಿಸಲು ಬಳಸುವ ತಂತ್ರವಾದ 'ಪತಾಕಾಸ್ಥಾನಕ'ವನ್ನೂ ಲಕ್ಷಿಸಲಾಗಿದೆ (ನೋಡಿ : ಖಂ. ೨೨). ೨. ಕಥೆಯು ಪುರಾಣೇತಿಹಾಸಗಳಲ್ಲಿ ಪ್ರಖ್ಯಾತವಾದದ್ದೋ ಕವಿಕಲ್ಪಿತವೋ ಅಥವಾ ಮಿಶ್ರವೋ ಮತ್ತು ಮರ್ತ್ಯರದೋ ದಿವ್ಯರದೋ ಅಥವಾ ಇಬ್ಬರೂ ಇರುವಂಥದೋ – ಎಂಬ ದೃಷ್ಟಿಯಿಂದ ಉಂಟಾಗುವ ವಸ್ತುಭೇದವನ್ನೂ, ಮೇಲಿನ ಅಂಶಗಳ ನಡುವೆಯೇ, ಲಕ್ಷಿಸಲಾಗಿದೆ (ಖಂ. ೨೩).

ಮೇಲೆ ಹೇಳಿದಂತೆ ಬೀಜ ಬಿಂದು ಪತಾಕಾ ಪ್ರಕರೀ ಕಾರ್ಯ – ಈ ಅಂಶಗಳಿಂದ ಕೂಡಿದ ಕಥೆಗೆ ಒಂದು ಗತಿಯಿದೆ. ಅದಕ್ಕೆ ಒಂದು ಆರಂಭ, ಉತ್ಕರ್ಷ ಹಾಗೂ ಮುಕ್ತಾಯವಿರುತ್ತದೆ. ಇಂಥ ಕಥಾಗತಿಯನ್ನು ಐದು 'ಅವಸ್ಥೆ'ಗಳಾಗಿ ವಿಂಗಡಿಸಲಾಗುತ್ತದೆ : ಆರಂಭ, ಯತ್ನ, ಪ್ರಾಪ್ತ್ಯಾಶೆ, ನಿಯತಾಪ್ತಿ, ಫಲಯೋಗ ಅಥವಾ ಫಲಾಗಮ – ಎಂದು. ಈ ಐದು ಅವಸ್ಥೆಗಳನ್ನು ಕ್ರಮವಾಗಿ ಚಿತ್ರಿಸಲು ರೂಪಕದಲ್ಲಿ ಸಾಮಾನ್ಯವಾಗಿ ಐದು ವಿಭಾಗಗಳನ್ನು

ಮಾಡಿಕೊಳ್ಳಲಾಗುತ್ತದೆ. ಅಂಥ ವಿಭಾಗಗಳನ್ನೆ 'ಸಂಧಿ' ಎನ್ನಬಹುದು. ಇವು ಐದು ಸಂಧಿಗಳು : ಮುಖ, ಪ್ರತಿಮುಖ, ಗರ್ಭ, ಅವಮರ್ಶ, ಉಪಸಂಹೃತಿ ಅಥವಾ ನಿರ್ವಹಣ (ಖಂ. ೨೮ರಿಂದ ೩೬).

ಒಟ್ಟನಲ್ಲಿ, ಪ್ರಖ್ಯಾತ ಉತ್ಪಾದ್ಯ ಮಿಶ್ರ ಹಾಗೂ ದಿವ್ಯ ಮರ್ತ್ಯ ದಿವ್ಯಾದಿವ್ಯ – ಈ ಭೇದಗಳಿರುವ ಸಮಗ್ರವಸ್ತುವಿನಲ್ಲಿ ಬೀಜ, ಬಿಂದು, ಕಾರ್ಯ, ಪತಾಕಾ, ಪ್ರಕರೀ – ಈ ಐದು ಅರ್ಥಪ್ರಕೃತಿಗಳಿರುತ್ತವೆ. ಐದು ಅರ್ಥಪ್ರಕೃತಿಗಳಿಂದ ಪುಷ್ಟವಾದ ವಸ್ತುವಿಗೆ ಆರಂಭಾದಿ ಐದು ಅವಸ್ಥೆಗಳು; ಆರಂಭಾದಿ ಐದು ಅವಸ್ಥೆಗಳನ್ನು ಚಿತ್ರಿಸಲು ರೂಪಕದಲ್ಲಿ ಮಾಡಿಕೊಳ್ಳಬೇಕಾದ ವಿಭಾಗವೇ ಮುಖಾದಿ ಐದು ಸಂಧಿಗಳು. ಅದನ್ನೇ ಹೀಗೆ ರೇಖಾಸೂಚಿಯ ಮೂಲಕ ಗುರುತಿಸಬಹುದು :




**ಕಥಾವಸ್ತುವಿನ ಗತಿ :**




ಇದರಲ್ಲಿ ಮೊದಲನೆಯದು ವಸ್ತುವಿನ ಐದು ಅವಸ್ಥೆಗಳು; ಎರಡನೆಯದು ಆ ಅವಸ್ಥೆಗಳಿಗೆ ಸಮಾನವಾಗಿ ರೂಪಕದಲ್ಲಿ ಕಲ್ಪಿತವಾದ ಸಂಧಿಗಳು.

ಇನ್ನು, ರೂಪಕದಲ್ಲಿ ಬರುವ ಮುಖಾದಿ ಸಂಧಿಗಳು ಒಂದೊಂದೂ ಹಲವು ಅಂಗಗಳಿಂದ ಪೋಷಿತವಾಗಿರುತ್ತವೆ. ಆದರಂತೆ ಮುಖದಲ್ಲಿ ಹನ್ನೆರಡು, ಪ್ರತಿಮುಖದಲ್ಲಿ ಹದಿಮೂರು, ಗರ್ಭದಲ್ಲಿ ಹನ್ನೆರಡು, ಅವಮರ್ಶದಲ್ಲಿ ಹದಿಮೂರು, ನಿರ್ವಹಣದಲ್ಲಿ ಹದಿನಾಲ್ಕು - ಒಟ್ಟು ಅರುವತ್ತನಾಲ್ಕು ಸಂಧ್ಯಂಗಗಳು. ಈ ಸಂಧ್ಯಂಗಗಳನ್ನು ಖಂ. ೩೭ರಿಂದ ೧೧೦ರ ವರೆಗೆ ಹಾಗೂ ಅವುಗಳ ಪ್ರಯೋಜನಗಳನ್ನು ೧೧೨ರಲ್ಲಿ ಹೇಳಿದೆ.

ರೂಪಕದಲ್ಲಿ ವಸ್ತುವಿನ ಸ್ಥಾನ ಸ್ವತಂತ್ರವಾದುದಲ್ಲ. ಅದು ನಾಯಕಾದಿಗಳಿಗೆ ಹಾಗೂ ರಸಕ್ಕೆ ಹೊಂದಿರುವಂಥದು. ಅಂತೆಯೇ ಈ ಮೂರರ ಹೊಂದಿಕೆಗಾಗಿ ವಸ್ತುವಿನಲ್ಲಿ ನಾಯಕಾದಿಗಳಿಂದ ಮತ್ತು ರಸದಿಂದ ಅಪೇಕ್ಷಿತವಾದ ಭಾಗ ಯಾವುದು ಅನಪೇಕ್ಷಿತ ವಾದ ಭಾಗ ಯಾವುದು ಎಂಬುದನ್ನು ವಿಂಗಡಿಸಿಕೊಳ್ಳಬೇಕು. ವಸ್ತುವು ರೂಪಕಗತ ವಾಗುವಾಗ ಅದರಲ್ಲಿ ಅಗತ್ಯವಾದ ಭಾಗವು 'ದೃಶ್ಯಶ್ರವ್ಯ'ವಾಗಿ ರೂಪಕದ ಮುಖ್ಯ ಭಾಗಗಳಾದ ಅಂಕಗಳಲ್ಲಿ ಬರುತ್ತದೆ ('ಅಂಕ'ದ ಲಕ್ಷಣ 'ನಾಟಕಲಕ್ಷಣ'ವನ್ನು ಹೇಳುವಲ್ಲಿ ೩-೩೫, ೪೧, ೪೨ರಲ್ಲಿ ಬರುತ್ತದೆ). ಇನ್ನುಳಿದ ಭಾಗ 'ಸೂಚ್ಯ'ವಾಗಿ, ವಿಷ್ಕಂಭ, ಚೂಲಿಕಾ, ಅಂಕಾಸ್ಯ, ಅಂಕಾವತಾರ, ಪ್ರವೇಶಕ - ಈ ಐದು 'ಅರ್ಥೋಪಕ್ಷೇಪಕ'ಗಳಲ್ಲಿ ಅಡಕಗೊಂಡು ಬರುತ್ತದೆ. 'ಅರ್ಥೋಪಕ್ಷೇಪಕ'ದ ವಿವರಗಳನ್ನು ಖಂ. ೧೧೫-೧೨೧ರಲ್ಲಿ ನೋಡಬಹುದು. ಇಲ್ಲಿ ಕೆಲವು 'ದೃಶ್ಯಶ್ರವ್ಯ' ಕೆಲವು 'ಸೂಚ್ಯ' ಎಂದು ವರ್ಗೀಕರಣ ಮಾಡಲಾಯಿತಷ್ಟೆ. ಅಂಥ 'ಸೂಚ್ಯ'ಗಳಲ್ಲಿ ಮುಖ್ಯವಾದ ಕೆಲವನ್ನು - ಅವು 'ಅಂಕ'ದಲ್ಲಿ ಬರಲಾಗದೆಂದು-೩-೩೯ರಲ್ಲಿ ನಾಟಕಲಕ್ಷಣಾವಸರದಲ್ಲಿ ಹೇಳಿದೆ. ಇನ್ನು 'ಸರ್ವಥಾ ಅನಿರ್ದೇಶ್ಯ'ಗಳಾದ ಕೆಲವನ್ನೂ ಅಲ್ಲೇ (೩-೪೦) ಹೇಳಿದೆ. ರೂಪಕಗತವಾದ ವಸ್ತುವಿನಲ್ಲಿ 'ನಾಟ್ಯಧರ್ಮ'ವನ್ನನುಸರಿಸಿ ಮತ್ತೊಂದು ಬಗೆಯ ವಿಭಾಗ ಉಂಟಾಗುತ್ತದೆ. 'ಸರ್ವಶ್ರಾವ್ಯ', 'ನಿಯತಶ್ರಾವ್ಯ', 'ಅಶ್ರಾವ್ಯ' ಎಂಬ ಹೆಸರಿನಲ್ಲಿ ಈ ವಿಭಾಗಗಳನ್ನು ಲಕ್ಷಿಸಲಾಗುತ್ತದೆ (ಖಂ. ೧೨೨-೧೨೮). ಒಂದು ಪಾತ್ರದ ಮಾತು ಅಲ್ಲಿರುವ ಎಲ್ಲ ಪಾತ್ರಗಳಿಗೂ ಕೇಳಿಸುವಂಥದು 'ಸರ್ವಶ್ರಾವ್ಯ' ಅಥವಾ 'ಪ್ರಕಾಶ'. ಒಂದು ಪಾತ್ರದ ಮಾತು ಎದುರಿಗಿರುವ ಹಲವು ಪಾತ್ರಗಳಲ್ಲಿ ಒಂದಕ್ಕೆ ಅಥವಾ ಕೆಲವಕ್ಕೆ ಮಾತ್ರ ಕೇಳುವಂಥದು 'ಜನಾಂತ' ಮತ್ತು 'ಅಪವಾರಿತ'. ಒಂದು ಪಾತ್ರದ ಮಾತು ಅಲ್ಲಿರುವ ಮತ್ತಾವ ಪಾತ್ರಕ್ಕೂ ಕೇಳಿಸದೆ ಕೇವಲ ಸಾಮಾಜಿಕರಿಗೆ ಮಾತ್ರ ಕೇಳಿಸುವಂಥದು 'ಅಶ್ರಾವ್ಯ' ಅಥವಾ 'ಸ್ವಗತ'. ಇವುಗಳಲ್ಲದೆ 'ಆಕಾಶಭಾಷಿತ'ವೆಂಬ ಮತ್ತೊಂದು ಪ್ರಕಾರ ಉಂಟು. ಒಂದೇ ಪಾತ್ರ ಉಳಿದ ಪಾತ್ರಗಳನ್ನು ನೇಪಥ್ಯದಲ್ಲಿ ಕಲ್ಪಿಸಿಕೊಂಡು ಮಾತನಾಡುವ ಪ್ರಕಾರ ಅದು.

ಖಂ. ೧೨೯ರಲ್ಲಿ ವಸ್ತುವಿಚಾರವನ್ನು ಉಪಸಂಹರಿಸಲಾಗಿದೆ. ಅಲ್ಲಿ ವಸ್ತು ನಾಯಕರಸಗಳಲ್ಲಿನ ಹೊಂದಿಕೆಯನ್ನು ಸೂಚಿಸಿದೆ. ಉಚಿತವೂ ಸುಂದರವೂ ಆದ ವಚಃ ಪ್ರಪಂಚದಿಂದ ಪೂರ್ವಕಾವ್ಯಗಳ ಪರಿಶೀಲನದಿಂದ ಕವಿ ಚಮತ್ಕಾರವುಳ್ಳ ರೂಪಕವನ್ನು ರಚಿಸತಕ್ಕದ್ದೆಂಬ ಉಪದೇಶವಿದೆ.

ಎರಡನೆಯ ಪ್ರಕಾಶ : ರೂಪಕದ ಪಾತ್ರಗಳಲ್ಲಿ ನಾಯಕನೇ ಪ್ರಧಾನ, ಉಳಿದ ಪಾತ್ರಗಳೆಲ್ಲ ಅವನ ಪರಿಚ್ಛದವಾಗಿರುತ್ತದೆ - ಎಂಬ ದೃಷ್ಟಿಯಿಂದ ನಮ್ಮ ನಾಟ್ಯ ಲಕ್ಷಣಗಳಲ್ಲಿ ನಾಯಕ ನಾಯಿಕೆಯರಿಗೆ ಮಾತ್ರವೇ ವಿಶೇಷ ಗಮನ ದೊರೆಯುತ್ತದೆ. ನಾಯಕಾದಿವಿವರಗಳಿಗೆ ಮೀಸಲಾದ ಎರಡನೆಯ ಪ್ರಕಾಶದಲ್ಲಿ ಮೊದಲಿಗೆ ನಾಯಕನ ಸಾಮಾನ್ಯ ಗುಣಗಳ ಪಟ್ಟಿ ಬಂದಿದೆ. ಅನಂತರ 'ನಾಯಕ'ರಲ್ಲಿನ ಈ ನಾಲ್ಕು ಪ್ರಕಾರಗಳನ್ನು ಲಕ್ಷಿಸಲಾಗಿದೆಃ ಧೀರಲಲಿತ, ಧೀರಶಾಂತ, ಧೀರೋದಾತ್ತ ಹಾಗೂ ಧೀರೋದ್ಧತ. ಇದಾದಮೇಲೆ 'ಶೃಂಗಾರನಾಯಕ'ನ (ಎಂದರೆ - ಶೃಂಗಾರಪ್ರಧಾನವಾದ ರೂಪಕದಲ್ಲಿ ಬರುವ ರತಿಭಾವಪ್ರಾಚುರ್ಯವುಳ್ಳ ನಾಯಕ) ಅವಸ್ಥೆಗಳನ್ನು ಹೇಳಿದೆ. ಶೃಂಗಾರನಾಯಕನಿಗೆ ಹಲವು ನಾಯಿಕೆಯರಿರುವಲ್ಲಿ ಮತ್ತು ಆತ ಕೊನೆಯವಳಲ್ಲಿ ಅನುರಾಗವುಳ್ಳವನಾಗಿದ್ದಲ್ಲಿ, ಅವನು ತನ್ನ ಹಿಂದಿನ ನಾಯಿಕೆಯ (ಅಥವಾ ನಾಯಿಕೆಯರ) ಕೂಡ ಹೇಗೆ ನಡೆದುಕೊಳ್ಳುತ್ತಾನೆಂಬುದರ ಆಧಾರದ ಮೇಲೆ ಆತನಲ್ಲಿ ಕೆಲವು ವರ್ಗಗಳನ್ನು ಕಲ್ಪಿಸುತ್ತಾರೆ. ಆತ ತನ್ನ ಹಿಂದಿನವಳಲ್ಲಿ (ಅಥವಾ ಹಿಂದಿನವರಲ್ಲಿ) ಸಹೃದಯನಾಗಿದ್ದು 'ದಕ್ಷಿಣ'ನಾಗಿರಬಹುದು, ಹಿಂದಿನವಳಿಗೆ ರಹಸ್ಯವಾಗಿ ಅಪ್ರಿಯವನ್ನುಂಟುಮಾಡುವಂಥ 'ಶಠ'ನಾಗಿರಬಹುದು ಇಲ್ಲವೆ ಕೊನೆಯವಳ ಸಂಗದಿಂದ ಉಂಟಾದ ಅಂಗವಿಕೃತಿ ಎದ್ದು ತೋರುವಂತಿದ್ದು 'ಧೃಷ್ಟ'ನಾಗಿರಬಹುದು. ಇನ್ನು ಒಬ್ಬನೇ ನಾಯಿಕೆಯನ್ನುಳ್ಳ ನಾಯಕ 'ಅನುಕೂಲ'ನೆನ್ನಿಸಿಕೊಳ್ಳುತ್ತಾನೆ. ಹೀಗೆ ನಾಯಕನ ಅವಸ್ಥೆಗಳು ನಾಲ್ಕು. ನಾಯಕರ ನಾಲ್ಕು ಬಗೆಗಳಲ್ಲಿ ಒಂದೊಂದಕ್ಕೂ ಈ ನಾಲ್ಕು ಅವಸ್ಥೆಗಳನ್ನು ಹಚ್ಚಿದಾಗ ಒಟ್ಟಿನ ಭೇದ ಹದಿನಾರು ಆಗುತ್ತದೆ. ಈ ಭೇದಗಳೆಲ್ಲ ೧ರಿಂದ ೧೧ರವರೆಗಿನ ಖಂಡಗಳಲ್ಲಿ ಲಕ್ಷಿತವಾಗಿದೆ.

ಖಂ. ೧೨–೧೩ರಲ್ಲಿ ನಾಯಕನ (ಮುಖ್ಯ) ಸಹಾಯಕರ ವಿವರವಿದೆ. ಅದರಲ್ಲಿ ಮೊದಲು ಬರುವಾತ, ನಾಯಕನಿಗೆ ಕಿಂಚಿದೂನಮಾತ್ರವಾಗಿರುವ ಪತಾಕಾ (ಉಪಕಥಾ)ನಾಯಕ. ಆತನಿಗೆ 'ಪೀಠಮರ್ದ' ಎನ್ನುತ್ತಾರೆ. ಇನ್ನುಳಿದ ಅವನ ಸಹಾಯಕರು ವಿಟವಿದೂಷಕರು. ಖಂ. ೧೪ರಲ್ಲಿ 'ಪ್ರತಿನಾಯಕ' ಅಥವಾ 'ರಿಪು'ವಿನ ಲಕ್ಷಣವಿದೆ. ಖಂ. ೧೫ರಿಂದ ೨೩ರವರೆಗೆ ನಾಯಕನ 'ಸಾತ್ತ್ವಿಕ ಗುಣ'ಗಳನ್ನು ಲಕ್ಷಿಸಲಾಗಿದೆ. ಇದಾದಮೇಲೆ, ನಾಯಕನ 'ಕಾರ್ಯಾಂತರ ಸಹಾಯಕ'ರಾದ ಮಂತ್ರಿಋತ್ವಿಕ್ಪುರೋಹಿತ ರುಗಳ ಪಟ್ಟಿ ಖಂ. ೭೦ರಿಂದ ೭೪ರ ವರೆಗೆ (ನಾಯಿಕಾಲಕ್ಷಣ ಹೇಳಿದಮೇಲೆ) ಬೆಳೆದಿದೆ.

ಇನ್ನು ನಾಯಿಕಾಲಕ್ಷಣ : ನಾಯಿಕೆ ನಾಯಕನ ಸ್ವಕೀಯಳಾದ 'ಸ್ವಾ' ಇರಬಹುದು, ಪರಕೀಯಳಾಗಿ ನಾಯಕನನ್ನು ತನ್ನ ಅನುರಾಗದೊಳಗೆ ಸಿಲುಕಿಸಿಕೊಂಡ 'ಅನ್ಯಾ' ಇರಬಹುದು ಇಲ್ಲವೆ ಗಣಿಕೆಯಾಗಿ 'ಸಾಧಾರಣಾ' ಇರಬಹುದು. 'ಸ್ವಾ' ಅಥವಾ 'ಸ್ವೀಯಾ' ನಾಯಿಕೆಯಲ್ಲಿ ಆಕೆಯ ಯೌವನದ ಉಕ್ಕಿಗನುಸಾರವಾಗಿ ಮುಗ್ಧೆ ಮಧ್ಯೆ ಪ್ರಗಲ್ಭೆ–ಎಂದು ಮೂರು ಬಗೆ. ಪುನಃ, ಮಧ್ಯಾ ಪ್ರಗಲ್ಭಾ–ಈ ಒಂದೊಂದು ಬಗೆಯಲ್ಲೂ, ಅವರವರ ಕೋಪಚೇಷ್ಟೆಗಳಿಗನುಸಾರ, ಧೀರಾ ಅಧೀರಾ ಧೀರಾಧೀರಾ ಎಂಬ ಮೂರು ಮೂರು ವಿಧಗಳುಂಟಾಗುತ್ತವೆ. ಪುನಃ, ಮಧ್ಯಾಪ್ರಗಲ್ಭಾರಲ್ಲಿನ ಧೀರಾ ಅಧೀರಾ ಧೀರಾಧೀರಾ –

ಈ ಒಂದೊಂದರಲ್ಲೂ ಜ್ಯೇಷ್ಠಾ ಕನಿಷ್ಠಾ ಭೇದಗಳಿವೆ. ನಾಯಕನ ಮೊದಲ ಪ್ರೇಯಸಿ 'ಜ್ಯೇಷ್ಠೆ'ಯೆನ್ನಿಸಿಕೊಳ್ಳುತ್ತಾಳೆ, ಅನಂತರದವಳು 'ಕನಿಷ್ಠಾ' ಎನ್ನಿಸಿಕೊಳ್ಳುತ್ತಾಳೆ.

'ಅನ್ಯಾ' ನಾಯಿಕೆ ಇನ್ನೂ ವಿವಾಹವಾಗದಿದ್ದು ನಾಯಕನ ಮನಸೆಳೆದ 'ಕನ್ಯಕಾ' ಇರಬಹುದು ಅಥವಾ ಬೇರೊಬ್ಬನ ಕೂಡ ವಿವಾಹವಾಗಿದ್ದರೂ ನಾಯಕನನ್ನು ಆಕರ್ಷಿಸಿರುವ 'ಊಢಾ' ಇರಬಹುದು. ನಾಯಕನ ಪ್ರೀತಿ ಗಳಿಸಿದ ಗಣಿಕೆ 'ಸಾಧಾರಣೆ'.

ಅಲ್ಲಿಗೆ–'ಸ್ವೀಯಾ' ನಾಯಿಕೆಯಲ್ಲಿ 'ಮುಗ್ಧಾ' ಎಂಬ ಭೇದವೊಂದು, ಮಧ್ಯಾ ಎಂಬ ಭೇದದಲ್ಲಿನ ಉಪಭೇದಗಳು (ಧೀರಾ ಅಧೀರಾ ಧೀರಾಧೀರಾ ಹಾಗೂ ಒಂದೊಂದರಲ್ಲೂ ಜ್ಯೇಷ್ಠಾ ಕನಿಷ್ಠಾ ಭೇದ) ಆರು, ಅದರಂತೆಯೇ 'ಪ್ರಗಲ್ಭಾ' ಎಂಬ ಭೇದದಲ್ಲಿನ ಉಪಭೇದಗಳು ಆರು – ಹೀಗೆ ಒಟ್ಟು ಹದಿಮೂರು ಬಗೆಗಳು; ಅಲ್ಲದೆ 'ಅನ್ಯಾ'ಳಲ್ಲಿ ಎರಡು ಬಗೆ ಹಾಗೂ 'ಸಾಧಾರಣಾ' ಎಂಬ ಬಗೆ – ಒಟ್ಟಿಗೆ ನಾಯಿಕೆಯಲ್ಲಿ ಹದಿನಾರು ಬಗೆಗಳು. (ಖಂ. ೨೪ರಿಂದ ೩೫ ನೋಡಿ. ಮತ್ತು ನಾಯಿಕಾಭೇದದ ರೇಖಾಸೂಚಿಗೆ 'ಅನುಬಂಧ-೩; ನಾಯಿಕಾಭೇದ' ನೋಡಿ.)

ನಾಯಕನನ್ನು ಅನುರಾಗಕ್ಕೆ ಸಿಲುಕಿಸಿರುವ ನಾಯಿಕೆ ಆತನ ಜೊತೆಯಲ್ಲೆ ಇರಬಹುದು, ಆತನ ಬರವನ್ನು ಹಾರೈಸುತ್ತಿರಬಹುದು, ಆತ ಬರುವುದು ತಡವಾಯಿತೇಕೆಂದು ಸಂದೇಹಿಸುತ್ತಿರಬಹುದು. ಈ ಮುಂತಾದ ಆಕೆಯ ಅವಸ್ಥೆಗಳು ಎಂಟು: ಸ್ವಾಧೀನಪತಿಕಾ, ವಾಸಕಸಜ್ಜಾ, ವಿರಹೋತ್ಕಂಠಿತಾ, ಖಂಡಿತಾ, ಕಲಹಾಂತರಿತಾ, ವಿಪ್ರಲಬ್ಧಾ, ಪ್ರೋಷಿತ ಪ್ರಿಯಾ, ಅಭಿಸಾರಿಕಾ.

ಮೇಲೆ ಹೇಳಿದ ಸ್ವೀಯಾ ಮುಂತಾದ ಭೇದಗಳಿಗೆ ಈ ಎಂಟು ಅವಸ್ಥೆಗಳನ್ನು ಹಚ್ಚಿದರೆ–೧೩ ಸ್ವೀಯಾಭೇದಗಳಿಗೆ ಒಂದೊಂದಕ್ಕೆ ೮ ಅವಸ್ಥೆಗಳಂತೆ ಒಟ್ಟು ೧೦೪, ಅನ್ಯಾಭೇದಗಳೆರಡಕ್ಕೂ ಒಂದೊಂದಕ್ಕೆ ಮೂರು ಮೂರು ಭೇದಗಳಂತೆ ಒಟ್ಟು ೬, (ನೋಡಿ: ೨–೪೫ರ ವ್ಯಾಖ್ಯೆ.) ಸಾಧಾರಣಾಗೆ ೮–ಹೀಗೆ ಒಟ್ಟು ಅವಸ್ಥಾಭೇದಗಳು ೧೧೮ (ಖಂ.೩೬ರಿಂದ ೪೫).

ಅನಂತರ (ಖಂ. ೪೬ರಿಂದ ೬೯)ದೂತೀ ಮುಂತಾದ ನಾಯಿಕೆಯ ಸಹಾಯಕರ ಪಟ್ಟಿಯೂ, ನಾಯಿಕೆಯ ಇಪ್ಪತ್ತು 'ಸತ್ತ್ವಜಾಲಂಕಾರ'ಗಳೂ (ಮೂರು ಶರೀರಜಗಳು, ಏಳು ಅಯತ್ನಜಗಳು, ಹತ್ತು ಸ್ವಭಾವಜಗಳು) ವರ್ಣಿತವಾಗಿವೆ.

ಖಂ. ೭೦ರಿಂದ ೭೪: ಇಲ್ಲಿ ನಾಯಕನ 'ಕಾರ್ಯಾಂತರಸಹಾಯಕ'ರುಗಳ (ಮಂತ್ರಿ ಋತ್ವಿಜ ಪುರೋಹಿತ ಇ.,) ಪಟ್ಟಿ ಬಂದಿದೆ.

ಖಂ. ೭೫ರಲ್ಲಿ ಈ ಎಲ್ಲ ಪಾತ್ರಗಳಿಗೂ ಉತ್ತಮ ಮಧ್ಯಮ ಅಧಮ–ಎಂಬ ಮೂರು ಭೇದಗಳಿವೆಯೆಂದು ಹೇಳಿದೆ. ಅದರಂತೆ, ನಾಯಕನಾಯಿಕೆಯರ ಮತ್ತು ಇತರ ಪಾತ್ರಗಳ ಭೇದ–ಒಂದೊಂದೂ ಹಿಂದೆ ಹೇಳಿದುದರ ಮೂರರಷ್ಟಾಗುತ್ತದೆ.

ನಾಯಕವ್ಯಾಪಾರ ಪ್ರಕಟವಾಗುವ ರೀತಿ ಅಥವಾ ಸ್ವರೂಪಕ್ಕೆ 'ವೃತ್ತಿ' ಎಂಬ ಹೆಸರಿದೆ. ವೃತ್ತಿಗಳು ಒಟ್ಟು ಈ ನಾಲ್ಕು: ಕೈಶಿಕೀ, ಸಾತ್ತ್ವತೀ, ಆರಭಟೀ ಹಾಗೂ ಭಾರತೀ. ಈ

ಒಂದೊಂದಕ್ಕೂ ಹಲವು ಅಂಗಗಳಿವೆ. ಇವುಗಳಲ್ಲಿ ಭಾರತೀವೃತ್ತಿ ಕೇವಲ 'ಶಾಬ್ದಿಕ'ವಾದುದೆಂದು ಅದನ್ನು ನಾಟಕಲಕ್ಷಣ ಹೇಳುವಲ್ಲಿ (೩–೫ರಿಂದ ಮುಂದೆ ಹೇಳಿದೆ. ಉಳಿದ ಮೂರನ್ನು ಅವುಗಳ ಅಂಗಗಳ ಸಮೇತ ಖಂ. ೭೭ರಿಂದ ೯೪ರ ವರೆಗಿನ ಭಾಗದಲ್ಲಿ ಲಕ್ಷಿಸಲಾಗಿದೆ. ವೃತ್ತಿಗಳನ್ನು ಹೇಗೆ ಬಳಸಬೇಕೆಂಬುದು ಖಂ. ೯೫ರಲ್ಲಿದೆ.

ನಾಟ್ಯದಲ್ಲಿನ ದೇಶ ಭಾಷೆ ಕ್ರಿಯೆ ವೇಷ – ಇವುಗಳ ಪ್ರಕಾರಕ್ಕೆ 'ಪ್ರವೃತ್ತಿ' ಎಂದು ಹೆಸರು. ದೇಶಭಾಷಾದಿಗಳ ವೈವಿಧ್ಯದಿಂದ ಹಲವು ಪ್ರವೃತ್ತಿಭೇದಗಳು ಕಲ್ಪಿತವಾಗುತ್ತವೆ. ಕೇವಲ 'ರೂಪಕಶಾಸ್ತ್ರ'ವಾದ ಈ ಗ್ರಂಥದಲ್ಲಿ ಪ್ರವೃತ್ತಿಯ ಎಲ್ಲ ಅಂಶಗಳನ್ನೂ ವಿವರಿಸಿಲ್ಲ. ರೂಪಕಕ್ಕೆ ಅಗತ್ಯವಾದ ಪ್ರವೃತ್ತ್ಯಂಶವನ್ನು – ಎಂದರೆ ಭಾಷಾಭೇದಗಳನ್ನು – ಮಾತ್ರ ಈ ಗ್ರಂಥದಲ್ಲಿ ಹೇಳಿದೆ. ಸಂಸ್ಕೃತ ಪ್ರಾಕೃತ ಪೈಶಾಚ ಇ., ಭಾಷಾಭೇದಗಳು ಮತ್ತು ಅವುಗಳ ಬಳಕೆ – ಇವು ಖಂ. ೯೬ರಿಂದ ೯೯ರ ವರೆಗೆ ಲಕ್ಷಿತವಾಗಿವೆ.

ಕೊನೆಯದಾಗಿ (ಖಂ. ೧೦೦ರಿಂದ ೧೦೪), ವಿವಿಧ ಪಾತ್ರಗಳ ಪರಸ್ಪರ ಸಂಭೋದನಾ ಕ್ರಮ ಅಥವಾ ಆಮಂತ್ರಣ ವಿಧಾನ ಬಂದಿದೆ.

ಎರಡನೆಯ ಪ್ರಕಾಶವನ್ನು ಉಪಸಂಹರಿಸುವಲ್ಲಿ (ಖಂ. ೧೦೫) ನಾಯಕಾದಿಗಳಲ್ಲಿನ ಭೇದದ ಸಂಕೀರ್ಣತೆಯನ್ನು ಸೂಚಿಸಿ, ಆ ಕಾರಣ ಅದರ ಎಲ್ಲ ಸೂಕ್ಷ್ಮ ಅಂಶಗಳನ್ನು ವಿವರ ಲಕ್ಷಿಸುವುದು ಎಂಥವರಿಗೂ ದುಸ್ಸಾಧ್ಯವೆಂದು ಬಿನ್ನವಿಸಿಕೊಳ್ಳಲಾಗಿದೆ. ಎಂದರೆ ಅರ್ಥ, ಅಂಥ ಸೂಕ್ಷ್ಮ ವಿಷಯಗಳನ್ನು ಕವಿಗಳು ಹಾಗೂ ಸಾಮಾಜಿಕರು ಅನುಭವಾಭ್ಯಾಸಾದಿಗಳಿಂದ ಸ್ವತಃ ಅರಿತುಕೊಳ್ಳಬೇಕು.

ಸಂಸ್ಕೃತದ ಇತರ ನಾಟ್ಯಶಾಸ್ತ್ರವಿಷಯಕ ಗ್ರಂಥಗಳಂತೆಯೇ ಇಲ್ಲಿಯೂ ರೂಪಕದ ಪಾತ್ರಗಳಲ್ಲಿ ನಾಯಕನಾಯಿಕೆಯರು ಹಾಗೂ ಅವರ ಸಹಾಯಕರು ಮಾತ್ರವೇ ಲಕ್ಷಿತವಾಗಿದ್ದಾರೆ ಎಂಬುದು ಗಮನಾರ್ಹ.

ಮೂರನೆಯ ಪ್ರಕಾಶ : ಇಲ್ಲಿ ವಸ್ತುನೇತೃರಸಗಳಿಂದ ಉಂಟಾಗುವ ರೂಪಕದ ಮುಖ್ಯ ದಶಭೇದಗಳನ್ನು ಲಕ್ಷಿಸಿದೆ. ಆ ಹತ್ತು ರೂಪಕಗಳು ಇವು: ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥೀ, ಉತ್ಸೃಷ್ಟಿಕಾಂಕ (ಅಥವಾ ಅಂಕ), ಈಹಾಮೃಗ. ದಶರೂಪಕಗಳಲ್ಲೊಂದಾದ 'ನಾಟಕ'ದಲ್ಲಿ ರೂಪಕದ ಲಕ್ಷಣಗಳೆಲ್ಲ ಸಂಪೂರ್ಣವಾಗಿ ತುಂಬಿಕೊಂಡಿರುತ್ತವೆ. ಉಳಿದ ರೂಪಕಗಳಿಗೆ ಮೂಲವೂ ಆಧಾರವೂ ಆಗಿರುವ ಕಾರಣ ದಶರೂಪಕಗಳಲ್ಲಿ 'ನಾಟಕ'ವನ್ನು 'ಪ್ರಕೃತಿ'ಯೆಂದೂ ಉಳಿದ ಒಂಬತ್ತು ರೂಪಕಗಳನ್ನು ಅದರಿಂದ ಹುಟ್ಟುವ 'ವಿಕೃತಿ'ಗಳೆಂದೂ ಪರಿಗಣಿಸಲಾಗುತ್ತದೆ. ಆದ್ದರಿಂದಲೇ ಮೂರನೆಯ ಪ್ರಕಾಶದ ಮೊದಲಿನ ೪೩ ಖಂಡಗಳು 'ನಾಟಕಲಕ್ಷಣ'ವನ್ನು ವಿವರವಾಗಿ ಹೇಳುತ್ತವೆ.

'ಪೂರ್ವರಂಗ' 'ಸ್ಥಾಪನೆ' – ಇವುಗಳಿಂದ 'ನಾಟಕ'ದ ಆರಂಭದಲ್ಲಿ 'ಭಾರತೀವೃತ್ತಿ' ಬಳಕೆಯಾಗುತ್ತದೆಯಾದ್ದರಿಂದ, 'ಸ್ಥಾಪನೆ'ಯ ಲಕ್ಷಣದ ಅನಂತರದಲ್ಲೇ 'ಭಾರತೀವೃತ್ತಿ'ಯ ಲಕ್ಷಣಗಳನ್ನು ಹೇಳಿದೆ; ಅದರ ಅಂಗೋಪಾಂಗಗಳನ್ನು ವಿವರ ಲಕ್ಷಿಸಿದೆ. (ಗಮನಿಸಿ: ಹಿಂದೆ – ಎರಡನೆಯ ಪ್ರಕಾಶದಲ್ಲಿ – ಉಳಿದ ವೃತ್ತಿಗಳನ್ನು ಲಕ್ಷಿಸುವಾಗ

ಭಾರತೀವೃತ್ತಿಯನ್ನು – ಇಲ್ಲಿ ಲಕ್ಷಿತವಾಗುವುದು ಅಗತ್ಯವಿದ್ದುದರಿಂದ–ಲಕ್ಷಿಸಿಲ್ಲ.) ಅನಂತರದಲ್ಲಿ ಬರುವ ವಿಷಯಗಳು ಇವು : 'ನಾಟಕ'ದಲ್ಲಿನ ಆಧಿಕಾರಿಕ ಪ್ರಾಸಂಗಿಕ ಇತಿವೃತ್ತಗಳು, ನಾಯಕ, ಅಂಕ ಹಾಗೂ ಅರ್ಥೋಪಕ್ಷೇಪಕಗಳು, ರಸದ ಬಳಕೆ ಇತ್ಯಾದಿ. ಹಿಂದೆ ಪ್ರಥಮ ಪ್ರಕಾಶದಲ್ಲಿ, ರೂಪಕದ ಸೂಚ್ಯ ವಿಭಾಗವಾದ ಅರ್ಥೋಪಕ್ಷೇಪಕಗಳನ್ನು ಲಕ್ಷಿಸಿದ್ದು ದೃಶ್ಯಶ್ರವ್ಯವಿಭಾಗವಾದ 'ಅಂಕ'ವನ್ನು ಗಮನಿಸಿರಲಿಲ್ಲ. 'ಅಂಕ'ದ ಲಕ್ಷಣ ಇಲ್ಲಿ ಬಂದಿದೆ. ಮತ್ತು–ಹಿಂದೆ ಅಲ್ಲಿಯೇ ಸೂಚ್ಯ ಹಾಗೂ ದೃಶ್ಯಶ್ರವ್ಯಗಳನ್ನು ಹೇಳಿದ್ದು 'ಅನಿರ್ದೇಶ್ಯ'ಗಳನ್ನು ಹೇಳಿರಲಿಲ್ಲ. ಅವುಗಳನ್ನೂ ಇಲ್ಲಿ ಹೇಳಿದೆ : 'ಅನಿರ್ದೇಶ್ಯ'ಗಳಲ್ಲೂ ಎರಡು ಬಗೆ. ಒಂದು : 'ಅಂಕ'ದಲ್ಲಿ ಅನಿರ್ದೇಶ್ಯ. ಎಂದರೆ, ಅದು ರೂಪಕದ ದೃಷ್ಟಿಯಿಂದ ಸೂಚ್ಯವೇ ಆಗುತ್ತದೆ. ವಧಯುದ್ಧಸ್ನಾನಾನುಲೇಪನಾದಿಗಳೇ ಅವು. ಇನ್ನೊಂದು ಸರ್ವಥಾ ಅನಿರ್ದೇಶ್ಯ : ನಾಯಕವಧ ಇತ್ಯಾದಿ.

ಈ ಮೇಲಿನವುಗಳಲ್ಲಿ 'ಪೂರ್ವರಂಗ', 'ಸ್ಥಾಪನೆ', 'ಭಾರತೀಯೋಜನೆ', 'ಅಂಕಲಕ್ಷಣ', 'ಅನಿರ್ದೇಶ್ಯಗಳು' – ಇವು 'ನಾಟಕ'ವೊಂದಕ್ಕೇ ಅಲ್ಲದೆ ಸಾಮಾನ್ಯ ಎಲ್ಲ ರೂಪಕಪ್ರಕಾರಗಳಿಗೂ ಅನ್ವಯಿಸುತ್ತವೆ. ಆದಕಾರಣವೇ ಮುಂದೆ (೩–೪೪ರಿಂದ ಮುಂದೆ) ಉಳಿದ ರೂಪಕಗಳನ್ನು ಸೂಕ್ಷ್ಮವಾಗಿ ಉಲ್ಲೇಖಿಸುತ್ತ ಅವುಗಳ ವಿಶೇಷ ಲಕ್ಷಣಗಳನ್ನು ಮಾತ್ರ ಗಮನಿಸಿ 'ಉಳಿದವು ನಾಟಕದಂತೆಯೇ' ಎಂದು ಹೇಳಿ ಮುಗಿಸಲಾಗಿದೆ. ದಶರೂಪಕಗಳ ಮುಖ್ಯ ಲಕ್ಷಣಗಳನ್ನು ಸೂಚಿಸುವ ಪಟ್ಟಿಗೆ 'ಅನುಬಂಧ–೪: ದಶರೂಪಕಗಳು' ನೋಡಿ.

ಈ ನಡುವೆ (೩–೪೬ರಿಂದ ೫೨ರ ವರೆಗೆ) ಉಪರೂಪಕಗಳಲ್ಲೊಂದಾದ 'ನಾಟಿಕಾ'ದ ಲಕ್ಷಣವನ್ನು ಹೇಳಿರುವುದು ಗಮನಾರ್ಹ. ಈ ಗ್ರಂಥಕಾರನ ಹಾಗೂ ವ್ಯಾಖ್ಯಾಕಾರನ ಮತದಂತೆ ರಸೋತ್ಪತ್ತಿಗೆ ಕಾರಣವಾದವು ಹತ್ತು ರೂಪಕಗಳು ಮಾತ್ರ; ಉಪರೂಪಕ ಗಳು–ಪ್ರಾಯಃ–ಅಲ್ಲ. ಅದನ್ನು ೧–೧೦ರ ಕಾರಿಕಾಭಾಗ, ಅಲ್ಲಿನ ವ್ಯಾಖ್ಯೆ ಹಾಗೂ ೩–೪೬ರ ವ್ಯಾಖ್ಯೆಯಲ್ಲಿ ತಿಳಿಸಿದೆ. ಹಾಗಿದ್ದೂ 'ನಾಟಿಕೆ'ಯೊಂದರ ಲಕ್ಷಣವನ್ನು ಗಮನಿಸಿರುವುದೇಕೆ ಎಂದರೆ, ಇತರ ಉಪರೂಪಕಗಳನ್ನು 'ನಿವಾರಿಸುವುದಕ್ಕಾಗಿ' ಹಾಗೂ 'ನಾಟಿಕೆ'ಯಲ್ಲಿ ಹಲವು ರೂಪಕಪ್ರಕಾರಗಳ ಲಕ್ಷಣಗಳು ಸಂಕೀರ್ಣಗೊಂಡು ಸೇರಿವೆ ಎಂಬುದಕ್ಕಾಗಿ–ಎಂದು ಗ್ರಂಥಕಾರರು ಉತ್ತರಿಸುತ್ತಾರೆ. ಇದಕ್ಕೆ ಇನ್ನೊಂದು ಆಧಾರವೆಂದರೆ ಭರತನೂ 'ನಾಟ್ಯಶಾಸ್ತ್ರ'ದಲ್ಲಿ ಉಳಿದಾವ ಉಪರೂಪಕಗಳನ್ನೂ ಲಕ್ಷಿಸದೆ 'ನಾಟಿಕೆ'ಯೊಂದನ್ನು ಲಕ್ಷಿಸಿರುವುದು. ('ಉಪರೂಪಕ'ಗಳನ್ನು ಅನಂತರದ ಕೆಲವು ನಾಟ್ಯಶಾಸ್ತ್ರವಿಷಯಕ ಗ್ರಂಥಗಳಲ್ಲಿ ಕ್ರಮವಾಗಿ ಲಕ್ಷಿಸಲಾಗಿದೆ. ಅವುಗಳ ಆಧಾರದ ಮೇಲೆ 'ಅನುಬಂಧ–೫'ರಲ್ಲಿ ಇವುಗಳ ಪಟ್ಟಿ ಕೊಟ್ಟಿದೆ.)

ಕೊನೆಯಲ್ಲಿ (೩–೬೫) ಕವಿಗಳಿಗೊಂದು ಉಪದೇಶದ ಮಾತು ಹೇಳಿ ಈ ಪ್ರಕಾಶವನ್ನು ಉಪಸಂಹರಿಸಲಾಗಿದೆ.

ನಾಲ್ಕನೆಯ ಪ್ರಕಾಶ: ರಸವನ್ನು ಕುರಿತು ಹೇಳುವ ಪ್ರಕಾಶ ಇದು. ಮೊದಲಲ್ಲಿ (ಖಂ.೧) ಸೂತ್ರರೂಪವಾಗಿ ರಸದ ಸಂಕ್ಷಿಪ್ತ ಲಕ್ಷಣ ಬಂದಿದೆ: ವಿಭಾವ ಅನುಭಾವ ಸಾತ್ತ್ವಿಕಭಾವ

ಹಾಗೂ ವ್ಯಭಿಚಾರಿಭಾವಗಳಿಂದ ಕೂಡಿದ ಸ್ಥಾಯಿಭಾವವೇ ಸವಿಯನ್ನು ಕೊಡುವುದಾಗಿ 'ರಸ' ಎನ್ನಿಸಿಕೊಳ್ಳುತ್ತದೆ. ಈ ಸೂತ್ರದಲ್ಲಿ ಹೇಳಿದ ವಿಭಾವಾದಿ ರಸಸಾಮಗ್ರಿಗಳನ್ನು ಅನಂತರ ಒಂದೊಂದಾಗಿ ಲಕ್ಷಿಸಲಾಗಿದೆ. ಅಲ್ಲಿ 'ವಿಭಾವ' : ಯಾವುದು ಭಾವದ ಹುಟ್ಟುಬೆಳವಣಿಗೆಗಳಿಗೆ ಮೂಲವಾಗುತ್ತದೆಯೋ ಅಂಥ ಕಾರಣಸಾಮಗ್ರಿಯೇ 'ವಿಭಾವ'. ಹೀಗೆ ಅದರಲ್ಲಿ 'ಆಲಂಬನವಿಭಾವ', 'ಉದ್ದೀಪನ ವಿಭಾವ'ಗಳೆಂದು ಎರಡು ವಿಧ. ಉದಾಹರಣೆಗೆ, ಸುಕುಮಾರಳಾದ ತರುಣಿಯೇ ಆಲಂಬನವಿಭಾವವಾಗಿರಲು ಉದ್ಯಾನ ಚಂದ್ರಿಕೆಗಳೇ ಉದ್ದೀಪನವಿಭಾವವಾಗಿರಲು ನಾಯಕನಲ್ಲಿ ರತಿಭಾವ ಉದಯಿಸಿ ಪುಷ್ಟವಾಗುತ್ತದೆ. ಇನ್ನು, ಮನುಷ್ಯನಲ್ಲಿ ಯಾವುದೊಂದು ಭಾವ ಉಂಟಾಗಲು ಅದನ್ನು ಎದುರಿಗೆ ಸೂಚಿಸುವ ಶಾರೀರಕ ವಿಕಾರಗಳಿಗೆ 'ಅನುಭಾವ' ಎನ್ನುತ್ತಾರೆ. ತರುಣನೊಬ್ಬನಿಂದ ಆಕರ್ಷಿತಳಾಗಿ ರತಿಭಾವ ಉದಯಿಸಿರುವ ತರುಣಿ ಆ ತರುಣನ ಮುಖದಲ್ಲಿ 'ಹಾಲ್ಗಡಲಿನ ನೊರೆದೆರೆಯಂತಿರುವ ಆಸೆದುಂಬಿದ ಕಡೆಗಣ್ಣಿನ ಹೊಗರುನೋಟವನ್ನು ತೊಡರಿಸುತ್ತಾಳೆ' ಎನ್ನೋಣ; ಆ ನೋಟವೇ 'ಅನುಭಾವ'.(ಖಂ. ೨ರಿಂದ ೪.)

ಇನ್ನುಳಿದ ರಸಸಾಮಗ್ರಿಗಳು 'ಭಾವ'ವರ್ಗದಲ್ಲಿ ಸೇರುತ್ತವೆ. ಭಾವದಲ್ಲಿ ಮೂರು ವಿಧಗಳು: ಸಾತ್ತ್ವಿಕಭಾವ, ವ್ಯಭಿಚಾರಿಭಾವ ಹಾಗೂ ಸ್ಥಾಯಿಭಾವ.

ಸ್ತಂಭ, ಪ್ರಲಯ, ರೋಮಾಂಚ, ಸ್ವೇದ, ವೈವರ್ಣ್ಯ, ವೇಪಥು, ಅಶ್ರು, ವೈಸ್ವರ್ಯ – ಈ ಎಂಟು 'ಸಾತ್ವಿಕಭಾವ'ಗಳು. ಇವು ಮೇಲುನೋಟಕ್ಕೆ 'ಅನುಭಾವ'ಗಳಂತೆ ತೋರಿದರೂ, ಮನುಷ್ಯನ ಸತ್ತ್ವದಿಂದ ನೇರವಾಗಿ ಉಂಟಾಗುತ್ತವೆ; ವಿಶೇಷ ಪ್ರಯತ್ನದಿಂದ ಕೂಡ ಹತ್ತಿಕ್ಕಲು ದುಃಸ್ಸಾಧ್ಯವಾದುವುಗಳಾಗಿವೆ. ಈ ಕಾರಣ ಅವುಗಳನ್ನು 'ಸಾತ್ವಿಕಭಾವ' ಎಂಬ ವರ್ಗದಲ್ಲಿ ಬೇರೆ ಲಕ್ಷಿಸಲಾಗುತ್ತದೆ. (ಖಂ. ೫ರಿಂದ ೭)

ಕೆಲವು ಭಾವಗಳು ಮನುಷ್ಯನಲ್ಲಿ ವಾಸನಾಬಲದಿಂದ ಸ್ಥಿರವಾಗಿರುತ್ತವೆ. ಇನ್ನು ಕೆಲವು ಆ ಸ್ಥಿರಭಾವ (ಸ್ಥಾಯಿಭಾವ)ಗಳ ನಡುನಡುವೆ ಸುಳಿದು ಅದೃಶ್ಯವಾಗುತ್ತ ಮತ್ತೆ ಮೂಡುತ್ತ ನೀರಿನಲ್ಲಿನ ತೆರೆಗಳಂತೆ ಮೆರೆಯುತ್ತವೆ. ಅಂಥ ಅಸ್ಥಿರಭಾವಗಳಿಗೆ ಅಥವಾ ಖಂಡಭಾವಗಳಿಗೆ 'ವ್ಯಭಿಚಾರಿ' (ಅಥವಾ ಸಂಚಾರಿ)ಭಾವಗಳೆಂದು ಹೆಸರು. ಕೆಳಗಿನ ಮೂವತ್ತುಮೂರು ಭಾವಗಳು 'ವ್ಯಭಿಚಾರಿ'ಗಳೆಂದು ಸಾಮಾನ್ಯವಾಗಿ ಪಟ್ಟಿಮಾಡಿ ಹೇಳುತ್ತಾರೆ: ನಿರ್ವೇದ, ಗ್ಲಾನಿ, ಶಂಕೆ, ಶ್ರಮ, ಧೃತಿ, ಜಡತೆ, ಹರ್ಷ, ದೈನ್ಯ, ಔಗ್ರ್ಯ, ಚಿಂತೆ, ತ್ರಾಸ, ಈರ್ಷ್ಯೆ, ಅಮರ್ಷ, ಗರ್ವ, ಸ್ಮೃತಿ, ಮರಣ, ಮದ, ಸುಪ್ತ, ನಿದ್ರೆ, ವಿಬೋಧ, ವ್ರೀಡೆ, ಅಪಸ್ಮಾರ, ಮೋಹ, ಮತಿ, ಆಲಸತೆ, ಆವೇಗ, ತರ್ಕ, ಅವಹಿತ್ಥ, ವ್ಯಾಧಿ, ಉನ್ಮಾದ, ವಿಷಾದ, ಔತ್ಸುಕ್ಯ, ಚಪಲ. ಈ ಒಂದೊಂದರ ಲಕ್ಷಣವನ್ನು ಹೇಳುವಲ್ಲಿ ೮ರಿಂದ ೪೨ರ ವರೆಗಿನ ಖಂಡಗಳು ಸಂದಿವೆ.

ಮಾನವಸಹಜವಾದ ಮೂಲಭಾವಗಳು ಕೇವಲ ಕೆಲವು. ನಾವು ಸಂಚಾರಿಗಳೆಂದು ಮುಂತಾಗಿ ಹೆಸರಿಸುವ ಉಳಿದೆಲ್ಲವೂ ಆ ಮೂಲಭಾವಗಳ ಸ್ಥಿತ್ಯಂತರದಲ್ಲಿ ಒಮ್ಮೆ ಪ್ರತಿಭಾಸವಾಗಿ ಮತ್ತೆ ಅಡಗುವಂಥವು. ಈ ದೃಷ್ಟಿಯಿಂದ ಸಂಚಾರಿಗಳನ್ನು ಮೂಲ ಭಾವಗಳ ವಿಕಲ್ಪ ಅಥವಾ ವಿಕೃತಿಗಳೆಂದು ಹೇಳಬಹುದು. ಅಂತೆಯೇ ಇವು ಭಾವ

ಖಂಡಗಳಾಗಿ ಗೋಚರವಾಗುತ್ತವೆ. 'ಚಿಂತೆ'ಯಿದ್ದು ಅನಂತರ 'ಹರ್ಷ' ಮೂಡಿತೆಂದರೆ ಮೊದಲಿದ್ದ 'ಚಿಂತೆ' ಮಾಯವಾಗಿಬಿಡುತ್ತದೆ. ಆದರೆ ಮೂಲ ಅಥವಾ ಸ್ಥಾಯಿಭಾವಗಳಾದ ರತ್ಯಾದಿಗಳು ಅಖಂಡವಾಗಿರುತ್ತವೆ. 'ಚಿಂತೆ' ಬರಲಿ, 'ಹರ್ಷ' ಬರಲಿ, 'ದೈನ್ಯ' ಬರಲಿ – 'ರತಿ' 'ರತಿಯಾಗಿಯೇ' ಉಳಿಯುತ್ತದೆ. ಅಥವಾ–'ರತಿ'ಯೇ ಒಮ್ಮೆ 'ಚಿಂತೆ'ಯನ್ನು ಬಳಸಿಕೊಂಡು ಇನ್ನೊಮ್ಮೆ 'ಹರ್ಷ'ವನ್ನು ಸಾಧನ ಮಾಡಿಕೊಂಡು ಪ್ರಕಟವಾಗುತ್ತದೆ. ಹೀಗೆ ವಿರುದ್ಧಾವಿರುದ್ಧ ಭಾವಗಳಿಂದ ವಿಚ್ಛೇದಿತವಾಗದೆ ಅಖಂಡವಾಗಿ ಮೆರೆಯುವ ಭಾವಗಳೇ ಸ್ಥಾಯಿಗಳು. ಬೇರೆ ಬೇರೆ ಆಲಂಕಾರಿಕರ ಮತದಂತೆ ಈ ಸ್ಥಾಯಿಗಳು ಒಂಬತ್ತು ಅಥವಾ ಅದಕ್ಕೂ ಹೆಚ್ಚು ಆಗಬಹುದಾದರೂ ಪ್ರಸ್ತುತ ಗ್ರಂಥಕರ್ತರ ಮತದಂತೆ ಸ್ಥಾಯಿಗಳು ಕೇವಲ ಎಂಟು: ರತಿ, ಉತ್ಸಾಹ, ಜುಗುಪ್ಸೆ, ಕ್ರೋಧ, ಹಾಸ, ವಿಸ್ಮಯ, ಭಯ, ಶೋಕ. ಪ್ರಸ್ತುತ ಗ್ರಂಥಕಾರರ ಮತದಂತೆ, 'ಶಮ'ವೆಂಬ ಒಂಬತ್ತನೆಯ ಸ್ಥಾಯಿ 'ನಾಟ್ಯ'ದಲ್ಲಿ ಇಲ್ಲವೇ ಇಲ್ಲ; ಕಾವ್ಯದಲ್ಲಿ ಒಮ್ಮೆ ಇರಬಹುದಾದರೂ ಅದು ನೇರವಾಗಿ ಸ್ಪಷ್ಟವಾಗಿ ಪ್ರಕಟವಾಗುವುದು ಕಷ್ಟ. ಕಾವ್ಯನಾಟ್ಯಾದಿಗಳಲ್ಲಿ ಸ್ಥಾಯಿ ಹೇಗೆ ಪ್ರಕಟವಾಗುತ್ತದೆಂಬ ಪ್ರಶ್ನೆಗೆ ಬೇರೆ ಬೇರೆ ಆಲಂಕಾರಿಕರು ಬೇರೆ ಬೇರೆ ಉತ್ತರ ಹೇಳುತ್ತಾರೆ. ಈ ಗ್ರಂಥಕಾರರ ಮತದಂತೆ, ಉಕ್ತವಾಗಿರಲಿ ಅನುಕ್ತವಾಗಿರಲಿ ಕಾರಕಸಹಿತವಾದ ಕ್ರಿಯಾಪದವೇ ಹೇಗೆ ವಾಕ್ಯಾರ್ಥವಾಗುತ್ತದೆಯೋ ಹಾಗೆ ಕಾವ್ಯಾದಿಗಳಲ್ಲಿ ವಾಚ್ಯವಾಗಿರಲಿ ಸೂಚ್ಯವಾಗಿರಲಿ ಸ್ಥಾಯಿಯೆ ಅರ್ಥವಾಗಿರುತ್ತದೆ. ಹೇಗೆ ಉಕ್ತವಾದ ಅಥವಾ ಅಧ್ಯಾಹೃತವಾದ ಕ್ರಿಯಾಪದವೇ–ಕಾರಕಾದಿಗಳೊಡಗೂಡಿ–ವಾಕ್ಯದ ಅರ್ಥಸಿದ್ಧಿಯನ್ನುಂಟುಮಾಡುವುದೋ ಹಾಗೆ ವಾಚ್ಯವಾದ ಅಥವಾ ಸೂಚ್ಯವಾದ ಸ್ಥಾಯಿಯೇ–ಅನುಭಾವಾದಿಗಳೊಡಗೂಡಿ–ಕಾವ್ಯಾದಿಗಳ ಅರ್ಥಸಿದ್ಧಿಯನ್ನುಂಟು ಮಾಡುತ್ತದೆ. ಕಾವ್ಯಾದಿಗಳಿಂದ ಸ್ಥಾಯಿ ವ್ಯಂಜಿತವಾಗುತ್ತದೆಂಬ ಧ್ವನಿವಾದಿಗಳ ಸಿದ್ಧಾಂತವನ್ನು ಇಲ್ಲಿ ಮುಖ್ಯವಾಗಿ ಖಂಡಿಸಿದೆ. (ಖಂ. ೪೩ರಿಂದ ೪೬.)

ಇನ್ನು ರಸ: ಕಾವ್ಯಾದಿಗಳಿಂದ ರಸಿಕನಲ್ಲಿರುವ ಸ್ಥಾಯಿಯೇ ಪ್ರತೀತವಾಗುತ್ತದೆ. ಹಾಗೆ ಪ್ರತೀತವಾದ ಸ್ಥಾಯಿ ಅವರಿವರದೆಂಬ ಭೇದವಿಲ್ಲದೆ ರಸಿಕನ ಹೃದಯವನ್ನು ತಾನೇ ತಾನಾಗಿ ತುಂಬಿಕೊಂಡು ಸವಿ ಕೊಡುತ್ತದೆ. ಹೀಗೆ ಸವಿ ಕೊಡುವ ಸ್ಥಾಯಿಯೇ–ಈ ಗ್ರಂಥಕಾರರ ಮತದಂತೆ–ರಸ. ರಸಿಕನಲ್ಲಿ ಸಾಧಾರಣೀಕೃತ ಸ್ಥಾಯಿಯ ಉದ್ಬೋಧನೆಯಾಗಲೆಂದು ಮಾತ್ರವೇ ಕಾವ್ಯಾದಿಗಳಲ್ಲಿ ಬೇರೆಯವರದೆಂಬಂತೆ ಸ್ಥಾಯಿಗಳು ಪ್ರತಿಪಾದಿತವಾಗುತ್ತವೆ; ಅದೊಂದು ನೆಪ. ಮಣ್ಣಿನ ಆನೆಯೇ ಮುಂತಾದುವನ್ನು ನೆಪವಾಗಿಟ್ಟುಕೊಂಡು ಆಡಿ ಆನಂದಿಸುವ ಮಕ್ಕಳಂತೆ ರಸಿಕರು ಅರ್ಜುನಾದಿಗಳನ್ನು ನೆಪವಾಗಿಟ್ಟುಕೊಂಡು ಅದರಿಂದ ತಮ್ಮ ಸ್ಥಾಯಿಯನ್ನೆ ಸಾಧಾರಣೀಕೃತರೂಪದಲ್ಲಿ ಉದ್ಬೋದಗೊಳಿಸಿಕೊಂಡು ಆನಂದಿಸುತ್ತಾರೆ.(ಖಂ. ೪೭ರಿಂದ ೫೪)

ಮೇಲೆ ಹೇಳಿದಂತೆ ಸ್ಥಾಯಿಗಳೇ ರಸಗಳಾಗುತ್ತವಷ್ಟೆ. ಅದರ ಪ್ರಕಾರ ಹಿಂದೆ ಹೇಳಿದ ಎಂಟು ಸ್ಥಾಯಿಗಳೇ ಈ ಎಂಟು ರಸಗಳಾಗುತ್ತವೆ: ಶೃಂಗಾರ, ವೀರ, ಬೀಭತ್ಸ, ರೌದ್ರ, ಹಾಸ್ಯ, ಅದ್ಭುತ, ಭಯಾನಕ, ಕರುಣ. ಈ ಸ್ಥಾಯಿ ಹಾಗೂ ರಸಗಳ ಜೋಡಿಯೊಂದನ್ನು

ಬೇರೆ ಬೇರೆಯಾಗಿ ಖಂ. ೫೬ರಿಂದ ೮೭ರ ವರೆಗಿನ ಸ್ಥಲದಲ್ಲಿ ಲಕ್ಷಿಸಲಾಗಿದೆ. ೮೮ನೆಯ ಖಂಡ ಮೇಲಿನ ಎಂಟಲ್ಲದೆ ಉಳಿದ ಹಲವು ರಸಗಳಿವೆ ಎಂಬ ಮಾತನ್ನು ಖಂಡಿಸುತ್ತದೆ. ಪ್ರಸ್ತುತ ಗ್ರಂಥದಲ್ಲಿ ಹೇಳಿಲ್ಲದ ವಿಷಯಗಳು ಮತ್ತು ಹಾಗೆ ಹೇಳಿಲ್ಲದಿರುವುದಕ್ಕೆ ಕಾರಣ–೮೯ನೆಯ ಖಂಡದಲ್ಲಿದೆ. ಕಾವ್ಯಾದಿಗಳಲ್ಲಿ ಪ್ರತಿಪಾದಿತವಾಗಿರುವ ವಸ್ತು ರಮ್ಯವಿರಲಿ ಜುಗುಪ್ಸಿತವಾಗಿರಲಿ ಹೇಗೆಯೇ ಇರಲಿ–ಅದು ಕವಿಯಿಂದ ಹಾಗೂ ರಸಿಕನಿಂದ ಭಾವ್ಯವಾದದ್ದಾಗಿದ್ದರೆ ಅಲ್ಲಿ ರಸವಿರುತ್ತದೆ ಎಂಬ ಅರ್ಥದ ಮಾತು ನಾಲ್ಕನೆಯ ಪ್ರಕಾಶದ ಉಪಸಂಹಾರವಾಕ್ಯವಾಗಿ ಬಂದಿದೆ. (ಖಂ ೯೦) ಅದರ ಭಾವ ಇಷ್ಟು: ಕಾವ್ಯಾದಿಗಳಲ್ಲಿ ಚಿತ್ರಿತವಾದ ವಸ್ತು ಮುಖ್ಯವಲ್ಲ, ಆ ವಸ್ತುವು ಕವಿಯಿಂದ ಭಾವ್ಯವಾಗಿರತಕ್ಕದ್ದು ಹಾಗೂ ಸಹೃದಯನಿಂದ ಭಾವಿಸಲು ಸಾಧ್ಯವಾಗಿರತಕ್ಕದ್ದು ಮುಖ್ಯ. ವಸ್ತುಸೌಂದರ್ಯದಿಂದ ಸುಖವುಂಟಾಗುವುದು ನಿತ್ಯಜಗತ್ತಿನಲ್ಲಿನ ಒಂದು ಸರಳವ್ಯಾಪಾರ. ಕಾವ್ಯಾದಿಗಳಲ್ಲಿ ಹಾಗಲ್ಲ. ಅಲ್ಲಿ ವಸ್ತು ಹೇಗಿದ್ದರೂ ಸರಿ, ಆ ವಸ್ತುವಿನಿಂದ ಉಂಟಾಗುವ ಭಾವ ಯಾವುದಿದ್ದರೂ ಸರಿ, ಭಾವಪ್ರತೀತಿ ಯೋಗ್ಯವಾಗಿ ಆಗಬೇಕು ಮತ್ತು ಆ ಭಾವ ಸಾಧಾರಣೀಕೃತವಾಗಿ ಆನಂದದಾಯಿಯಾಗಿ ರಸವಾಗಬೇಕು. ಕವಿಯಿಂದ ಭಾವ್ಯವಾಗಿರದ ವಸ್ತು ಅದರ ದೃಷ್ಟಿಯಿಂದ ಎಷ್ಟು ಚೆನ್ನಿದ್ದರೂ ಅದು ರಸಿಕನಲ್ಲಿ ಸಹಜವಾಗಿ ಭಾವೋದ್ಬೋಧನ ಉಂಟುಮಾಡಲಾರದು, ಭಾವಸಾಧಾರಣೀಕರಣವನ್ನು ಸಾಧಿಸಲಾರದು. ವಸ್ತು ಕೇವಲ ಕವಿಯಿಂದ ಭಾವ್ಯವಾಗಿದ್ದರೆ ಸಾಲದು, ಅದು ರಸಿಕನ ಪುನರ್ಭಾವನಕ್ಕೆ ಸಿಲುಕುವಂತೆ ಆ ಮಾಧ್ಯಮದಲ್ಲಿ ಪ್ರಕಟವಾಗಿರಬೇಕು.

ಪ್ರಸ್ತುತ ಗ್ರಂಥದ ಕಾರಿಕಾಕಾರನ ಅತಿಸಂಕ್ಷಿಪ್ತ ಪರಿಚಯದೊಂದಿಗೆ (ಖಂ. ೯೧)ಈ ಗ್ರಂಥ ಮುಕ್ತಾಯಗೊಂಡಿದೆ.

ಗ್ರಂಥದ ಆದಿಯಲ್ಲಿ ಧನಂಜಯ ತನ್ನ ಉದ್ದೇಶವನ್ನು ಸ್ಪಷ್ಟಗೊಳಿಸಿದ್ದಾನೆ: 'ನಾಟ್ಯಾನಾಂ.....ಕಿಂಚಿತ್ಪ್ರಗುಣರಚನಯಾ ಲಕ್ಷಣಂ ಸಂಕ್ಷಿಪಾಮಿ' (೧–೪); '....ತತ್ತ್ವದೃಸ್ತೇನ ಸಂಕ್ಷಿಪ್ಯ ಕ್ರಿಯತೇಽಂಜಸಾ' (೧–೫). ಅದರಂತೆ ಈ ಗ್ರಂಥ ಭರತನಾಟ್ಯಶಾಸ್ತ್ರದ ಒಂದು ಭಾಗವಾದ ರೂಪಕಶಾಸ್ತ್ರವನ್ನು ಸಂಕ್ಷೇಪವಾಗಿ ನೇರವಾಗಿ ಲಕ್ಷಿಸುತ್ತದೆ. ಮತ್ತು ಅದೇ ಕಾರಣ, 'ನಾಟ್ಯಶಾಸ್ತ್ರ'ದಲ್ಲಿನ ರೂಪಕಲಕ್ಷಣವಿಭಾಗದಲ್ಲಿ ಯಾವ ವಿಷಯಗಳಿವೆಯೋ ಸಾಮಾನ್ಯವಾಗಿ ಅವೇ ಇಲ್ಲಿಯೂ ಬಂದಿವೆ.

'ನಾಟ್ಯಶಾಸ್ತ್ರ'ದ ಆ ಭಾಗಕ್ಕೂ 'ದಶರೂಪಕ'ಕ್ಕೂ ಇರುವ ಕೆಲವು ಸಣ್ಣಪುಟ್ಟ ಭೇದಗಳನ್ನು ಗ್ರಂಥದಲ್ಲಿ ಅಲ್ಲಲ್ಲೆ ಟಿಪ್ಪಣಿಸಿದೆ.[೧] 'ನಾಯಿಕಾಭೇದ'ವನ್ನು ಲಕ್ಷಿಸುವಲ್ಲಿ ಧನಂಜಯ ಭರತನಿಂದ ಬೇರೆಯಾಗಿರುವುದು ಒಂದು ಮುಖ್ಯ ಅಂಶ. 'ನಾಟ್ಯಶಾಸ್ತ್ರ'ದಲ್ಲಿನ ನಾಯಿಕಾಭೇದಗಳು ಮುಖ್ಯವಾಗಿ ನಾಲ್ಕು. ಇಲ್ಲಿನಂತಲ್ಲದೆ ಅಲ್ಲಿ ಭೇದಕಲ್ಪನೆ ಬಹು ಸರಲವಾಗಿದೆ. (ನೋಡಿ: ೨–೨೪ ಮತ್ತು ಮುಂದೆ.) ನಾಯಕಾದಿಭೇದಗಳಲ್ಲೂ ಆ ಗ್ರಂಥಕ್ಕೂ ಪ್ರಸ್ತುತಗ್ರಂಥಕ್ಕೂ ಕೆಲವು ವ್ಯತ್ಯಾಸಗಳಿವೆ. ರಸಗಳ ಅಂತರ್ಭೇದಗಳಲ್ಲಿ,

---

೧. ನೋಡಿ: ೧–೩೧, ೪೧, ೪೮, ೫೦, ೭೯, ೮೦, ೮೫, ೯೨, ೯೬, ೧೦೨, ೧೦೬, ೧೨೦, ಮತ್ತು ೨–೮೦, ೮೬ ಇತ್ಯಾದಿ.

ಮುಖ್ಯವಾಗಿ ಶೃಂಗಾರರಸಭೇದಗಳಲ್ಲಿ ಈ ಎರಡು ಗ್ರಂಥಗಳ ನಡುವೆ ಭಿನ್ನತೆ ಉಂಟು. ಸ್ಥಾಯಿಪ್ರತೀತಿ ಹಾಗೂ ರಸಪ್ರತೀತಿಗಳನ್ನು ಹೇಳುವಲ್ಲಿ 'ನಾಟ್ಯಶಾಸ್ತ್ರ' ಒಂದು ಒಗಟಿನ ಸೂತ್ರವನ್ನೂ ನಿಷ್ಕೃಷ್ಟವಾದ ಅರ್ಥ ಹೊಳೆಯದ ಕೆಲವು ಮಾತುಗಳನ್ನೂ ಮುಂದೊಡ್ಡಿದ್ದರೆ, ಇಲ್ಲಿ ಅವುಗಳನ್ನು ವಿವರವಾಗಿ ಸ್ಪಷ್ಟವಾಗಿ ಲಕ್ಷಿಸಿದೆ.

'ದಶರೂಪಕ'ದಲ್ಲಿರುವ ಒಟ್ಟು ಕಾರಿಕೆಗಳು ಮುನ್ನೂರ ಎರಡು : ಮೊದಲನೆಯ ಪ್ರಕಾಶದಲ್ಲಿ ಅರುವತ್ತೆಂಟು, ಎರಡನೆಯದರಲ್ಲಿ ಎಪ್ಪತ್ತೆರಡು, ಮೂರನೆಯದರಲ್ಲಿ ಎಪ್ಪತ್ತಾರು ಹಾಗೂ ಕೊನೆಯದರಲ್ಲಿ ಎಂಬತ್ತಾರು. ಇವುಗಳಲ್ಲಿ ಬಹುಭಾಗ ಅನುಷ್ಟುಪ್ ಛಂದಸ್ಸಿನಲ್ಲಿ ರಚಿತವಾಗಿವೆ. ಈ ಹದಿನೆಂಟು ಕಾರಿಕೆಗಳು ಮಾತ್ರ ಬೇರೆ ಛಂದಸ್ಸಿನಲ್ಲಿವೆ : ಪ್ರ.೧–೫೦.೩, ೪–೧೫, ೪–೪೪, ೪–೮೩ (ಎರಡು ವೃತ್ತಗಳು)–ಇವು ಆರ್ಯಾವೃತ್ತ; ೧–೪, ೪–೯, ೪–೩೫–ಇವು ಸ್ರಗ್ಧರಾ; ೧–೬, ೪–೫೭(ಒಂದೂವರೆ ವೃತ್ತ), ೪–೯೧ – ಇವು ಇಂದ್ರವಜ್ರ; ೧–೧೨೯, ೩–೬೫, ೪–೭೯, ೪–೯೦ – ಇವು ವಸಂತತಿಲಕ; ೨–೧೦೫ ಉಪಜಾತಿ; ೪–೮೦ ಮತ್ತು ೪–೮೧ ಶಾರ್ದೂಲವಿಕ್ರೀಡಿತ. ಇವುಗಳಲ್ಲಿ ೪–೮೩ರಲ್ಲಿನ ಆರ್ಯೆಯಲ್ಲಿ ಒಂದೆಡೆ ಗುರುವಿಗೆ ಬದಲಾಗಿ ಲಘುವಿರುವಂತೆ ಅಚ್ಚಾಗಿದ್ದು ಅದನ್ನು ಹ್ಯಾಸ್ ಅವರ ತಿದ್ದುಪಡಿಯಂತೆ ಇಲ್ಲಿಯೂ ತಿದ್ದಿ ಸರಿಪಡಿಸಲಾಗಿದೆ. (ನೋಡಿ: ೪–೮೩ರ ಅಡಿಟಿಪ್ಪಣಿ.)

ಕಾರಿಕೆಗಳ ರಚನೆಯಲ್ಲಿ ಧನಂಜಯ ಪ್ರದರ್ಶಿಸಿರುವ ಚಾತುರ್ಯ ಮೆಚ್ಚುವಂಥದು. ಇಲ್ಲಿನ ಒಂದೊಂದು ಕಾರಿಕೆಯೂ ಅತ್ಯಂತ ಸಂಕ್ಷೇಪವಾಗಿದೆ, ಅಡಕವಾಗಿದೆ. ಇದೇ ಕಾರಣದಿಂದ ಈ ಗ್ರಂಥ ವ್ಯಾಖ್ಯೆಯಿಲ್ಲದೆ ಅರ್ಥವಾಗುವುದು ಕಷ್ಟ. ಹಾಗಿದ್ದರೂ ಕಾರಿಕೆಗಳಲ್ಲಿ ಹೇಳಿರುವ ವಿಷಯಗಳು ನಿಷ್ಕೃಷ್ಟವಾಗಿವೆ; ಸೂತ್ರಗಳಲ್ಲಿ ಅತಿವ್ಯಾಪ್ತಿ ದೋಷ ವಿಲ್ಲದಿರುವುದು ಮಾತ್ರವಲ್ಲದೆ ಅವ್ಯಾಪ್ತಿದೋಷವೂ ಬಹಳ ಕಡಿಮೆಯಾಗಿದೆ. ಕಾರಿಕೆಗಳ ಶ್ಲೋಕಪೂರಣಕ್ಕಾಗಿ ಅನಗತ್ಯವಾದ ಪದಪದಪುಂಜಗಳನ್ನು ತುಂಬಿರುವ ಉದಾಹರಣೆ ತುಂಬ ಕಡಿಮೆ. ಪುರಾಣದ ಶೈಲಿಯಲ್ಲಿ ರಚಿತವಾದ 'ನಾಟ್ಯಶಾಸ್ತ್ರ'ದೊಡನೆ ಈ ಕಾರಿಕೆಗಳನ್ನು ಹೋಲಿಸಿದರೆ ಇವುಗಳಲ್ಲಿನ ಸಂಗ್ರಹಗುಣ ಎದ್ದುಕಾಣಸುತ್ತದೆ. 'ಅವಸ್ಥಾನುಕೃತಿರ್ನಾಟ್ಯಂ' (೧–೭), 'ರೂಪಂ ದೃಶ್ಯತಯೋಚ್ಯತೇ' (೧–೮), 'ರೂಪಕಂ ತತ್ಸಮಾರೋಪಾತ್' (೧–೯) – ಈ ಮುಂತಾದವು ಸೂತ್ರಗಳಿಗೆ ಮಾದರಿಗಳಾಗಿವೆ. ಮೂವತ್ತುಮೂರು ವ್ಯಭಿಚಾರಿಭಾವಗಳನ್ನು ಒಂದೇ ಸ್ರಗ್ಧರಾವೃತ್ತದಲ್ಲಿ (೪–೯) ಹೆಸರಿಸಿರುವ ಕೌಶಲ ಬೆರಗುಪಡಿಸುವಂತಿದೆ. ವಿಷಯಗಳ ಜೋಡಣೆ ಅತಿ ಸರಲವಾಗಿದೆ, ನೇರವಾಗಿದೆ. ಒಟ್ಟಿನಲ್ಲಿ, ಧನಂಜಯ 'ಸಂಕ್ಷಿಪ್ಯ ಕ್ರಿಯತೇಽಂಜಸಾ' ಎಂಬ ತನ್ನ ಹೇಳಿಕೆಯನ್ನು ಆದ್ಯಂತ ಅಕ್ಷರಶಃ ಪಾಲಿಸಿದ್ದಾನೆ ಎನ್ನಬಹುದು. ಮೊದಲ ಪ್ರಕಾಶದ ೧, ೨ ಮತ್ತು ಮುಖ್ಯವಾಗಿ ೪ – ಈ ಮುಂತಾದ ಶ್ಲೋಕಗಳಲ್ಲಿ ಪ್ರಕಟವಾಗಿರುವ ಧನಂಜಯನ ಕಾವ್ಯಶಕ್ತಿಯೂ ಗಮನಿಸುವಂತಿದೆ.

**ದಶರೂಪಕದ ವ್ಯಾಖ್ಯೆಗಳು:** ಈಗ ಮುದ್ರಿತವಾಗಿರುವ ಪ್ರತಿಗಳಲ್ಲಿ ಧನಿಕನಿಂದ ರಚಿತವಾದ 'ದಶರೂಪಾವಲೋಕ' ಎಂಬ ವ್ಯಾಖ್ಯಾನವಿದೆ. 'ದಶರೂಪಕ'ಕ್ಕಿರುವ

ವ್ಯಾಖ್ಯೆಗಳಲ್ಲೆಲ್ಲ ಇದು ಬಹು ಪ್ರಸಿದ್ಧವಾದದ್ದು. ಪ್ರಸ್ತುತ ಅನುವಾದದಲ್ಲಿ ಕೂಡ ಈ ವ್ಯಾಖ್ಯೆಯನ್ನೆ ಬಳಸಿಕೊಂಡಿದೆ. ಇದಲ್ಲದೆ 'ದಶರೂಪಕ'ಕ್ಕೆ ಬೇರೆ ಹಲವು ವ್ಯಾಖ್ಯೆಗಳಿವೆ ಯಂತೆ: 'ವಿಕ್ರಮೋರ್ವಶೀಯ'ಕ್ಕೆ ವ್ಯಾಖ್ಯೆ ಬರೆದ ರಂಗನಾಥ ದೀಕ್ಷಿತ 'ಸಾಹಸಾಂಕೀಯ ಟೀಕಾ' ಮತ್ತು 'ದೇವಪಾಣಿಕೃತಟೀಕಾ' ಎಂಬೆರಡು ವ್ಯಾಖ್ಯೆಗಳನ್ನು ಹೆಸರಿಸಿದ್ದಾನೆ. ಅವೆರಡೂ ಅನುಪಲಬ್ಧವಾಗಿವೆ. ಕ್ಷೋಣೀಧರಮಿಶ್ರನೆಂಬಾತ ಇದಕ್ಕೆ ವ್ಯಾಖ್ಯೆ ಬರೆದಿರುವ ನೆಂದು, 'ದಶರೂಪಕ'ವನ್ನು ಮೊದಲಿಗೆ ಪ್ರಕಟಿಸಿದ ಫಿಟ್ಸೆಡ್ವರ್ಡ್‌ಹಾಲ್ ಅವರು ಸೂಚಿಸಿದ್ದಾರೆ. (ಹಾಲ್: ಪು. ೪ರ ಟಿಪ್ಪಣಿ.) ಕುರವಿರಾಮನೆಂಬಾತ ಒಂದು ವ್ಯಾಖ್ಯೆ ಬರೆದಿದ್ದನೆಂಬುದನ್ನು 'ದಶರೂಪಕ'ವನ್ನು ಆಂಗ್ಲಾನುವಾದ ಸಮೇತ ಪ್ರಕಟಿಸಿದ ಜಾರ್ಜ್ ಸಿ.ಓ.ಹ್ಯಾಸ್ ಅವರು ಗುರುತಿಸಿದ್ದಾರೆ. (ಪು.xxxii, ಅಡಿಟಿಪ್ಪಣಿ.) ಮದ್ರಾಸ್ ಸರ್ಕಾರದ ಪ್ರಾಚ್ಯ ಹಸ್ತಪ್ರತಿಗಳ ಭಂಡಾರದಲ್ಲಿ ಭಟ್ಟನೃಸಿಂಹನೆಂಬೊಬ್ಬನ ವ್ಯಾಖ್ಯೆಯೂ, ಬಹು ರೂಪಮಿಶ್ರನೆಂಬಾತನೊಬ್ಬನ ವ್ಯಾಖ್ಯೆಯೂ ಇದೆಯಂತೆ. ಇವುಗಳಲ್ಲಿ ಬಹುರೂಪ ಮಿಶ್ರನ ವ್ಯಾಖ್ಯೆ ಉತ್ತಮವಾಗಿದೆಯೆಂದು ಹೇಳಿ ಅದರ ಕೆಲವು ಮುಖ್ಯ ಅಂಶಗಳನ್ನು ಡಾ॥ ವಿ. ರಾಘವನ್ ಅವರು ಪ್ರಕಟಿಸಿದ್ದಾರೆ. (ನೋಡಿ: 'Bahurūpa Miśras Commentary On Daśarūpaka' By V. Raghavan, B.A.(Hons.), Madras: Journal of Oriental Research-Vol. VII:Pp.321-334.) ಬಹುರೂಪ ಮಿಶ್ರನ ಕಾಲ ಸರಿಯಾಗಿ ತಿಳಿಯದು. ಆದರೆ ಈತ 'ಭಾವಪ್ರಕಾಶಿಕಾ' ಕಾರನಾದ ಶಾರದಾತನಯನನ್ನು 'ಆಚಾರ್ಯ'ನೆಂದು ಗೌರವಿಸಿರು ವುದರಿಂದ ಆತನ ಕಾಲಕ್ಕಿಂತ (ಕ್ರಿ.ಶ.: ೧೧೭೫–೧೨೫೦) ಈಚಿನವನೆಂದು ಹೇಳಬಹುದು. ಧನಿಕನ ವ್ಯಾಖ್ಯೆಯನ್ನು ಬಿಟ್ಟರೆ ಈತನ ವ್ಯಾಖ್ಯೆಯೇ ಉತ್ತಮವಾಗಿರುವುದೆಂದು ಡಾ॥ ರಾಘವನ್ ಹೇಳಿದ್ದಾರೆ. ಭಟ್ಟನೃಸಿಂಹ ಭೋಜನ 'ಸರಸ್ವತೀಕಂಠಾಭರಣ'ಕ್ಕೂ ವ್ಯಾಖ್ಯೆ ರಚಿಸಿದ್ದಾನೆ. ಈತನ ದಶರೂಪಕದ ವ್ಯಾಖ್ಯೆ ಅಷ್ಟೇನೂ ಗಮನಾರ್ಹವಾದುದಲ್ಲವೆಂದು ಡಾ॥ ರಾಘವನ್ ಅಭಿಪ್ರಾಯಪಡುತ್ತಾರೆ.

**ಧನಿಕ ಮತ್ತು ಆತನ ಕಾಲ:** ದಶರೂಪಕದ ಕಾರಿಕಾಕರ್ತೃ ಹಾಗೂ ನಾವು ಈಗ ಧನಿಕನದೆಂದಿರುವ ವ್ಯಾಖ್ಯೆಯ ಕರ್ತೃ ಒಬ್ಬನೇ ಎಂಬ ಅಭಿಪ್ರಾಯ ಬಂದಿದೆ. ಇದಕ್ಕೆ ಕಾರಣ ಧನಂಜಯಧನಿಕರಲ್ಲಿನ ಹೆಸರಿನ ಸಾಮ್ಯ, ತಂದೆಯ ಹೆಸರು (ವಿಷ್ಣು) ಒಂದೇ ಆಗಿರುವುದು ಹಾಗೂ 'ಸಾಹಿತ್ಯದರ್ಪಣ'ದಲ್ಲಿ ಮತ್ತು ಇನ್ನಿತರ ಮುಂದಿನ ಗ್ರಂಥಗಳಲ್ಲಿ 'ದಶರೂಪಕ'ದ ಕರ್ತೃ ಧನಿಕನೆಂದಿರುವುದು. ಆದರೆ ಈ ಅಭಿಪ್ರಾಯ ತಪ್ಪು ಎಂಬುದು ಈಗ ನಿಶ್ಚಿತವಾಗಿದೆ. ಧನಂಜಯ ಹಾಗೂ ಧನಿಕ – ಈ ಹೆಸರುಗಳು ಬೇರೆಬೇರೆ ಯೆಂಬುದು ಸ್ಪಷ್ಟ. ಇಬ್ಬರ ತಂದೆಯ ಹೆಸರೂ ಒಂದೆಯಿರುವುದು ಅವರು ಸಹೋದರರೆಂಬ ಹೇಳಿಕೆಗೆ ಪುಷ್ಟಿಕೊಡುತ್ತದೆ ಅಷ್ಟೆ. ಇನ್ನು – ಧನಂಜಯನ ಕಾರಿಕೆ ಹಾಗೂ ಧನಿಕನ ವ್ಯಾಖ್ಯೆ ಸೇರಿ ಈ ಗ್ರಂಥ ಪೂರ್ಣವಾಗುವುದರಿಂದ ಮುಂದಿನ ಆಲಂಕಾರಿಕರು ಇವರಿಬ್ಬರನ್ನೂ ಗ್ರಂಥಕರ್ತೃಗಳಾಗಿ ಭಾವಿಸಿರಬಹುದು. ಗ್ರಂಥಾಂತ್ಯದಲ್ಲಿ ಕಾರಿಕಾ

ಕರ್ತೃವಿನ ವಿಷಯ ಒಂದು ಶ್ಲೋಕದಲ್ಲಿ ಬಂದಿದ್ದು ಅನಂತರ ವ್ಯಾಖ್ಯಾಕರ್ತೃವಿನ ವ್ಯಾಖ್ಯಾಂತ್ಯದ ಪುಷ್ಪಿಕೆಯಲ್ಲಿ ಬೇರೆಯಾಗಿ ಆತನ ಹೆಸರಿದೆ. ಅವರು ಬೇರೆಬೇರೆ ಯೆನ್ನುವುದಕ್ಕೆ ಇದು ಸ್ಪಷ್ಟ ಸಾಕ್ಷಿ. ಮೇಲಾಗಿ ವ್ಯಾಖ್ಯೆಯನ್ನು ಸೂಕ್ಷ್ಮ ಅವಲೋಕಿಸಿದರೆ ಅಲ್ಲಿಯೇ ಅದು ಕಾರಿಕಾಕಾರನದಲ್ಲವೆಂಬ ಅಂಶ ಸಿದ್ಧವಾಗುವಂತಿದೆ. ಒಂದು ಉದಾಹರಣೆ ಹೇಳಬಹುದು. ೨-೨೪ರಲ್ಲಿ ಕಾರಿಕೆಯನ್ನು ವ್ಯಾಖ್ಯಾನಿಸುತ್ತ ವ್ಯಾಖ್ಯಾಕಾರ ಅದರಿಂದ ಹೊರಡಬಹುದಾದ ಎರಡೂ ಅರ್ಥಗಳನ್ನು ಸೂಚಿಸಿದ್ದಾನೆ. ಈ ಕಾರಣಗಳಿಂದ ಧನಂಜಯಧನಿಕರು ಬೇರೆಬೇರೆ ವ್ಯಕ್ತಿಗಳು ಎಂಬುದು ಸಿದ್ಧವಾಗುತ್ತದೆ.೧

ಧನಿಕ ವ್ಯಾಖ್ಯಾಂತ್ಯದ ಪುಷ್ಪಿಕೆಯಲ್ಲಿ ತನ್ನ ವ್ಯಾಖ್ಯೆಯ ಹೆಸರು 'ದಶರೂಪಾವಲೋಕ' ಎಂಬುದನ್ನು ಹೇಳಿದ್ದಾನೆ. ಅಲ್ಲದೆ ಅಲ್ಲಿ ತಾನು ವಿಷ್ಣುವಿನ ಮಗ ಎಂಬುದನ್ನಲ್ಲದೆ ಮತ್ತೇನನ್ನೂ ಹೇಳಿಕೊಂಡಿಲ್ಲ.೨ ಈತ ಧನಂಜಯ ಸಹೋದರನೆಂದು ಪ್ರತೀತಿಯಿದೆ. ಇಬ್ಬರ ತಂದೆಯ ಹೆಸರೂ ವಿಷ್ಣು ಎಂದಿರುವುದೇ ಒಮ್ಮೆ ಈ ಪ್ರತೀತಿಗೆ ಕಾರಣವಾಗಿದ್ದರೂ ಇರಬಹುದು. ಅದು ಹೇಗೇ ಇರಲಿ, ಇವರಿಬ್ಬರೂ ಸಮಕಾಲೀನರೂ ಹತ್ತಿರದವರೂ ಆಗಿದ್ದರೆಂದು ಊಹಿಸಬಹುದು. 'ದಶರೂಪಕ'ದ ಹಸ್ತಪ್ರತಿಯೊಂದರಲ್ಲಿ ಧನಿಕ ಉತ್ಪಲ ರಾಜನ ಮಹಾಸಾಧ್ಯಪಾಲನಾಗಿದ್ದನೆಂದು ಉಲ್ಲೇಖವಿದೆಯಂತೆ.೩ ಈ ಉತ್ಪಲರಾಜ ಧನಂಜಯನಿಗೆ ಆಶ್ರಯವಿತ್ತಿದ್ದ ಹಲವು ಹೆಸರುಗಳ ಮುಂಜರಾಜನೇ ಎಂಬುದು ಸ್ಪಷ್ಟ. ಮೇಲಾಗಿ ಧನಿಕ ಮುಂಜರಾಜನ ಪದ್ಯ ಒಂದನ್ನು ಉದಾಹರಣೆಯಾಗಿ ಎರಡು ಕಡೆಗಳಲ್ಲಿ (೪-೬೬,೬೭) ಎತ್ತಿಕೊಂಡಿದ್ದಾನೆ ಹಾಗೂ ಒಂದೆಡೆಯಲ್ಲಿ ಅದು 'ಶ್ರೀವಾಕ್ಪತಿರಾಜ ದೇವನ'ದೆಂದೂ ಇನ್ನೊಂದೆಡೆಯಲ್ಲಿ 'ಶ್ರೀಮುಂಜ'ನದೆಂದೂ ಸೂಚಿಸಿದ್ದಾನೆ ಎಂಬುದನ್ನು ಹಿಂದೆ ಗಮನಿಸಿರುವೆನಷ್ಟೆ. ಇತರರಾರಿಗೂ ಇಲ್ಲದ ಹೆಸರಿನ ಬುಡದ ಶ್ರೀಕಾರಗೌರವ ಮುಂಜನಿಗೇ ಸಂದಿರುವುದನ್ನು ನೋಡಿದರೆ ಧನಿಕನಿಗೆ ಆತನನ್ನು ಕುರಿತು ಪೂಜ್ಯಭಾವ ವಿದ್ದಿರಬೇಕೆಂದು ಭಾಸವಾಗುತ್ತದೆ. ಧನಿಕ ಉದಾಹರಿಸಿರುವ ಪದ್ಯಗಳ ಆಧಾರದ ಮೇಲೆ ಆತನ ವ್ಯಾಖ್ಯೆ ರಚಿತವಾದ ಕಾಲವನ್ನು ನಾವು ಸ್ಥೂಲವಾಗಿ ಗ್ರಹಿಸಬಹುದು. ೨-೬೫ರ

---

೧. ಈ ವಿಷಯದ ವಿವರ ವಿಮರ್ಶೆಗೆ Dr. S.K. De ಅವರ History of Sanskrit Poetics (Vol. I-Pp. 131-134) ನೋಡಿ.

೨. ಹಸ್ತಪ್ರತಿಯೊಂದರಲ್ಲಿ ವ್ಯಾಖ್ಯೆಯ ಹೆಸರು 'ದಶರೂಪಾಲೋಕ' ಎಂದಿದೆಯಂತೆ. (ನೋಡಿ : ಹಾಲ್-ಪು. ೪.) ಪುಷ್ಪಿಕೆಯ ಮೂಲ : 'ಇತಿ ಶ್ರೀ ವಿಷ್ಣುಸೂನೋರ್ಧನಿಕಸ್ಯ ಕೃತೌ ದಶರೂಪಾವಲೋಕೇ ರಸವಿಚಾರೋ ನಾಮ ಚತುರ್ಥಃ ಪ್ರಕಾಶಃ ಸಮಾಪ್ತಃ'. ಪ್ರತಿಯೊಂದು ಪ್ರಕಾಶದ ಅಂತ್ಯದಲ್ಲೂ ವ್ಯಾಖ್ಯೆ ಇದೇ ಬಗೆಯ ಪುಷ್ಪಿಕೆಯಿಂದ ಕೊನೆಯಾಗುತ್ತದೆ.

೩. ನೋಡಿ : Wilson ಅವರ Select Specimens of the Theatre of the Hindus (3rd Ed. London 1871, I-Pp. XX, XXI.) ಮತ್ತು ಹಾಲ್ ಅವರ; 'ದಶರೂಪಕ'ದ ೩ನೆಯ ಪುಟ, ಅಡಿಟಿಪ್ಪಣಿ. ಮತ್ತು-ಈ ಕುರಿತು ನೋಡಿ : Epigraphia Indica (Vol. II-P. 184, Verse 23).

ವ್ಯಾಖ್ಯೆಯಲ್ಲಿ ಪದ್ಮಗುಪ್ತ ಅಥವಾ ಪರಿಮಲನ 'ನವಸಾಹಸಾಂಕಚರಿತ'ದಿಂದ ಎತ್ತಿಕೊಂಡ ಒಂದು ಪದ್ಯವಿದೆ. 'ನವಸಾಹಸಾಂಕಚರಿತ' ರಚಿತವಾದದ್ದು ಸಿಂಧುರಾಜನ ಕಾಲದಲ್ಲಿ, ಎಂದರೆ, ಕ್ರಿ.ಶ.೯೯೫ರಿಂದ ಈಚೆಗೆ. ಆ ಕಾರಣ ಧನಿಕನ ವ್ಯಾಖ್ಯೆ ರಚಿತವಾದದ್ದೂ ಕ್ರಿ.ಶ.೯೯೫ರಿಂದ ಈಚೆಗಿರಬೇಕು. ಇನ್ನು ೧–೧೨೯ರ ವ್ಯಾಖ್ಯೆಯಲ್ಲಿ ಕ್ಷೇಮೇಂದ್ರನ 'ಬೃಹತ್ಕಥಾಮಂಜರಿ'ಯಿಂದ ಆಯ್ದ ಉದಾಹರಣೆಯೊಂದಿದೆ. 'ಬೃಹತ್ಕಥಾಮಂಜರಿ' ರಚಿತವಾದದ್ದು ಕ್ರಿ.ಶ. ೧೦೩೭ರ ಸುಮಾರಿನಲ್ಲಿ. ಅದರ ಪ್ರಕಾರ ವ್ಯಾಖ್ಯೆಯ ಕಾಲ ಕ್ರಿ.ಶ. ೧೦೩೭ರ ಈಚೆ ಆಗಬೇಕು. ಆದರೆ ಆ ಪದ್ಯ ಯಾವುದೊ ಒಂದು ಹಸ್ತಪ್ರತಿಯಲ್ಲಿ ಮಾತ್ರ ದೊರೆತಿದ್ದು ಉಳಿದವುಗಳಲ್ಲಿ ಇಲ್ಲವಂತೆ. ಮುಖ್ಯವಾಗಿ ಈ ಕಾರಣದಿಂದ ಮತ್ತು ಬೇರೆ ಕಾರಣಗಳಿಂದ ಅದು ಪ್ರಕ್ಷಿಪ್ತವೆಂದು ನಿರ್ಧರಿಸಲಾಗಿದೆ. ಹಾಗೆಯೇ, ಧನಿಕ 'ಮಹಾನಾಟಕ' ಅಥವಾ 'ಹನುಮನ್ನಾಟಕ'ದಿಂದ ಐದು ಪದ್ಯಗಳನ್ನು ಉದ್ಧರಿಸಿದ್ದಾನೆ.[1] [ನೋಡಿ : ೨–೧, ೨–೫ (ಇದೇ ೨–೧೯ರಲ್ಲಿ ಪುನಃ ಉದ್ಧೃತವಾಗಿದೆ), ೨–೧೮, ೪–೧೦ ಮತ್ತು ೪–೨೪.] ದಾಮೋದರಮಿಶ್ರನದೆಂದು ಹೇಳಲಾಗಿರುವ ಈ ಗ್ರಂಥದ ಸಂಸ್ಕರಣವೊಂದು ಈಗ ಮುದ್ರಿತವಾಗಿದ್ದು ಅದರ ಕಾಲ ಕ್ರಿ.ಶ. ೧೧ನೆಯ ಶತಕವೆಂದು ತಿಳಿಯುತ್ತದೆ. ಈ ದೃಷ್ಟಿಯಿಂದ ಕೂಡ ಧನಿಕನ ಕಾಲ ಮುಂದೆ ಹೋಗುವುದಿಲ್ಲವೆ ಎಂಬ ಸಂಶಯ ಬಂದೀತು. ಆದರೆ 'ಮಹಾನಾಟಕ' ಕ್ರಿ.ಶ. ೧೧ನೆಯ ಶತಕಕ್ಕಿಂತ ಹಿಂದಿನದೆಂದೂ, ಅದನ್ನು ದಾಮೋದರಮಿಶ್ರನು ಕೇವಲ ಸಂಸ್ಕರಿಸಿ ಹೊಸತುಗೊಳಿಸಿದನೆಂದೂ ವಿದ್ವಾಂಸರು ಸಕಾರಣವಾಗಿ ನಿರ್ಧರಿಸಿದ್ದಾರೆ. ಇಷ್ಟಲ್ಲದೆ ಕಾರಿಕೆ ಹಾಗೂ ವ್ಯಾಖ್ಯೆಯ ನಡುವೆ ಇರುವ ಹೊಂದಿಕೆ ಧನಂಜಯಧನಿಕರ ಸಾಮಿಪ್ಯವನ್ನು ಸ್ಪಷ್ಟ ಸೂಚಿಸುತ್ತದೆ. ಈ ಅಂಶವನ್ನು ಮುಖ್ಯವಾಗಿ ರಸವಿಷಯಕವಾದ ಸಿದ್ಧಾಂತಮಂಡನೆಯಲ್ಲಿ ಕಾಣಬಹುದು. ಅಲ್ಲದೆ ಶಾಂತರಸನಿರೋಧ, ಧ್ವನಿಪಕ್ಷಖಂಡನೆ ಮುಂತಾದ ಸಂದರ್ಭಗಳಲ್ಲಿ ಧನಿಕ ಬೆಳೆಸುವ ವಾದವಿವಾದಗಳು ಆತನನ್ನು ಧನಂಜಯನ ಕಾಲಕ್ಕೇ ನೆಲೆ ನಿಲ್ಲಿಸುವಂತಿವೆ.

ಒಟ್ಟನಲ್ಲಿ, ಸದ್ಯದ ಆಧಾರಗಳ ಮೇಲೆ ಧನಿಕ ಧನಂಜಯನ ಸಮೀಪದವನೆಂದೂ ಆತನ ಕಾಲ ಕ್ರಿ.ಶ. ಹತ್ತನೆಯ ಶತಮಾನವಾಗಿದ್ದು ಹನ್ನೊಂದನೆಯ ಶತಕದ ಬುಡದಲ್ಲಿಯೂ ಆತ ಇದ್ದಿರಬಹುದೆಂದೂ ಹೇಳಬಹುದು. ಪ್ರಾಯಃ, ದಶರೂಪಾವಲೋಕವ್ಯಾಖ್ಯೆ ರಚಿತವಾದದ್ದು ಹತ್ತನೆಯ ಶತಮಾನದ ತುತ್ತತುದಿಯಲ್ಲಿ ಅಥವಾ ಹನ್ನೊಂದರ ಮೊದಲಲ್ಲಿ. ಹಿಂದೆ, ಮುಂಜರಾಜನನ್ನು ಕುರಿತ ಶಾಸನಗಳನ್ನು ಗಮನಿಸುವಲ್ಲಿ, ಈ ದೊರೆ ಅಹಿಚ್ಛತ್ರದಿಂದ ಬಂದ ಧನಿಕಪಂಡಿತನ ಪುತ್ರ ವಸಂತಾಚಾರ್ಯನಿಗೆ ಭೂಮಿಯನ್ನು ದತ್ತಿ ಬಿಟ್ಟನೆಂದು ತಿಳಿಸುವ ಕ್ರಿ.ಶ. ೯೭೪ರ ಶಾಸನವೊಂದನ್ನು ಗಮನಿಸಿದೆವಷ್ಟೆ. ಅಲ್ಲಿ ಉಲ್ಲೇಖಿತನಾದ ಧನಿಕಪಂಡಿತನೇ ಪ್ರಸ್ತುತ

೧. ನೋಡಿ : ಹ್ಯಾಸ್ : ಪು. XXXIII.

ವ್ಯಾಖ್ಯಾಕಾರನಾದ ಧನಿಕನಿದ್ದರೂ ಇರಬಹುದು; ನಿಶ್ಚಿತ ಹೇಳುವಂತಿಲ್ಲ. ಒಂದು ವೇಳೆ ಆ ಧನಿಕಪಂಡಿತನೇ ಇವನಾಗಿದ್ದರೆ, ಆತನಿಗೆ ಕ್ರಿ.ಶ. ೯೭೪ರಲ್ಲಿ ಸಾಕಷ್ಟು ಪ್ರಾಯದ ಮಗನೊಬ್ಬನಿದ್ದನೆಂದೂ, ಆತ ವ್ಯಾಖ್ಯೆ ಬರೆದದ್ದು 'ನವಸಾಹಸಾಂಕಚರಿತ'ದ ರಚನೆಯ ಎಂದರೆ, ಕ್ರಿ.ಶ. ೯೯೫ರ ಈಚೆಯಾದ್ದರಿಂದ ಈ ವ್ಯಾಖ್ಯೆಯನ್ನು ರಚಿಸುವ ಕಾಲಕ್ಕೆ ಆತ ವೃದ್ಧಾಪ್ಯದಲ್ಲಿದ್ದನೆಂದೂ ತಿಳಿಯಬೇಕಾಗುತ್ತದೆ.

ಇಷ್ಟಲ್ಲದೆ – ವ್ಯಾಖ್ಯೆಯ ಮೂಲಕ ಧನಿಕನ ಬಗೆಗೆ ತಿಳಿಯುವ ಮುಖ್ಯ ಅಂಶ ಎಂದರೆ ಆತ ಕೇವಲ ವ್ಯಾಖ್ಯಾಕಾರನಲ್ಲದೆ ಆಲಂಕಾರಿಕನೂ ಕವಿಯೂ ಆಗಿದ್ದನೆಂಬುದು. ೪–೪೭ರ ವ್ಯಾಖ್ಯೆಯಲ್ಲಿ ತನ್ನ ವಾದವನ್ನು ಮುಗಿಸುತ್ತ ಧನಿಕ 'ಯಥಾವೋಚಾಮ ಕಾವ್ಯನಿರ್ಣಯೇ' ಎಂದು ಮುಂದೆ ಏಳು ಅನುಷ್ಟುಪ್ ಶ್ಲೋಕಗಳನ್ನು ಉಲ್ಲೇಖಿಸಿದ್ದಾನೆ. ಇದರಿಂದ ಈತ 'ಕಾವ್ಯನಿರ್ಣಯ' ಎಂಬ ಹೆಸರಿನ ಅಲಂಕಾರಗ್ರಂಥ ಒಂದನ್ನು ರಚಿಸಿದ್ದಿರಬೇಕೆಂದು ಊಹಿಸಲಾಗಿದೆ. ನಮಗೆ ತಿಳಿದಂತೆ ಆ ಗ್ರಂಥ ಈವರೆಗೆ ಎಲ್ಲೂ ದೊರೆತಿಲ್ಲ ಮತ್ತು ಎಲ್ಲೂ ಅದನ್ನು ಕುರಿತ ಉಲ್ಲೇಖವಿಲ್ಲ. ಅಲ್ಲದೆ, ವ್ಯಾಖ್ಯೆಯಲ್ಲಿ ನಡುನಡುವೆ ತನ್ನ ಪದ್ಯಗಳನ್ನು – 'ಯಥಾ ಮಮೈವ' ಎಂದು ಉದಾಹರಣೆಯಾಗಿ ಎತ್ತಿಕೊಟ್ಟಿದ್ದಾನೆ. ಅಂಥ ಪದ್ಯಗಳು ಒಟ್ಟು ಇಪ್ಪತ್ತುನಾಲ್ಕು; ಇಪ್ಪತ್ತು ಸಂಸ್ಕೃತ, ನಾಲ್ಕು ಪ್ರಾಕೃತ. [ನೋಡಿ : ಎರಡನೆಯ ಪ್ರಕಾಶದ ೮, ೧೬, ೨೨, ೨೬, ೨೯, ೫೦ (ಪ್ರಾಕೃತ), ೫೧ (ಪ್ರಾಕೃತ), ೫೨ (ಪ್ರಾಕೃತ), ೫೭, ೬೦ (ಪ್ರಾಕೃತ), ೬೩, ೬೪, ೬೫, ೬೭, ೬೮, ೭೯; ನಾಲ್ಕನೆಯ ಪ್ರಕಾಶದ ೩, ೩೪, ೩೫, ೬೭, ೬೯ (ಮೂರು ಪದ್ಯಗಳು; ಅವುಗಳಲ್ಲೊಂದು ೨–೭೯ರಲ್ಲಿ ಬಂದಿದ್ದು), ೭೬, ೭೯ – ಈ ಖಂಡಗಳು.] ಈ ಪದ್ಯಗಳಲ್ಲಿ ಮೂರು (೨–೧೬, ೪–೩, ೪–೭೯ – ಇವುಗಳಲ್ಲಿ ಬಂದವು) 'ಶಾರ್ಙ್ಗಧರಪದ್ಧತಿ'ಯಲ್ಲಿ ಸಂಕಲಿತವಾಗಿವೆ; ಮೂರರಲ್ಲಿ ಎರಡು ಧನಿಕನ ದೆಂದು ಉಲ್ಲೇಖಿತವಾಗಿದೆ, ಉಳಿದ ಒಂದು ಹೆಸರಿಲ್ಲದೆ ಬಂದಿದೆ. 'ದಶರೂಪಕ'ದ ಹಸ್ತಪ್ರತಿಯೊಂದರಲ್ಲಿ ವ್ಯಾಖ್ಯಾಗ್ರದ ಪೀಠಿಕಾಪದ್ಯವೊಂದಿದ್ದು ಶೈಲಿಯ ಆಧಾರದ ಮೇಲೆ ಅದು ಆತನದಿರಲಾರದೆಂದು ಹಾಲ್ ಅವರು ಕೈಬಿಟ್ಟಿರುವರಂತೆ. (ನೋಡಿ : ಹಾಲ್ – ಪು. ೪. ಟಿಪ್ಪಣಿ.) ಅದು ಮತ್ತಾವ ಸಂಸ್ಕರಣದಲ್ಲಿ ಕೂಡ ಮುದ್ರಿತವಾಗಿಲ್ಲ. ಅಜ್ಞಾತ ಕರ್ತೃಕವಾದ ಪದ್ಯವೊಂದರಲ್ಲಿ ಕಾಳಿದಾಸ, ಅಮರ, ಸುಂದರ, ಶಂಖ ಮೊದಲಾದ ಕವಿಗಳೊಡನೆ ಧನಿಕನ ಹೆಸರೂ ಕೂಡಿಕೊಂಡಿದೆ.೧ ಇದರಿಂದ ಧನಿಕ ಆ ಕಾಲದಲ್ಲಿ ಸಾಕಷ್ಟು ಪ್ರಖ್ಯಾತನಾದ ಕವಿಯಾಗಿದ್ದನೆಂಬುದು ಸೂಚಿತವಾಗುತ್ತದೆ. ಮುಂಜನೇ ಮೊದಲಾದವರ ಆಸ್ಥಾನದ ರಸಿಕಗೋಷ್ಠಿಯಲ್ಲಿ ಪಾಲುಗೊಂಡಿದ್ದ ಕವಿಪಂಡಿತನಾಗಿರಲೂ ಸಾಕು ಈತ.

**ಧನಿಕನ ದಶರೂಪಾವಲೋಕವ್ಯಾಖ್ಯೆ :** ಧನಿಕನ 'ಅವಲೋಕ'ವನ್ನು ಕಳೆದರೆ 'ದಶರೂಪಕ' ಅರೆಯಾಗಿಯೇ ಉಳಿಯುತ್ತದೆ. ನಮ್ಮ ಪ್ರಾಚೀನ ಶಾಸ್ತ್ರೀಯ ಗ್ರಂಥಗಳು ಬಹುಪಾಲು ಹಾಗೆ. ವಿಶೇಷಜ್ಞರಲ್ಲದ ಶ್ರೋತೃಗಳಿಗೆ ಸಮರ್ಥವಾದ ವ್ಯಾಖ್ಯೆಯ ಬೆಳಕಿನಲ್ಲಿ ಮಾತ್ರವೇ ಅವು ಜೀವಂತವಾಗುತ್ತವೆ, ಉಜ್ವಲವಾಗುತ್ತವೆ. ವ್ಯಾಖ್ಯೆಯ

---

೧. Journal of the Royal Asiatic Society, Vol. 15-P. 175ನಲ್ಲಿನ Cowell ಅವರ ಲೇಖನ ನೋಡಿ.

ಮೇತ ಗ್ರಂಥವನ್ನು ಓದಿದಾಗ ಅದರಲ್ಲಿನ ಧನಿಕನ ಪಾತ್ರ ಬಹು ದೊಡ್ಡದೆಂದು
ೋರುವುದು ಸಹಜ. ಅದನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ಧನಿಕನ
ಾತುಗಳು ಮೊತ್ತದಲ್ಲಿ ಸ್ವಲ್ಪವೇ. ಆತ ತನ್ನ ಬಹುಪಾಲು ಉದ್ದೇಶವನ್ನು ಸಮರ್ಥವಾದ
ುದಾಹರಣೆಗಳಿಂದಲೇ ಸಾಧಿಸಿಬಿಟ್ಟಿದ್ದಾನೆ. ಕೆಲವೇ ಕೆಲವು ದೀರ್ಘ ವ್ಯಾಖ್ಯಾ
ಾಗಗಳನ್ನು ಬಿಟ್ಟು ಉಳಿದ ಭಾಗಗಳಲ್ಲಿ ಅರ್ಧ ಕೇವಲ ಉದಾಹರಣೆಗಳು, ಇನ್ನರ್ಧ
ಂಕ್ಷೇಪ ಟಿಪ್ಪಣಿಗಳು. ಅವನ ವ್ಯಾಖ್ಯೆ ಉದ್ದ ಬೆಳೆದಿರುವುದು ಶಾಂತರಸವನ್ನು
ರೋಧಿಸುವಲ್ಲಿ (೨–೫, ೪–೪೪, ೪–೫೩ ಇ.,) ಸ್ಥಾಯಿಲಕ್ಷಣವನ್ನು ಹೇಳುವಲ್ಲಿ ಮತ್ತು
ಸಪ್ರತೀತಿಯ ಬಗೆಗಿರುವ ಧ್ವನಿಸಿದ್ಧಾಂತವನ್ನು ಖಂಡಿಸಿ ತಮ್ಮ ಮತವನ್ನು ಸ್ಥಾಪಿಸುವಲ್ಲಿ.
–೪೫ರಿಂದ ೫೨.) ಇನ್ನು – ನೃತ್ಯನಾಟ್ಯಗಳ ಭೇದವನ್ನು ನಿಯಮಿಸಿ ರೂಪಕಗಳು
ೇವಲ ಹತ್ತು' ಎನ್ನುವಲ್ಲಿ (೧–೧೨, ೩–೪೬ ಇ.,), 'ಪ್ರಥಮಕಲ್ಪ'ವೇ ಮೊದಲಾದ
ಾಟ್ಯಧರ್ಮಗಳನ್ನು ವಿರೋಧಿಸುವಲ್ಲಿ (೧–೧೨೮), ನಾಯಿಕಾವಸ್ಥೆಗಳನ್ನು ನಿಯಮನ
ಾಡುವಲ್ಲಿ (೨–೪೪, ೪೫) – ಈ ಭಾಗಗಳಲ್ಲಿ ಕೂಡ ಆತನ ವ್ಯಾಖ್ಯೆ ತುಸು
ೀರ್ಘವಾಗಿದೆ. ಎಂದರೆ – ಯಾವ ಯಾವ ವಿಷಯ ಆ ಕಾಲದಲ್ಲಿ ವಾದಗ್ರಸ್ತವಾಗಿದ್ದಿತೋ
ಂಥಲ್ಲಿ ಧನಿಕನ ವ್ಯಾಖ್ಯೆ ಬೆಳೆದಿದೆ; ಹಾಗೂ ಯಾವ ಯಾವ ವಿಷಯಗಳನ್ನು ಆಗಿನ
ಲಂಕಾರಿಕರು ಶಾಸ್ತ್ರನಿಷ್ಠೆ ಹಾಗೂ ಶಾಸ್ತ್ರ ಮರ್ಯಾದೆಗಳನ್ನು ತಿರಸ್ಕರಿಸಿ ಮನಬಂದಂತೆ
ಸ್ತರಿಸುತ್ತ ಹೋಗುತ್ತಿದ್ದರೊ ಅಂಥಲ್ಲಿ ಕೂಡ ಧನಿಕ ಮಾತು ಬೆಳೆಸಿದ್ದಾನೆ. ವ್ಯಾಖ್ಯೆಯ
ನ್ನಿತರ ಸಂಕ್ಷೇಪ ಭಾಗಗಳು ಹಲವೊಮ್ಮೆ ಸಹಾಯಕ ಟಿಪ್ಪಣಿಗಳಾಗಿವೆ, ಹಲವೊಮ್ಮೆ
ಾರಿಕೆಯಲ್ಲಿ ಹೇಳಿದುದನ್ನೆ – ಅದು ಸ್ಪಷ್ಟವಾಗಿದ್ದರೂ – ಬೇರೆ ಮಾತುಗಳಲ್ಲಿ
ೇಳುವಂಥವಾಗಿವೆ. (ನೋಡಿ : ೧–೩, ೩೦, ೩೧, ೩೨ ಇತ್ಯಾದಿ.) ವ್ಯಾಖ್ಯೆ
ೀರ್ಘವಾಗಿರುವ ಕಡೆಗಳಲ್ಲಿ ಧನಿಕನ ಗದ್ಯಶೈಲಿ ತರ್ಕಬದ್ಧವಾಗಿ ಖಂಡಿಸುವ ಮಂಡಿಸುವ
ಢ ಹಾಗೂ ಧೀರ ವಾದಶೈಲಿಯಾಗಿದೆ.

ಕೆಲವೆಡೆ ಅರ್ಥ ಅಸ್ಪಷ್ಟವಾಗಿದ್ದು ವಿವರಣೆ ಬೇಕಾಗಿರುವಲ್ಲಿಯೂ ಧನಿಕ 'ನಿಗದ
್ಯಾಖ್ಯಾತಮ್', 'ಸ್ಪಷ್ಟಮೇತತ್' ಮುಂತಾದ ಒಂದೊಂದೇ ಮಾತಿನಲ್ಲಿ ಅದನ್ನು
ವಾರಿಸಿ ಮುಂದೆ ಜಿಗಿದುಬಿಡುತ್ತಾನೆ. ಉದಾಹರಣೆಗೆ : ೧–೨೩ರಲ್ಲಿ 'ದಿವ್ಯಮರ್ತ್ಯಾದಿ
ೇದ'ಗಳು 'ಪ್ರಖ್ಯಾತೋತ್ಪಾದ್ಯಮಿಶ್ರ'ಗಳೊಂದೊಂದಕ್ಕೂ ಹತ್ತಿ ಒಟ್ಟು ಭೇದಗಳು
ಪ್ಪತ್ತೇಳು ಆಗುವಂತೆ ಸೂಚಿತವಾಗುತ್ತದೆ. ಈ ಕುರಿತು ಧನಿಕ ಏನನ್ನೂ ಹೇಳದೆ
ಟ್ಟಿದ್ದಾನೆ; ಆತನ ಪಾಲಿಗೆ ಅದು 'ಸ್ಪಷ್ಟ'. ೪–೫೩ರ ಕಾರಿಕೆ ಎಷ್ಟು ಗೂಢವೋ
್ಯಾಖ್ಯೆಯೂ ಅಷ್ಟೇ ಗೂಢವಾಗಿದೆ. ೪–೮೮ರಲ್ಲಿ ಆತನಿಗೆ ವಿವರಿಸಲು ಅವಕಾಶವಿತ್ತು;
–೮೯ರಲ್ಲಿ ವಿವರಣೆ ಇನ್ನೂ ಸ್ವಲ್ಪ ಬೆಳೆಯಬೇಕಿತ್ತು. ಹಲವೆಡೆ ಈತ ಉದಾಹರಣೆ
ೊಂದನ್ನು ಕೊಟ್ಟು ಕೈತೊಳೆದುಕೊಳ್ಳುವನಾದರೂ ನಮಗೆ ಆ ವಿಷಯ ಸ್ಪಷ್ಟ
ರ್ಥವಾಗದೆ ಉಳಿಯುತ್ತದೆ.

ಧನಿಕನ ಅಭಿಪ್ರಾಯಗಳಲ್ಲಿ ಮುಖ್ಯವಾದ ಕೆಲವನ್ನು ಮುಂದೆ ಪರಿಶೀಲಿಸುವುದಿದೆ.
ನ್ನು ಆತನ ಉದಾಹರಣೆಗಳನ್ನು ಗಮನಿಸಬಹುದು.

**ಧನಿಕನ ಉದಾಹರಣೆಗಳು:** ಧನಂಜಯನ ಕಾರಿಕೆಗಳನ್ನು ವ್ಯಾಖ್ಯಾನಿಸುತ್ತ ಅವುಗಳಿಗೆ ಉದಾಹರಣೆಯಾಗಿ ಧನಿಕ ಅನೇಕ ಕಾವ್ಯರೂಪಕಾದಿಗಳಿಂದ ಗದ್ಯಪದ್ಯ ಭಾಗಗಳನ್ನು ಎತ್ತಿಕೊಟ್ಟದ್ದಾನೆ. ಈ ಉದ್ಧೃತಿಗಳಲ್ಲಿ ಸುಮಾರು ಮುನ್ನೂರಮೂವತ್ತು ಪದ್ಯಗಳು ಬಂದಿವೆ; ಕೆಲವೇ ಗದ್ಯಭಾಗಗಳಿವೆ. ಗದ್ಯಭಾಗಗಳು ಹೆಚ್ಚಾಗಿ ಮೊದಲ ಪ್ರಕಾಶದಲ್ಲಿಯೇ ಬಂದಿವೆ ಹಾಗೂ ಅವುಗಳಲ್ಲಿ ಹೆಚ್ಚು ಪಾಲು 'ರತ್ನಾವಲಿ'ಯಿಂದ ಆಯ್ದವುಗಳಾಗಿವೆ. ಕೇವಲ ರೂಪಕಗಳಿಂದಲೇ ಅಲ್ಲದೆ ಕಾವ್ಯ ಗ್ರಂಥಗಳಿಂದಲೂ ಈತ ಉದಾಹರಣೆಗಳನ್ನು ಎತ್ತಿಕೊಂಡಿದ್ದಾನೆ; ಮುಕ್ತಕಗಳನ್ನೂ ಬಳಸಿಕೊಂಡಿದ್ದಾನೆ. ಸಂಸ್ಕೃತದ ಉದಾಹರಣೆಗಳೇ ಅಲ್ಲದೆ ಪ್ರಾಕೃತದವೂ ಇಲ್ಲಿವೆ. ಜೊತೆಗೆ, ಆಧಾರವಾಕ್ಯಗಳಾಗಿ 'ನಾಟ್ಯಶಾಸ್ತ್ರ'ದಿಂದ ಹಾಗೂ ಇನ್ನು ಕೆಲವು ಶಾಸ್ತ್ರೀಯ ಗ್ರಂಥಗಳಿಂದ ಆಯ್ದ ಉದ್ಧೃತಗಳೂ ಇಲ್ಲಿ ಬಂದಿವೆ.

ಉದ್ಧೃತ ಗದ್ಯಭಾಗಗಳಲ್ಲಿ ಬಹುಪಾಲು ಎಲ್ಲದಕ್ಕೂ ಧನಿಕನೇ ಆಕರ ತಿಳಿಸಿದ್ದಾನೆ. ಪದ್ಯಭಾಗಗಳಲ್ಲಿ ಇನ್ನೂರಕ್ಕಿಂತ ಹೆಚ್ಚು ಪದ್ಯಗಳಿಗೆ ಆತ ಆಕರ ಹೆಸರಿಸಿದ್ದಾನೆ. ಉಳಿದ ಪದ್ಯಭಾಗಗಳಲ್ಲಿ ಕೆಳಗಿನವುಗಳ ಆಕರವನ್ನು ಗುರುತಿಸುವುದು ಸಾಧ್ಯವಾಗಿದೆ: (ಮುಂದೆ ಪದ್ಯಗಳು ಬರುವಲ್ಲಿ ಆಕರ ಸೂಚನೆಯಿದೆ; ಉದ್ಧೃತ ಶ್ಲೋಕಗಳ ಅಕಾರಾದಿಗೆ ಪು. ೩೦೭ ನೋಡಿ.)

| | ಪುಟ |
|---|---|
| ಅಚ್ಛಿನ್ನಂ ನಯನಾಂಬು | ೨೦೨ |
| ಅದ್ವೈತಂ ಸುಖದುಃಖಯೋಃ | ೮೦ |
| ಅಂತ್ರ್ಯಾಃ ಕಲ್ಪಿತಮಂಗಲ | ೨೦೯ |
| ಅಸ್ತಮಿತ ವಿಷಯಸಂಗಾ | ೧೮೭ |
| ಅಸ್ಯಾಃ ಸರ್ಗವಿಧೌ | ೧೭೪ |
| ಆಯಸ್ತಾ ಕಲಹಂ ಪುರೇವ | ೬೪ |
| ಆಯಾತೇ ದಯಿತೇ | ೧೮೫ |
| ಆಹೂತಸ್ಯಾಭಿಷೇಕಾಯ | ೭೪, ೮೫ |
| ಇಂದೀವರೇಣ ನಯನಂ | ೨೫೧ |
| ಉಚಿತಃ ಪ್ರಣಯೋ ವರಂ | ೭೯ |
| ಉದ್ದಾಮೋತ್ಕಲಿಕಾಂ | ೧೦ |
| ಏಕೇನಾಕ್ಷ್ಣಾ ಪ್ರವಿತತರುಷಾ | ೨೦೯ |
| ಏತೇ ವಯಮಮೀ ದಾರಾಃ | ೮೭ |
| ಏವಂ ವಾದಿನಿ ದೇವರ್ಷೌ | ೨೦೧ |
| ಔತ್ಸುಕ್ಯೇನ ಕೃತತ್ವರಾ | ೧೩೮ |
| ಕಪೋಲೇ ಜಾನಕ್ಯಾಃ | ೮೫ |
| ಕಾಂತೇ ತಲ್ಪಮುಪಾಗತೇ | ೬೩ |

| | ಪುಟ |
|---|---|
| ಧಿಗ್ಧಿಕ್ ಶಕ್ರಜಿತಂ | ೧೮೦ |
| ನ ಚ ಮೇಽವಗಚ್ಛತಿ | ೧೦೩ |
| ನ ಜಾನೇ ಸಂಮುಖಾಯಾತೇ | ೬೩ |
| ನ ಯತ್ರ ದುಃಖಂ ನ | ೩೬ |
| ನವಜಲಧರಃ ಸನ್ನದ್ಧೋ | ೨೦೩ |
| ನವನಖಪದಮಂಗಂ | ೧೦೧, ೨೪೯ |
| ನಿಃಶ್ವಾಸಾ ವದನಂ | ೧೦೨ |
| ನಿಜಪಾಣಿಪಲ್ಲವತಟ | ೧೦೦ |
| ನಿದ್ರಾರ್ಧಮೀಲಿತದೃಶೋ | ೧೯೩ |
| ಪಣಅಕುವಿಆಣ ದೋಣ್ಣವಿ | ೨೪೮ |
| ಪತ್ಯುಃ ಶಿರಶ್ಚಂದ್ರಕಲಾಂ | ೧೨೨ |
| ಪಾದಂಗುಷ್ಠೇನ ಭೂಮಿಂ | ೧೧೮ |
| ಪಿತ್ರೋರ್ವಿಧಾತುಂ ಶುಶ್ರೂಷಾಂ | ೭೪ |
| ಪುಣ್ಯಾ ಬ್ರಾಹ್ಮಣಜಾತಿಃ | ೭೭, ೧೨೮ |
| ಪ್ರಧಾನೇನ್ಯತ್ರ ವಾಕ್ಯಾರ್ಥೇ | ೨೨೦ |
| ಪ್ರಾಪ್ತಾ ಶ್ರಿಯಃ ಸಕಲ | ೧೮೦ |
| ಭ್ರೂಭಂಗೇ ಸಹಸೋದ್ಗತಾ | ೧೧೩ |

ಈ ಕೆಳಗಿನವುಗಳ ಆಕರ ತಿಳಿಯದಿದೆ :

ಈ ಮೇಲಿನವುಗಳನ್ನು ಬಿಟ್ಟು ಉಳಿದ ಪದ್ಯಗಳಿಗೆ ಧನಿಕನೇ ಆಕರ ತಿಳಿಸಿದ್ದಾನೆ. ಈಗ ನಮಗೆ ತಿಳಿದಿರುವಂತೆ ಧನಿಕನ ಉದ್ಧೃತಿಯ ಆಕರಗ್ರಂಥಗಳನ್ನು ಇಲ್ಲಿ ಪಟ್ಟಿ ಮಾಡ ಬಹುದು ಅವುಗಳಲ್ಲಿ :

## ಪ್ರಕಟಿತ ರೂಪಕಗಳು

೧. ಅನರ್ಘರಾಘವ : ಇವರ ಒಂದೇ ಶ್ಲೋಕ ೨–೧ರಲ್ಲಿ ಉದ್ಧೃತವಾಗಿದೆ. ಧನಿಕ ಆಕರ ಸೂಚಿಸಿಲ್ಲ. ನಿರ್ಣಯಸಾಗರ ಮುದ್ರಣದಲ್ಲಿ ಈ ಶ್ಲೋಕದ ಆಕರ 'ಮಹಾನಾಟಕ'ವೆಂದು ತಪ್ಪಾಗಿ ಸೂಚಿಸಲಾಗಿದೆ.

೨. ಉತ್ತರರಾಮಚರಿತ.

೩. ಕರ್ಪೂರಮಂಜರೀ : ೩–೧೬ರಲ್ಲಿ ಒಂದು ಶ್ಲೋಕ ಮಾತ್ರ ಉದಾಹೃತವಾಗಿದೆ.

೪. ನಾಗಾನಂದ.

೫. ಪ್ರಿಯದರ್ಶಿಕಾ : ೨–೮೨ ಮತ್ತು ೯೨ರಲ್ಲಿ ಈ ರೂಪಕ ಸೂಚಿತವಾಗಿದೆ ಅಷ್ಟೆ.

೬. ಮಹಾನಾಟಕ ಅಥವಾ ಹನುಮನ್ನಾಟಕ.

೭. ಮಹಾವೀರಚರಿತ.
೮. ಮಾಲತೀಮಾಧವ.
೯. ಮಾಲವಿಕಾಗ್ನಿಮಿತ್ರ
೧೦. ಮುದ್ರಾರಾಕ್ಷಸ : ೩-೨೩ರಲ್ಲಿ ಮಾತ್ರ ಒಂದು ಪದ್ಯ ಉದ್ಧೃತವಾಗಿದ್ದು ೧-೧೫ ಮತ್ತು ೨-೮೬ರಲ್ಲಿ ಗ್ರಂಥ ಸೂಚಿತವಾಗಿದೆ.
೧೧. ಮೃಚ್ಛಕಟಿಕ
೧೨. ರತ್ನಾವಲೀ : ಪ್ರಥಮ ಪ್ರಕಾಶದಲ್ಲಿ ಈ ಗ್ರಂಥದ ಅನೇಕ ಗದ್ಯಭಾಗಗಳು ಉದ್ಧೃತವಾಗಿವೆ. ಒಟ್ಟಿನಲ್ಲಿ ಕೂಡ ಇದರಿಂದ ಎತ್ತಿಕೊಂಡ ಉದ್ಧೃತಿಗಳು ಬಹಳ.
೧೩. ವಿಕ್ರಮೋರ್ವಶೀಯ.
೧೪. ವಿದ್ಧಶಾಲಭಂಜಿಕಾ : ೪-೬೧ರಲ್ಲಿ ಮಾತ್ರ ಇದರಿಂದ ಉದ್ಧೃತಿಯಿದೆ.
೧೫. ವೇಣೀಸಂಹಾರ : ಪ್ರಥಮ ಪ್ರಕಾಶದಲ್ಲಿ ಇದರಿಂದ ಎತ್ತಿದ ಉದ್ಧೃತಿ ವಿಶೇಷ; ಗದ್ಯಭಾಗದ ಉದ್ಧೃತಿಯೂ ಸಾಕಷ್ಟಿದೆ. ಒಟ್ಟಿನಲ್ಲಿ ನೋಡಿದರೂ ಈ ಗ್ರಂಥದಿಂದ ಆಯ್ದ ಭಾಗ ವಿಶೇಷವೇ.
೧೬. ಶಾಕುಂತಲ.

## ಅಪ್ರಕಟಿತ ಹಾಗೂ ಅನುಪಲಬ್ಧ ರೂಪಕಗಳು

೧. ಉದಾತ್ತರಾಘವ : ಮಾಯುರಾಜವಿರಚಿತ ರೂಪಕ; ೨-೯೧, ೩-೩, ೪-೧೫, ೩೫ – ಈ ಖಂಡಗಳಲ್ಲಿ ಇದರಿಂದ ಉದ್ಧೃತಿಯಿದೆ; ೩-೫ರಲ್ಲಿ ರೂಪಕ ಸೂಚಿತವಾಗಿದೆ.
೨. ಛಲಿತರಾಮ : ೧-೮೫; ೩-೧೫, ೨೨ – ಈ ಖಂಡಗಳಲ್ಲಿ ಉದ್ಧೃತಿಯಿದೆ.
೩. ತರಂಗದತ್ತ : ೩-೪೫ರಲ್ಲಿ ಸೂಚಿತವಾಗಿದೆ.
೪. ಪಾಂಡವಾನಂದ : ೩-೧೪ರಲ್ಲಿ ಇದರಿಂದ ಒಂದು ಉದ್ಧೃತಿಯಿದೆ.
೫. ಪುಷ್ಪದೂಷಿತಕ : ೩-೪೫ರಲ್ಲಿ ಸೂಚಿತವಾಗಿದೆ.
೬. ರಾಮಾಭ್ಯುದಯ : ೧-೯೦ರಲ್ಲಿ ಸೂಚಿತವಾಗಿದೆ.
ಮತ್ತು-೩-೬೧ರಲ್ಲಿ ಸೂಚಿತವಾಗಿರುವ 'ಸಮುದ್ರಮಂಥನ' ಕೂಡ ಒಂದು ರೂಪಕವಿರಬಹುದು.

## ಕಾವ್ಯಗ್ರಂಥಗಳು (ಸಂಸ್ಕೃತ ಹಾಗೂ ಪ್ರಾಕೃತ)

೧. ಅಮರುಶತಕ : ಪ್ರಕಾಶ ೨ ಮತ್ತು ೪ರಲ್ಲಿ ಇದರಿಂದ ಅನೇಕ ಉದ್ಧೃತಿಗಳಿವೆ.
೨. ಕಾದಂಬರೀ : ೪-೭೩, ೭೪ – ಈ ಖಂಡಗಳಲ್ಲಿ ಗ್ರಂಥವನ್ನು ಸೂಚಿಸಿದೆ. ೨-೫೪ರಲ್ಲಿ ಭಟ್ಟಬಾಣನ 'ಮಹಾಶ್ವೇತಾವರ್ಣನ'ವನ್ನು ಕುರಿತ ಸೂಚನೆಯಿದೆ.
೩. ಕಿರಾತಾರ್ಜುನೀಯ : ೪-೩೩ರಲ್ಲಿ ಮಾತ್ರ ಒಂದು ಉದಾಹರಣೆ ಬಂದಿದೆ.
೪. ಕುಮಾರಸಂಭವ : ಪ್ರ. ೨ ಮತ್ತು ೪ರಲ್ಲಿ ಮಾತ್ರ ಉದ್ಧೃತಿಗಳಿವೆ.
೫. ನವಸಾಹಸಾಂಕಚರಿತ : ೨-೬೫ರಲ್ಲಿ ಇದರಿಂದ ಪದ್ಯ ಎತ್ತಿಕೊಂಡಿದೆ.
೬. ಭರ್ತೃಹರಿಶತಕಗಳು : ೨-೧ರಲ್ಲಿ 'ನೀತಿಶತಕ'ದಿಂದ, ೪-೧೦ ಮತ್ತು ೧೪ರಲ್ಲಿ ವೈರಾಗ್ಯಶತಕದಿಂದ, ೪-೪೩ರಲ್ಲಿ ಶೃಂಗಾರಶತಕದಿಂದ ಉದಾಹರಣೆ ಆಯ್ದಿದೆ.
೭. ಬೃಹತ್ಕಥಾ : ೧-೧೫ ಮತ್ತು ೪-೪೩ರಲ್ಲಿ ಕೇವಲ ಸೂಚಿತವಾಗಿದೆ.
೮. ಮಹಾಭಾರತ : ೩-೨೮ರಲ್ಲಿ ಸೂಚಿತವಾಗಿದೆ.
೯. ಮೇಘದೂತ : ೪-೭೧ರಲ್ಲಿ ಇದರ ಪದ್ಯವೊಂದು ಬಂದಿದೆ.
೧೦. ರಘುವಂಶ : ೨-೧, ೪-೩೫ರಲ್ಲಿ ಉದ್ಧೃತಿಯಿದೆ; ೪-೭೪ರಲ್ಲಿ ಕಾವ್ಯ ಸೂಚಿತವಾಗಿದೆ.

೧೧. ರಾಮಾಯಣ : ೧–೧೫; ೨–೧೨; ೮೬; ೩–೨೮, ೫೨ – ಈ ಖಂಡಗಳಲ್ಲಿ ಸೂಚಿತವಾಗಿದೆ; ೨–೯೦ರಲ್ಲಿ ರಾಮಾಯಣ ಕಥಾನಕಗಳನ್ನು ಕುರಿತ ಮಾತು ಇದೆ.

೧೨. ಶಿಶುಪಾಲವಧ : ಪ್ರ. ೨ ಮತ್ತು ೪ರಲ್ಲಿ ಮಾತ್ರ ಉದ್ಧೃತಿಗಳಿವೆ.

೧೩. ಶೃಂಗಾರತಿಲಕ : ೪–೬೯ರಲ್ಲಿ, ಆಕರಸೂಚನೆಯಿಲ್ಲದೆ, ಒಂದು ಉದ್ಧೃತಿಯಿದೆ. (ಹಾಲ್ ಅವರು ಈ ಪದ್ಯವನ್ನು ಪ್ರಕ್ಷಿಪ್ತವಿರಬಹುದೆಂದು ಸಂದೇಹಿಸಿದ್ದಾರೆ.)

೧೪. ಹಾಲಸಪ್ತಶತಿ : ಇದರಿಂದ ಆಯ್ದ ಉದಾಹರಣೆಗಳು ಹಲವಿದ್ದು ಒಂದಕ್ಕೆ ಮಾತ್ರ ಆಕರ ಹೆಸರಿಸಿದ್ದಾನೆ.

## ಶಾಸ್ತ್ರೀಯ ಗ್ರಂಥಗಳು

೧. ಕಾಮಸೂತ್ರ : ೩–೪೫ ಮತ್ತು ೪–೬೪ರಲ್ಲಿ ಇದರಿಂದ ಉದ್ಧೃತಿಯಿದೆ.

೨. ಕಾವ್ಯನಿರ್ಣಯ : ಧನಿಕನವೇ ಆದ ಈ ಗ್ರಂಥದ ಶ್ಲೋಕಗಳು ೪–೪೬ರಲ್ಲಿ ಬಂದಿವೆ.

೩. ಕಾವ್ಯಾಲಂಕಾರ (ಭಾಮಹನದು) : ೧–೬ರ ವ್ಯಾಖ್ಯೆಯಲ್ಲಿ ಆಕರ ಹೇಳದೆ ಉದ್ಧೃತಿ ಎತ್ತಿಕೊಂಡಿದೆ.

೪. ಕಾವ್ಯಾಲಂಕಾರ (ರುದ್ರಟ) : ೪–೪೪ರಲ್ಲಿ ಉದ್ಧೃತಿಯಿದೆ; ಅಲ್ಲಿ ಆಕರ ತಿಳಿಸಿಲ್ಲ.

೫. ಧ್ವನ್ಯಾಲೋಕ : ೪–೪೫ರಲ್ಲಿ ಈ ಗ್ರಂಥದ ಎರಡು ಕಾರಿಕೆಗಳನ್ನು ಖಂಡನೆಗಾಗಿ ಆಯ್ದುಕೊಂಡಿದೆ; ಆಕರ ಹೆಸರಿಸಿಲ್ಲ.

೬. ನಾಟ್ಯಶಾಸ್ತ್ರ : ಈ ಗ್ರಂಥದ ಅನೇಕ ಉದ್ಧೃತಿಗಳು ಆಧಾರಕ್ಕಾಗಿ ಬಂದಿವೆ. ಆಕರ ಹೇಳುವಾಗ ಭರತನದು, ಮುನಿಯದು, ಭರತಮುನಿಯದು, ಷಟ್‌ಸಹಸ್ರಕೃತ್‌ನಮು – ಎಂದು ಹಲವಾರು ಹೆಸರು ಬಳಸಿಕೊಂಡಿದೆ. ಉದ್ಧೃತಿಗಳಿರುವ ಸ್ಥಳ : ೨–೧೧, ೩–೪೬, ೫೯, ೪–೨, ೪, ೫, ೬, ೫೦, ೫೨, ೮೯.

೭. ವಾಕ್ಯಪದೀಯ ಕಾರಿಕಾ : ೪–೨ರಲ್ಲಿ ಒಂದು ಉದ್ಧೃತಿಯಿದೆ. ಅಲ್ಲಿ ಗ್ರಂಥದ ಹೆಸರು ಹೇಳದೆ 'ಭರ್ತೃಹರಿಯದು' ಎಂದಿದೆ.

ಇವೇ ಅಲ್ಲದೆ ಕೆಲವು ಉದ್ಧೃತಿಗಳಿಗೆ ಅವುಗಳ ಕರ್ತರ ಹೆಸರಷ್ಟೇ ದೊರೆಯುತ್ತದೆ. ಅವು:

೧. ಕಮಲಾಯುಧ: ಈತನ ಶ್ಲೋಕವೊಂದು ಆಕರಸೂಚನೆಯಿಲ್ಲದೆ ೪–೨೭ರಲ್ಲಿ ಉದ್ಧೃತವಾಗಿದೆ.

೨. ಗೋವರ್ಧನ: ಈತನದೂ ಆಕರಸೂಚನೆಯಿಲ್ಲದೆ ೪–೧೯ರಲ್ಲಿ ಬಂದಿದೆ.

೩. ಚಂದ್ರಕ: ೪–೪೩ರಲ್ಲಿ ಈತನದೆಂದು ಹೇಳಲಾದ ಪದ್ಯ ಒಂದಿದೆ; ಅಲ್ಲಿ ಆಕರ ಹೇಳಿಲ್ಲ.

೪. ಧನಿಕ: ವ್ಯಾಖ್ಯಾಕಾರನಾದ ಈತ ತನ್ನದೇ ೨೪ ಪದ್ಯಗಳನ್ನು ಉದಾಹರಣೆಗೆ ತೆಗೆದುಕೊಂಡಿದ್ದಾನೆ.

೫. ಬಿಲ್ಹಣ ೪–೨೮ರಲ್ಲಿನ, ಆಕರಸೂಚನೆಯಿಲ್ಲದ ಒಂದು ಶ್ಲೋಕ ಈತನದು.

೬. ಮಹೇಂದ್ರ: ೪–೨೧ರಲ್ಲಿ ಈತನ ಪದ್ಯ ಬಂದಿದೆ, ಆಕರಸೂಚನೆ ಇಲ್ಲದೆ.

೭. ರುದ್ರ: ೪–೬೭ರಲ್ಲಿ ಈತನ ಪದ್ಯ ಉದ್ಧೃತವಾಗಿದೆ.

೮. ವಾಕ್ಪತಿರಾಜದೇವ ಅಥವಾ ಮುಂಜ: ೪–೬೬ ಮತ್ತು ೬೭ರಲ್ಲಿ ಧನಂಜಯನಿಗೆ ಆಶ್ರಯವಿತ್ತಿದ್ದ ಈ ರಾಜಕವಿಯ ಒಂದು ಪದ್ಯ ಉದಾಹೃತವಾಗಿದೆ.

೯. ವಿಕಟನಿತಂಬಾ: ಈ ಕವಯಿತ್ರಿಯ ಪದ್ಯವೊಂದು ೪–೪೨ರಲ್ಲಿ ಬಂದಿದೆ.

೧೦. ವಿಜ್ಜುಕಾ: ಈ ಕವಯಿತ್ರಿಯ ಪದ್ಯ ೪–೩೨ರಲ್ಲಿ, ಆಕರಸೂಚನೆಯಿಲ್ಲದೆ ಬಂದಿದೆ.

ಇನ್ನು ಧನಿಕ ೨-೪೯ರಲ್ಲಿ 'ಉದಯನಚರಿತ್ರೆ'ಯೆಂದು ಹೇಳಿರುವುದು ಯಾವುದನ್ನು ುರಿತೋ ತಿಳಿಯದು.

ಧನಿಕ ಉದ್ಧರಿಸಿರುವ ಅನೇಕ ಪದ್ಯಾದಿಗಳಲ್ಲಿ ಈಗ ಮುದ್ರಿತವಾಗಿ ದೊರೆಯುವ ಾಠಕ್ಕೂ ಆತನದಕ್ಕೂ ಕೆಲವು ವ್ಯತ್ಯಾಸಗಳಿವೆ. ಕೆಲವು ಪದ್ಯಗಳು ಸಾಲು ಅದಲು ುದಲಾಗಿ ಕೂಡ ಉದ್ಧೃತವಾಗಿವೆ. (ನೋಡಿ: ೩-೧೮ರಲ್ಲಿನ 'ಕರ್ತಾದ್ಯೂತಚ್ಛಲನಾಂ.....', -೧೦ರಲ್ಲಿನ 'ಧಿಗ್ಧಿಗ್ ಶಕ್ರಜಿತಂ....' ೪-೬೧ರಲ್ಲಿನ 'ಸುಧಾಬದ್ಧಗ್ರಾಸೈಃ....' ಇ.,). ಕೆಲವೆಡೆ ಧನಿಕ ಉದ್ಧೃತಿಗಳ ಬುಡತುದಿಗಳನ್ನು ಮಾತ್ರ ಸೂಚಿಸಿದ್ದಾನೆ. (೧-೪೮ ಇ., ನೋಡಿ.) ಕೆಲವಾರು ಪದ್ಯಗಳು ಬೇರೆಬೇರೆ ಸಂದರ್ಭಗಳಲ್ಲಿ ಉದಾಹರಣೆಯಾಗಿ ಎರಡು ಬಾರಿ ಮೂರು ಬಾರಿ ಮರುಕಳಿಸಿವೆ.

ಧನಿಕ ತಾನು ಬಳಸಿಕೊಂಡ ಗ್ರಂಥಗಳಲ್ಲಿ 'ರತ್ನಾವಲಿ'ಯಿಂದಲೇ ಬಹು ಹೆಚ್ಚಿನ ಉದ್ಧೃತಿ ಕೊಂಡಿದ್ದಾನೆ. ಎರಡನೆಯ ಸ್ಥಾನ 'ವೇಣೀಸಂಹಾರ'ಕ್ಕೆ ದೊರೆಯುತ್ತದೆ. ಮತ್ತು ಗಮನಾರ್ಹ ಅಂಶವೆಂದರೆ ಮೊದಲನೆಯ ಪ್ರಕಾಶದ ಉದಾಹರಣೆಗಳೆಲ್ಲ ಈ ಎರಡು ರೂಪಕಗಳಿಂದಲೇ ಆಯ್ದುವಾಗಿವೆ. ವಸ್ತುಸಂವಿಧಾನ ಕುರಿತ ನಾಟ್ಯನಿಯಮಗಳೆಲ್ಲವನ್ನೂ ಈ ಎರಡು ರೂಪಕಗಳು ಗೆರೆ ತಪ್ಪದೆ ಅನುಸರಿಸಿರುವುದೇ ಇದಕ್ಕೆ ಕಾರಣ. ಇನ್ನು ಮೂರನೆಯ ಸ್ಥಾನ ಸ್ವತಃ ಧನಿಕನಿಗೇ ದೊರೆಯುತ್ತದೆ; ನಾಲ್ಕನೆಯದು 'ಮಹಾವೀರ ಚರಿತೆ'ಗೆ.

**'ದಶರೂಪಕ'ದ ಕೆಲವು ಗಮನಾರ್ಹ ಅಂಶಗಳು:** ಕೊನೆಯದಾಗಿ ಧನಂಜಯ ಧನಿಕರಿಬ್ಬರನ್ನೂ ಒಟ್ಟಿಗೆ ಗಮನದಲ್ಲಿಟ್ಟುಕೊಂಡು ಸಮಗ್ರ ಗ್ರಂಥದ ಕೆಲವು ಗಮನಾರ್ಹ ವಿಚಾರಗಳನ್ನು ಪರಿಶೀಲಿಸಿ ಮುಗಿಸಬಹುದು.

'ರಸಪ್ರಕರಣ'ದಲ್ಲಿನ ಕೆಲವು ಭಾಗ ಬಿಟ್ಟರೆ 'ದಶರೂಪಕ'ದ ಉಳಿದ ಭಾಗ 'ನಾಟ್ಯಶಾಸ್ತ್ರ'ಕ್ಕೆ ಒಂದು ಅಚ್ಚುಕಟ್ಟಾದ ಕೈಪಿಡಿಯೆನ್ನುವಂತಿದೆ. ಆದರೆ ಸ್ಥಾಯಿಪ್ರತೀತಿ ರಸನಿಷ್ಪತ್ತಿಯೇ ಮುಂತಾದ ಕೆಲವು ವಿಷಯಗಳಲ್ಲಿ ಧನಂಜಯಧನಿಕರು ನೂತನ ಅಂಶಗಳನ್ನು ಸೂಚಿಸಿದ್ದಾರೆ, ತಮ್ಮದೇ ಆದ ಸಿದ್ಧಾಂತವನ್ನು ಮಂಡಿಸಿದ್ದಾರೆ.

ಅವುಗಳಲ್ಲಿ ಮೊದಲನೆಯದಾಗಿ, ಸ್ಥಾಯಿಪ್ರತೀತಿ: ಯಾವ ಭಾವ ತನಗೆ ವಿರುದ್ಧವಾದ ಅಥವಾ ಅವಿರುದ್ಧವಾದ ಇತರ ಭಾವಗಳಿಂದ ವಿಚ್ಛೇದಗೊಳ್ಳದೆ ಏಕ ಪ್ರಕಾರ ವಿಜೃಂಭಿಸುವುದೊ ಮತ್ತು ಇತರ ವಿರುದ್ಧಾವಿರುದ್ಧ ಭಾವಗಳನ್ನು ತನ್ನತನಕ್ಕೆ ಸೆಳೆದುಕೊಂಡು ಒಳಗುಮಾಡಿಕೊಳ್ಳುತ್ತದೊ ಆ ಭಾವವೇ 'ಸ್ಥಾಯಿಭಾವ' ಎಂಬುದು ಧನಂಜಯನ ಸ್ಥಾಯಿಲಕ್ಷಣ. ಧನಿಕ ಈ ಲಕ್ಷಣವನ್ನು ದೀರ್ಘಚರ್ಚೆಯಿಂದ ಸಮರ್ಥಿಸಿದ್ದಾನೆ.(೪-೪೩ ನೋಡಿ.) 'ಧರ್ಮಾರ್ಥಕಾಮಾದಿಫಲಾವಸಾನ ಉಳ್ಳ ಭಾವವೇ ಸ್ಥಾಯಿ' ಎಂಬುದು ಸ್ಥಾಯಿಲಕ್ಷಣವಾಗಬಹುದಲ್ಲವೆ ಎಂಬ ಪ್ರಶ್ನೆಯನ್ನೆತ್ತಿಕೊಂಡು ಅದನ್ನು ಸಕಾರಣ ಖಂಡಿಸಿದ್ದಾನೆ. (೩-೪೫ರ ವ್ಯಾಖ್ಯೆ; ಪೂರ್ವಾರ್ಧ.)

ಅಂಥ ಸ್ಥಾಯಿ ಕಾವ್ಯದಲ್ಲಿ ಹೇಗೆ ಪ್ರತೀತವಾಗುತ್ತದೆ? ಕಾವ್ಯದಲ್ಲಿ ಹಲವು ಸಲ ಸ್ಥಾಯಿ ವಾಚ್ಯವಾಗಿರಬಹುದು. ಆದರೆ ಸ್ಥಾಯಿ ವಾಚ್ಯವಾಗಿಲ್ಲದ ಕಾವ್ಯದಲ್ಲಿ ಅದರ ಪ್ರತೀತಿ ಹೇಗೆ? ಇದನ್ನು ಕುರಿತು ಧನಂಜಯನ ಕಾರಿಕೆ (೪–೪೭) ಹೇಳುವುದಿಷ್ಟು: ವಾಕ್ಯದ ಅರ್ಥ ಸಿದ್ಧಿಸುವುದು ಕಾರಕಸಮೇತವಾದ ಕ್ರಿಯಾಪದದಿಂದ. ವಾಕ್ಯದಲ್ಲಿ ಹಲವೊಮ್ಮೆ ಕ್ರಿಯಾಪದ ವಾಚ್ಯವಾಗಿರುತ್ತದೆ. 'ಹಸುವನ್ನು ಕೊಂಡು ಬಾ' ಎಂಬಲ್ಲಿನಂತೆ. ಹಲವೊಮ್ಮೆ ಕ್ರಿಯಾಪದ ಅಧ್ಯಾಹೃತವಾಗಿ ಅನುಕ್ತವಾಗಿರುತ್ತದೆ, 'ಬಾಗಿಲು, ಬಾಗಿಲು!' ಎಂಬಲ್ಲಿನಂತೆ. ಅಂಥಲ್ಲಿ ಸಂದರ್ಭವಶದಿಂದಲೇ ಕ್ರಿಯಾಪದ ಪ್ರತೀತವಾಗುತ್ತದೆ. ಹೇಗಿದ್ದರೂ, ಕ್ರಿಯಾಪದ ಉಕ್ತವಾಗಿರಲಿ ಅಧ್ಯಾಹೃತವಾಗಿರಲಿ, ಕ್ರಿಯಾಪದವೇ ವಾಕ್ಯದ ಅರ್ಥವನ್ನು ಸಿದ್ಧಿಸಿಕೊಡುತ್ತದೆ; ಕ್ರಿಯಾಪದವೇ ವಾಕ್ಯದ ತಾತ್ಪರ್ಯವಾಗಿರುತ್ತದೆ. ಕಾರಕಸಮೇತವಾದ ಕ್ರಿಯೆಯೇ–ಅದು ವಾಚ್ಯವಾಗಿರಲಿ ಬುದ್ಧಿಸ್ಥವಾಗಿರಲಿ–ವಾಕ್ಯದ ಅರ್ಥ ಹೇಗೋ ಹಾಗೆ, ಅನುಭಾವವಿಭಾವಾದಿಗಳಿಂದ ಕೂಡಿದ ಸ್ಥಾಯಿಯೇ–ಅದು ವಾಚ್ಯವಾಗಿರಲಿ ಇಲ್ಲದೆ ಇರಲಿ–ಕಾವ್ಯದ 'ಅರ್ಥ'ವಾಗಿರುತ್ತದೆ. ಅಂತೆಯೇ ಕಾವ್ಯದ ತಾತ್ಪರ್ಯಶಕ್ತಿಯಿಂದಲೇ ಸ್ಥಾಯಿ ಪ್ರತೀತವಾಗಬಲ್ಲುದು.

ಈ ಕಾರಿಕೆಗೆ ಮೊದಲೇ (೪–೪೫ರಲ್ಲಿ) ಧನಿಕ ಸ್ಥಾಯಿಪ್ರತೀತಿಯ ಸಮಸ್ಯೆಯನ್ನೆತ್ತಿ ಕೊಂಡಿದ್ದಾನೆ. ಧ್ವನಿವಾದಿಗಳು ಶಬ್ದಕ್ಕಿರುವ ಅಭಿಧಾಲಕ್ಷಣಗಳನ್ನು ಪರೀಕ್ಷಿಸಿ ಅವು ಕಾವ್ಯದಲ್ಲಿ ಸ್ಥಾಯಿಯನ್ನು ಪ್ರತೀತಗೊಳಿಸಲು ಸಮರ್ಥವಾಗಿಲ್ಲ ಎಂದು ಮತ್ತು ತಾತ್ಪರ್ಯಶಕ್ತಿಯಿಂದ ಕೂಡ ಸ್ಥಾಯಿಪ್ರತೀತಿಯುಂಟಾಗಲಾರದು ಎಂದು ಹೇಳುತ್ತಾರೆ; ಅದಕ್ಕಾಗಿ ಅವರು 'ವ್ಯಂಜಾನಾವೃತ್ತಿ' ಎಂಬ ಹೊಸ ವೃತ್ತಿ (ಶಬ್ದಶಕ್ತಿ)ಯೊಂದನ್ನು ಹುಡುಕಿ ಕೊಂಡಿದ್ದಾರೆ. ಈ ವ್ಯಂಜನಾವೃತ್ತಿಯ ಮೂಲಕವೇ ಕಾವ್ಯದಲ್ಲಿನ ಸ್ಥಾಯಿ ವ್ಯಂಜಿತ ವಾಗುತ್ತದೆ ಎಂಬುದು ಅವರ ಸಿದ್ಧಾಂತ. ಧನಿಕ ಧ್ವನಿವಾದಿಗಳ ಈ ಸಿದ್ಧಾಂತವನ್ನು ವಿವರ ವಾಗಿ ಮಂಡಿಸಿ ಅದನ್ನೆ ತನ್ನ ಮುಂದಿನ ವಾದಕ್ಕೆ ಪೂರ್ವಪಕ್ಷವನ್ನಾಗಿ ಮಾಡಿಕೊಂಡಿದ್ದಾನೆ. ಅವನ ಉತ್ತರಪಕ್ಷ ೪–೪೭ರ ವ್ಯಾಖ್ಯೆಯಲ್ಲಿದೆ:

ಲೌಕಿಕವಿರಲಿ ವೈದಿಕವಿರಲಿ ಎಲ್ಲ ವಾಕ್ಯವೂ ಕಾರ್ಯಪರ್ಯಾವಸಾಯಿ. ಎಂದರೆ, ಎಲ್ಲ ಸಂಬದ್ಧವಾಕ್ಯಗಳೂ ಯಾವುದಾದರೊಂದು ನಿಶ್ಚಿತ ಪ್ರಯೋಜನವನ್ನು ಪಡೆದೇ ನಿಲ್ಲುತ್ತವೆ. ಯಾವುದೊಂದು ವಾಕ್ಯ, ತನ್ನ ಪದಗಳ ಅಭಿಧಾಶಕ್ತಿಯಿಂದ ರೂಪುಗೊಂಡು, ಕೊನೆಯ ಲ್ಲೊಂದು ಅರ್ಥವನ್ನು ಕೊಟ್ಟು ವಿಶ್ರಮಿಸುತ್ತದೆಯೆಂದರೆ, ಅಂಥ ವಿಶ್ರಾಂತಿಯವರೆಗಿನ ಅರ್ಥಪ್ರತೀತಿಯ ಶಕ್ತಿಯನ್ನೆ ನಾವು 'ತಾತ್ಪರ್ಯಶಕ್ತಿ' ಎನ್ನಬಹುದು. ವಾಕ್ಯದ ಉದ್ದಿಷ್ಟ ಅರ್ಥ ಸಿದ್ಧಿಯಾಗದೆ 'ತಾತ್ಪರ್ಯಶಕ್ತಿ' ನಿಲ್ಲುವುದು ಅಸಾಧ್ಯ. ಅಂತೆಯೇ ಕಾವ್ಯವಾಕ್ಯ, ಕಾವ್ಯ : ಅಂತೆಯೇ ಆ ರಸ ಸಿದ್ಧಿಸುವ ತನಕ ಕಾವ್ಯವಾಕ್ಯದ ತಾತ್ಪರ್ಯಶಕ್ತಿ ಮುಂದು ವರಿಯಲೇ ಬೇಕು. ಪ್ರಯೋಜನರೂಪವಾಗಿದ್ದು ಉದ್ದಿಷ್ಟವಾದ ರಸವೇ ಕಾವ್ಯವಾಕ್ಯದ ತಾತ್ಪರ್ಯಶಕ್ತಿಯನ್ನು ತನ್ನವರೆಗೆ ಆಕರ್ಷಿಸಿಕೊಳ್ಳುತ್ತದೆ. ಆದಕಾರಣ ತಾತ್ಪರ್ಯ ಶಕ್ತಿಯಿಂದಲೇ ಸ್ಥಾಯಿಪ್ರತೀತಿಯುಂಟಾಗುತ್ತದೆ ಎಂಬುದು ಸಾಧು. ಹಿಂದಿನವರು ಕಲ್ಪಿಸಿರುವ ತಾತ್ಪರ್ಯಶಕ್ತಿಯಿಂದಲೇ ಕೆಲಸವಾಗುವಾಗ ಅಗತ್ಯವಿಲ್ಲದೆ ವ್ಯಂಜನಾದಿ

ಶಕ್ತಿಗಳನ್ನು ಹೊಸಹೊಸದಾಗಿ ಕಲ್ಪಿಸುತ್ತ ಹೋಗುವುದು ಅಸಾರ್ಥಕ, ಕೇವಲ ಪ್ರಯಾಸ. ಈ ವಾದವನ್ನು ಮುಗಿಸುತ್ತ ಧನಿಕ ತನ್ನ 'ಕಾವ್ಯನಿರ್ಣಯ' ಎಂಬ ಗ್ರಂಥದಿಂದ ಏಳು ಕಾರಿಕೆಗಳನ್ನು ಸಮರ್ಥನೆಯಾಗಿ ಉದ್ಧರಿಸಿಕೊಟ್ಟಿದ್ದಾನೆ.

ಕಾವ್ಯದಲ್ಲಿ ರಸನಿಷ್ಪತ್ತಿ ಹೇಗೆ ಎಂಬುದಕ್ಕೆ ಧನಂಜಯನ ಕಾರಿಕೆಗಳು (೪-೪೭ರಿಂದ ೫೦) ಹೀಗೆ ಉತ್ತರಿಸುತ್ತವೆ: ರಸವಾಗುವುದು ರಸಿಕನ ಸ್ಥಾಯಿ, ಅನುಕಾರ್ಯರಾದ ರಾಮಾದಿಗಳ ಸ್ಥಾಯಿಯಲ್ಲ. ಏಕೆಂದರೆ-ಲೋಕದಲ್ಲಿ ಯಾವನೊಬ್ಬ ತನ್ನ ಪ್ರಿಯೆಯೊಡ ಗೂಡಿರುವುದನ್ನು ನೋಡಿದಾಗ ನಮಗೆ ಉಂಟಾಗುವುದು ನಾಚಿಕೆ ಇಲ್ಲ ಅಸೂಯೆ ಇಲ್ಲ ರಾಗದ್ವೇಷಾದಿ ಭಾವಗಳು. ಅದರಂತೆ ಅನುಕಾರ್ಯರಾದ ರಾಮಾದಿಗಳ ಸ್ಥಾಯಿಯನ್ನೆ ನಾವು ನೆಮ್ಮಿದರೆ ಆಗ ನಮಗೆ, ಲೋಕದ ಉದಾಹರಣೆಯಂತೆಯೇ, ನಾಚಿಕೆ ಮೊದ ಲಾದವು ಹುಟ್ಟಬೇಕು; ಶೃಂಗಾರಾದಿ ರಸಾನುಭೂತಿ ಉಂಟಾಗಲಾರದು. ಯಾವುದೋ ಕಾಲದಲ್ಲಿ ಇದ್ದ ರಾಮಾದಿಗಳ ಸ್ಥಾಯಿ ಈಗ ರಸವಾಗುವುದಾದರೂ ಹೇಗೆ? ಆದ್ದರಿಂದ ಈಗ ವರ್ತಮಾನದಲ್ಲಿ ಇರುವ ರಸಿಕರ ಸ್ಥಾಯಿಯೇ ರಸವಾಗುತ್ತದೆ-ಎಂಬ ಮಾತು ಸಿದ್ಧ. ರಾಮಾದಿ ಅನುಕಾರ್ಯರು ಧೀರೋದಾತ್ತಾದಿ ಅವಸ್ಥೆಗಳನ್ನು ಪ್ರತಿಪಾದಿಸುವ ಪ್ರತೀಕ ಗಳು ಅಷ್ಟೆ. ಅದರಿಂದ ರಸಿಕನ ರತ್ಯಾದಿಗಳೇ 'ವಿಭಾವಿತ'ವಾಗುತ್ತವೆ; ರಸಿಕನಿಗೆ ಸವಿ ಕೊಡುತ್ತವೆ. ಮತ್ತು ಈ ರಾಮಾದಿಗಳು ತಮ್ಮ ವಿಶೇಷಗಳನ್ನು ಬಿಟ್ಟುಕೊಟ್ಟು, ಧೀರೋ ದಾತ್ತಾದಿ ಅವಸ್ಥೆಗಳ ಪ್ರತಿಪಾದಕರು ಮಾತ್ರವೆಂಬಂತೆ 'ಸಾಧಾರಣೀಕರಣ' ಹೊಂದಿ ರಸಕ್ಕೆ ಕಾರಣರಾಗುತ್ತಾರೆ. ಮಕ್ಕಳು ಮಣ್ಣಿನ ಆನೆಯನ್ನಿಟ್ಟುಕೊಂಡು ಆಡುತ್ತ ಸಂತೋಷ ಪಡುವಂತೆ, ರಸಿಕರು ರಾಮಾದಿ ಪಾತ್ರಗಳನ್ನು ನೆಪವಾಗಿಟ್ಟುಕೊಂಡು ತಮ್ಮಲ್ಲಿನ ಉತ್ಸಾಹಾದಿ ಭಾವಗಳನ್ನೆ ಎಚ್ಚರಿಸಿಕೊಂಡು-ಆ ಉತ್ಸಾಹಾದಿಗಳೇ ರಸರೂಪ ಹೊಂದಲು-ಆನಂದ ಪಡೆಯುತ್ತಾರೆ. ಧನಿಕ ಈ ಮಾತುಗಳನ್ನು ಸಮರ್ಥಿಸಿದ್ದಾನೆ: ರೂಪಕಾದಿಗಳಲ್ಲಿ ರಾಮಾದಿಗಳ ಸ್ಥಾಯಿಯು ವಾಸ್ತವವಾಗಿ ಇರುವುದಿಲ್ಲ, ಆದರೆ ಕವಿ ಮುಂತಾದವರ ಕೌಶಲದಿಂದ ಅದು ಇರುವಂತೆಯೇ ತೋರುತ್ತದೆ, ಅವಭಾಸವಾಗುತ್ತದೆ. ರಸಿಕರೂ ಆ 'ಅವಭಾಸ'ವನ್ನು 'ವಾಸ್ತವ'ವೆಂದು ಭ್ರಾಂತಿಗೊಳ್ಳದೆ 'ಅವಭಾಸ'ವೆಂದೇ ಗ್ರಹಿಸಿ ಅದನ್ನು ತಮ್ಮ ಸ್ಥಾಯಿಯ ಉದ್ಬೋಧನಕ್ಕೆ 'ವಿಭಾವ'ವಾಗಿಸಿಕೊಳ್ಳುತ್ತಾರೆ. (೪-೪೭ರ ವ್ಯಾಖ್ಯೆ) ಇನ್ನು ಕವಿಗಳಾದರೋ ಧ್ಯಾನಚಕ್ಷುವಿನಿಂದ ರಾಮಾದಿಗಳ ಇತಿಹಾಸವನ್ನು ಕಂಡು ಇದ್ದುದಿದ್ದಂತೆ ಚಿತ್ರಿಸುವುದಿಲ್ಲ. ಅವರು ಧೀರೋದಾತ್ತಾದಿ ಅವಸ್ಥೆ ಗಳಿಗೆ ಆಶ್ರಯಮಾತ್ರವಾಗಿ ರಾಮಾದಿಗಳನ್ನು ಚಿತ್ರಿಸುತ್ತಾರೆ. (೪-೪೮ರ ವ್ಯಾಖ್ಯೆ.) ಕಾವ್ಯ ದಲ್ಲಿನ ಸೀತಾದೇವಿ, ಜನಕತನಯಾದಿ ವೈಯಕ್ತಿಕ ವಿಶೇಷಗಳನ್ನು ಬಿಟ್ಟುಕೊಟ್ಟ ಹಾಗೂ ಕೇವಲ ಸ್ತ್ರೀಮಾತ್ರವಾದ 'ಸಾಧಾರಣೀಕೃತ' ವ್ಯಕ್ತಿ. 'ಸಾಧಾರಣೀಕೃತ'ಗೊಳಿಸುವುದಾದ ಮೇಲೆ ಕವಿ ಸೀತಾದಿಗಳ ಪಾತ್ರವನ್ನು ಏಕೆ ಚಿತ್ರಿಸಬೇಕು, ಕೇವಲ ಸ್ತ್ರೀಪುರುಷರೆಂದು ಪಾತ್ರಗಳನ್ನು ಚಿತ್ರಿಸಿದರಾಗದೆ-ಎಂದರೆ ಅದಕ್ಕೆ ಉತ್ತರ: ರಸಿಕರ ಭಾವೋದ್ಬೋಧನದ ಸಲುವಾಗಿ ವಿಶಿಷ್ಟವೆಂದು ಅವಭಾಸವಾಗುವ ಇಂಥ ಚಿತ್ರ ಬೇಕು. ಮಕ್ಕಳು ಆಟಕ್ಕೆ ಬಳಸುವ ಆನೆ ಲೋಕದ ಆನೆಯಲ್ಲ. ಅದು ಕೇವಲ ನೆಪ. ನೆಪವೆಂದ ಮಾತ್ರಕ್ಕೆ ಆ ನೆಪ ಇಲ್ಲದೆ ಉದ್ದಿಷ್ಟ ಕಾರ್ಯ ಆಗದು. ಲೌಕಿಕ ಶೃಂಗಾರದಲ್ಲಿ ಸ್ತ್ರೀ ಮೊದಲಾದ

ವಿಭಾವಗಳಿಂದ ಯಾವ ಉಪಯೋಗ ದೊರೆಯುವುದೊ ಅಂಥ ಉಪಯೋಗ ಕಾವ್ಯಾದಿಗಳಲ್ಲಿನ ಶೃಂಗಾರ ಮುಂತಾದುವುಗಳಿಂದ ದೊರೆಯದು. ಈ ಶೃಂಗಾರಾದಿಗಳೇ ಇಲ್ಲಿ ಉದ್ದೇಶವಲ್ಲದೆ, ಇವುಗಳಿಗೆ ಅಥವಾ ಇವುಗಳ ಸಾಮಗ್ರಿಗಳಿಗೆ ಬೇರೆ ಉದ್ದೇಶವಿಲ್ಲ. ಅಂತೆಯೇ ಕಾವ್ಯರಸಗಳಿಗೂ ಲೋಕರಸಗಳಿಗೂ ಭೇದ ಕಲ್ಪಿಸಲಾಗುತ್ತದೆ. (೪–೪೯, ೫೦ರ ವ್ಯಾಖ್ಯೆ.)

ರಸಿಕನ ರತ್ಯಾದಿಗಳೇ 'ವಿಭಾವಿತ'ವಾಗಿ ರಸವಾಗುತ್ತವೆ ಎಂಬ ಧನಂಜಯನ ಮಾತಿದೆಯಷ್ಟೆ. 'ವಿಭಾವಿತ'ವಾಗುತ್ತದೆ ಎಂಬ ಧನಂಜಯನ ಮಾತು ಈ ಗ್ರಂಥಕಾರರ ರಸನಿಷ್ಪತ್ತಿ ಸಿದ್ಧಾಂತಕ್ಕೆ ಬೀಗದ ಕೈಯಂತಿದೆ. ಈ ವಿಷಯ ಧನಿಕನ ವ್ಯಾಖ್ಯೆ (೪–೪೭ರದ್ದು)ಯಿಂದ ಸ್ಪಷ್ಟವಾಗುತ್ತದೆ. ಕಾವ್ಯದಿಂದ ರಸ 'ಭಾವಿತ'ವಾಗುತ್ತದೆ. ರಸಕ್ಕೂ ಕಾವ್ಯಕ್ಕೂ ಇರುವ ಸಂಬಂಧ–ಇವರ ಪ್ರಕಾರ–'ಭಾವ್ಯಭಾವಕ' ಸಂಬಂಧ; ಕಾವ್ಯ ಭಾವಕ, ರಸವೇ ಭಾವ್ಯ. ಮೀಮಾಂಸಕರಲ್ಲಿ 'ಭಾವನಾಕ್ರಿಯೆ'ಗೆ ವಿಶೇಷ ಪ್ರಾಶಸ್ತ್ಯ ಉಂಟು; ಅಂತೆಯೇ ಅದು ಶಾಸ್ತ್ರಸಮ್ಮತವಾಗಿದೆ. ಈ ಭಾವನಾ ಕ್ರಿಯೆಯೇ ಕಾವ್ಯದಲ್ಲೂ ರಸನಿಷ್ಪತ್ತಿಗೆ ಕಾರಣವಾಗುತ್ತದೆ ಎನ್ನುವುದು ಗ್ರಂಥಕಾರರ ಮತ. (ಈ ಕುರಿತು ನೋಡಿ: ಅನುಬಂಧ ೨–ರಸನಿಷ್ಪತ್ತಿಯನ್ನು ಕುರಿತ ವಿವಿಧ ಸಿದ್ಧಾಂತಗಳು–ಪು. ೨೭೭.)

'ನಾಟ್ಯಶಾಸ್ತ್ರ'ದಲ್ಲಿ ಭರತಮುನಿ ಶೃಂಗಾರರೌದ್ರವೀರಬೀಭತ್ಸಗಳು ಪ್ರಕೃತಿರಸಗಳೆಂದೂ ಅವುಗಳೊಂದೊಂದರಿಂದಲೂ ಕ್ರಮವಾಗಿ ಹಾಸ್ಯ ಕರುಣ ಅದ್ಭುತ ಭಯಾನಕಗಳು ಹುಟ್ಟುವುವೆಂದೂ ಹೇಳಿದ್ದಾನೆ. ಇವುಗಳಲ್ಲಿ ಉಳಿದುವನ್ನು ಸುಮಸುಮಾರು ಹೊಂದಿಸಬಹುದಾದರೂ ಶೃಂಗಾರದಿಂದ ಹಾಸ್ಯ ಹುಟ್ಟುತ್ತದೆಂಬ ಮಾತನ್ನು ಒಪ್ಪಿಕೊಳ್ಳುವುದು ಅಸಾಧ್ಯ. ಈ ಮಾತನ್ನು ಅಭಿನವಗುಪ್ತನೇ ಒಪ್ಪಿಕೊಂಡಿದ್ದಾನೆ. ಆದರೆ 'ದಶರೂಪಕ'ಕಾರರು ಈ ಹೇಳಿಕೆಗೆ ನೂತನವಾದ ಅರ್ಥವೊಂದನ್ನು ಹುಡುಕಿಕೊಟ್ಟಿದ್ದಾರೆ. ಧನಂಜಯ ಧನಿಕರು ರಸಾಸ್ವಾದನ ಕಾಲದ ಸಾಮಾಜಿಕನ ಚಿತ್ತಭೂಮಿಕೆಯಲ್ಲಿ ನಾಲ್ಕು ಬಗೆಗಳನ್ನು ಗುರುತಿಸಿದ್ದಾರೆ. ವಿಕಾಸ, ವಿಸ್ತಾರ, ಕ್ಷೋಭ, ವಿಕ್ಷೇಪ–ಇವೇ ಆ ನಾಲ್ಕು ಭೂಮಿಕೆಗಳು. ಶೃಂಗಾರರೌದ್ರವೀರಬೀಭತ್ಸಗಳು ಈ ವಿಕಾಸಾದಿ ನಾಲ್ಕು ಭೂಮಿಕೆಗಳಿಗೆ ಕ್ರಮವಾಗಿ ಹೊಂದಿಕೊಳ್ಳುತ್ತವೆ. ಮತ್ತು, ಅನಂತರ ಈ ನಾಲ್ಕು ಭೂಮಿಕೆಗಳಿಗೆ ಹೊಂದಿಬರುವ ರಸಗಳು ಕ್ರಮವಾಗಿ ಹಾಸ್ಯಕರುಣ ಅದ್ಭುತಭಯಾನಕಗಳು. ಇದೇ ಭರತಮುನಿಯ ಅರ್ಥವೆಂದು ಧನಿಕ ಸೂಚಿಸಿದ್ದಾನೆ. ಈ ಬಗೆಯಲ್ಲಿ ಚಿತ್ತದ ವಿವಿಧ ಭೂಮಿಕೆಗಳನ್ನು ಈ ಗ್ರಂಥಕಾರರೇ ಕಲ್ಪಿಸಿದರೊ ಅಥವಾ ಬೇರೆಡೆಯಿಂದ ಉದ್ಧರಿಸಿದರೊ–ಹೇಗಿದ್ದರೂ ಈ ಅಂಶ ರಸಶಾಸ್ತ್ರದಲ್ಲಿನ ಒಂದು ಪ್ರಮುಖವಾದ ಶೋಧನೆಯಾಗಿದೆ.

ಈ ಗ್ರಂಥಕಾರರ ಪ್ರಕಾರ ನಾಟ್ಯರಸಗಳು ಕೇವಲ ಎಂಟು: ರತಿ, ಉತ್ಸಾಹ, ಜುಗುಪ್ಸೆ, ಕ್ರೋಧ, ಹಾಸ, ವಿಸ್ಮಯ, ಭಯ, ಶೋಕ–ಈ ಎಂಟು ಸ್ಥಾಯಿಗಳಿಂದ ಉಂಟಾಗುವ ಶೃಂಗಾರಾದಿಗಳು. ಕೆಲವರು 'ಶಮ'ವನ್ನೂ ಸ್ಥಾಯಿಗಳಲ್ಲೊಂದಾಗಿ ಪರಿಗಣಿಸಿ ಶಾಂತ ರಸವನ್ನು ಮಾನ್ಯಮಾಡುವರಾದರೂ ನಾಟ್ಯದಲ್ಲಿ 'ಶಾಂತ'ಕ್ಕೆ ಸ್ಥಾನವಿಲ್ಲ–ಎಂದು ಧನಂಜಯ ಸಾರಿದ್ದಾನೆ. (೪–೩೫) ಜೊತೆಗೆ, ಪ್ರೀತಿ ಭಕ್ತಿ ಮೊದಲಾಗಿ ಹೇಳುವ ಭಾವಗಳು

ಗೂ ಮೃಗಯಾ (ಬೇಟೆ) ಅಕ್ಷ (ಜೂಜು) ಮೊದಲಾಗಿ ಹೇಳುವ ರಸಗಳು ಉತ್ಸಾಹಾದಿ
ಟು ಸ್ಥಾಯಿಗಳಲ್ಲೆ ಅಂತರ್ಭಾವವಾಗುವುದರಿಂದ ಅವುಗಳನ್ನು ಬೇರೆ ಹೇಳ
ಲ್ಲ.(೪–೮೮) ಇನ್ನು ಕಾವ್ಯದಲ್ಲಿಯಾದರೂ 'ಶಾಂತ'ಕ್ಕೆ ಸ್ಥಾನವುಂಟೆ ಇಲ್ಲವೆ ಎಂಬುದಕ್ಕೆ
ಂಜಯ ಏನು ಹೇಳುತ್ತಾನೆಂಬುದು ಸ್ಪಷ್ಟವಾಗಿಲ್ಲ. 'ಶಾಂತವು ಅದರ ಆತ್ಮವಾದ
ದಿತಾದಿಗಳಿಂದ ಪ್ರಕಟವಾಗುತ್ತದೆ' ಎಂದು ನಾವು ಆ ಕುರಿತ ಧನಂಜಯನ ಕಾರಿಕೆಗೆ
ರ್ಥ ಮಾಡಿದ್ದೇವೆ. (ನೋಡಿ: ೪–೫೩ ಮತ್ತು ಆ ಖಂಡದ ಟಿಪ್ಪಣಿ. ಧನಿಕನಂತೂ
ರವಾಕ್ಯಗಳಿಂದ ಶಾಂತವನ್ನು ವಿರೋಧಿಸಿದ್ದಾನೆ. ೨–೫೮ ವ್ಯಾಖ್ಯೆಯಲ್ಲಿ ಈತ
ಗಾನಂದ'ದಲ್ಲಿನ ಜೀಮೂತವಾಹನ ಧೀರಶಾಂತನಲ್ಲವೆಂದು ವಾದಿಸುವಾಗ ಆತ
ತರಸವನ್ನು ವಿರೋಧಿಸುವ ಸೂಚನೆಯಿದೆ. ೪–೪೪ರ ವ್ಯಾಖ್ಯೆಯಲ್ಲಿ ಪುನಃ
ರ್ಭವಶದಿಂದ ನಾಟ್ಯದಲ್ಲಿ ಶಾಂತರಸವನ್ನು ವಿರೋಧಿಸಿದ್ದಾನೆ. ಆತನ ಪ್ರಕಾರ–ಎಲ್ಲ
ಪಾರಗಳೂ ಕರಗಿ ಇಲ್ಲವಾಗುವ ಒಂದು ವಿಶಿಷ್ಟ ಸ್ಥಿತಿ ಶಮ; ಅಂಥ ಸ್ಥಿತಿಯನ್ನು
ರ್ವಿಧಾಭಿನಯಗಳಿಂದ ರಂಗದಲ್ಲಿ ಅಭಿನಯಿಸಿ ತೋರಿಸುವುದು ಅಸಾಧ್ಯ;
ನಯಕ್ಕೆ ಹೊರಗಾದ ಶಮ ನಾಟ್ಯಾದಿಗಳಲ್ಲಿ ಹೊರಗೆಂಬುದು ಸ್ಪಷ್ಟ. ಇನ್ನು
ಭಿಚಾರಿಗಳಲ್ಲಿ ಮೊದಲನೆಯದಾದ 'ನಿರ್ವೇದ'ವೆ 'ಶಾಂತ'ಕ್ಕೆ ಸ್ಥಾಯಿಯಾಗಬಾರದೇಕೆ
ಬ ಪ್ರಶ್ನೆ ಬರಬಹುದು. ಅದನ್ನು ೪–೪೫ರ ಕಾರಿಕೆ ಹಾಗೂ ವ್ಯಾಖ್ಯೆಯಲ್ಲಿ
ರೋಧಿಸಲಾಗಿದೆ. ವಿಕಾಸಾದಿ ನಾಲ್ಕು ಚಿತ್ತಭೂಮಿಕೆಗಳನ್ನು ಹೇಳಿ ಒಂದೊಂದು
ಮಿಕೆಗೆ ಎರಡೆರಡು ರಸಗಳನ್ನು ಹಂಚಿಯಾದ ಮೇಲೆ ಧನಂಜಯಧನಿಕರು, ಈ
ಲ್ಕಲ್ಲದೆ ಬೇರೆ ಚಿತ್ತಭೂಮಿಕೆಗಳನ್ನು ಕಲ್ಪಿಸುವಂತಿಲ್ಲ ಮತ್ತು ಆ ಕಾರಣದಿಂದ ರಸಗಳು
ಟೇ ಎಂಬುದನ್ನು ಒಪ್ಪಿಕೊಳ್ಳತಕ್ಕದ್ದು ಎನ್ನುತ್ತಾರೆ.(೪–೫೭ರ ಕಾರಿಕೆ ಮತ್ತು ವ್ಯಾಖ್ಯೆ.)
ಕ ೪–೫೦ರ ವ್ಯಾಖ್ಯೆಯಲ್ಲಿ ಲೌಕಿಕರಸಕ್ಕೂ ನಾಟ್ಯರಸಕ್ಕೂ ಭೇದವನ್ನು ಕಲ್ಪಿಸಿದ್ದಾನಷ್ಟೆ.
ಆತ–ಲೌಕಿಕರಸಗಳೆಲ್ಲ ನಾಟ್ಯರಸಗಳಾಗಲಾರವು; ನಾಟ್ಯರಸಗಳು ಎಂಟೇ
–ಎಂದು ಪುನಃ ತಮ್ಮ ಮತವನ್ನು ಒತ್ತಿದ್ದಾನೆ.

ಮುದಿತಾದಿಗಳಿಂದ ಶಾಂತ ಪ್ರಕಟವಾಗುತ್ತದೆ ಎಂಬ ಧನಂಜಯನ ಕಾರಿಕೆಗೆ ಧನಿಕ
ಗೆ ವ್ಯಾಖ್ಯಾನಿಸಿದ್ದಾನೆ: ಆತ್ಮಸ್ವರೂಪಜ್ಞಾನವಿರುವಲ್ಲಿ ಮಾತ್ರ 'ಶಾಂತ' ಇರಬಲ್ಲುದು.
ಸ್ವರೂಪವನ್ನು ಹೇಳುವುದು ಸಾಧ್ಯವಲ್ಲ. ಆ ಕಾರಣ ಶ್ರುತಿಗಳೂ 'ನೇತಿ ನೇತಿ' ಎಂದೇ
ನ್ನು ವರ್ಣಿಸಿದವು. ಅಂತೆಯೇ 'ಶಾಂತ'ದ ಶುದ್ಧ ಪ್ರಕಟನೆ ಅಸಾಧ್ಯ. ಇನ್ನು ಅದು
ಸ ವಿಸ್ತರ ಕ್ಷೋಭ ವಿಕ್ಷೇಪ – ಈ ನಾಲ್ಕು ಚಿತ್ತಭೂಮಿಕೆಗಳನ್ನು ಹೊಂದುವ ಮುದಿತ
ತ್ರಿ ಕರುಣ ಉಪೇಕ್ಷೆ – ಇವುಗಳ ಮೂಲಕ ಮಾತ್ರ ನಿರೂಪಿತವಾಗಬಲ್ಲುದು. ಈ
ತಿನಲ್ಲಿ ಧನಿಕನೂ 'ಶಾಂತ'ವನ್ನು ಅಡ್ಡಗೋಡೆಯ ಮೇಲಿಟ್ಟಿರುವಂತೆ ತೋರುತ್ತದೆ.
ತೂ ವಿಕಾಸಾದಿ ಭೂಮಿಕೆಗಳ ಆಶ್ರಯದ ಮೇಲೆಯೇ ಎಲ್ಲ ಭಾವಗಳನ್ನು ನಿಲ್ಲಿಸಿರುವ
, ಬೇರೊಂದು ಬಗೆಯಿಂದ ಶಾಂತವನ್ನು ಆ ಭೂಮಿಕೆಗಳಿಗೆ ಹೊಂದಿಸಿದ್ದಾನೆ. ನಾಲ್ಕು
ಮಿಕೆಗಳು ಹಾಗೂ ಎಂಟು ರಸಗಳು–ಎಂಬ ತನ್ನ ಸಿದ್ಧಾಂತಕ್ಕೆ ಊನ ಬರದಂತೆ
ಂತ'ವನ್ನೂ, ಕಾವ್ಯದಲ್ಲಿ ಮಾತ್ರವೆಂದು, ಸ್ವೀಕರಿಸಿದ್ದಾನೆ.

ಧನಿಕನ ಇನ್ನೊಂದು ಮಾತು ಗಮನಿಸುವಂತಿದೆ: ಶೃಂಗಾರವೀರಾದಿಗಳು ಪ್ರಮೋದಾತ್ಮಕವಾಗಿದ್ದು ಅವುಗಳಿಂದ ಆನಂದ ಸಹಜ; ಆದರೆ ಕರುಣದಿಂದ ಹೇಗೆ ಆನಂದ ಉಂಟಾದೀತು? – ಈ ಸಂದೇಹಕ್ಕೆ ರಾಮಾಯಣಾದಿಗಳು ಕರುಣೈಕಗಳಾಗಿದ್ದೂ ಬಹುದೀರ್ಘಕಾಲದಿಂದ ರಸಿಕರನ್ನು ತಣಸಿವೆಯಲ್ಲವೆ ಎಂದು ಧನಿಕ ಪ್ರಶ್ನಿಸುತ್ತಾನೆ. ಈ ಮಾತು ಒಪ್ಪಬಹುದು: ಆದರೆ ಇದರಿಂದ ಕಾರಣ ಹೇಳಿದಂತಾಗಲಿಲ್ಲ. ಇನ್ನು–ಇದಕ್ಕೆ ಆತ ಕೊಡುವ ಕಾರಣ – ಕುಟ್ಟಮಿತದ ಸಂಭೋಗಾವಸ್ಥೆಯಲ್ಲಿ ಸ್ತ್ರೀಯರ ಪ್ರಹರಣಾದಿಗಳಿಂದ ರತಿರಸಿಕನು ಆನಂದಗೊಳ್ಳುವಂತೆ ಕರುಣದಿಂದ ಕಾವ್ಯರಸಿಕ ಆನಂದಹೊಂದುತ್ತಾನೆ–ಎಂಬುದು. (೪–೫೨ರ ವ್ಯಾಖ್ಯೆ; ಪು. ೨೩೪, ೨೩೫.) ಈ ವಾದ ಎಷ್ಟು ಪೊಳ್ಳೆಂಬುದು ಎದ್ದುಕಾಣುತ್ತದೆ. ಇಲ್ಲಿ ವಿವರ ಹೇಳಲು ಅವಕಾಶವಿಲ್ಲದಿದ್ದರೂ, ಧನಿಕ ತನ್ನ ವಾದದ ಭರದಲ್ಲಿ ಹೀಗೆ ತರ್ಕ ತಪ್ಪಿದ ಇನ್ನೂ ಕೆಲವು ಸಂದರ್ಭಗಳಿವೆ ಎಂಬುದನ್ನು ಸೂಚಿಸಬಹುದು.

ಧನಂಜಯಧನಿಕರ 'ಶಾಸ್ತ್ರನಿಷ್ಠೆ' ಗ್ರಂಥದಲ್ಲಿ ಉದ್ದಕ್ಕೂ ಸ್ಪಷ್ಟವಾಗಿದೆ. ಅದು ತುಂಬ ಸ್ಪಷ್ಟವಾಗಿ ಕೆಳಗಿನ ಸಂದರ್ಭಗಳಲ್ಲಿ ಎದ್ದು ತೋರುತ್ತದೆ: ೧. ರಸವನ್ನು ಆಶ್ರಯಿಸಿದ ಶುದ್ಧ ರೂಪಕಗಳು ಕೇವಲ ಹತ್ತು ಎನ್ನುವಲ್ಲಿ: ಆ ಭಾಗದ ಧನಿಕನ ವ್ಯಾಖ್ಯೆ, ನಾಟ್ಯ ಹಾಗೂ ನೃತ್ಯನೃತ್ತಗಳಲ್ಲಿನ ಭೇದವನ್ನು ನಿಷ್ಕೃಷ್ಟಗೊಳಿಸುವ ಆತನ ವ್ಯಾಖ್ಯಾಭಾಗ (೧–೧೨ರದ್ದು) 'ದಶಧಾ ಏವ' ಎಂಬ ಧನಂಜಯನ ಮಾತಿನ ಅವಧಾರಣೆಯ ಮರ್ಮವನ್ನು ಬಿಡಿಸಿಕೊಡುತ್ತದೆ. ಅನಂತರ ೩–೪೬ರಲ್ಲಿ ಇದೇ ವಿಷಯವನ್ನು ಮತ್ತೆ ಒತ್ತಿಹೇಳಿದೆ. ೨. ಧನಿಕ ಪ್ರಥಮಕಲ್ಪಾದಿ ನಾಟ್ಯಧರ್ಮಗಳನ್ನು ವಿರೋಧಿಸುವಲ್ಲಿ. (೧–೧೨೮ರ ವ್ಯಾಖ್ಯೆ ಹಾಗೂ ಟಿಪ್ಪಣಿ ನೋಡಿ). ೩. ನಾಯಕ ಸಂಬಂಧಿಯಾದ ನಾಯಿಕಾಭೇದಗಳು ನ್ಯೂನಾಧಿಕವಾಗಿ ಎಂಟೇ ಎನ್ನುವಲ್ಲಿ. ೪. ವೃತ್ತಿಗಳು ಕೇವಲ ನಾಲ್ಕು ಎಂಬಲ್ಲಿ.[೧] (೨–೯೪)

ಧನಂಜಯಧನಿಕರಿಗೆ ಶಾಸ್ತ್ರಕಾರರಿಗೆ ಇರಬೇಕಾದ 'ನಿಷ್ಠೆ' ಉಂಟು. ಆದರೆ ಆ ನಿಷ್ಠೆ ಅತಿಯಾಗಿ ಅವರು ಶಾಸ್ತ್ರಾಂಧರಾಗಿಲ್ಲವೆಂಬುದೂ ಗಮನಿಸಬೇಕಾದ ಅಂಶ. ಪ್ರತಿಭೆಯ ವಿಕಸನಕ್ಕೆ ಒಂದು ಸೀಮಿತ ಆವರಣ ಬೇಕು ಹೇಗೋ ಹಾಗೆ ಅಂಥ ಆವರಣದೊಳಗೆ ಸ್ವಾತಂತ್ರ್ಯವೂ ಬೇಕು. ರೂಪಕಕಾರರಿಗೆ ಶಾಸ್ತ್ರಪರಿಶೀಲನ ಎಷ್ಟು ಅಗತ್ಯವೊ ಅಷ್ಟೇ ಮಹಾಕವಿಪ್ರಬಂಧಗಳ ಅನುಶೀಲನವೂ ಅಗತ್ಯ ಎಂಬುದು ಇಲ್ಲಿನ ಮತ. (೧–೧೨೯, ೩–೬೫, ೪–೬೩ ಇತ್ಯಾದಿ.) ವಿಭಾವಾನುಭಾವಗಳ ಸಿದ್ಧಿಯನ್ನು ಲೋಕವ್ಯವಹಾರದಲ್ಲಿ ಕಂಡು ಕಲಿತು ಪಡೆಯಬೇಕು–ಎಂಬ ಮಾತು (೪–೪ ರ ಕಾರಿಕೆ ಮತ್ತು ವ್ಯಾಖ್ಯೆ) ಈ ಶಾಸ್ತ್ರಕಾರರ ಉದಾರಮನೋಭಾವಕ್ಕೆ ಸಾಕ್ಷಿಯಾಗಿದೆ. 'ವ್ಯಭಿಚಾರಿ'ಗಳ ಪಟ್ಟಿಯಲ್ಲಿ ಸೇರಿಸಬಹುದಾದ ಚಿತ್ತವೃತ್ತಿವಿಶೇಷಗಳು – ಹೇಳಿರುವ ಮೂವತ್ತುಮೂರು

---

೧. ಇಲ್ಲಿ ಉದ್ಭಟಾದಿಗಳು ಐದನೆಯ ಹೊಸ ವೃತ್ತಿಯೊಂದನ್ನು ಹೇಳಿದ್ದಾರೆಂದೂ ಅದು ಸರಿಯಲ್ಲವೆಂದೂ ಹೇಳಿದೆ. ಉದ್ಭಟನ ಹೇಳಿಕೆಯನ್ನು ದಶರೂಪಕಕಾರರು ಹೇಗೆ ತಪ್ಪಾಗಿ ಗ್ರಹಿಸಿರುವರೆಂಬುದನ್ನು ಡಾ.ವಿ. ರಾಘವನ್ ಅವರು ತಮ್ಮ ಎರಡು ಲೇಖನಗಳಲ್ಲಿ ವಿವರಿಸಿದ್ದಾರೆ. ನೋಡಿ : Journal of Oriental research Vol. VI, P-168 ಮತ್ತು Vol. VII, Pp. 91-110

ಾತ್ರವಲ್ಲದೆ–ಅನೇಕವಿದ್ದಾವೆ ಮತ್ತು ಅವು ವಿಭಾವಾನುಭಾವಾದಿಗಳಲ್ಲಿ ಅಂತರ್ಭಾವ
ಾಗುತ್ತವೆ–ಎಂಬ ಧನಿಕನ ಮಾತು (೪–೪೨ರಲ್ಲಿ) ಆ ಕುರಿತು ರೂಪಕಕಾರರ ದೃಷ್ಟಿಯನ್ನು
ೋಕಪರಿಶೀಲನಕ್ಕೆ ತಳ್ಳುವಂತಿದೆ. ಮುಂದೆ ಒಂದೊಂದು ರಸಕ್ಕೂ ಅದರ ಭಾವಪರಿಬೃದ
ಅನ್ನು ಹೇಳುವಲ್ಲಿ, ಹಿಂದೆ ಲಕ್ಷಿಸದ ಭಾವಗಳ ಹೆಸರು ಬರುತ್ತದೆ. ಇದು ಶಾಸ್ತ್ರಕಾರರ
ೀಲಿನ ಔದಾರ್ಯವನ್ನು ಸ್ಪಷ್ಟಗೊಳಿಸುವಂತಿದೆ. ಇಲ್ಲೆಲ್ಲ, ಈ ಗ್ರಂಥಕಾರರು
ಾಸ್ತ್ರನಿಷ್ಠೆಯ ಜೊತೆಗೆ ಅಗತ್ಯವಾದ ಔದಾರ್ಯವನ್ನು ಇಟ್ಟುಕೊಂಡಿದ್ದಾರೆಂಬುದು
ಕ್ತವಾಗುತ್ತದೆ.

ಧನಂಜಯಧನಿಕರ ದೃಷ್ಟಿಚೂಲ ರಸೈಕಪ್ರಯೋಜನದಲ್ಲಿ ನಟ್ಟಿದೆ. ಅದರಿಂದಲೇ
ವರ ಶಾಸ್ತ್ರಭಾಗ ಪರಿಮಳಿಸುವಂತಾಗಿದೆ. ೧–೬ರಲ್ಲೆ ಈ ರಸೈಕದೃಷ್ಟಿ ಸ್ಪಷ್ಟಸೂಚಿತ
ಾಗಿದೆ. ಮುಂದೆ ಅಲ್ಲಲ್ಲಿ ಈ ದೃಷ್ಟಿಯ ಹೊಳಹಿದೆ. (೧–೩೭, ೧೧೪, ೧೨೯; ೪–೪೫ರ
್ಯಾಖ್ಯೆ ಇ.,). ಶಾಸ್ತ್ರನಿಷ್ಠೆ ಹಾಗೂ ವಿಕಸನಸ್ವಾತಂತ್ರ್ಯ ಇವೆರಡೂ ಹೊಂದಿ ನಡೆದು ರಸದಲ್ಲಿ
ಲೆನಿಲ್ಲಬೇಕೆಂಬ ಅಂಶವನ್ನು ನಾವು ೪–೯೦ರ ಕಾರಿಕೆಯಿಂದ ಗ್ರಹಿಸಬಹುದಾಗಿದೆ.

ಉಪಸಂಹಾರವಾಗಿ ಇಷ್ಟು ಹೇಳಬಹುದು: ಸಂಸ್ಕೃತ ನಾಟ್ಯಶಾಸ್ತ್ರಗ್ರಂಥಗಳಲ್ಲಿ
ದಶರೂಪಕ'ಕ್ಕೆ ಮುಖ್ಯವಾದ ಒಂದು ಸ್ಥಾನ ಮೀಸಲಿದೆ. ಭರತಮುನಿಯ 'ನಾಟ್ಯಶಾಸ್ತ್ರ'
ಲ್ಲಿನ 'ರೂಪಕಶಾಸ್ತ್ರವಿಭಾಗ'ಕ್ಕೆ ಇದೊಂದು ಸಂಗ್ರಹವೂ ಸರಳವೂ ಆದ ಕೈಪಿಡಿಯಾಗಿದೆ.
ಾರತೀಯ 'ರಸಶಾಸ್ತ್ರ'ಕ್ಕೆ ಈ ಗ್ರಂಥ ವಿದ್ವದಧ್ಯಯನದ ಒಂದು ನೂತನ ಅಧ್ಯಾಯವನ್ನು
ೇರಿಸಿಕೊಟ್ಟಿದೆ. ಈ ಗ್ರಂಥದಲ್ಲಿನ ಧನಂಜಯನ ಕಾರಿಕೆಗಳು ಸರಳವಾಗಿದ್ದು ಸಂಕ್ಷೇಪ
ಾಗಿವೆ, ಸಂಕ್ಷೇಪವಾಗಿದ್ದು ನಿಷ್ಕೃಷ್ಟವಾಗಿವೆ. ಧನಂಜಯನ ಸಹೋದರನಾಗಿರಬಹು
ಾದ ಧನಿಕನ ವ್ಯಾಖ್ಯೆ 'ದಶರೂಪಕ'ದ ಕಾರಿಕೆಗಳಿಗೆ ಅವಳಿಯೆಂಬಂತೆ ಹೊಂದಿಕೊಂಡು
ಷಕ್ಕೆ ಸಹಜವೂ ಉಪಯುಕ್ತವೂ ಆವಶ್ಯಕವೂ ಆದ ಜೊತೆಯಾಗಿದೆ, ಒತ್ತಾಗಿದೆ. ಧನಿಕ
ನೇಕ ಗ್ರಂಥಗಳಿಂದ ಆಯ್ದು ಕೊಟ್ಟಿರುವ ವಿಪುಲ ಉದಾಹರಣೆಗಳು ಕಾರಿಕೆಗಳ ಮೇಲೆ
ೂನಲುಬೆಳಕು ಚೆಲ್ಲುತ್ತವೆ; ಅಷ್ಟುಮಾತ್ರವಲ್ಲ, ಅವು ಕೂಡಿ ಒಂದು ಮನೋಹರ ಕಾವ್ಯ
ಂಡ ಸಂಕಲನವಾಗುತ್ತದೆ. ಕಾರಿಕಾಕಾರರ ಹಾಗೂ ವ್ಯಾಖ್ಯಾಕಾರರ ಶಾಸ್ತ್ರನಿಷ್ಠೆಯೊಂದಿಗೆ
ಸೈಕದೃಷ್ಟಿ ಬೆರೆತು ಶಾಸ್ತ್ರಕ್ಕೂ ಒಂದು ಮೃದುಪರಿಮಲ ಬಂದಂತಿದೆ. ಕಾವ್ಯಮೀಮಾಂಸೆ
ಾಟ್ಯಮೀಮಾಂಸೆ ಹಾಗೂ ರಸಮೀಮಾಂಸೆಯ ಪರಿಷ್ಕರಣಯುಗದಲ್ಲಿ ಆವಿಷ್ಕೃತವಾಯಿ
ಾಗಿ, ಸಂಸ್ಕೃತ ರೂಪಕಸಾಹಿತ್ಯದ ಅಸ್ತಮಯ ಕಾಲದಲ್ಲಿ ಪ್ರಕಟವಾಯಿತಾಗಿ ಈ
ಂಥಕ್ಕೊಂದು ಐತಿಹಾಸಿಕ ಮೌಲ್ಯವೂ ಒದಗಿದೆ.

**'ದಶರೂಪಕ'ದ ಮುದ್ರಣಸಂಸ್ಕರಣಗಳು:** ೧. 'ದಶರೂಪಕ'ವನ್ನು ಮೊತ್ತಮೊದ
ಗೆ ಸಂಪಾದಿಸಿ ಮುದ್ರಿಸಿ ಪ್ರಕಟಿಸಿದವರು ಫಿಟ್ಸೆಡ್‌ವರ್ಡ್‌ಹಾಲ್ ಎಂಬ ಪಾಶ್ಚಾತ್ಯ
ದ್ವಾಂಸರು. ಐದಾರು ಹಸ್ತಪ್ರತಿಗಳ ಆಧಾರದ ಮೇಲೆ ಅವರು ಈ ಸಂಸ್ಕರಣವನ್ನು
ದ್ಧಗೊಳಿಸಿದರು. ಧನಂಜಯನ ಕಾರಿಕೆಗಳು ಹಾಗೂ ಧನಿಕನ ವ್ಯಾಖ್ಯೆ ಕೂಡಿರುವ ಈ
ಂಥ ೧೮೬೫ರಲ್ಲಿ ಕಲ್ಕತ್ತೆಯ Bibliotheca Indica ಗ್ರಂಥಮಾಲಿಕೆಯಲ್ಲಿ
ಕಟವಾಯಿತು. ಹಾಲ್ ಅವರು ಈ ಸಂಸ್ಕರಣವನ್ನು ತುಂಬ ಸಮರ್ಪಕವಾಗಿ

ಸಿದ್ಧಗೊಳಿಸಿದ್ದಾರೆ. ಮೊದಲಲ್ಲಿ ಉಪಯುಕ್ತವಾದ ಪೀಠಿಕೆಯನ್ನು ಸೇರಿಸಿದ್ದಾರೆ; ಮುಖ್ಯ ವಾದ ಪಾಠಾಂತರಗಳನ್ನು ಗುರುತಿಸಿದ್ದಾರೆ; ಅನುಬಂಧವಾಗಿ ಭರತನ 'ನಾಟ್ಯಶಾಸ್ತ್ರ'ದ ದಶರೂಪಕಲಕ್ಷಣ ಹೇಳುವ ನಾಲ್ಕು ಅಧ್ಯಾಯಗಳನ್ನು ಕೊಟ್ಟಿದ್ದಾರೆ. ಗ್ರಂಥಸಂಪಾದನೆಗೆ ಇಂದಿಗೂ ಇದೊಂದು ಉತ್ತಮ ಮಾದರಿಯಾಗಿ ನಿಂತಿದೆ.

೨. ಜೀವಾನಂದ ವಿದ್ಯಾಸಾಗರ ಎನ್ನುವವರು ಹಾಲ್‌ರವರ ಸಂಸ್ಕರಣವನ್ನು ಪುನಃ ಮುದ್ರಿಸಿ ೧೮೭೮ರಲ್ಲಿ ಕಲ್ಕತ್ತೆಯಲ್ಲೆ ಎರಡನೆಯ ಬಾರಿಗೆ ಪ್ರಕಟಿಸಿದರು. ಅವರು ಹಾಲ್‌ರವರ ಸಂಸ್ಕರಣದ ತಿದ್ದುಪಡಿ ಪಟ್ಟಿಯನ್ನು ಗಮನಿಸದೆ ಅಲ್ಲಿನ ಮುದ್ರಣ ದೋಷಗಳನ್ನು ಕೂಡ ಬಿಡದೆ ಇದ್ದಕ್ಕಿದ್ದಂತೆ ಎತ್ತಿಕೊಂಡು ಹಾಗೇ ಮುದ್ರಿಸಿಕೊಟ್ಟಿರುವ ರಾದರೂ ಗ್ರಂಥದಲ್ಲೆಲ್ಲೂ ಹಾಲ್‌ರವರ ಹೆಸರೆತ್ತಿದುದಿಲ್ಲ.

೩. ೧೮೯೭ರಲ್ಲಿ ಕಾಶೀನಾಥ ಪಾಂಡುರಂಗ ಪರಬ್ ಅವರು ಮುಂಬೈನ 'ನಿರ್ಣಯಸಾಗರ ಪ್ರೆಸ್ಸಿ'ನಲ್ಲಿ ಮೂರನೆಯ ಬಾರಿಗೆ 'ದಶರೂಪಕ'ವನ್ನು ಮುದ್ರಿಸಿ ಪ್ರಕಟಿಸಿದರು. ಈ ಗ್ರಂಥ ಕೂಡ, ಹೆಸರು ಹೇಳದೆ, ಹಾಲ್‌ರವರ ಸಂಸ್ಕರಣವನ್ನು ಅನುಸರಿಸಿದಂತೆ ತೋರುತ್ತದೆ. ಆದರೂ ಈ ಸಂಸ್ಕರಣದಲ್ಲಿ ಸಂಪಾದಕರ ಸ್ವಂತ ಶ್ರಮ ಕಾಣುವಂತಿದೆ. ಗ್ರಂಥದುದ್ದಕ್ಕೂ ಎಚ್ಚರಿಕೆಯಿಂದ ಯೋಗ್ಯವಾದ ಪಾಠಗಳನ್ನೆ ಆಯ್ದು ಕೊಟ್ಟಿದೆ; ಅಡಿಟಿಪ್ಪಣಿಯಲ್ಲಿ ಪಾಠಾಂತರಗಳನ್ನು ಗುರುತಿಸಿದೆ; ಆದಿಯಲ್ಲಿ ಉಪಯುಕ್ತ ವಾದ ದೀರ್ಘ ವಿಷಯಾನುಕ್ರಮಣಿಕೆಯಿದೆ; ಅಂತ್ಯದಲ್ಲಿ ಉದ್ಧೃತ ಗ್ರಂಥಗಳ ಪಟ್ಟಿ ಹಾಗೂ ಉದ್ಧೃತ ಶ್ಲೋಕಗಳ ಅಕಾರಾದಿ ಕೊಟ್ಟಿದೆ. ಈ ಸಂಸ್ಕರಣ ಸಾಕಷ್ಟು ಉಪಯುಕ್ತವಾಗಿದೆ ಯಲ್ಲದೆ ತುಂಬ ಕಡಿಮೆ ಬೆಲೆಗೆ ದೊರೆಯುತ್ತದೆ. ಇದೇ ಸಂಸ್ಕರಣ ಪುನಃ ಪುನಃ ಮುದ್ರಿತ ವಾಗುತ್ತಿದ್ದು ಈಚೆ ೧೯೪೧ರಲ್ಲಿ ಐದನೆಯ ಮುದ್ರಣ ಹೊರಬಿದ್ದಿದೆ.

**'ದಶರೂಪಕ'ದ ಅನುವಾದಗಳು:** ೧. New Yorkನ Columbia Universityಯವರು ತಮ್ಮ Indo-Iranian Seriesನಲ್ಲಿ ಆಂಗ್ಲಾನುವಾದಸಮೇತವಾದ 'ದಶರೂಪಕ'ವನ್ನು ಪ್ರಕಟಿಸಿದ್ದಾರೆ. ಅದು ಪ್ರಕಟವಾದದ್ದು ೧೯೧೨ರಲ್ಲಿ. ಈ ಗ್ರಂಥವನ್ನು ಸಿದ್ಧಪಡಿಸಿದವರು ಡಾ॥ ಜಾರ್ಜ್ ಸಿ.ಓ. ಹ್ಯಾಸ್ ಅವರು.

ಹಾಲ್‌ರವರ ಸಂಸ್ಕರಣವನ್ನೆ ಮುಖ್ಯವಾಗಿಟ್ಟುಕೊಂಡು ಸಿದ್ಧಪಡಿಸಲಾದ ಗ್ರಂಥ ಇದು. ಇಲ್ಲಿ ಧನಂಜಯನ ಕಾರಿಕೆಗಳನ್ನು ಇಂಗ್ಲಿಷ್ ಲಿಪಿಯಲ್ಲೆ ಕೊಡಲಾಗಿದೆ. ಒಂದೊಂದು ಕಾರಿಕಾಖಂಡದಲ್ಲೂ ಮೊದಲಿಗೆ ಕಾರಿಕೆ ಅನಂತರ ಅದರ ಆಂಗ್ಲಾನುವಾದ, ಧನಿಕನ ವ್ಯಾಖ್ಯೆಯಲ್ಲಿನ ಉದಾಹರಣೆಗಳ ಆಕರ, ಕೆಲವು ಖಂಡಗಳಲ್ಲಿ ಧನಿಕನ ವ್ಯಾಖ್ಯೆಯ ಸಾರಸಂಕ್ಷೇಪ, ಪಾಠಾಂತರ, ಟಿಪ್ಪಣಿ, ಹೋಲಿಕೆ–ಇವುಗಳನ್ನು ಕೊಟ್ಟಿದೆ. ಗ್ರಂಥದ ಉದ್ದಕ್ಕೂ ಪಾರಿಭಾಷಿಕ ಪದಗಳಿಗೆ ಸಮನಾದ ಆಂಗ್ಲ ಪದಗಳನ್ನೆ ಹುಡುಕಿ ಬಳಸಿದ್ದಾರೆ. ಅನುವಾದಕರು ವಿಶೇಷ ಶ್ರಮಪಟ್ಟು ಸುಮಾರು ಹತ್ತೆಂಟು ನಾಟ್ಯಶಾಸ್ತ್ರ ಹಾಗೂ ಅಲಂಕಾರಗ್ರಂಥಗಳಿಂದ ಖಂಡಖಂಡದಲ್ಲೂ ಹೋಲಿಕೆಗಳನ್ನೆತ್ತಿಕೊಟ್ಟಿದ್ದಾರೆ. ಟಿಪ್ಪಣಿಗಳಲ್ಲಿ ಆಯಾ ಖಂಡವನ್ನು ಕುರಿತ ವಿಶೇಷವಿಚಾರಗಳನ್ನು ಗುರುತಿಸಿದ್ದಾರೆ; ಈ ಗ್ರಂಥಕ್ಕೂ ಬೇರೆ ಇತರ ಗ್ರಂಥಗಳಿಗೂ ಭೇದವಿರುವಲ್ಲಿ ಅದನ್ನು ಎತ್ತಿಹೇಳಿದ್ದಾರೆ. ಈ

ಕಾರಣಗಳಿಂದ, ಗ್ರಂಥದ ಟಿಪ್ಪಣಿಗಳು ಹಾಗೂ ಹೋಲಿಕೆಗಳು ಅಭ್ಯಾಸಿಗಳಿಗೆ ತುಂಬ ಉಪಯುಕ್ತವಾಗಿವೆ. ಗ್ರಂಥವನ್ನು ತುಂಬ ಅಚ್ಚುಕಟ್ಟಾಗಿ ಸಿದ್ಧಗೊಳಿಸಲಾಗಿದೆ, ಸುಂದರವಾಗಿ ಮುದ್ರಿಸಲಾಗಿದೆ.

ಈ ಗ್ರಂಥದಲ್ಲಿನ ಮುಖ್ಯ ಕೊರತೆಯೆಂದರೆ ಇದರಲ್ಲಿ ಧನಿಕನ ವ್ಯಾಖ್ಯೆ ಹಾಗೂ ಉದಾಹರಣೆಗಳು ಇಲ್ಲದಿರುವುದು. ಕೆಲವೆಡೆಗಳಲ್ಲಿ ಧನಿಕನ ವ್ಯಾಖ್ಯೆಯ ಸಾರವನ್ನು ಕೊಟ್ಟಿರುವುದಾದರೂ, ಅಗತ್ಯವಾದಲ್ಲೆಲ್ಲ ಕೊಟ್ಟಿಲ್ಲ. ಧನಿಕನ ದೀರ್ಘವಾಖ್ಯೆಗಳೆಲ್ಲವನ್ನೂ ಹಾಗೆಯೇ ಕೈಬಿಟ್ಟಿದ್ದಾರೆ. ಸಿಲ್‌ವೇನ್ ಲೇವಿ, ರೆಗ್‌ನಾಡ್ ಮೊದಲಾದ ವಿದ್ವಾಂಸರು ಬೇರೆಡೆಗಳಲ್ಲಿ ಧನಿಕನ ವ್ಯಾಖ್ಯೆಯ ಅಗತ್ಯಭಾಗಗಳನ್ನು ಅನುವಾದಿಸಿ ಕೊಟ್ಟಿರುವ ಕಾರಣ ಇಲ್ಲಿ ಅವುಗಳನ್ನು ಅನುವಾದಿಸಿಲ್ಲ ಎಂಬುದು ಹ್ಯಾಸ್ ಅವರ ಹೇಳಿಕೆ. ಅಂಥ ಬೇರೆ ಅನುವಾದಗಳ ಆಕರವನ್ನೂ ಹ್ಯಾಸ್ ಅಲ್ಲಲ್ಲಿ ಸೂಚಿಸಿದ್ದಾರೆ. ಆದರೂ ಅವುಗಳನ್ನೆಲ್ಲ ಆಯ್ದು ಕೂಡಿಸಿಕೊಳ್ಳುವುದು ಯಾವನೇ ಅಭ್ಯಾಸುವಿಗಾದರೂ ಕಷ್ಟವಾಗುತ್ತದೆ. ಅಲ್ಲದೆ, ೧-೬೬, ೧-೧೨೩, ೪-೪೮, ೪-೪೯, ೪-೫೦ ಮೊದಲಾದ ಖಂಡಗಳಲ್ಲಿನ ಹ್ಯಾಸ್‌ರವರ ಅನುವಾದ ತಪ್ಪಾಗಿದೆ; ೨-೬೪, ೪-೪, ೪-೫, ೪-೨೫, ೪-೪೭- ಈ ಮೊದಲಾದ ಖಂಡಗಳಲ್ಲಿ ಅನುವಾದ ನಿಷ್ಕೃಷ್ಟ ಅರ್ಥ ಕೊಡುವಂತಿಲ್ಲ..ಮುಖ್ಯವಾಗಿ, ೪-೪೬ರಿಂದ ೫೦ರ ವರೆಗಿನ ಕಾರಿಕೆಗಳ ಹಾಗೂ ವ್ಯಾಖ್ಯೆಯ ಅರ್ಥವನ್ನು ಅವರು ಪೂರ್ಣ ಗ್ರಹಿಸದೆ ಹೋಗಿದ್ದಾರೆ. ಈ ಭಾಗದಲ್ಲಿ ಧನಂಜಯಧನಿಕರು ಸ್ಥಾಯಿಪ್ರತೀತಿ-ರಸನಿಷ್ಪತ್ತಿಗಳನ್ನು ಕುರಿತು ಅನ್ಯಮತಗಳನ್ನು ಖಂಡಿಸಿರುವುದು ಹಾಗೂ ಸ್ವಮತವನ್ನು ಪ್ರತಿಷ್ಠಾಪಿಸಿರುವುದು ಮುಂತಾದ ಮುಖ್ಯ ವಿಷಯಗಳಿದ್ದು-ಅವೆಲ್ಲವನ್ನೂ ಹ್ಯಾಸ್ ಅವರು ಗಮನಿಸದೆ ಮೇಲುಹಾಯ್ದಿದ್ದಾರೆ. ೧-೮೫, ೯೧, ೧೦೭, ೪-೮೦, ೮೪ ಇತ್ಯಾದಿ ಖಂಡಗಳಲ್ಲಿನ ಅವರ ಟಿಪ್ಪಣಿಗಳಲ್ಲೂ ತಪ್ಪಿದೆ.

೨. ಈಚೆ ೧೯೪೨ರಲ್ಲಿ ಕಾಥೇವಾಡದ ಗೊಂಡಾಲ್‌ನ 'ರಸಶಾಲಾ ಆಯುರ್ವೇದಾಶ್ರಮ್'ದವರು 'ದಶರೂಪಕ'ದ ಅಪೂರ್ಣ ಆಂಗ್ಲಾನುವಾದವೊಂದನ್ನು ಪ್ರಕಟಿಸಿದರು. ರಾಜವೈದ್ಯ ಜೀವರಾಮ ಕಾಲಿದಾಸ ಶಾಸ್ತ್ರಿ ಅವರು ಇದರ ಅನುವಾದಕರು. ಈ ಗ್ರಂಥದಲ್ಲಿ 'ದಶರೂಪಕ'ದ ಪ್ರಥಮ ಪ್ರಕಾಶವೊಂದನ್ನು ಮಾತ್ರ ಅನುವಾದಿಸಿ ಕೊಟ್ಟಿದೆ. ಇದರಲ್ಲಿ ಮೂಲ ಕಾರಿಕೆಗಳು, ಅವುಗಳ ಆಂಗ್ಲಾನುವಾದ, ಧನಿಕನ ವ್ಯಾಖ್ಯೆಯ ಅನುವಾದ, ಉದಾಹರಣೆಗಳ ಮೂಲ ಮತ್ತು ಅನುವಾದ, ಅಲ್ಲಲ್ಲಿ ಕೆಲವು ಟಿಪ್ಪಣಿಗಳು, 'ನಾಟ್ಯಶಾಸ್ತ್ರ' 'ಸಾಹಿತ್ಯದರ್ಪಣ'ಗಳಲ್ಲಿನ ಹೋಲಿಕೆಗಳನ್ನು ಸೂಚಿಸುವ ಅಡಿಟಿಪ್ಪಣಿಗಳು – ಇವೆಲ್ಲ ಇವೆ. ಧನಿಕನ ವ್ಯಾಖ್ಯೆ ಹಾಗೂ ಉದಾಹರಣೆಗಳ ಸಮೇತವಾಗಿರುವ ಈ ಗ್ರಂಥ ಪೂರ್ಣ ಪ್ರಕಟವಾಗಿದ್ದರೆ ಉಪಯೋಗವಾಗುತ್ತಿತ್ತು.

ಆಯುರ್ವೇದಾಶ್ರಮದ 'ಕ್ರಯಪಟ್ಟಿ'ಯೆಂಬಂತೆ ವಿಶಿಷ್ಟ ಆಕಾರದಲ್ಲಿ ದರಗು ಕಾಗದದ ಮೇಲೆ ಈ ಗ್ರಂಥ ಮುದ್ರಿತವಾಗಿದೆ. ಹ್ಯಾಸ್ ಅವರ ಇನ್ನೂರು ಪುಟದ ಅನುವಾದಗ್ರಂಥಕ್ಕೆ-ಅದು ಉತ್ತಮವಾದ ಗರಿ ಕಾಗದದ ಮೇಲೆ ಅಂದವಾಗಿ ಮುದ್ರಿತ ವಾಗಿದೆ-ಇಪ್ಪತ್ತು ರೂಪಾಯಿ ಬೆಲೆಯೆಂದು ಮುನ್ನುಡಿಯಲ್ಲಿ ಗೊಣಗುವ ರಾಜವೈದ್ಯರು

ತಮ್ಮ ನೂರು ಪುಟದ ಗ್ರಂಥಕ್ಕೆ ಹತ್ತು ರೂಪಾಯಿ ಬೆಲೆ ಇಟ್ಟು ರೊಚ್ಚು ತೀರಿಸಿ ಕೊಂಡಿದ್ದಾರೆ.

೩. ೧೯೫೫ರಲ್ಲಿ ಕಾಶಿಯ 'ಚೌಖಂಬಾ ವಿದ್ಯಾಭವನ'ದವರು ಡಾ. ಭೋಲಾಶಂಕರ್ ವ್ಯಾಸ್ ಅವರ 'ಹಿಂದೀ ದಶರೂಪಕ'ವನ್ನು ಪ್ರಕಟಿಸಿದರು. ಈ ಗ್ರಂಥದಲ್ಲಿ ಧನಂಜಯನ ಕಾರಿಕೆಗಳು, ಧನಿಕನ ಸಂಪೂರ್ಣ ವ್ಯಾಖ್ಯೆ ಹಾಗೂ ಉದಾಹರಣೆಗಳು–ಇವೆಲ್ಲವುಗಳ ಮೂಲವೂ ಅನುವಾದಗಳೂ ಇವೆ. ಪದ್ಯದ ಉದಾಹರಣೆಗಳನ್ನು ಗದ್ಯಕ್ಕೆ ಪರಿವರ್ತಿಸ ಲಾಗಿದೆ. ಗ್ರಂಥದ ಅಡಿಟಿಪ್ಪಣಿಗಳಲ್ಲಿ ಪಾಠಾಂತರಗಳನ್ನೂ, ಅಲ್ಲಲ್ಲಿ ಕೆಲವು ವಿವರಣೆ ಗಳನ್ನೂ ಕೊಟ್ಟಿದೆ. ಇಲ್ಲಿನ ಕಾರಿಕೆಗಳ ಹಾಗೂ ವ್ಯಾಖ್ಯೆಯ ಅನುವಾದ ಶಬ್ದಶಃ ಅನುವಾದ ವಲ್ಲ. ಅನೇಕ ಕಡೆಗಳಲ್ಲಿ ಅನುವಾದಕರು ಮೂಲವನ್ನು ತಮ್ಮ ಮಾತುಗಳಲ್ಲಿ ವಿವರಿ ಸಿರುವುದುಂಟು. ಅಂತೆಯೇ ಅವರು ತಮ್ಮದು ಅನುವಾದ ಎಂದುಕೊಳ್ಳದೆ 'ಚಂದ್ರಕಲಾ ಹಿಂದೀವ್ಯಾಖ್ಯಾ' ಎಂದು ಹೆಸರಿಸಿರುವುದು ಸಮಂಜಸವಾಗಿದೆ. ಗ್ರಂಥದ ಮೊದಲಲ್ಲಿ ಒಂದು ದೀರ್ಘವಾದ 'ಭೂಮಿಕೆ'ಯಿದ್ದು ಅದರಲ್ಲಿ ಅನುವಾದಕರು ಸಂಸ್ಕೃತ ನಾಟ್ಯ ಹಾಗೂ ನಾಟ್ಯಶಾಸ್ತ್ರದ ಬೆಳವಣಿಗೆಯನ್ನು ಕುರಿತು ಕೆಲವು ಮಾತುಗಳನ್ನು ಹೇಳಿದ್ದಾರೆ; ನಾಟ್ಯಶಾಸ್ತ್ರವಿಷಯಕ ಗ್ರಂಥಗಳ ಇತಿಹಾಸವನ್ನು ಸಂಕ್ಷೇಪ ಗುರುತಿಸಿದ್ದಾರೆ; ರಸಸೂತ್ರ ಗಳನ್ನು ಕುರಿತು ವಿವಿಧ ಮತಗಳ ಸಾರವನ್ನು ಎತ್ತಿಕೊಟ್ಟಿದ್ದಾರೆ; 'ದಶರೂಪಕ'ದಲ್ಲಿ ಹೇಳಿರುವ ವಿಷಯಗಳನ್ನು ದೀರ್ಘವಾಗಿ ವಿವರಿಸಿದ್ದಾರೆ.

ಈ ಅನುವಾದಗಳೇ ಅಲ್ಲದೆ ಪ್ರಾಂತಭಾಷೆಗಳಲ್ಲಿ ಬೇರೆ ಅನುವಾದಗಳು ಇರಬಹು ದಾಗಿದ್ದರೂ ಅವುಗಳನ್ನು ಪರಿಶೀಲಿಸಲು ಈ ಲೇಖಕನಿಗೆ ಸಾಧ್ಯವಾಗಿಲ್ಲ.

**ಪ್ರಸ್ತುತ ಅನುವಾದ:** ಮೇಲೆ ಹೇಳಿರುವ ಎಲ್ಲ ಸಂಸ್ಕರಣಗಳು ಹಾಗೂ ಅನು ವಾದಗಳನ್ನು ಎದುರಿನಲ್ಲಿಟ್ಟುಕೊಂಡು ಪ್ರಸ್ತುತ ಕನ್ನಡ ಗ್ರಂಥವನ್ನು ಸಿದ್ಧಪಡಿಸಲಾಗಿದೆ. ಮೂಲ ಕಾರಿಕೆ ಹಾಗೂ ವ್ಯಾಖ್ಯೆಗಳ ಪಾಠಕ್ಕಾಗಿ ಎಲ್ಲ ಸಂಸ್ಕರಣಗಳನ್ನು ಪರಿಶೀಲಿಸಿ ಉತ್ತಮವೆಂದು ತೋರಿದುವನ್ನು ಅಂಗೀಕರಿಸಿದೆ. ಕಾರಿಕೆಗಳಲ್ಲಿನ ಪಾಠಾಂತರಗಳನ್ನು ಅಡಿಟಿಪ್ಪಣಿಗಳಲ್ಲಿ ಕೊಟ್ಟಿದೆ. ಕಾರಿಕೆಗಳ ಸಂಖ್ಯೆಯನ್ನು ಆಯಾ ಕಾರಿಕೆಯ ಮುಂದೆ ಪುಟದ ಬಲಭಾಗದಲ್ಲಿ ಕೊಡಲಾಗಿದೆ. ಈ ಸಂಖ್ಯೆಗಳನ್ನು 'ನಿರ್ಣಯಸಾಗರ'ದವರು ಪ್ರಕಟಿ ಸಿರುವ 'ದಶರೂಪಕ'ದ ಐದನೆಯ ಮುದ್ರಣವನ್ನನುಸರಿಸಿ ಕೊಟ್ಟಿದೆ. ಕಾರಿಕಾಖಂಡಗಳ ಸಂಖ್ಯೆಯನ್ನು ಕೊಡುವಲ್ಲಿ ಹ್ಯಾಸ್‌ರವರನ್ನನುಸರಿಸಿದೆ. ಇದೇ ಗ್ರಂಥವನ್ನು ನಿರ್ದೇಶಿಸ ಬೇಕಾದಾಗಲೆಲ್ಲ ಮೊದಲು ಪ್ರಕಾಶದ ಸಂಖ್ಯೆಯನ್ನೂ ಜೊತೆಗೆ ಖಂಡಸಂಖ್ಯೆಯನ್ನೂ ಸೂಚಿಸಿ ಸ್ಥಲ ನಿರ್ದೇಶಿಸಿದೆ. ಸೌಲಭ್ಯದ ದೃಷ್ಟಿಯಿಂದ ಪ್ರತಿ ಪುಟದಲ್ಲೂ ಪ್ರಕಾಶಸಂಖ್ಯೆ ಹಾಗೂ ಆ ಪುಟದಲ್ಲಿನ ಖಂಡಗಳ ಸಂಖ್ಯೆ ಕೊಟ್ಟಿದೆ.

ಈ ಗ್ರಂಥದಲ್ಲಿ ಕಾರಿಕೆಗಳನ್ನು ಕನ್ನಡಿಸುವಾಗ ಸಾಧ್ಯವಾದಷ್ಟೂ ಶಬ್ದಶಃ ಅನುವಾದಿ ಸಲು ಪ್ರಯತ್ನಿಸಿದೆ. ಅರ್ಥವಿವರಣೆಗೆಂದು ಬೇರೆ ಮಾತುಗಳನ್ನು ಸೇರಿಸಬೇಕಾದಾಗ ಅವುಗಳನ್ನು ಚೌಕ ಆವರಣಗಳಲ್ಲಿ ಕೊಟ್ಟಿದೆ. ಯಾವುದೊಂದು ಮೂಲದ ಪದವನ್ನು ಅನುವಾದದಲ್ಲಿ ಹಾಗೇ ಇಟ್ಟುಕೊಂಡು ಅದರ ಅರ್ಥ ಕಠಿನವಾಗಿದ್ದಲ್ಲಿ ಅಂಥ ಪದದ

ಮುಂದೆ ವಕ್ರ ಆವರಣದಲ್ಲಿ ಅದರ ಅರ್ಥ ಕೊಟ್ಟಿದೆ. ಅನುವಾದ ಸಾಧ್ಯವಾದಷ್ಟು ಸ್ಪಷ್ಟ ಹಾಗೂ ಸರಲವಿರಬೇಕೆಂಬ ಆಶಯವನ್ನು ಉದ್ದಕ್ಕೂ ಇಟ್ಟುಕೊಂಡು ಅದಕ್ಕಾಗಿ ಪ್ರಯತ್ನಿಸಿದೆ.

ವ್ಯಾಖ್ಯೆಯನ್ನು ಅನುವಾದಿಸುವಲ್ಲಿ ಎಲ್ಲೆಡೆಗೂ ಶಬ್ದಶಃ ಇರಬೇಕೆಂಬ ಬಿಗಿಯನ್ನು ಇಟ್ಟುಕೊಂಡಿಲ್ಲ. ಆದರೂ ಆದ್ಯಂತ ಮೂಲವ್ಯಾಖ್ಯೆಯ ಅರ್ಥವನ್ನು ಚಾಚೂ ತಪ್ಪದೆ ಕನ್ನಡಕ್ಕೆ ತರಲೆತ್ನಿಸಿದೆ. ಕೆಲವೆಡೆಗಳಲ್ಲಿ ಮೂಲದ ಭಾಗವನ್ನು ವಿವರಿಸಬೇಕಾಗಿ ಬಂದಾಗ ಅಂಥ ವಿವರಣೆಯ ಮಾತುಗಳನ್ನು ಆವರಣಗಳಲ್ಲಿರಿಸಿದೆ. ಅಂತೆಯೇ ವ್ಯಾಖ್ಯೆಯ ನಡುವೆ ಬೇರೆ ಮಾತುಗಳು ಸೇರಿದ್ದರೂ ಅವು ಆವರಣಗಳ ನಡುವಿದ್ದು ಸ್ಪಷ್ಟ ಗುರುತಿಸಬರುತ್ತವೆ. ವ್ಯಾಖ್ಯೆಯ ಸಂಸ್ಕೃತ ಮೂಲವನ್ನು ಕೊಡಬೇಕೆಂದು ಆಸೆಯಿದ್ದಿತಾದರೂ ವಿಸ್ತಾರದ ಭಯದಿಂದ ಹಾಗೆ ಮಾಡಲಾಗಲಿಲ್ಲ.

ಧನಿಕನ ವ್ಯಾಖ್ಯೆಯಲ್ಲಿ ಬರುವ ಎಲ್ಲ ಉದಾಹರಣೆಗಳ ಮೂಲವನ್ನೂ ಕೊಡಲಾಗಿದೆ. ಆ ಉದಾಹರಣೆಗಳ ಎದುರಿನಲ್ಲಿ, ತಿಳಿದಿರುವಲ್ಲೆಲ್ಲ ಆಕರವನ್ನು ಸೂಚಿಸಿ ಸ್ಥಲ ನಿರ್ದೇಶಿಸಿದೆ; ಯಾವುದೊಂದು ಉದಾಹರಣೆ ಇದೇ ಗ್ರಂಥದಲ್ಲಿ ಬೇರೆಡೆಗೆ ಕೂಡ ಬಂದಿದ್ದರೆ ಅಂಥವನ್ನೂ ಅಲ್ಲೇ ಸೂಚಿಸಿದೆ. ಉದಾಹರಣೆಗಳ ಮೂಲದ ಜೊತೆಯಲ್ಲಿ ಅವುಗಳ ಅನುವಾದವಿದೆ. ಮೂಲದ ಪದ್ಯಗಳನ್ನು ಕನ್ನಡ ಗದ್ಯಕ್ಕೆ ಪರಿವರ್ತಿಸಲಾಗಿದೆ. ಉದಾಹರಣೆಗಳ ಅನುವಾದದಲ್ಲೂ ಸಾಧ್ಯವಾದಮಟ್ಟಿಗೆ ಮೂಲ ತಪ್ಪದಂತೆ ನೋಡಿಕೊಂಡಿದೆ. ಅಲ್ಲಿಯೂ ಸೇರಿಸಿರುವ ಹೆಚ್ಚಿನ ಮಾತುಗಳು ಆವರಣಗಳಲ್ಲಿವೆ. ಆದರೆ ಉದಾಹರಣೆಗಳ ವಿಷಯದಲ್ಲಿ ಓದುಗರು ಅನುವಾದವನ್ನೆ ಸಂಪೂರ್ಣ ಅವಲಂಬಿಸಿ ಮೂಲದ ಸೊಗಸನ್ನು ಕಳೆದುಕೊಳ್ಳಬಾರದು. ಅನುವಾದದಿಂದ ಅರ್ಥಗ್ರಹಣ ಮಾಡಿಕೊಂಡು ಪುನಃ ಮೂಲವನ್ನೆ ಉದಾಹರಣೆಗಾಗಿ ನೆಮ್ಮುವುದು ಒಳಿತು.

ಒಂದೊಂದು ಖಂಡದ ಟಿಪ್ಪಣಿಯಲ್ಲೂ ಅಲ್ಲಿನ ವಿಶೇಷ ವಿಚಾರಗಳನ್ನು ಎತ್ತಿ ಹೇಳಿದೆ; ಈ ಗ್ರಂಥಕ್ಕೂ ಗ್ರಂಥಾಂತರಗಳಿಗೂ ಇರುವ ಭೇದಗಳನ್ನು ಗುರುತಿಸಿ ಕೊಟ್ಟಿದೆ. ಕಾರಿಕೆಯ ಛಂದಸ್ಸು ಅನುಷ್ಟುಪ್ ಅಲ್ಲದೆ ಬೇರೆ ಇರುವಲ್ಲಿ ಅದನ್ನು ಹೇಳಿದೆ. ಆಯಾ ಕಾರಿಕಾಖಂಡದ ಅಭ್ಯಾಸಕ್ಕೆ ಅಗತ್ಯವಾದ ಸಲಕರಣೆಗಳನ್ನು ಟಿಪ್ಪಣಿಗಳಲ್ಲಿ ಕೊಡಲೆತ್ನಿಸಿದೆ. ಅಗತ್ಯವಾದಲ್ಲಿ ಕೆಲವೆಡೆ ವ್ಯಾಖ್ಯೆಯ ನಡುನಡುವೆಯೂ ಟಿಪ್ಪಣಿ ಸೂಚನೆಗಳನ್ನು ಸೇರಿಸಿದೆ.

ಅಭ್ಯಾಸಿಗಳ ಸಹಾಯಕ್ಕಾಗಿ ವಿಷಯಾನುಕ್ರಮಣಿಕೆಯನ್ನು ವಿವರವಾಗಿ ಕೊಟ್ಟಿದೆ; ಗ್ರಂಥಸಂಕ್ಷಿಪ್ತಿಯ ವಿವರ ಹಾಗೂ ಮುಖ್ಯ ಉದ್ಧೃತ ಗ್ರಂಥಗಳಲ್ಲಿ ಸ್ಥಲ ನಿರ್ದೇಶನಕ್ಕಾಗಿ ಬಳಸಿಕೊಂಡ ಆಯಾ ಗ್ರಂಥಗಳ ಸಂಸ್ಕರಣಾದಿಗಳ ವಿವರ ಇವನ್ನೂ ಮೊದಲಲ್ಲೆ ಕೊಟ್ಟಿದೆ; ಅನುಬಂಧವಾಗಿ ಲಾಸ್ಯಾಂಗಲಕ್ಷಣ, ರೂಪಕೋಪರೂಪಕಗಳ ಹೋಲಿಕೆಯ ಪಟ್ಟಿ, ನಾಯಿಕಾಭೇದದ ರೇಖಾಸೂಚಿ[೧] ಇವುಗಳನ್ನೂ ರಸನಿಷ್ಪತ್ತಿಯನ್ನು ಕುರಿತ ವಿವಿಧ

---

೧. ರೂಪಕಗಳ ಪಟ್ಟಿಯನ್ನು ತಯಾರಿಸುವಾಗ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು 'ಕನ್ನಡ ಕೈಪಿಡಿ'ಯಲ್ಲಿ ಅನುಸರಿಸಿರುವ ಮಾರ್ಗವನ್ನು ಅನುಕರಿಸಿದೆ; ಅದರಂತೆಯೇ ಉಪರೂಪಕಗಳ ಪಟ್ಟಿಯನ್ನೂ ಹಾಕಿಕೊಟ್ಟಿದೆ. ನಾಯಿಕಾಭೇದದ ರೇಖಾಸೂಚಿಯನ್ನು ಕೊಡುವಲ್ಲಿ ಹ್ಯಾಸ್ ಅವರು ತಮ್ಮ ಗ್ರಂಥದ ಕೊನೆಯಲ್ಲಿ (ಪು. ೧೪೯) ಕೊಟ್ಟಿರುವ ರೇಖಾಸೂಚಿಯನ್ನು ಬಳಸಿಕೊಂಡಿದೆ.

ಮತಗಳು ಹಾಗೂ ಧನಂಜಯಧನಿಕರ ಮತ ಇವನ್ನೂ ಕೊಟ್ಟಿದೆ; ಪಾರಿಭಾಷಿಕ ಪದಗಳ ಪಟ್ಟಿ ಹಾಗೂ ಆಯಾ ಪದಗಳ ಲಕ್ಷಣ ಹೇಳಿರುವ ಸ್ಥಲದ ನಿರ್ದೇಶನ ಇವೂ, ಉದ್ಧೃತ ಶ್ಲೋಕಗಳ ಅಕಾರಾದಿ ಮತ್ತು ಆಯಾ ಶ್ಲೋಕ ಬಂದಿರುವ ಪುಟಸಂಖ್ಯೆ ಇವೂ ಗ್ರಂಥದ ಕೊನೆಯಲ್ಲಿವೆ; ಉದ್ಧೃತ ಗ್ರಂಥಗಳು ಉದ್ಧೃತ ಗ್ರಂಥಕಾರರು ಹಾಗೂ ಇತರ ಸಹಾಯಕ ಸಾಹಿತ್ಯಗಳ ವಿವರ ಇವೂ ಕೊನೆಯಲ್ಲಿ ಬಂದಿವೆ.

ಈ ಗ್ರಂಥವನ್ನು ಸಿದ್ಧಗೊಳಿಸುವಲ್ಲಿ ಪ್ರಾಮಾಣಿಕವಾದ ಶ್ರದ್ಧೆಯನ್ನಿಟ್ಟುಕೊಂಡಿರ ಬೇಕೆಂದು ಸಂಕಲ್ಪವಿತ್ತು. ಈ ಸಂಕಲ್ಪ ಸಿದ್ಧಿಸಿದೆಯೊ ಇಲ್ಲವೊ ಎಂಬುದು ವಿದ್ವಾಂಸರ ಪರೀಕ್ಷೆಯ ಅನಂತರವೇ ತಿಳಿಯಬೇಕಾಗಿದೆ.

---

# ವಿಷಯಾನುಕ್ರಮಣಿಕೆ

## ನಾಲ್ಕನೆಯ ಪ್ರಕಾಶ : ರಸ ೧೭೩ ರಿಂದ ೨೬೯

## ಅನುಬಂಧ ಇತ್ಯಾದಿಗಳು ೨೭೧ ರಿಂದ



---

# ಗ್ರಂಥಸ್ಥ ಸಂಕೇತಗಳ ವಿವರ

ಅಗ್ನಿ. ಪು : ಅಗ್ನಿಪುರಾಣ

ಅಮರು : ಅಮುರುಶತಕ

ಅಲಂ. ಶೇ : ಅಲಂಕಾರಶೇಖರ

ಉತ್ತರ : ಉತ್ತರರಾಮಚರಿತ

ಉದಾತ್ತ : ಉದಾತ್ತರಾಘವ

ಕಾದಂ : ಕಾದಂಬರಿ

ಕಾ. ಪ್ರ : ಕಾವ್ಯಪ್ರಕಾಶ

ಕಾವ್ಯಾನು : ವಾಗ್ಭಟನ ಕಾವ್ಯಾನುಶಾಸನ

ಕಿರಾತ : ಕಿರಾತಾರ್ಜುನೀಯ

ಕುವಲ : ಕುವಲಯಾನಂದ

ಕು. ಸಂ. ಅಥವಾ ಕುಮಾರ : ಕುಮಾರಸಂಭವ

ಗಾಥಾ (ಹಾಲ.) : ಗಾಥಾಸಪ್ತಶತಿ (ಹಾಲಸಪ್ತಶತಿ)

ದ. ರೂ : ದಶರೂಪಕ

ಧ್ವನ್ಯಾ : ಧ್ವನ್ಯಾಲೋಕ

ನಾಗಾ : ನಾಗಾನಂದ

ನಾ. ಶಾ : ನಾಟ್ಯಶಾಸ್ತ್ರ

ಪ್ರತಾಪ : ಪ್ರತಾಪರುದ್ರೀಯ

ಪಾಠ : ಪಾಠಾಂತರ

ಪ್ರಿಯ. ಅಥವಾ ಪ್ರಿಯದ : ಪ್ರಿಯದರ್ಶಿಕಾ

ಬ. ನಾ. ಶಾ : ಬರೋಡದಲ್ಲಿ ಮುದ್ರಿತವಾದ ನಾಟ್ಯಶಾಸ್ತ್ರ*

ಭರ್ತೃ. ನೀತಿ : ಭರ್ತೃಹರಿಯ ನೀತಿಶತಕ

ಭರ್ತೃ. ವೈ. ಶ : ಭರ್ತೃಹರಿಯ ವೈರಾಗ್ಯಶತಕ

---

* ಬ.ನಾ.ಶಾ : ಬರೋಡಾದ 'ಗಾಯಕವಾಡ್ ಓರಿಯಂಟಲ್ ಸೀರೀಸ್'ನಲ್ಲಿ 'ಅಭಿನವಭಾರತೀ'ಯೊಡನೆ ಮೊದಲ ಮೂರು ಭಾಗ ಪ್ರಕಟವಾಗಿದೆ.

ಭರ್ತೃ. ಶೃ. ಶ : ಭರ್ತೃಹರಿಯ ಶೃಂಗಾರಶತಕ

ಭೋಜ : ಭೋಜಪ್ರಬಂಧ

ಮಹಾ : ಮಹಾವೀರಚರಿತ

ಮಾಘ : ಮಾಘನ ಶಿಶುಪಾಲವಧ

ಮಾ. ಮಾ : ಮಾಲತೀಮಾಧವ

ಮಾಲ. ಮಿ : ಮಾಲವಿಕಾಗ್ನಿಮಿತ್ರ

ಮುದ್ರಾ : ಮುದ್ರಾರಾಕ್ಷಸ

ಮೃಚ್ಛ : ಮೃಚ್ಛಕಟಿಕ

ರಘು : ರಘುವಂಶ

ರತ್ನಾ : ರತ್ನಾವಲೀ

ವಿಕ್ರಮೋ : ವಿಕ್ರಮೋರ್ವಶೀಯ

ವೇಣೀ : ವೇಣೀಸಂಹಾರ

ಶಾಕುಂ : ಅಭಿಜ್ಞಾನ ಶಾಕುಂತಲಾ

ಶಾರ್ಙ್ಗ. ಅಥವಾ ಶಾರ್ಙ್ಗಧರ : ಶಾರ್ಙ್ಗಧರಪದ್ಧತಿ

ಸ. ಕಂ : ಸರಸ್ವತೀಕಂಠಾಭರಣ

ಸ. ದ. : ಸಾಹಿತ್ಯದರ್ಪಣ

ಸಾ. ಸಾರ : ಸಾಹಿತ್ಯಸಾರ

ಹನು : ಹನುಮನ್ನಾಟಕ ಅಥವಾ ಮಹಾನಾಟಕ

ಹಾಲ್ : Fitzedward Hall ಅವರು ಸಂಪಾದಿಸಿದ 'ದಶರೂಪಕ'

ಹಾಲ (ಗಾಥಾ) : ಹಾಲಸಪ್ತಶತಿ (ಗಾಥಾಸಪ್ತಶತಿ)

ಹ್ಯಾಸ್ : George C.O. Haas ಅವರ ಆಂಗ್ಲಾನುವಾದ ಸಮೇತವಾದ 'ದಶರೂಪಕ'

ಹೇ. ಕಾವ್ಯಾ : ಹೇಮಚಂದ್ರನ ಕಾವ್ಯಾನುಶಾಸನ

# ನಿರ್ದೇಶಿತ ಗ್ರಂಥಗಳ ಸಂಸ್ಕರಣಾದಿ ವಿವರ

[ಮುಂದೆ, ಗ್ರಂಥದ ವ್ಯಾಖ್ಯಾಭಾಗದಲ್ಲಿ ಬರುವ ಉದಾಹರಣೆಗಳಿಗೆ ಆಕರ ತಿಳಿದಿರುವಲ್ಲೆಲ್ಲ ಅದನ್ನು ಅಲ್ಲಲ್ಲೆ ಕೊಟ್ಟಿದೆ. ಆಯಾ ಉದಾಹರಣೆ ಆಯಾ ಆಕರ ಗ್ರಂಥದ ಯಾವ ಸ್ಥಲದಲ್ಲಿ ಸಿಗುತ್ತದೆಂಬುದನ್ನೂ, ಸಾಧ್ಯವಾದಲ್ಲೆಲ್ಲ, ಅಲ್ಲಿಯೇ ಕೊಡಲಾಗಿದೆ. ಇಂಥ ಸ್ಥಲನಿರ್ದೇಶನಕ್ಕೆ ಇಲ್ಲಿ ಬಳಸಿಕೊಂಡಿರುವ ಆಯಾ ಗ್ರಂಥದ ಸಂಸ್ಕರಣಾದಿ ವಿವರಗಳನ್ನು ಕೆಳಗೆ ಕೊಟ್ಟಿದೆ. ಅಗತ್ಯವಾದ ಗ್ರಂಥಗಳಿಗೆ ಮಾತ್ರವೇ ಸಂಸ್ಕರಣಾದಿವಿವರ ಕೊಟ್ಟಿದೆಯೆಂಬುದನ್ನು ಗಮನಿಸಬೇಕು.]

ಅನರ್ಘರಾಘವ : ಮುಂಬೈನ ನಿರ್ಣಯಸಾಗರ ಪ್ರೆಸ್ಸಿನ ೨ನೆಯ ಮುದ್ರಣ

ಅಭಿಜ್ಞಾನ ಶಾಕುಂತಲಾ : ಮುಂಬೈನ ನಿರ್ಣಯಸಾಗರ ಪ್ರೆಸ್ಸಿನ ೧೦ನೆಯ ಮುದ್ರಣ

ಅಮರುಶತಕ : ಮುಂಬೈನ ನಿರ್ಣಯಸಾಗರ ಪ್ರೆಸ್ಸಿನ ೩ನೆಯ ಮುದ್ರಣ

ಉತ್ತರರಾಮಚರಿತ : ಮುಂಬೈನ ನಿರ್ಣಯಸಾಗರ ಪ್ರೆಸ್ಸಿನ ೯ನೆಯ ಮುದ್ರಣ

ಕರ್ಪೂರಮಂಜರೀ : ಕಾಶಿಯ ಚೌಖಂಬಾ ಸಂಸ್ಕೃತ ಸೀರೀಸ್‌ನ ಮುದ್ರಣ

ಕಿರಾತಾರ್ಜುನೀಯ : ನಿರ್ಣಯಸಾಗರ ಪ್ರೆಸ್ಸಿನ ೧೩ನೆಯ ಮುದ್ರಣ

ಕುಮಾರಸಂಭವ : ನಿರ್ಣಯಸಾಗರ ಪ್ರೆಸ್ಸಿನ ೧೨ನೆಯ ಮುದ್ರಣ

ಗಾಥಾಸಪ್ತಶತಿ (ಹಾಲಸಪ್ತಶತಿ) : ನಿರ್ಣಯಸಾಗರ ಪ್ರೆಸ್ಸಿನ ೩ನೆಯ ಮುದ್ರಣ

ಧ್ವನ್ಯಾಲೋಕ : ನಿರ್ಣಯಸಾಗರ ಪ್ರೆಸ್ಸಿನ ೨ನೆಯ ಮುದ್ರಣ

ನವಸಾಹಸಾಂಕಚರಿತೆ : ಬಾಂಬೆ ಸಂಸ್ಕೃತ ಸೀರೀಸ್‌ನ ೫೩ನೆಯ ಸಂಖ್ಯೆಯ ಗ್ರಂಥ

ನಾಗಾನಂದ : ಕಾಶಿಯ ಚೌಖಂಬಾ ಸಂಸ್ಕೃತ ಸೀರೀಸ್‌ನ ೨ನೆಯ ಮುದ್ರಣ

ನಾಟ್ಯಶಾಸ್ತ್ರ : ಕಾಶಿಯ ಚೌಖಂಬಾ ಸಂಸ್ಕೃತ ಸೀರೀಸ್‌ನ ೨ನೆಯ ಮುದ್ರಣ

ಪ್ರತಾಪರುದ್ರೀಯ : ಬಾಂಬೆ ಸಂಸ್ಕೃತ ಸೀರೀಸ್‌ನ ೬೫ನೆಯ ಸಂಖ್ಯೆಯ ಗ್ರಂಥ (೧೯೦೯)

ಮಹಾವೀರಚರಿತೆ : ನಿರ್ಣಯಸಾಗರ ಪ್ರೆಸ್ಸಿನ ೪ನೆಯ ಮುದ್ರಣ

ಮಾಲತೀಮಾಧವ : ನಿರ್ಣಯಸಾಗರ ಪ್ರೆಸ್ಸಿನ ೫ನೆಯ ಮುದ್ರಣ

ಮಾಲವಿಕಾಗ್ನಿಮಿತ್ರ : ನಿರ್ಣಯಸಾಗರ ಪ್ರೆಸ್ಸಿನ ಮುದ್ರಣ

ಮುದ್ರಾರಾಕ್ಷಸ : ನಿರ್ಣಯಸಾಗರ ಪ್ರೆಸ್ಸಿನ ೮ನೆಯ ಮುದ್ರಣ

ಮೃಚ್ಛಕಟಿಕಾ : ನಿರ್ಣಯಸಾಗರ ಪ್ರೆಸ್ಸಿನ ೭ನೆಯ ಮುದ್ರಣ

ಮೇಘದೂತ : ನಿರ್ಣಯಸಾಗರ ಪ್ರೆಸ್ಸಿನ ೧೪ನೆಯ ಮುದ್ರಣ

ರಘುವಂಶ : ನಿರ್ಣಯಸಾಗರ ಪ್ರೆಸ್ಸಿನ ೪ನೆಯ ಮುದ್ರಣ

ರತ್ನಾವಲೀ : ನಿರ್ಣಯಸಾಗರ ಪ್ರೆಸ್ಸಿನ ೪ನೆಯ ಮುದ್ರಣ

ವಿಕ್ರಮೋರ್ವಶೀಯ : ನಿರ್ಣಯಸಾಗರ ಪ್ರೆಸ್ಸಿನ ಮುದ್ರಣ

ವಿದ್ಧಶಾಲಭಂಜಿಕಾ : ನಿರ್ಣಯಸಾಗರ ಪ್ರೆಸ್ಸಿನ ಮುದ್ರಣ

ವೇಣೀಸಂಹಾರ : ನಿರ್ಣಯಸಾಗರ ಪ್ರೆಸ್ಸಿನ ೬ನೆಯ ಮುದ್ರಣ

ಶಾರ್ಙ್ಗಧರಪದ್ಧತಿ : ಬಾಂಬೆ ಸಂಸ್ಕೃತ ಸೀರೀಸ್‌ನ ೩೭ನೆಯ ಸಂಖ್ಯೆಯ ಗ್ರಂಥ

ಸಾಹಿತ್ಯದರ್ಪಣ : ಕಾಶಿಯ ಚೌಖಂಬಾ ಸಂಸ್ಕೃತ ಸೀರೀಸ್‌ನ ೨ನೆಯ ಮುದ್ರಣ

ಹನುಮನ್ನಾಟಕ (ಮಹಾನಾಟಕ) : ವೆಂಕಟೇಶ ಮುದ್ರಣಾಲಯದವರ ೧ನೆಯ ಮುದ್ರಣ



# ದಶರೂಪಕದ ಅನುವಾದ ಟಿಪ್ಪಣಿ ೩.,

ಉದ್ಧೃತ್ಯೋದ್ಧೃತ್ಯ ಸಾರಂ ಯಮಖಿಲನಿಗಮಾನ್ನಾಟ್ಯವೇದಂ ವಿರಿಂಚಿ –
ಶ್ಚಕ್ರೇ ಯಸ್ಯ ಪ್ರಯೋಗಂ ಮುನಿರಪಿ ಭರತಸ್ತಾಂಡವಂ ನೀಲಕಂಠಃ ।
ಶರ್ವಾಣೀ ಲಾಸ್ಯಮಸ್ಯ ಪ್ರತಿಪದಮಪರಂ ಲಕ್ಷ್ಮ ಕಃ ಕರ್ತುಮೀಷ್ಟೇ
ನಾಟ್ಯಾನಾಂ ಕಿಂತು ಕಿಂಚಿತ್ಪ್ರಗುಣರಚನಯಾ ಲಕ್ಷಣಂ ಸಂಕ್ಷಿಪಾಮಿ॥

(೧–೪)

ಸಕಲ ವೇದಗಳಿಂದಲಜ ತನಿಬನಿಯನೆತ್ತಿದನೆತ್ತಿ ಯಾವುದ ರಚಿಸಿದನೊ
ಆ ನಾಟ್ಯವೇದವನು

ಯಾವುದನು ಜೋಡಿಸಿದನೋ ಮುನಿ ಭರತನೇ ಮೇಣ್ ತಾಂಡವವನಾಡಿದನೊ
ಶಂಕರನು

ಶೈಲಜೆಯೆ ತೋರಿದಳೊ ಲಾಸ್ಯದಿ, ಹುರುಡದಾರಿಗೆ ಬಿಡದದನು ಅಡಿಯಡಿಯ
ಲಕ್ಷಿಸುವ

ಅಂತೆಯೂ ನಾಟ್ಯಗಳ, ಕಿಂಚಿತ್, ಹಿರಿಯ ಗುಣಗಳನೆತ್ತಿ ಕಿರಿದರೊಳಿಡುವೆ ಲಕ್ಷಣವ

ಧನಂಜಯ ವಿರಚಿತ

# ದಶರೂಪಕ

[ಧನಿಕನ ದಶರೂಪಾವಲೋಕವ್ಯಾಖ್ಯೆ ಮತ್ತು ಟಿಪ್ಪಣಿ ಇ.,ಗಳ ಸಹಿತ]

## ಮೊದಲನೆಯ ಪ್ರಕಾಶ : ವಸ್ತು

## ಮಂಗಲಾಚರಣೆ

. **ಗಣೇಶಸ್ತುತಿ :**

**ನಮಸ್ತಸ್ಮೈ ಗಣೇಶಾಯ ಯತ್ಕಂಠಃ ಪುಷ್ಕರಾಯತೇ।**
**ಮದಾಭೋಗಘನಧ್ವಾನೋ ನೀಲಕಂಠಸ್ಯ ತಾಂಡವೇ ॥ ೧ ॥**

ಅನುವಾದ : ಮದೋತ್ಕರ್ಷ ಕಂಠದಿಂದ ಮೃದಂಗವೆಂಬೊಲು
ನೀಲಕಂಠ ತಾಂಡವದಲಿ ಘನಧ್ವಾನವೆಸಗುವವಗೆ
ನಮನ ಆ ಗಣೇಶಗೆ.

ವ್ಯಾಖ್ಯೆ : ಸದಾಚಾರ ಸಂಪ್ರದಾಯದಂತೆ, ಗ್ರಂಥರಚನೆಯಲ್ಲಿ ಬರುವ ವಿಘ್ನಗಳ ನಿವಾರಣೆಗೆಂದು ಮೊದಲ ...ರಡು ಶ್ಲೋಕಗಳಲ್ಲಿ ಇಷ್ಟದೇವತಾಸ್ತುತಿ ಬಂದಿದೆ. ತಾಂಡವ ಎಂದರೆ ಉದ್ಧತ ನೃತ್ಯ. ಇಲ್ಲಿ, ಈಶ್ವರನ ...ಂಡವದಲ್ಲಿ ಘನವಾದ ನಿನದದಿಂದ ಮೃದಂಗದಂತೆ ಧ್ವನಿಮಾಡುವ ಗಣೇಶನನ್ನು ಸ್ತುತಿಸಿದೆ. ಜೊತೆಗೆ, ...ಲಕಂಠ ಎಂದರೆ ನವಿಲು ಘನಧ್ವಾನ ಎಂದರೆ ಮೇಘಧ್ವನಿ ಎಂದೂ ಅರ್ಥವುಂಟು. ನವಿಲಿನ ಕುಣಿತಕ್ಕೆ ...ೕಘಧ್ವನಿಯೇ ಮೃದಂಗವಾಗಿರುತ್ತದೆ ಎಂದು ವಾಡಿಕೆ. ಇದೊಂದು ಕವಿಸಮಯ. [ಈ ಶ್ಲೇಷೆಯಿಂದ ...ೕಘಧ್ವನಿಸಹಿತವಾದ ಮಯೂರ ತಾಂಡವವನ್ನು ಉಪಮೆಯಂತೆ ಬಳಸಿದೆ; ಆದರೆ ಈ ಶ್ಲೇಷೆ ಶ್ಲೋಕದ ...ಂದು ಭಾಗದಲ್ಲಿ ಮಾತ್ರ ಬಂದಿದೆ. ಆದ್ದರಿಂದ] ಖಂಡಶ್ಲೇಷೆಯಿಂದ ಬಂದ ಉಪಮಾಚ್ಛಾಯಾಲಂಕಾರ ಇಲ್ಲಿದೆ.

. **ವಿಷ್ಣುಭರತರ ಸ್ತುತಿ :**

**ದಶರೂಪಾನುಕಾರೇಣ ಯಸ್ಯ ಮಾದ್ಯಂತಿ ಭಾವಕಾಃ।**
**ನಮಃ ಸರ್ವವಿದೇ ತಸ್ಮೈ ವಿಷ್ಣವೇ ಭರತಾಯ ಚ ॥ ೨ ॥**

ಅನು : ಯಾರ ದಶರೂಪಾನುಕರಣದಿ ಭಾವಕರು ನಲವಡೆವರೊ
ನಮಿಸುವೆನು, ಆ ಸರ್ವವೇತ್ತರು ವಿಷ್ಣುಭರತರಿಗೆ.

ವ್ಯಾಖ್ಯೆ : [ಈ ಶ್ಲೋಕ ವಿಷ್ಣುಭರತರಿಬ್ಬರಿಗೂ ಅನ್ವಯಿಸುತ್ತದೆ.] ಒಂದೆಡೆ, ದಶರೂಪ ಎಂದರೆ ...ತ್ಸ್ಯಕೂರ್ಮಾದಿ ಹತ್ತು ಅವತಾರಗಳು; ಭಾವಕ ಎಂದರೆ ಆ ದಶಾವತಾರಗಳನ್ನು ಕುರಿತು ಧ್ಯಾನಮಾಡುವ ...ತ್ತರು. ಇನ್ನೊಂದೆಡೆ, ದಶರೂಪ ಎಂದರೆ ನಾಟಕವೇ ಮೊದಲಾದ ಹತ್ತು ರೂಪಕಗಳು; ಅಲ್ಲಿ ಭಾವಕರೆಂದರೆ ...ಕರು. 'ಸರ್ವವೇತ್ತ' ಎಂಬ ಪದ ಇಬ್ಬರಿಗೂ ಅನ್ವಯಿಸುತ್ತದೆ.

ಟಿಪ್ಪಣಿ : ಹತ್ತು ರೂಪಕಗಳು ಯಾವುವೆಂಬುವಕ್ಕೆ ಮುಂದೆ [ಪ್ರಕಾಶ ೧; ಖಂಡ ೧೧ ]ನೋಡಿ೧. 'ರೂಪಕ' ಎಂಬ ಮಾತಿಗೆ ಬದಲಾಗಿ ಈಗ ನಾವು 'ನಾಟಕ' ಎಂಬ ಮಾತನ್ನು ಬಳಸುತ್ತಿದ್ದೇವೆ. ಶಾಸ್ತ್ರೀಯವಾಗಿ ಹೇಳುವುದಾದರೆ, 'ನಾಟಕ' ಎಂಬುದು 'ರೂಪಕ'ಗಳಲ್ಲಿನ ಒಂದು ಭೇದ ಮಾತ್ರ; ಪ್ರಮುಖವೂ ಪ್ರಥಮವೂ ಆದ ಭೇದ. ಆ ಭೇದದ ಹೆಸರನ್ನೆ ಎಲ್ಲವಕ್ಕೂ ಬಳಸುವ ರೂಢಿ ಅನಂತರ ಬಂದಿತು. ಈ ಗ್ರಂಥದ ಎಲ್ಲ ಕಡೆಗಳಲ್ಲಿಯೂ 'ರೂಪಕ' ಎಂಬುದಕ್ಕೆ 'ನಾಟ್ಯಕಾವ್ಯ' ಎಂದೂ, 'ನಾಟಕ' ಎಂಬುದಕ್ಕೆ 'ರೂಪಕದ ಒಂದು ಭೇದ' ಎಂದೂ ಅರ್ಥವನ್ನಿಟ್ಟುಕೊಂಡಿದೆ.

# ಗ್ರಂಥಪೀಠಿಕೆ

## ೩. ಶ್ರೋತೃಪ್ರವೃತ್ತಿ :

**ಕಸ್ಯಚಿದೇವ ಕದಾಚಿದ್ದಯಯಾ ವಿಷಯಂ ಸರಸ್ವತೀ ವಿದುಷಃ।**
**ಘಟಯತಿ ಕಮಪಿ ತಮನ್ಯೋ ವ್ರಜತಿ ಜನೋ ಯೇನ**
**ವೈದಗ್ಧೀಮ್ ॥ ೩ ॥**

ಅನು : ಯಾವನಾದರೂ ಒಬ್ಬ ವಿದ್ವಾಂಸನಲ್ಲಿ ಯಾವಾಗಲಾದರೊಮ್ಮೆ ಯಾವುದಾದರೊಂದು ವಿಷಯವನ್ನು ಸರಸ್ವತಿಯು ಕೃಪೆಯಿಂದ ಹೊಂದಿಸುತ್ತಾಳೆ; ಅದರಿಂದ ಮತ್ತೊಬ್ಬನು ಪಾಂಡಿತ್ಯವನ್ನು ಪಡೆಯುತ್ತಾನೆ.

ವ್ಯಾಖ್ಯೆ : ಗ್ರಂಥವನ್ನು ಕೇಳು(ಓದು)ವವರ ಪ್ರವೃತ್ತಿಯನ್ನು ಇಲ್ಲಿ ಹೇಳಿದೆ. ಯಾವುದೊಂದು ಗ್ರಂಥದ ರಚನೆಯ ಶಕ್ತಿಯನ್ನು ಯಾವಾಗಲಾದರೊಮ್ಮೆ ಯಾವನಾದರೊಬ್ಬ ಕವಿಗೆ ಸರಸ್ವತಿಯು ಕೊಟ್ಟಿರುತ್ತಾಳೆ. ಹಾಗೆ ಒಬ್ಬನಿಂದ ರಚಿತವಾದ ಗ್ರಂಥವನ್ನು ಓದಿ ಉಳಿದವರೂ ಪಂಡಿತರಾಗುತ್ತಾರೆ.

ಟಿಪ್ಪಣಿ : ಛಂದಸ್ಸು : ಆರ್ಯಾ. (ಈ ಗ್ರಂಥದ ಕಾರಿಕೆಗಳು ಸಾಮಾನ್ಯವಾಗಿ ಅನುಷ್ಟುಪ್ (ಶ್ಲೋಕ) ಛಂದಸ್ಸಿನಲ್ಲಿವೆ. ಅಲ್ಲಲ್ಲಿ ಕೆಲವು ಮಾತ್ರ ಬೇರೆ ಛಂದಸ್ಸಿನಲ್ಲಿವೆ. 'ಅನುಷ್ಟುಪ್' ಅಲ್ಲದೆ ಬೇರೆಯಾಗಿರುವ ಛಂದಸ್ಸುಗಳನ್ನು ಮಾತ್ರ ಆಯಾ ಕಾರಿಕೆಗಳ ಟಿಪ್ಪಣಿಗಳಲ್ಲಿ ಸೂಚಿಸಲಾಗಿದೆ.)

---

೧ ಮುಂದಿನ ಟಿಪ್ಪಣಿಗಳಲ್ಲಿ ಇದೇ ಗ್ರಂಥದ ಭಾಗಗಳನ್ನು ಸೂಚಿಸುವಾಗ, ಕೇವಲ ಅಂಕೆಗಳನ್ನು ಕೊಡಲಾಗಿದೆ. ಅವುಗಳಲ್ಲಿ ಮೊದಲನೆಯದು ಪ್ರಕಾಶದ ಸಂಖ್ಯೆಯನ್ನೂ ಎರಡನೆಯದು ಆ ಪ್ರಕಾಶದಲ್ಲಿನ ಖಂಡಸಂಖ್ಯೆಯನ್ನೂ ಸೂಚಿಸುತ್ತದೆ. [ಗ್ರಂಥದ ಎಡಭಾಗದಲ್ಲಿ ಖಂಡಸಂಖ್ಯೆಯೂ ಬಲಭಾಗದಲ್ಲಿ ಶ್ಲೋಕಸಂಖ್ಯೆಯೂ ಇದೆ.]

೨ ಅನುವಾದ ಮತ್ತು ವ್ಯಾಖ್ಯೆಯ ಭಾಗಗಳಲ್ಲಿ ಆವರಣಗಳನ್ನು ಬಳಸುವಾಗ ಒಂದು ಸಂಕೇತವನ್ನಿಟ್ಟು ಕೊಂಡಿದೆ : ಅಲ್ಲಿ, ( ) ಇಂತಹ ವಕ್ರ ಆವರಣದೊಳಗಿರುವ ಪದ ಅಥವಾ ಪದಗಳು ಆ ಆವರಣದ ಹಿಂದಿನ ಪದದ ಅರ್ಥವನ್ನು ಸೂಚಿಸುತ್ತವೆ. [ ] ಇಂತಹ ಚೌಕ ಆವರಣದೊಳಗಿರುವ ಪದ ಅಥವಾ ಪದಗಳು ಮೂಲದಲ್ಲಿ ಅಧ್ಯಾಹಾರವಾಗಿರುವುದನ್ನು ಸೂಚಿಸುತ್ತವೆ; ಆದ್ದರಿಂದ ಚೌಕ ಆವರಣದಲ್ಲಿರುವುದನ್ನು ವಾಕ್ಯದ ಕೂಡ ಸೇರಿಸಿಕೊಂಡೇ ಓದಬೇಕು.

## ೪. ಕೃತಿಕಾರನ ಪ್ರವೃತ್ತಿ :

ಉದ್ಧೃತ್ಯೋದ್ಧೃತ್ಯ ಸಾರಂ ಯಮಖಿಲನಿಗಮಾನ್ನಾಟ್ಯವೇದಂ ವಿರಿಂಚಿ
ಶ್ಚಕ್ರೇ ಯಸ್ಯ ಪ್ರಯೋಗಂ ಮುನಿರಪಿ ಭರತಸ್ತಾಂಡವಂ ನೀಲಕಂಠಃ।
ಶರ್ವಾಣೀ ಲಾಸ್ಯಮಸ್ಯ ಪ್ರತಿಪದಮಪರಂ ಲಕ್ಷ್ಮ ಕಃ ಕರ್ತುಮೀಷ್ಟೇ
ನಾಟ್ಯಾನಾಂ ಕಿಂತು ಕಿಂಚಿತ್ಪ್ರಗುಣರಚನಯಾ ಲಕ್ಷಣಂ ಸಂಕ್ಷಿಪಾಮಿ
॥ ೪ ॥

ಅನು : ಎಲ್ಲ ವೇದಗಳ ಸಾರವನ್ನು ಎತ್ತಿ ಎತ್ತಿ ಬ್ರಹ್ಮನು (ವಿರಿಂಚಿ) ನಾಟ್ಯವೇದವನ್ನು ವಿರಚಿಸಿದನು; [ಅದನ್ನು] ಮುನಿಯಾದ ಭರತನೇ ಪ್ರಯೋಗಿಸಿದನು; ನೀಲಕಂಠನು ತಾಂಡವವನ್ನೂ ಪಾರ್ವತಿಯು (ಶರ್ವಾಣೀ) ಲಾಸ್ಯವನ್ನೂ ಮಾಡಿ[ತೋರಿಸಿ]ದರು. [ಇಂತಹ] ಆ ನಾಟ್ಯವೇದಕ್ಕೆ ಪ್ರತಿಪದಪೂರ್ವಕವಾಗಿ ಮತ್ತೆ ಲಕ್ಷಣವನ್ನು ರಚಿಸಲು ಯಾರಿಗೆ ಸಾಧ್ಯವಾದೀತು? ಆದ್ದರಿಂದ ಕೆಲವು ವಿಶೇಷ ಗುಣಗಳನ್ನು ಎತ್ತಿ ಸಂಕ್ಷೇಪವಾಗಿ ಲಕ್ಷಣವನ್ನು ಹೇಳುತ್ತೇನೆ.

ವ್ಯಾಖ್ಯೆ: ವೇದಗಳೆಲ್ಲವುಗಳ ಸಾರವನ್ನು ಹಿಡಿದು ಬ್ರಹ್ಮನು ನಾಟ್ಯವೇದವನ್ನು ನಿರ್ಮಿಸಿದನು; ಕರಣ ಅಂಗಹಾರಗಳ ಮೂಲಕ ಅದರ ಅಭಿನಯವನ್ನು ಭರತಮುನಿ ಮಾಡಿದನು; ಹರನು ತಾಂಡವವನ್ನೂ ಪಾರ್ವತಿಯು ಲಾಸ್ಯವನ್ನೂ ಮಾಡಿದರು. ಅದರ ಲಕ್ಷಣವನ್ನು ಸಂಪೂರ್ಣವಾಗಿ ಮಾಡಲು ಯಾರು ಶಕ್ತರು? ಆ ನಾಟ್ಯವೇದದ ಒಂದು ಭಾಗವಾದ ದಶರೂಪಕಲಕ್ಷಣವನ್ನು ಮಾತ್ರ ಸಂಕ್ಷೇಪವಾಗಿ ಇಲ್ಲಿ ಹೇಳಿದೆ.

ಟಿಪ್ಪಣಿ : ಭರತಮುನಿ ವಿವರವಾಗಿ ಹೇಳಿರುವ ನಾಟ್ಯೋತ್ಪತ್ತಿಯ ಕಥೆಗೆ [ನಾಟ್ಯಶಾಸ್ತ್ರ: ಅಧ್ಯಾಯ ೧]ನೋಡಿ. ತಾಂಡವಲಾಸ್ಯಲಕ್ಷಣಗಳಿಗೆ ಮುಂದೆ [೧-೧೫] ನೋಡಿ.

'ಕರಣ' ಎಂದರೆ ಹಸ್ತ ಪಾದಗಳ ವಿನ್ಯಾಸವಿಧಾನ. ನಾ.ಶಾ.ದ ಪ್ರಕಾರ ಕರಣಗಳ ಸಂಖ್ಯೆ ೧೦೮. ಅಂಗಹಾರ ಎಂದರೆ ಅಂಗಗಳ ವಿಕ್ಷೇಪ. ಅಂಗಹಾರಗಳ ಸಂಖ್ಯೆ ೩೨. (ನೋಡಿ: ನಾ.ಶಾ.: ೪ನೆಯ ಅಧ್ಯಾಯ). ಛಂದಸ್ಸು : ಸ್ರಗ್ಧರಾ.

## ೫. ಸಂಕ್ಷೇಪಿಸಲು ಕಾರಣ :

ವ್ಯಾಕೀರ್ಣೇ ಮಂದಬುದ್ಧೀನಾಂ ಜಾಯತೇ ಮತಿವಿಭ್ರಮಃ।
ತಸ್ಯಾರ್ಥಸ್ತತ್ಪದೈಸ್ತೇನ ಸಂಕ್ಷಿಪ್ಯ ಕ್ರಿಯತೇಽಞ್ಜಸಾ ॥ ೫ ॥

ಅನು : ತೊಡಕಾಗಿರುವ[ಶಾಸ್ತ್ರದ]ಲ್ಲಿ ಅಲ್ಪಬುದ್ಧಿಗಳಿಗೆ ಮತಿವಿಭ್ರಮಣೆಯುಂಟಾಗುತ್ತದೆ. ಆದಕಾರಣ ಅದರ [ಎಂದರೆ, ನಾಟ್ಯಶಾಸ್ತ್ರದ] ಅರ್ಥವನ್ನು ಆಯಾ ಪದಗಳಿಂದಲೇ ಸಂಕ್ಷೇಪವಾಗಿ ನೇರವಾಗಿ [ಇಲ್ಲಿ] ಹೇಳಿದೆ.

ವ್ಯಾಖ್ಯೆ : ರಸಶಾಸ್ತ್ರ ತೊಡಕಾದುದು; ಅಲ್ಪಬುದ್ಧಿಗಳಿಗೆ ಅಲ್ಲಿ ವಿಭ್ರಮೆಯುಂಟಾಗುತ್ತದೆ. ಅದಕ್ಕಾಗಿ ಇಲ್ಲಿ ನಾಟ್ಯವೇದದ ಲಕ್ಷಣಗಳನ್ನು ಆಯಾ ಪದಗಳಿಂದಲೇ ಸಂಕ್ಷೇಪವಾಗಿ ಹಾಗೂ ನೇರವಾಗಿ ಹೇಳಲಾಗಿದೆ.

ಟಿಪ್ಪಣಿ ಇಲ್ಲಿನ ಪಾರಿಭಾಷಿಕ ಪದಗಳು ಹಾಗೂ ವಿಷಯಗಳು ನಾಟ್ಯಶಾಸ್ತ್ರದಿಂದ ತೆಗೆದುಕೊಂಡವು; ಆದಕಾರಣ 'ಆಯಾ ಪದಗಳಿಂದಲೇ' ಎಂದು ಹೇಳಿದೆ.

## ೬. ದಶರೂಪಕಗಳ ಫಲ :

**ಆನಂದನಿಸ್ಯಂದಿಷು ರೂಪಕೇಷು ವ್ಯುತ್ಪತ್ತಿಮಾತ್ರಂ ಫಲಮಲ್ಪಬುದ್ಧಿಃ।**
**ಯೋಽಪೀತಿಹಾಸಾದಿವದಾಹ ಸಾಧುಸ್ತಸ್ಮೈ ನಮಃ ಸ್ವಾದುಪರಾ**
**ಙ್ಮುಖಾಯ ॥ ೬ ॥**

ಅನು : ಆನಂದವನ್ನು ಒಸರಿಸುವ ರೂಪಕಗಳಲ್ಲಿ, ಇತಿಹಾಸಗಳಲ್ಲಿರುವಂತೆ, ಕೇವಲ ಪಾಂಡಿತ್ಯವೇ ಫಲವೆಂದು ಹೇಳುವ ಅಲ್ಪಬುದ್ಧಿಯ ಸಾಧುಮನುಷ್ಯನು ಯಾವನೋ, ಸವಿಯ ಕಡೆಗೆ ಬೆನ್ನು ತಿರುಗಿಸಿ ನಿಂತ ಆತನಿಗೆ ನಮಸ್ಕಾರ.

ವ್ಯಾಖ್ಯೆ : ದಶರೂಪಕಜ್ಞಾನ ಈ ಗ್ರಂಥದ ಫಲ. ಇನ್ನು ದಶರೂಪಕಗಳ ಫಲ ಯಾವುದು? 'ಒಳ್ಳೆಯ ಕಾವ್ಯವನ್ನು ಓದಿದರೆ ಧರ್ಮಾರ್ಥಕಾಮಮೋಕ್ಷಗಳಲ್ಲಿ ಮತ್ತು ಕಲೆಗಳಲ್ಲಿ ಕುಶಲತೆ, ಕೀರ್ತಿ ಹಾಗೂ ಪ್ರೀತಿ - ಇವುಗಳನ್ನು ಪಡೆಯಬಹುದು' [೧] ಎನ್ನುವಂತಹ ಮಾತುಗಳನ್ನು ನಿರಾಕರಿಸಿ, ಸ್ವಸಂವೇದ್ಯವಾದ ಪರಮಾನಂದ ರೂಪವಾದ ರಸದ ಸವಿಯೇ ದಶರೂಪಕಗಳ ಫಲ, ಇತಿಹಾಸಾದಿಗಳಲ್ಲಿಯಂತೆ ಧರ್ಮ ಅರ್ಥ ಕಾಮ ಈ ತ್ರಿವರ್ಗಗಳಲ್ಲಿ ಜ್ಞಾನ ಮಾತ್ರವಲ್ಲ - ಎಂಬುದನ್ನು ಸ್ಪಷ್ಟಗೊಳಿಸಲು ಈ ಮಾರ್ಮಿಕವಾದ ಮಾತು.

ಟಿಪ್ಪಣಿ : ರೂಪಕಗಳ(ಪರ್ಯಾಯವಾಗಿ ಕಲೆಯ) ಪರಮ ಪ್ರಯೋಜನವನ್ನು ಕುರಿತು ಸಂಸ್ಕೃತದ ಆಲಂಕಾರಿಕರು ಹೇಳಿರುವ ಮಾತುಗಳಲ್ಲೆಲ್ಲ ಇದು ಗಮನಾರ್ಹವಾದದ್ದು.

ಛಂದಸ್ಸು: ಇಂದ್ರವಜ್ರ.

# ಕೆಲವು ಮೂಲ ಸೂತ್ರಗಳು

## ೭. ನಾಟ್ಯಲಕ್ಷಣ :

**ಅವಸ್ಥಾನುಕೃತಿರ್ನಾಟ್ಯಂ**

ಅನು : [ಭಾವದ ವಿವಿಧ] ಸ್ಥಿತಿಗಳ ಅನುಕರಣ 'ನಾಟ್ಯ'.

ವ್ಯಾಖ್ಯೆ : [ರೂಪಕ]ಕಾವ್ಯದಲ್ಲಿ ಚಿತ್ರಿತವಾದ ಧೀರೋದಾತ್ತ ಮೊದಲಾದ ಅವಸ್ಥೆಗಳನ್ನು ತಾದಾತ್ಮ್ಯದಿಂದ ಚತುರ್ವಿಧ ಅಭಿನಯಗಳ ಮೂಲಕ ಅನುಕರಿಸುವಂಥದು 'ನಾಟ್ಯ'.

ಟಿಪ್ಪಣಿ : ಇಲ್ಲಿ ಭಾವದ ಕ್ರಿಯಾರೂಪಕ್ಕೆ 'ಅವಸ್ಥೆ'ಎಂಬ ಹೆಸರು. ಚತುರ್ವಿಧ ಅಭಿನಯಗಳು: ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ತ್ವಿಕ; ಇವುಗಳಲ್ಲಿ, ಅಂಗೋಪಾಂಗಗಳ ಚೇಷ್ಟೆಯುಳ್ಳದ್ದು ಆಂಗಿಕ; ರೂಪಕಕಾವ್ಯದ ಮಾತು ಗಾಯನ ಮೊದಲಾದವು ವಾಚಿಕ; ಪ್ರದರ್ಶನಕ್ಕೆ ಬಳಸುವ ವೇಷಭೂಷಣಸಾಮಗ್ರಿಗಳು ಆಹಾರ್ಯ; ಸೂಕ್ಷ್ಮಭಾವಗಳ ಸೂಕ್ಷ್ಮ ಅಭಿನಯ ಸಾತ್ತ್ವಿಕ. ಇವುಗಳ ವಿವರಣೆಗೆ ನೋಡಿ[೨] : ನಾ.ಶಾ. : ೮-೯ರಿಂದ ಮುಂದೆ.

ಹೋಲಿಕೆ = ನಾ.ಶಾ. : ೨೬-೧೧೪; ಸಾ.ದ. : ೬-೨; ಪ್ರತಾಪ : ೩-೧.

---

೧ (ಧರ್ಮಾರ್ಥಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ । ಕರೋತಿ ಕೀರ್ತಿಂ ಪ್ರೀತಿಂ ಚ ಸಾಧುಕಾವ್ಯನಿಷೇವಣಮ್ ॥ ) ಇದು ಭಾಮಹನ ಮಾತು. ನೋಡಿ : ಕಾವ್ಯಾಲಂಕಾರ ೧-೨.

೨ ಟಿಪ್ಪಣಿ ಇತ್ಯಾದಿಗಳಲ್ಲಿ ಬೇರೆ ಗ್ರಂಥದ ಭಾಗಗಳನ್ನು ಸೂಚಿಸುವಾಗ ಆಯಾ ಗ್ರಂಥದ ಸಂಕೇತವನ್ನೂ ಅದರ ಮುಂದೆ ಸಂಖ್ಯೆಗಳನ್ನೂ ಕೊಟ್ಟಿದೆ. ಸಂಖ್ಯೆ ಒಂದೇ ಇದ್ದರೆ ಅದು ಉದ್ದಿಷ್ಟ ಗ್ರಂಥದ ಪುಟವನ್ನೂ, ಸಂಖ್ಯೆ ಎರಡು ಇದ್ದರೆ ಅದರಲ್ಲಿ ಮೊದಲನೆಯದು ಉದ್ದಿಷ್ಟ ಗ್ರಂಥದ ಅಧ್ಯಾಯ ಮುಂತಾದ ಭಾಗವಿಶೇಷವನ್ನು ಹಾಗೂ ಎರಡನೆಯದು ಆ ಭಾಗದಲ್ಲಿನ ಶ್ಲೋಕ ಸಂಖ್ಯೆಯನ್ನೂ ಸೂಚಿಸುತ್ತವೆ. ಗ್ರಂಥ ಸಂಕೇತಗಳ ವಿವರ ಗ್ರಂಥದ ಆದಿಭಾಗದಲ್ಲಿದೆ.

## ೮. ರೂಪಲಕ್ಷಣ :

ರೂಪಂ ದೃಶ್ಯತಯೋಚ್ಯತೇ ।

ಅನು : [ಅದು]ದೃಶ್ಯವಾದುದರಿಂದ [ಎಂದರೆ, ಕಣ್ಣೆದುರು ತೋರಿಸಲ್ಪಡುವುದರಿಂದ]'ರೂಪ' ಎನ್ನುತ್ತಾರೆ.

ವ್ಯಾಖ್ಯೆ : ನೀಲ, ಕೆಂಪು ಇತ್ಯಾದಿ ಬಣ್ಣವಂತೆ ಇದೂ ಕಣ್ಣಿಗೆ ತೋರುವುದರಿಂದ 'ನಾಟ್ಯ'ಕ್ಕೆ 'ರೂಪ' ಎಂಬ ಹೆಸರು.

## ೯. ರೂಪಕಲಕ್ಷಣ :

ರೂಪಕಂ ತತ್ಸಮಾರೋಪಾತ್

ಅನು : [ನಟರು] ಅದನ್ನು [ಎಂದರೆ ಅವಸ್ಥೆಯ ಅನುಕರಣದ ರೂಪವನ್ನು ತಮ್ಮಲ್ಲಿ] ಸಂಪೂರ್ಣ ಆರೋಪಿಸಿಕೊಳ್ಳುವುದರಿಂದ 'ರೂಪಕ' [ಎಂಬ ಹೆಸರು].

ವ್ಯಾಖ್ಯೆ : ನಟರಲ್ಲಿ ರಾಮಾದಿಗಳ ಅವಸ್ಥೆಯು ಆರೋಪಿತವಾಗಿದ್ದು ಕಣ್ಣಿಗೆ ತೋರುತ್ತವೆ; 'ಮುಖಚಂದ್ರ' ಎಂಬ ಅಲಂಕಾರಿಕ ವಚನವಲ್ಲಿ ಮುಖದಲ್ಲಿ ಚಂದ್ರನ ಆರೋಪ ಇರುವ ಹಾಗೆ. ಆದ್ದರಿಂದ 'ರೂಪಕ' ಎಂಬ ಹೆಸರು. ಇಂದ್ರ, ಪುರಂದರ, ಶಕ್ರ – ಈ ಮೂರು ಹೆಸರುಗಳು ನಾಮದಲ್ಲಿ ಬೇರೆಯಾಗಿದ್ದರೂ ಅರ್ಥದಲ್ಲಿ ಒಂದೇ ಆಗಿರುವಂತೆ [ನಾಟ್ಯ, ರೂಪ, ರೂಪಕ] ಈ ಮೂರು ಹೆಸರುಗಳು ಸಮಾನಾರ್ಥಕಗಳಾಗಿವೆ.

ಟಿಪ್ಪಣಿ : ಹೋಲಿಕೆ = ಸಾ.ದ. : ೬–೧.

## ೧೦. ರೂಪಕ ಭೇದ ಸಂಖ್ಯೆ :

ದಶಧೈವ ರಸಾಶ್ರಯಮ್ ॥ ೭ ॥

ಅನು : ರಸವನ್ನು ಆಶ್ರಯಿಸಿದ [ರೂಪಕಗಳು] ಕೇವಲ ಹತ್ತು ವಿಧಗಳಾಗಿವೆ.

ವ್ಯಾಖ್ಯೆ : ಶುದ್ಧವಾಗಿ ರೂಪಕಗಳು ಹತ್ತು; ಕೆಲವರು ನಾಟಿಕಾ ಇತ್ಯಾದಿ[ಉಪರೂಪಕ]ಗಳನ್ನೂ ಇವರೊಂದಿಗೆ ಬೆರಸಿ ಹೇಳಿಬಿಡುವರಾದ್ದರಿಂದ 'ಕೇವಲ ಹತ್ತು' ಎಂದು ಒತ್ತಿ ಹೇಳಿದೆ.

ಟಿಪ್ಪಣಿ : ರೂಪಕಗಳ ರಸಾಶ್ರಯವನ್ನು ಕುರಿತು ೩–೩೬ರಿಂದ ೩೮ರಲ್ಲಿ ಹೇಳಿದೆ.

ಇಲ್ಲಿ 'ಉಪರೂಪಕ'ಗಳನ್ನು ಹೇಳಿಲ್ಲ. ಧನಂಜಯ ಧನಿಕರ ಪ್ರಕಾರ ಅವುಗಳನ್ನು 'ರೂಪಕ'ಗಳೊಂದಿಗೆ ಕೂಡಿಸುವುದು ತಪ್ಪು. ಭರತಮುನಿಯ ನಾಟ್ಯಶಾಸ್ತ್ರದಲ್ಲಿ ಕೂಡ ಉಪರೂಪಕಗಳ ಉಲ್ಲೇಖವಿಲ್ಲ. ಅವು, ಭರತನ ಅನಂತರ ಕಲ್ಪಿತವಾಗಿದ್ದಿರಬಹುದು ಇಲ್ಲವೆ ಕೇವಲ ನೃತ್ಯಭೇದಗಳಿದ್ದಿರಬಹುದು. (ಉಪರೂಪಕಗಳಲ್ಲಿ ರೂಪಕ ಲಕ್ಷಣಗಳುಳ್ಳ ಕೆಲವನ್ನು ಈ ಹತ್ತು ರೂಪಕಗಳೊಳಗೇ ಕೂಡಿಸಿಬಿಡಬಹುದು.) ಆದರೆ ಉಪರೂಪಕಗಳಲ್ಲಿ ಮೊದಲನೆಯದಾದ 'ನಾಟಿಕಾ'ವನ್ನು ಕುರಿತು ನಾ.ಶಾ.ದಲ್ಲಿ [೨೦–೬೨ರಿಂದ ೬೪]ಉಲ್ಲೇಖವಿದೆ. ನಾಟಿಕಾ ಲಕ್ಷಣ ಮಾತ್ರ ಈ ಗ್ರಂಥದಲ್ಲೂ [೩–೪೬ರಿಂದ ೫೨] ಬಂದಿದೆ.

ಉಪರೂಪಕಗಳು : ನಾಟಿಕಾ, ತ್ರೋಟಕ, ಗೋಷ್ಠೀ, ಸಟ್ಟಕ, ನಾಟ್ಯರಾಸಕ, ಪ್ರಸ್ಥಾನ, ಉಲ್ಲಾಪ್ಯ, ಕಾವ್ಯ, ಪ್ರೇಂಖಣ, ರಾಸಕ, ಸಂಲಾಪಕ, ಶ್ರೀಗದಿತ, ಶಿಲ್ಪಕ, ವಿಲಾಸಿಕಾ, ದುರ್ಮಲ್ಲಿಕಾ, ಪ್ರಕರಣೀ, ಹಲ್ಲೀಶ, ಭಾಣಿಕಾ– ಈ ಹದಿನೆಂಟು.

## ೧೧. ದಶರೂಪಕಗಳು :

ನಾಟಕಂ ಸಪ್ರಕರಣಂ ಭಾಣಃ ಪ್ರಹಸನಂ ಡಿಮಃ।
ವ್ಯಾಯೋಗಸಮವಕಾರೌವೀಥ್ಯಂಕೇಹಾಮೃಗಾ ಇತಿ ॥ ೮ ॥

ಅನು : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ – ಹೀಗೆ[ಆ ಹತ್ತು ರೂಪಕಗಳು].

ಟಿಪ್ಪಣಿ : 'ಅಂಕ' ಎಂಬುದಕ್ಕೆ 'ಉತ್ಸೃಷ್ಟಿಕಾಂಕ' ಎಂಬುದು ಪೂರ್ಣ ಹೆಸರು; ನೋಡಿ : ೩-೬೩. ಪ್ರತಾಪ.[೩-೨]ದಲ್ಲಿ ಈ ಭಾಗವನ್ನು ಉದ್ಧರಿಸಲಾಗಿದೆ.

ಹೋಲಿಕೆ = ನಾ.ಶಾ. : ೨೦-೨, ೩; ಸಾ.ದ. : ೬-೩.

# ನಾಟ್ಯ ನೃತ್ಯ ಮತ್ತು ನೃತ್ತ

## ೧೨. ನೃತ್ಯಲಕ್ಷಣ :

ಅನ್ಯದ್ಭಾವಾಶ್ರಯಂ ನೃತ್ಯಂ

ಅನು : ಭಾವವನ್ನು ಆಶ್ರಯಿಸಿರುವ ನೃತ್ಯವು [ನಾಟ್ಯದಿಂದ] ಬೇರೆಯಾಗಿದೆ.

ವ್ಯಾಖ್ಯೆ : 'ಡೋಂಬೀ, ಶ್ರೀಗದಿತ, ಭಾಣ, ಭಾಣೀ, ಪ್ರಸ್ಥಾನ, ರಾಸಕ, ಕಾವ್ಯ – ಈ ಏಳು ನೃತ್ಯಭೇದಗಳು ಕೂಡ 'ಭಾಣ'ವನ್ನು ಹೋಲುತ್ತವೆ'[1] ಎಂದು ಹೇಳಿಕೆಯಿದೆ. 'ಭಾಣ'ವು ದಶರೂಪಕಗಳಲ್ಲಿ ಒಂದು; 'ಭಾಣ'ವನ್ನು ಹೋಲುವ ಮೇಲಿನ ಏಳು ನೃತ್ಯಪ್ರಕಾರಗಳು ಕೂಡ ರೂಪಕಭೇದಗಳೇ ಆಗಬೇಕಲ್ಲವೆ? ಹಾಗಿದ್ದರೆ ರೂಪಕಭೇದಗಳು 'ಕೇವಲ ಹತ್ತು' ಎಂಬ ಮಾತು ಎಲ್ಲಿ ನಿಲ್ಲುತ್ತದೆ – ಎಂದು ಸಂದೇಹ ಬರಬಹುದು. ಅದಕ್ಕೆ ಸಮಾಧಾನವಾಗಿ ಗ್ರಂಥಕಾರನು ನೃತ್ಯದ ಲಕ್ಷಣವನ್ನು ಹೇಳಿ ಅದು ರೂಪಕದಿಂದ ಬೇರೆಯೆಂದು ತಿಳಿಸಿದ್ದಾನೆ. ನೃತ್ಯವು ಭಾವವನ್ನು ಆಶ್ರಯಿಸಿದ್ದು; ನಾಟ್ಯವು ರಸವನ್ನು ಆಶ್ರಯಿಸಿದ್ದು. ಅವುಗಳ ವಿಷಯ ಭಿನ್ನವಾಗಿರುವ ಕಾರಣ ಅವೂ ಬೇರೆ ಬೇರೆಯೇ ಆಗಿವೆ. 'ನೃತ್ಯ' ಎಂಬುದು 'ನೃತ್' ಎಂಬ ಧಾತುವಿನಿಂದ ಬಂದದ್ದು; ನೃತ್ ಎಂದರೆ ಅಂಗವಿಕ್ಷೇಪ; ಎಂದರೆ, ನೃತ್ಯದಲ್ಲಿ ಪ್ರಧಾನವಾದದ್ದು [ನಾಟ್ಯದ ಚತುರ್ವಿಧ ಅಭಿನಯಗಳಲ್ಲಿ ಒಂದಾದ ಆಂಗಿಕಾಭಿನಯ ಮಾತ್ರ, ನೃತ್ಯ ಮಾಡುವಾತನಿಗೆ 'ನರ್ತಕ' ಎಂಬ ಹೆಸರಿದೆ. ಅಲ್ಲದೆ ನೃತ್ಯವು ಕೇವಲ ನೋಟಕ್ಕೆ ಸಂಬಂಧಿಸಿದ್ದು. ನಾಟ್ಯವು ರಸವಿಷಯ. ರಸೋತ್ಪತ್ತಿಗೆ ಕಾರಣವಾಗುವ, ಅನುಭಾವವಿಭಾವವ್ಯಭಿಚಾರಿಗಳಿಂದ ಕೂಡಿದ, ಕಾವ್ಯವನ್ನು ಅವಲಂಬಿಸಿರುವ ನಾಟ್ಯದಲ್ಲಿ ವಾಕ್ಯಾರ್ಥಾಭಿನಯ (ವಾಚಿಕ ಇ.,) ಉಂಟು. 'ನಾಟ್ಯ'ವೆಂಬ ಪದದ ಮೂಲ ಧಾತು 'ನಟ್'. ಅವಸ್ಪಂದನ (ಅಲುಗುವಿಕೆ) ಎಂಬುದು ಅದರ ಅರ್ಥ. ಎಂದರೆ ನಾಟ್ಯದಲ್ಲಿ ಬಹು ಸ್ವಲ್ಪವಾದ ಅಂಗಚಲನೆ ಇರುತ್ತದೆ. ಅಲ್ಲಿನ ಅಭಿನಯದಲ್ಲಿ ಸಾತ್ತ್ವಿಕ ಬಾಹುಲ್ಯವಿದೆ. ನಾಟ್ಯ ಮಾಡುವಾತನಿಗೆ 'ನಟ' ಎಂಬ ಹೆಸರು. ಅಂಗವಿಕ್ಷೇಪದ ದೃಷ್ಟಿಯಿಂದ ನೃತ್ಯನೃತ್ತಗಳು ಒಂದೇ ಆಗಿದ್ದರೂ, ನೃತ್ಯವು ಅನುಕಾರಾತ್ಮಕವಾಗಿರುವ ಕಾರಣ [ಅಭಿನಯಶೂನ್ಯವಾದ] ನೃತ್ತದಿಂದ ಬೇರೆಯಾಗಿದೆಯಲ್ಲವೆ? (ನೃತ್ತಲಕ್ಷಣಕ್ಕೆ ಮುಂದಿನ ಖಂಡ ನೋಡಿ.) ಅದರಂತೆಯೇ ವಾಕ್ಯಾರ್ಥಾಭಿನಯವುಳ್ಳ ನಾಟ್ಯವು ಪದಾರ್ಥಾಭಿನಯವುಳ್ಳ ನೃತ್ಯದಿಂದ ನಿಶ್ಚಯವಾಗಿಯೂ ಬೇರೆಯಾಗಿದೆ.

ಟಿಪ್ಪಣಿ : ಭಾವರಸ ಇತ್ಯಾದಿಗಳ ವಿವರಕ್ಕೆ ಆನೆಯ ಪ್ರಕಾಶ ನೋಡಿ.

ಹೋಲಿಕೆ = ಪ್ರತಾಪ : ೩-೨.

---

೧ 'ಡೋಂಬೀ ಶ್ರೀಗದಿತಂ ಭಾಣೋ ಭಾಣೀಪ್ರಸ್ಥಾನರಾಸಕಾಃ । ಕಾವ್ಯಂ ಚ ಸಪ್ತ.ನೃತ್ಯಸ್ಯ ಭೇದಾಃ ಸ್ಯುಸ್ತೇಽಪಿ ಭಾಣವತ್ ॥'–ಈ ಉದ್ಧೃತಿ ಯಾವ ಗ್ರಂಥದಿಂದ ಆಯ್ದುದೆಂದು ತಿಳಿಯದು.

## ೧೩. ನೃತ್ತಲಕ್ಷಣ :

ನೃತ್ತಂ ತಾಲಲಯಾಶ್ರಯಮ್ ।

ಅನು : ತಾಲಲಯಗಳನ್ನು ಆಶ್ರಯಿಸಿದ್ದು 'ನೃತ್ತ'. [ಅದು ನೃತ್ಯನಾಟ್ಯಗಳಿಂದ ಬೇರೆಯಾಗಿದೆ].

ವ್ಯಾಖ್ಯೆ : ತಾಲ ಎಂದರೆ ಚಂಚತ್ಪುಟ ಇತ್ಯಾದಿಗಳು; ಲಯ ಎಂದರೆ ದ್ರುತ ಮುಂತಾದವು. ಅಭಿನಯ ಶೂನ್ಯವಾಗಿ ಕೇವಲ ತಾಲಲಯಗತಿಗಳನ್ನು ಅವಲಂಬಿಸಿದ ಅಂಗವಿಕ್ಷೇಪವು 'ನೃತ್ತ'.

ಟಿಪ್ಪಣಿ : ತಾಲಲಯ ಇತ್ಯಾದಿಗಳ ವಿವರ ನಾ.ಶಾ.ದ ೩೧ನೇ ಅಧ್ಯಾಯದ ಮೊದಲಿಗೆ ಬಂದಿದೆ.

ಹೋಲಿಕೆ = ಪ್ರತಾಪ : ೩-೨.

## ೧೪. ನೃತ್ಯನೃತ್ತಗಳಲ್ಲಿನ ಭೇದ :

ಆದ್ಯಂ ಪದಾರ್ಥಾಭಿನಯೋ ಮಾರ್ಗೋ ದೇಶೀ ತಥಾ ಪರಮ್ ॥ ೯ ॥

ಅನು : ಪದಾರ್ಥಾಭಿನಯವುಳ್ಳ ಮೊದಲನೆಯದು [ಎಂದರೆ, ನೃತ್ಯವು] ಮಾರ್ಗ; [ಅಭಿನಯಶೂನ್ಯವಾದ] ಮತ್ತೊಂದು [ಎಂದರೆ, ನೃತ್ತವು] 'ದೇಶೀ'.

ವ್ಯಾಖ್ಯೆ : ಪದಾರ್ಥಾಭಿನಯವುಳ್ಳ ನೃತ್ಯವು 'ಮಾರ್ಗ'ವೆಂದು ಪ್ರಸಿದ್ಧವಾಗಿದೆ; ನೃತ್ತವು 'ದೇಶೀ'.

ಟಿಪ್ಪಣಿ : ಶಾಸ್ತ್ರೀಯ ಪರಂಪರೆಯನ್ನುಳ್ಳ ಕಲೆಗೆ 'ಮಾರ್ಗ' ಎಂದೂ ಹಾಗಲ್ಲದೆ ಜಾನಪದವಾಗಿರುವ ಕಲೆಗೆ 'ದೇಶೀ' ಎಂದೂ ಸಾಮಾನ್ಯವಾಗಿ ವರ್ಗೀಕರಿಸುತ್ತಾರೆ. ನೃತ್ಯ ನೃತ್ತಗಳ ಬಗೆಗೆ ನಾ.ಶಾ.ವಲ್ಲಿನ ವಿವರಗಳಿಗೆ ನೋಡಿ: ನಾ.ಶಾ.: ೪-೨೬೦ರಿಂದ ಮುಂದೆ.

## ೧೫. ನೃತ್ಯನೃತ್ತಗಳಲ್ಲಿನ ಪ್ರಕಾರಗಳು :

ಮಧುರೋದ್ಧತಭೇದೇನ ತದ್ದ್ವಯಂ ದ್ವಿವಿಧಂ ಪುನಃ ।
ಲಾಸ್ಯತಾಂಡವರೂಪೇಣ ನಾಟಕಾದ್ಯುಪಕಾರಕಮ್ ॥ ೧೦ ॥

ಅನು : [ನೃತ್ಯನೃತ್ತಗಳೆರಡೂ] ಮಧುರ ಮತ್ತು ಉದ್ಧತ ಎಂಬ ಭೇದಗಳಿಂದ ಮತ್ತೆ ಎರಡು ವಿಧವಾಗಿವೆ. ಲಾಸ್ಯ [ಎಂದರೆ, ಮಧುರ] ತಾಂಡವ [ಎಂದರೆ, ಉದ್ಧತ] [-ಈ ಎರಡು] ರೂಪಗಳಿಂದ [ಅವು] ನಾಟಕಾದಿ [ದಶರೂಪ] ಗಳಿಗೆ ಸಹಾಯಕವಾದವ್ವಾಗಿವೆ.

ವ್ಯಾಖ್ಯೆ: ಸುಕುಮಾರವಾದ ನೃತ್ಯನೃತ್ತಗಳೆರಡಕ್ಕೂ 'ಲಾಸ್ಯ' ಎನ್ನುತ್ತಾರೆ; ಹಾಗೆಯೇ ಉದ್ಧತವಾದ ನೃತ್ಯನೃತ್ತಗಳೆರಡಕ್ಕೂ 'ತಾಂಡವ' ಎನ್ನುತ್ತಾರೆ. ಅವು ನಾಟಕ ಮುಂತಾದ ದಶರೂಪಕಗಳಿಗೆ ಸಹಾಯಕಾರಿಗಳಾಗಿವೆ ಎಂಬ ಕಾರಣದಿಂದ ಅವುಗಳನ್ನು ಇಲ್ಲಿ ಎತ್ತಿ ಹೇಳಿದೆ. ನಾಟಕಾದಿಗಳಲ್ಲಿ, ಪದಾರ್ಥಾಭಿನಯಗಳನ್ನು ಒದಗಿಸುವುದರ ಮೂಲಕ ನೃತ್ಯವೂ ಶೋಭೆಯನ್ನುಂಟುಮಾಡುವುದರ ಮೂಲಕ ನೃತ್ತವೂ ಉಪಕಾರಿಗಳಾಗಿವೆ.

ಟಿಪ್ಪಣಿ : 'ಲಾಸ್ಯ'ಕ್ಕೆ ಹತ್ತು ಅಂಗಗಳು (ನೋಡಿ : ೩-೫೪)

ಮೇಲಿನ ಕಾರಿಕೆಯನ್ನು ಪ್ರತಾಪ.ದಲ್ಲಿ [೩-೨] ಉದ್ಧರಿಸಿದೆ.

# ರೂಪಕದಲ್ಲಿನ ವಸ್ತುಭೇದಗಳು

## ೧೬. ರೂಪಕಭೇದ ಕಾರಣಗಳು:

**ವಸ್ತು ನೇತಾ ರಸಸ್ತೇಷಾಂ ಭೇದಕಃ**

ಅನು : ಅವುಗಳಲ್ಲಿ [ಎಂದರೆ, ರೂಪಕಗಳಲ್ಲಿ] ವಸ್ತು, ನಾಯಕ ಮತ್ತು ರಸ [ಇವುಗಳು] ಭೇದಗಳನ್ನು ಕಲ್ಪಿಸುತ್ತವೆ.

ಟಿಪ್ಪಣಿ : ರೂಪಕಭೇದಗಳಿಗೆ ಮುಖ್ಯಕಾರಣಗಳು: ೧. ವಸ್ತು, ೨. ನಾಯಕ, ೩. ರಸ; ವಸ್ತುವಿಚಾರವನ್ನು ಈ ಗ್ರಂಥದ ಮೊದಲ ಪ್ರಕಾಶದಲ್ಲೂ, ನಾಯಕವಿಚಾರವನ್ನು ಎರಡನೆಯ ಪ್ರಕಾಶದಲ್ಲೂ, ರಸವಿಚಾರವನ್ನು ನಾಲ್ಕನೆಯ ಪ್ರಕಾಶದಲ್ಲೂ, ಇವುಗಳಿಂದ ಉಂಟಾಗುವ ರೂಪಕಭೇದಗಳನ್ನು ಮೂರನೆಯ ಪ್ರಕಾಶದಲ್ಲೂ ಹೇಳಿದೆ.

ಹೋಲಿಕೆ = ಪ್ರತಾಪ : ೩–೩.

## ೧೭. ವಸ್ತುಭೇದ :

**ವಸ್ತು ಚ ದ್ವಿಧಾ ।**

ಅನು : ವಸ್ತುವು ಎರಡು [ಪ್ರಕಾರವುಳ್ಳದ್ದಾಗಿದೆ].

ಟಿಪ್ಪಣಿ : ಹೋಲಿಕೆ = ನಾ.ಶಾ : ೨೧–೨; ಸಾ.ದ : ೬–೪೨.

## ೧೮. ಭೇದಗಳ ಲಕ್ಷಣ :

**ತತ್ರಾಧಿಕಾರಿಕಂ ಮುಖ್ಯಮಂಗಂ ಪ್ರಾಸಂಗಿಕಂ ವಿದುಃ ॥ ೧೧ ॥**

ಅನು : ಅವುಗಳಲ್ಲಿ ಮುಖ್ಯವಾದದ್ದನ್ನು 'ಆಧಿಕಾರಿಕ'ವೆಂದೂ ಅಂಗವಾದದ್ದನ್ನು 'ಪ್ರಾಸಂಗಿಕ'ವೆಂದೂ ತಿಳಿಯತಕ್ಕದ್ದು.

ವ್ಯಾಖ್ಯೆ : ಪ್ರಧಾನಭೂತವಾದ [ವಸ್ತುವು] 'ಆಧಿಕಾರಿಕ'; ಉದಾ:–ರಾಮಾಯಣದಲ್ಲಿ ರಾಮ–ಸೀತೆಯರ ವೃತ್ತಾಂತ. ಅದಕ್ಕೆ ಅಂಗಭೂತವಾದ [ವಸ್ತುವು] ಪ್ರಾಸಂಗಿಕ; ಉದಾ:– ರಾಮಾಯಣದಲ್ಲಿ ವಿಭೀಷಣ ಸುಗ್ರೀವ ಮೊದಲಾದವರ ವೃತ್ತಾಂತ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧–೨; ಸಾ.ದ. : ೬–೪೨.

## ೧೯. ಆಧಿಕಾರಿಕ ಲಕ್ಷಣ :

**ಅಧಿಕಾರಃ ಫಲಸ್ವಾಮ್ಯಮಧಿಕಾರೀ ಚ ತತ್ಪ್ರಭುಃ ।**

**ತನ್ನಿರ್ವರ್ತ್ಯ [1]ಮಭಿವ್ಯಾಪಿ[1] ವೃತ್ತಂ ಸ್ಯಾದಾಧಿಕಾರಿಕಮ್॥ ೧೨ ॥**

ಅನು : ಫಲವನ್ನು ಹೊಂದಿರುವುದು ಅಧಿಕಾರ; [ಆ ಫಲವನ್ನು] ಹೊಂದಿರುವಾತ 'ಅಧಿಕಾರಿ'; [ಫಲ ದೊರಕುವವರೆಗೆ] ನಿರ್ವಹಿಸುವುದಕ್ಕಾಗಿ ವ್ಯಾಪಿಸಿರುವ ವೃತ್ತಾಂತ 'ಆಧಿಕಾರಿಕ'.

---

[1] ಪಾಠ : ಅತಿವ್ಯಾಪಿ.

ವ್ಯಾಖ್ಯೆ : 'ಆಧಿಕಾರಿಕ' ಪದದ ವ್ಯುತ್ಪತ್ತಿಯನ್ನು ಹೇಳಿ ಅದರ ಲಕ್ಷಣವನ್ನು ಇಲ್ಲಿ ಸ್ಪಷ್ಟಗೊಳಿಸಿದೆ. ಫಲವನ್ನು ತನ್ನದಾಗಿ ಹೊಂದಿರುವುದು ಅಧಿಕಾರ; ಫಲವನ್ನು ಹೊಂದಿರುವವನೇ ಅಧಿಕಾರಿ; ಫಲ ಮತ್ತು ಅಧಿಕಾರಿಗಳು ದೊರಕುವವರೆಗೆ, ಅದನ್ನು ದೊರಕಿಸುವ ಸಲುವಾಗಿ ಫಲದ ಅಥವಾ ಅಧಿಕಾರಿಯ ಮೂಲಕವಾಗಿ ವ್ಯಾಪಿಸಿ ಸಾಗುವ ವೃತ್ತಾಂತ 'ಆಧಿಕಾರಿಕ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೩, ೪, ೫; ಸಾ.ದ. : ೬-೪೩.

## ೨೦. ಪ್ರಾಸಂಗಿಕ ಲಕ್ಷಣ :

**ಪ್ರಾಸಂಗಿಕಂ ಪರಾರ್ಥಸ್ಯ ಸ್ವಾರ್ಥೋ ಯಸ್ಯ ಪ್ರಸಂಗತಃ ।**

ಅನು : ಯಾವ ಬೇರೊಂದು ಪ್ರಯೋಜನವು ಪ್ರಸಂಗಾನುಸಾರವಾಗಿ ತನ್ನ ಪ್ರಯೋಜನಕ್ಕೆ [ಒದಗಿ ಬರುತ್ತದೆ]ಯೋ [ಅದು] 'ಪ್ರಾಸಂಗಿಕ'.

ವ್ಯಾಖ್ಯೆ : ಬೇರೆ ಪ್ರಯೋಜನವುಳ್ಳ ಯಾವುದೊಂದು ಇತಿವೃತ್ತವು, ಪ್ರಸಂಗಾನುಸಾರವಾಗಿ, ಪ್ರಧಾನ ಇತಿವೃತ್ತದ ಸ್ವಪ್ರಯೋಜನಸಿದ್ಧಿಗೆ ಒದಗಿಬಂದರೆ, ಅಂತಹ ಇತಿವೃತ್ತಕ್ಕೆ 'ಪ್ರಾಸಂಗಿಕ ಇತಿವೃತ್ತ ' ಎಂದು ಹೆಸರು.

ಟಿಪ್ಪಣಿ : ಹಿಂದೆ ಹೇಳಿದ ಉದಾಹರಣೆಗಳನ್ನೇ ತೆಗೆದುಕೊಂಡರೆ ಪ್ರಾಸಂಗಿಕವಾದ ಸುಗ್ರೀವ ವಿಭೀಷಣರ ಕಥೆಗಳು ಮುಖ್ಯ (ಆಧಿಕಾರಿಕ)ವಾದ ಶ್ರೀರಾಮನ ಕಥೆಗೇ ಪೋಷಣೆ ಕೊಡುತ್ತವೆ. ಶ್ರೀರಾಮನ ಕಥಾಫಲಕ್ಕೆ ಆ ಬೇರೆಯ ಕಥೆಗಳೂ ಕಾರಣವಾಗುತ್ತವೆ. ಕಥೆ ಬೇರೆಯದಾದರೂ ಅದರಿಂದ ಶ್ರೀರಾಮನ ಕಥೆ, ಪ್ರಸಂಗ ವಶದಿಂದ, ಸ್ವಪ್ರಯೋಜನವನ್ನು ಪಡೆಯುತ್ತದೆ.

ಹೀಗೆ ಪದದ ವ್ಯುತ್ಪತ್ತಿಯ ಮೂಲಕ ಲಕ್ಷಣವನ್ನು ಸಾಧಿಸುವ ಶಬ್ದ ವ್ಯಾಖ್ಯೆಗಳು ಪ್ರಾಚೀನ ಶಾಸ್ತ್ರಗಳಲ್ಲಿ ಬಹಳವಾಗಿರುತ್ತವೆ.

ಹೋಲಿಕೆ = ನಾ.ಶಾ.: ೨೧-೫; ಸಾ.ದ.: ೬-೪೪.

## ೨೧. ಪ್ರಾಸಂಗಿಕದ ಎರಡು ಭೇದಗಳು :

**ಸಾನುಬಂಧಂ ಪತಾಕಾಖ್ಯಂ ಪ್ರಕರೀ ಚ ಪ್ರದೇಶಭಾಕ್ ॥ ೧೩ ॥**

ಅನು : ['ಪ್ರಾಸಂಗಿಕ' ಇತಿವೃತ್ತದಲ್ಲಿ ಎರಡು ಪ್ರಕಾರಗಳು] ಅನುಬಂಧ ಸಹಿತವಾದದ್ದು [ಎಂದರೆ, ದೀರ್ಘವಾಗಿ ಮುಂದುವರಿಯತಕ್ಕ ಕಥೆ] 'ಪತಾಕಾ' ಮತ್ತು ಪ್ರದೇಶಭಾಗಿ ಯಾದದ್ದು [ಎಂದರೆ ಯಾವುದೊಂದು ಕಡೆಯಲ್ಲಿ ಸ್ವಲ್ಪ ಬಂದು ಹೋಗತಕ್ಕ ಕಥೆ] 'ಪ್ರಕರೀ'.

ವ್ಯಾಖ್ಯೆ : ಯಾವುದು ಪ್ರಧಾನ (ಆಧಿಕಾರಿಕ) ವೃತ್ತಾಂತದೊಡನೆ ದೂರದವರೆಗೆ ಸಾಗುತ್ತ ಹೋಗುತ್ತದೆಯೋ ಅಂತಹ ಪ್ರಾಸಂಗಿಕ ವೃತ್ತಾಂತಕ್ಕೆ 'ಪತಾಕಾ' ಎಂಬ ಹೆಸರು; ಉದಾ:- ರಾಮಾಯಣದಲ್ಲಿ ಸುಗ್ರೀವ ಮುಂತಾದವರ ಕಥೆಯಂತೆ. ಧ್ವಜ (ಪತಾಕಾ)ದ ಚಿಹ್ನೆಯಂತೆ ಮುಖ್ಯ ನಾಯಕನಿಗೆ ಉಪಕಾರಿಯಾಗಿರುವ ಕಾರಣ ಈ ಹೆಸರು. ಅಲ್ಪವಾಗಿ ಮಾತ್ರ ಬರುವ ಪ್ರಾಸಂಗಿಕ ವೃತ್ತಾಂತ 'ಪ್ರಕರೀ' ಉದಾ:- ರಾಮಾಯಣದಲ್ಲಿ ಶ್ರವಣ [ಮತ್ತು ಶಬರಿ] ಮುಂತಾದವರುಗಳ ವೃತ್ತಾಂತದಂತೆ.

ಟಿಪ್ಪಣಿ : ವಸ್ತುವನ್ನು ಆಧಿಕಾರಿಕ (ಮುಖ್ಯ) ಮತ್ತು ಪ್ರಾಸಂಗಿಕ (ಅಂಗ) ಎಂದು ಎರಡು ಬಗೆಯಾಗಿ ವಿಂಗಡಿಸಿ, ಅನಂತರ ಪುನಃ ಪ್ರಾಸಂಗಿಕದಲ್ಲಿನ ಎರಡು ಪ್ರಕಾರಗಳನ್ನು (ಪತಾಕಾ, ಪ್ರಕರೀ) ಹೇಳಲಾಯಿತು.

ಹೋಲಿಕೆ = ನಾ.ಶಾ. : ೨೧-೨೫, ೨೬; ಸಾ.ದ. : ೬-೬೭, ೬೮; ಪ್ರತಾಪ : ೩-೭.

## ೨೨. ಪತಾಕಾಸ್ಥಾನಕ :

**ಪ್ರಸ್ತುತಾಗಂತುಭಾವಸ್ಯ ವಸ್ತುನೋಽನ್ಯೋಕ್ತಿಸೂಚಕಮ್ ।**
**ಪತಾಕಾಸ್ಥಾನಕಂ ತುಲ್ಯ ಸಂವಿಧಾನವಿಶೇಷಣಾತ್ ॥ ೧೪ ॥**

ಅನು : ನಡೆಯುತ್ತಿರುವ [ಅಥವಾ] ಮುಂದೆ ನಡೆಯಲಿರುವ ವಿಷಯವೊಂದನ್ನು ಅನ್ಯೋಕ್ತಿಯ ಮೂಲಕ ಸೂಚಿಸುವುದು 'ಪತಾಕಾಸ್ಥಾನಕ'; [ಅಂತಹ ಅನ್ಯೋಕ್ತಿ ರೂಪವಾದ ಸೂಚನೆಯು] ಸಮಾನಸಂವಿಧಾನದ [ಅಥವಾ] ಸಮಾನ ವಿಶೇಷಣದ ಮೂಲಕ [ಸೂಚಿತವಾಗತಕ್ಕದ್ದು].

ವ್ಯಾಖ್ಯೆ : ಪತಾಕಾಲಕ್ಷಣವನ್ನು ಹೇಳುವ ಪ್ರಸಂಗವಲ್ಲಿಯೇ 'ಪತಾಕಾಸ್ಥಾನಕ'ವ ಲಕ್ಷಣವನ್ನೂ ಇಲ್ಲಿ ಹೇಳಲಾಗಿದೆ. ಯಾವುದೊಂದು ಪ್ರಕರಣ ಮುಂತಾದುವುಗಳಲ್ಲಿ, ಮುಂದೆ ನಡೆಯಲಿರುವ ಘಟನೆಯನ್ನು ಸೂಚಿಸುವ ರೂಪವು 'ಪತಾಕಾಸ್ಥಾನಕ'. ಅದು 'ಧ್ವಜ'ದಂತೆ ಬರಲಿರುವುದರ ಸೂಚನೆಯನ್ನು ಕೊಡುವ ಕಾರಣ ಅದಕ್ಕೆ ಆ ಹೆಸರು. ಆ ಸೂಚನೆ ಸಮಾನ ಇತಿವೃತ್ತದ ಮೂಲಕವಾದದ್ದು ಮತ್ತು ಸಮಾನ ವಿಶೇಷಣದ ಮೂಲಕವಾದದ್ದು ಎಂದು ಎರಡು ವಿಧ. ಅನ್ಯೋಕ್ತಿ ಮತ್ತು ಸಮಾಸೋಕ್ತಿಗಳಿಂದ, ಕ್ರಮವಾಗಿ, ಮೇಲಿನ ಎರಡು ಭೇದಗಳು ಉಂಟಾಗುತ್ತವೆ.[೧]

ಉದಾ:- ಅನ್ಯೋಕ್ತಿಸಹಿತವಾದ ಸಮಾನ ಸಂವಿಧಾನ (ಇತಿವೃತ್ತ)ದ ಪತಾಕಾಸ್ಥಾನಕಕ್ಕೆ: [ರತ್ನಾ: ೩-೬] :

> 'ಯಾತೋಽಸ್ಮಿ ಪದ್ಮನಯನೇ ಸಮಯೋ ಮಮೈಷ
> ಸುಪ್ತಾ ಮಯೈವ ಭವತೀ ಪ್ರತಿಬೋಧನೀಯಾ
> ಪ್ರತ್ಯಾಯನಾಮಯಮಿತೀವ ಸರೋರುಹಿಣ್ಯಾಃ
> ಸೂರ್ಯೋಽಸ್ತಮಸ್ತಕನಿವಿಷ್ಟಕರಃ ಕರೋತಿ ॥

[ಎಲೈ ಕಮಲನೇತ್ರೆ, ನಾನು ಹೊರಡುವ ವೇಳೆ ಬಂದಿದೆ; ಹೋಗುತ್ತಿದ್ದೇನೆ. ಈಗ ನಿದ್ದೆ ಮಾಡುವ ನಿನ್ನನ್ನು ಪುನಃ ನಾನೇ ಎಚ್ಚರಿಸಬೇಕು - ಹೀಗೆ ವಿಶ್ವಾಸ ನೀಡುತ್ತಿರುವವನಂತೆ ಅಸ್ತಾಚಲ ಶಿಖರವಲ್ಲಿ ಕರಗಳನ್ನಿಟ್ಟ ಸೂರ್ಯನು ಪದ್ಮಿನಿಯನ್ನು ಸಮಾಧಾನಗೊಳಿಸುತ್ತಿದ್ದಾನೆ.]'

(ಶ್ಲೇಷೆಯುಳ್ಳ ಈ ಪದ್ಯ ಕಮಲದ ಬಳ್ಳಿಗಂತೂ ಅಂತೆಯೇ ಒಲವಿನ ಹೆಣ್ಣಿಗೂ ಸಲ್ಲುತ್ತದೆ. ಇಲ್ಲಿ ಸೂರ್ಯಪದ್ಮಿನಿಯರ ವರ್ಣನೆಯ ಮೂಲಕ, ಮುಂದೆ ಬರುವ ಉದಯನ ರತ್ನಾವಲೀ ವೃತ್ತಾಂತವನ್ನು ಅನ್ಯೋಕ್ತಿಯಿಂದ ಸೂಚಿಸಲಾಗಿದೆ.)

ಮತ್ತು - ಸಮಾಸೋಕ್ತಿಸಹಿತವಾದ ಸಮಾನ ವಿಶೇಷಣದ ಪತಾಕಾಸ್ಥಾನಕಕ್ಕೆ : [ರತ್ನಾ : ೨-೪] :

> 'ಉದ್ದಾಮೋತ್ಕಲಿಕಾಂ ವಿಪಾಂಡುರರುಚಂ ಪ್ರಾರಬ್ಧಜೃಂಭಾಂ ಕ್ಷಣಾ
> ದಾಯಾಸಂ ಶ್ವಸನೋದ್ಗಮೈರವಿರಲೈರಾತನ್ವತೀಮಾತ್ಮನಃ ।
> ಅದ್ಯೋದ್ಯಾನಲತಾಮಿಮಾಂ ಸಮದನಾಂ ನಾರೀಮಿವಾನ್ಯಾಂ ಧ್ರುವಂ
> ಪಶ್ಯನ್ಕೋಪವಿಪಾಟಲದ್ಯುತಿ ಮುಖಂ ದೇವ್ಯಾಃ ಕರಿಷ್ಯಾಮ್ಯಹಂ ॥

---

೧ ಅನ್ಯೋಕ್ತಿ (ಅಥವಾ ಅಪ್ರಸ್ತುತ ಪ್ರಶಂಸೆ) : 'ಅಪ್ರಸ್ತುತಪ್ರಶಂಸಾ ಸ್ಯಾತ್ ಸಾ ಯತ್ರಪ್ರಸ್ತುತಾಶ್ರಯಾ ॥' [ಕುವಲ : ಶ್ಲೋ. ಸಂ. ೬೬] (ಅಪ್ರಸ್ತುತವಾದ ವೃತ್ತಾಂತದ ವರ್ಣನೆಯು ಪ್ರಸ್ತುತವಾದ ವೃತ್ತಾಂತವನ್ನು ಸೂಚಿಸುವುದಾದರೆ ಅದು 'ಅಪ್ರಸ್ತುತ ಪ್ರಶಂಸೆ' ಅಥವಾ ಅನ್ಯೋಕ್ತಿ.)

ಸಮಾಸೋಕ್ತಿ : 'ಸಮಾಸೋಕ್ತಿಃ ಪರಿಸ್ಫೂರ್ತಿಃ ಪ್ರಸ್ತುತೇಽಪ್ರಸ್ತುತಸ್ಯ ಚೇತ್ ॥' [ಕುವಲ : ಶ್ಲೋ. ಸಂ. ೬೧] (ಪ್ರಸ್ತುತ ವೃತ್ತಾಂತದ ವರ್ಣನೆಯಲ್ಲಿನ ವಿಶೇಷಣದ ಹೋಲಿಕೆಯಿಂದ ಬೇರೊಂದು ಅಪ್ರಸ್ತುತ ವೃತ್ತಾಂತವು ಸೂಚಿತವಾಗುವುದು 'ಸಮಾಸೋಕ್ತಿ.')

[ಪಾಂಡುವರ್ಣದ ತುಂಬುಮೊಗ್ಗೆಗಳು ಮೇಲಕ್ಕೆ ನೆಗೆದಿರಲು ಮದನ ವೃಕ್ಷವನ್ನಾಶ್ರಯಿಸಿ ನಿರಂತರವಾದ
ಗಾಳಿಗೆ ಅಲುಗುತ್ತ ಅರಳುತ್ತಿರುವ (ಹೂಗಳುಳ್ಳ) ಈ ಉದ್ಯಾನಲತೆಯನ್ನು, (ಕಾತರಳಾಗಿ ವರ್ಣವಿಹೀನತೆ
ಹೊಂದಿ ಆಕಳಿಸುತ್ತಿರುವ ಅವಿರಲವಾದ ಶ್ವಾಸೋಚ್ಛ್ವಾಸಗಳಿಂದ ಆಯಾಸವನ್ನು ಸೂಚಿಸುವ ಕಾಮಸಹಿತ
ಳಾದ) ಅನ್ಯಸ್ತ್ರೀಯನ್ನು ನೋಡುತ್ತಿರುವಂತೆ ನೋಡುತ್ತಲಿದ್ದು ನನ್ನ ದೇವಿಯ ಮುಖವು ಕ್ರೋಧದಿಂದ
ಕೆಂಪಾಗುವಂತೆ ಮಾಡುತ್ತೇನೆ]'

(-ಇಲ್ಲಿ ಲತೆಯೊಂದರ ವರ್ಣನೆಯ ಸಮಾಸವಿಶೇಷಣದ ಮೂಲಕ, ಮುಂದೆ ಬರಲಿರುವ ಉದಯನ
ಸಾಗರಿಕೆಯರ ಪ್ರಣಯವೂ ಅದರಿಂದ ಉಂಟಾಗುವ ವಾಸವದತ್ತೆಯ ಕೋಪವೂ ಸೂಚಿತವಾಗಿದೆ.)

ಟಿಪ್ಪಣಿ : ನಾ.ಶಾ. [೨೧-೩೧ರಿಂದ ೩೫]ವಲ್ಲಿ ನಾಲ್ಕು 'ಪತಾಕಾಸ್ಥಾನಕ'ಗಳನ್ನು ಹೇಳಿದೆ. ಸಾ.ದ.ವಲ್ಲಿಯೂ
ಅದನ್ನೆ ಅಕ್ಷರಶಃ ಅನುಸರಿಸಲಾಗಿದೆ. [ನೋಡಿ: ಸಾ.ದ.೬-೪೪ರಿಂದ ೪೮]. ನಾ.ಶಾ.ದ ಲಕ್ಷಣ :

'ಯತ್ರಾರ್ಥೇ ಚಿಂತ್ಯಮಾನೇಽಪಿ ತಲ್ಲಿಂಗಾರ್ಥಃ ಪ್ರಯುಜ್ಯತೇ ।
ಆಗಂತುಕೇನ ಭಾವೇನ ಪತಾಕಾಸ್ಥಾನಕಂ ತು ತತ್ ॥

ಸಹಸೈವಾರ್ಥಸಂಪತ್ತಿರ್ಗುಣವತ್ಯುಪಚಾರತಃ ।
ಪತಾಕಾಸ್ಥಾನಕಮಿದಂ ಪ್ರಥಮಂ ಪರಿಕೀರ್ತ್ಯತೇ ॥

ವಚಸ್ಸಾತಿಶಯಶ್ಲಿಷ್ಟಂ ಕಾವ್ಯಬಂಧಸಮಾಶ್ರಯಂ ।
ಪತಾಕಾಸ್ಥಾನಕಮಿದಂ ದ್ವಿತೀಯಂ ಪರಿಕೀರ್ತಿತಮ್ ॥

ಅರ್ಥೋಪಕ್ಷೇಪಣಂ ಯತ್ತು ಲೀನಂ ಸವಿನಯಂ ಭವೇತ್ ।
ಶ್ಲಿಷ್ಟಪ್ರತ್ಯುತ್ತರೋಪೇತಂ ತೃತೀಯಮಿದಮಿಷ್ಯತೇ ॥

ದ್ವ್ಯರ್ಥೋ ವಚನ ವಿನ್ಯಾಸಃ ಸುಶ್ಲಿಷ್ಟಃ ಕಾವ್ಯಯೋಜಿತಃ ।
ಉಪನ್ಯಾಸಃ ಸಂಯುತಶ್ಚ ತಚ್ಚತುರ್ಥಮುದಾಹೃತಮ್ ॥

[ಯಾವುದೊಂದು ವಿಷಯವು ಪ್ರಸ್ತುತವಾಗಿರುವಾಗ, ಮುಂದೆ ಬರಲಿರುವ ಅದೇ ರೀತಿಯದಾದ
ಬೇರೊಂದು ವಿಷಯವನ್ನು ಕೂಡ ಅಲ್ಲಿಯೇ ಸೂಚಿಸುವುದು 'ಪತಾಕಾಸ್ಥಾನಕ'. (ಅನುರಾಗಾನುಕೂಲವಾದ)
ಉಪಚಾರದಿಂದ ಒಮ್ಮೆಲೇ ಉಂಟಾಗುವ ಉತ್ಕೃಷ್ಟ ಪ್ರಯೋಜನ ಸಿದ್ಧಿ ಮೊದಲನೆಯ ಪತಾಕಾಸ್ಥಾನಕ;
ಕಾವ್ಯಬಂಧವನ್ನು ಪೂರ್ಣವಾಗಿ ಹೊಂದಿಕೊಂಡ ವಿಶೇಷವಾಗಿ ಶ್ಲೇಷೆಯನ್ನುಳ್ಳ ಮಾತು ಎರಡನೆಯದು; ಕಥೆಯ
ವಿಷಯವನ್ನು ವಿನಯದಿಂದ ಶ್ಲೇಷೆಯ ಮೂಲಕ ಗೂಢವಾಗಿ ಸಂಭಾಷಣೆಯಲ್ಲಿ ಸೂಚಿಸುವುದು ಮೂರನೆ
ಯದು; ಕಾವ್ಯದಲ್ಲಿ ಯೋಜಿತವಾದ ಶ್ಲೇಷೆಯುಳ್ಳ ವಚನವಿನ್ಯಾಸವು, ಮೇಲೆ ಕಾಣುವುದಲ್ಲದೆ, ಬೇರೊಂದು
ಅರ್ಥವನ್ನು ಸೂಚಿಸುವುದು ನಾಲ್ಕನೆಯದು.], ಸಾ.ದ.ವಲ್ಲಿ ಈ ನಾಲ್ಕಕ್ಕೂ ಉದಾಹರಣೆಗಳನ್ನು ಕೊಡಲಾಗಿದೆ.

ಇಲ್ಲಿಯೂ, (i) ಸಮಾನಸಂವಿಧಾನದ ಮೂಲಕ ಪ್ರಸ್ತುತ ಭಾವಸೂಚನೆ (ii) ಸಮಾನ
ಸಂವಿಧಾನದ ಮೂಲಕ ಆಗಂತುಭಾವದ ಸೂಚನೆ (iii) ಸಮಾನ ವಿಶೇಷಣದ ಮೂಲಕ ಪ್ರಸ್ತುತ ಭಾವ
ಸೂಚನೆ (iv) ಸಮಾಸವಿಶೇಷಣದ ಮೂಲಕ ಆಗಂತುಭಾವದ ಸೂಚನೆ – ಹೀಗೆ ನಾಲ್ಕು ಪ್ರಕಾರ ಕಲ್ಪಿಸ
ಬಹುದು. ಆದರೆ ಈ ಗ್ರಂಥಕಾರರು ಭರತವಿಶ್ವನಾಥರಿಂದ ಈ ವಿಷಯದಲ್ಲಿ ಬೇರೆಯಾಗಿದ್ದಾರೆಂಬುದು ಸ್ಪಷ್ಟ.

## ೨೩. ಬೇರೆ ಬಗೆಯ ವಸ್ತುಭೇದ :

**ಪ್ರಖ್ಯಾತೋತ್ಪಾದ್ಯಮಿಶ್ರತ್ವಭೇದಾತ್ತ್ರೇಧಾಪಿ ತತ್ತ್ರಿಧಾ ।**
**ಪ್ರಖ್ಯಾತಮಿತಿಹಾಸಾದೇರುತ್ಪಾದ್ಯಂ ಕವಿಕಲ್ಪಿತಮ್ ॥ ೧೫ ॥**
**ಮಿಶ್ರಂ ಚ ಸಂಕರಾ [1] ತ್ತಾಭ್ಯಾಂ [1] ದಿವ್ಯಮರ್ತ್ಯಾದಿಭೇದತಃ ।**

೧ ಪಾಠ : (i) ನಾಂತೋ (ii) ತ್ರೇಧಾ.

ಅನು : [ಆಧಿಕಾರಿಕ ಮತ್ತು ಪ್ರಾಸಂಗಿಕದಲ್ಲಿನ ಪತಾಕಾ ಪ್ರಕರೀ – ಹೀಗೆ ಮೂರು ಭೇದಗಳು ಹಿಂದೆ ಹೇಳಲ್ಪಟ್ಟಿವೆ.]ಆ ಮೂರು [ಭೇದಗಳುಳ್ಳ ವಸ್ತುವು ] ಪುನಃ, ಪ್ರಖ್ಯಾತ ಉತ್ಪಾದ್ಯಮಿಶ್ರ ಎಂದು ಮೂರು ವಿಧವಾಗಿದೆ. ಇತಿಹಾಸಾದಿಗಳಿಂದ [ಬಂದದ್ದು] ಪ್ರಖ್ಯಾತ; ಕವಿಯಿಂದ ಕಲ್ಪಿತವಾದದ್ದು 'ಉತ್ಪಾದ್ಯ'; ಇವೆರಡರ ಬೆರಕೆಯುಳ್ಳುದು 'ಮಿಶ್ರ'. [ಮತ್ತೆ ಇವೆಲ್ಲ]ದಿವ್ಯಮರ್ತ್ಯ ಮೊದಲಾದ ಭೇದಗಳಿಂದ ಕೂಡಿವೆ.

ಟಿಪ್ಪಣಿ : ಪ್ರತಾಪ.ದಲ್ಲಿ [೩-೩] ಮೊದಲ ಸಾಲನ್ನು ಸ್ವಲ್ಪ ಬದಲಿಸಿ ಉದ್ಧರಿಸಲಾಗಿದೆ. (ಬದಲಿಕೆ: ತತ್ ತ್ರಿವಿಧಂ ಮತಂ).

೧. ಆಧಿಕಾರಿಕ ೨.(ಪ್ರಾಸಂಗಿಕ ಭೇದವಾದ) ಪತಾಕಾ ೩. (ಪ್ರಾಸಂಗಿಕ ಭೇದವಾದ) ಪ್ರಕರಿ – ಈ ಮೂರೂ ಮತ್ತೆ ಮೂರು ವಿಧವಾಗುತ್ತವೆ. : ೧. ಪ್ರಖ್ಯಾತ ೨.ಉತ್ಪಾದ್ಯ ೩. ಮಿಶ್ರ – ಇವೆಲ್ಲವಕ್ಕೂ ಮತ್ತೆ ಮೂರು ಭೇದಗಳು ಉಂಟಾಗುತ್ತವೆ: ೧.ದಿವ್ಯ ೨. ಮರ್ತ್ಯ ೩.ದಿವ್ಯಾದಿವ್ಯ. ದೇವವರ್ಗದ ನಾಯಕನಿರುವ ಕಥೆ ದಿವ್ಯ; ಮರ್ತ್ಯವರ್ಗದ ಕಥಾನಾಯಕನಿರುವಲ್ಲಿ ಮರ್ತ್ಯ; ಬೆರಕೆ ಇರುವಲ್ಲಿ ದಿವ್ಯಾದಿವ್ಯ. ಹೀಗೆ ಒಟ್ಟು ಭೇದಗಳು ೨೭

ಉದಾಹರಣೆಗೆ–'ವೇಣೀಸಂಹಾರ' ಪ್ರಖ್ಯಾತ; 'ಮಾಲತೀಮಾಧವ' ಉತ್ಪಾದ್ಯ; 'ಅಭಿಜ್ಞಾನಶಾಕುಂತಲ' ಮಿಶ್ರ

ಹೋಲಿಕೆ = ಪ್ರತಾಪ : ೩-೩.

## ಅರ್ಥಪ್ರಕೃತಿಗಳು

### ೨೪. ಇತಿವೃತ್ತದ ಕಾರ್ಯ(ಫಲ) ಲಕ್ಷಣ :

**ಕಾರ್ಯಂ ತ್ರಿವರ್ಗಸ್ತಚ್ಛುದ್ಧಮೇಕಾನೇಕಾನುಬಂಧಿ ಚ ॥ ೧೬ ॥**

ಅನು : ಕಾರ್ಯ [ಎಂದರೆ, ಕಥೆಯ ಫಲವು] ತ್ರಿವರ್ಗ [ರೂಪವಾದದ್ದು].ಅದು ಶುದ್ಧ [ಎಂದರೆ, ಒಂದೇ ಉಳ್ಳುದಾಗಿರುತ್ತದೆ ಅಥವಾ] ಏಕಾನುಬಂಧಿ [ಎಂದರೆ, ಒಂದರ ಕೂಡ ಮತ್ತೊಂದನ್ನು ಕೂಡಿ ಎರಡಾಗಿರುತ್ತದೆ ಅಥವಾ] ಅನೇಕಾನುಬಂಧಿ [ಎಂದರೆ, ಒಂದರ ಕೂಡ ಮತ್ತೆರಡು ಕೂಡಿ ಮೂರಾಗಿರುತ್ತದೆ].

ವ್ಯಾಖ್ಯೆ : ಇತಿವೃತ್ತದ ಫಲ ಧರ್ಮ ಅರ್ಥ ಕಾಮಗಳು. ಅಲ್ಲಿ ಶುದ್ಧವಿರಬಹುದು, ಒಂದು ಕೂಡಿದ್ದಿರಬಹುದು ಅಥವಾ ಎರಡು ಕೂಡಿದ್ದಿರಬಹುದು.

ಟಿಪ್ಪಣಿ : ಧರ್ಮ ಅರ್ಥ ಕಾಮ – ಇವಕ್ಕೆ 'ತ್ರಿವರ್ಗ' ಎಂದು ಹೆಸರು. ಇದನ್ನು ಬಿಟ್ಟು ಇತಿವೃತ್ತದ ಫಲ ಬೇರಿಲ್ಲ. ಯಾವ ಇತಿವೃತ್ತದಲ್ಲಿ ಈ ಮೂರರಲ್ಲೊಂದು ಮಾತ್ರ ಫಲವೋ ಅದು 'ಶುದ್ಧ'; ಎರಡು ಫಲವಾಗಿದ್ದರೆ 'ಏಕಾನುಬಂಧಿ'; ಮೂರೂ ಫಲವಾಗಿದ್ದರೆ 'ಅನೇಕಾನುಬಂಧಿ'.

ಹೋಲಿಕೆ = ಸಾ.ಶಾ. : ೨೧-೨೭; ಸಾ.ದ : ೬-೬೯, ೭೦.

### ೨೫. ಬೀಜಲಕ್ಷಣ :

**ಸ್ವಲ್ಪೋದ್ದಿಷ್ಟಸ್ತು ತದ್ಧೇತುರ್ಬೀಜಂ ವಿಸ್ತಾರ್ಯನೇಕಧಾ ।**

ಅನು : [ರೂಪಕದ] ಆರಂಭದಲ್ಲಿ ಅಲ್ಪವಾಗಿದ್ದು [ಅನಂತರ] ಬಹುಪ್ರಕಾರವಾಗಿ ವಿಸ್ತರಿಸುವಂಥದು [ಮತ್ತು] ಅದರ [ಎಂದರೆ, ಕಾರ್ಯದ] ಮೂಲಕಾರಣವಾಗಿರುವಂಥದು 'ಬೀಜ'.

ವ್ಯಾಖ್ಯೆ : ಅಲ್ಪವಾಗಿ ಆರಂಭವಾಗುವ, 'ಕಾರ್ಯ'ವನ್ನು ಸಾಧಿಸಿಕೊಡುವ, ಮುಂದೆ ಮುಂದೆ ವಿಸ್ತಾರವಾಗಿ ಪ್ರಸರಿಸುವ ಹೇತುವಿಶೇಷವೇ ಬೀಜ. [ಅಲ್ಪವಾಗಿ ತೋರಿ ಅನಂತರ ದೊಡ್ಡ ಮರವಾಗಿ ಬೆಳೆಯುವ] ಬೀಜದಂತಿರುವ ಕಾರಣ ಅದಕ್ಕೆ 'ಬೀಜ' ಎಂಬ ಹೆಸರು. ಉದಾ:-ರತ್ನಾವಲಿಯಲ್ಲಿ ಉದಯನನಿಗೆ ರತ್ನಾವಲೀ ದೊರಕುವುದು ಫಲ; ಆ ಫಲಕ್ಕೆ ಕಾರಣವಾದುದು ದೈವಾನುಕೂಲಸಹಿತವಾದ ಯೌಗಂಧರಾಯಣನ ಉದ್ಯಮ. ಅದೇ 'ಬೀಜ'. ಆ ಬೀಜವು ವಿಷ್ಕಂಭಕದಲ್ಲಿ ಹೀಗೆ ಇಡಲ್ಪಟ್ಟಿದೆ : 'ಯೌಗಂಧ: ಕಃ ಸಂದೇಹಃ [ಏನು ಸಂದೇಹ?] ದ್ವೀಪಾದನ್ಯಸ್ಮಾತ್...' ಎಂಬಲ್ಲಿಂದ, 'ಪ್ರಾರಂಭೇಽಸ್ಮಿನ್...' ಎಂಬಲ್ಲಿಯವರೆಗೆ. [ರತ್ನಾ : ೧-೬ ಮತ್ತು ೭; ಈ ಉದಾ. ಇದೇ ಗ್ರಂಥದ ಬೇರೆತೆಗಳಲ್ಲೂ ಬಂದಿದೆ- ನೋಡಿ : ೧-೨೯, ೪೧; ೩-೩, ೧೦]

ಮತ್ತು-ವೇಣೀಸಂಹಾರದಲ್ಲಿ, ದ್ರೌಪದಿಯ ಮುಡಿಕಟ್ಟುವ ಉದ್ದೇಶವುಳ್ಳ ಹಾಗೂ ಭೀಮನ ಕ್ರೋಧದಿಂದ ಪರಿಪುಷ್ಟವಾದ 'ಯುಧಿಷ್ಠಿರನ ಉತ್ಸಾಹ'ವೇ ಬೀಜ.

ಈ ಬೀಜವು ಮಹಾಕಾರ್ಯವೊಂದಕ್ಕೆ ಕಾರಣವಾಗಬಹುದು ಇಲ್ಲವೆ, ಅವಾಂತರ ಕಾರ್ಯವೊಂದಕ್ಕೆ ಕಾರಣವಾಗಬಹುದು. ಆದ್ದರಿಂದ 'ಬೀಜ'ವು ಎರಡು ವಿಧವಾಗುತ್ತದೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೨೩; ಸಾ.ದ. : ೬-೬೫, ೬೬;ಪ್ರತಾಪ : ೩-೬.

## ೨೬. ಬಿಂದುಲಕ್ಷಣ :

**ಅವಾಂತರಾರ್ಥವಿಚ್ಛೇದೇ ಬಿಂದುರಚ್ಛೇದಕಾರಣಮ್ ॥ ೧೭ ॥**

ಅನು : ಬೇರೆ ಇನ್ನೊಂದು ವಿಷಯದಿಂದ [ಇತಿವೃತ್ತವು] ಕಡಿದುಹೋಗುವ [ಸಂದರ್ಭದ]ಲ್ಲಿ ಕಡಿಯದೆ [ಏಕಪ್ರಕಾರ ಮುಂದುವರಿಯುವಂತೆ] ಮಾಡುವುದು 'ಬಿಂದು'.

ವ್ಯಾಖ್ಯೆ : ಅವಾಂತರ ಬೀಜಕ್ಕೆ ಇನ್ನೊಂದು ಸಂಜ್ಞೆ 'ಬಿಂದು'. ತೈಲಬಿಂದುವು ನೀರಿನಲ್ಲಿ ಹರಡುವಂತೆ [ಇದು ಇತಿವೃತ್ತದಲ್ಲಿ] ಹರಡುವ ಕಾರಣ 'ಬಿಂದು' ಎಂಬ ಹೆಸರು. ಉದಾ:-ರತ್ನಾವಲೀನಾಟಿಕೆಯಲ್ಲಿ ವಾಸವದತ್ತೆಯ ಅನಂಗಪೂಜೆ ಒಂದು ಅವಾಂತರ ವೃತ್ತ; ಅದು ಮುಗಿಯುತ್ತಿರಲು ಕಥೆಯ ವಿಷಯ ಕಡಿದುಹೋಗುತ್ತದೆ. ಆದರೆ ಅದು ಕಡಿಯದಿರುವಂತೆ ಮಾಡಲು ಅಲ್ಲಿ ಹೀಗೆ ಯೋಜಿಸಿದೆ: [ರತ್ನಾ: ೧-೨೩; ಈ ಪದ್ಯ ೧-೪೨ರಲ್ಲಿ ಪೂರ್ಣವಾಗಿ ಬಂದಿದೆ.]: '(ನೇಪಥ್ಯದಲ್ಲಿ) ವೈತಾಲಿಕರು: ......ಉದಯನಸ್ಯೇಂದೋರಿವೋದ್ವೀಕ್ಷತೇ'- ಎನ್ನುವಾಗ 'ಉದಯನ' ಎಂಬ ಹೆಸರು ಕೇಳಿದ ಸಾಗರಿಕಾ: 'ಕಹಂ ಏಸೋ ಸೋ ಉದಯಣಣರಿಂದೋಜಸ್ಸ ಅಹಂ ತಾದೇಣ ದಿಣ್ಣಾ। [ಏನು? ನನ್ನ ತಂದೆಯು ನನ್ನನ್ನು ಯಾರಿಗೆ ಕೊಟ್ಟಿದ್ದನೋ ಆ ಉದಯನನರೇಂದ್ರನೇ ಇವನೇನು?],- ಮುಂತಾಗಿ. ಸಾಗರಿಕೆಯ ಈ ಕುತೂಹಲ ಮುಂದಿನ ಕಥೆಗೆ ದಾರಿಮಾಡಿಕೊಡುತ್ತದೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೨೪; ಸಾ.ದ. : ೬-೬೬; ಪ್ರತಾಪ : ೩-೬.

## ೨೭. ಐದು ಅರ್ಥಪ್ರಕೃತಿಗಳು :

**ಬೀಜಬಿಂದುಪತಾಕಾಖ್ಯಪ್ರಕರೀಕಾರ್ಯಲಕ್ಷಣಾಃ ।**
**ಅರ್ಥಪ್ರಕೃತಯಃ ಪಂಚ ತಾ ಏತಾಃ ಪರಿಕೀರ್ತಿತಾಃ ॥ ೧೮ ॥**

ಅನು : [ಮೇಲೆ ಲಕ್ಷಿತವಾಗಿರುವ] ಬೀಜ, ಬಿಂದು, ಪತಾಕಾ, ಪ್ರಕರೀ, ಕಾರ್ಯ–ಈ ಲಕ್ಷಣಗಳುಳ್ಳ ಐದು–'ಅರ್ಥಪ್ರಕೃತಿ'ಗಳೆಂದು ಕೀರ್ತಿತವಾಗಿವೆ.

ವ್ಯಾಖ್ಯೆ : ಪತಾಕಾ ಮುಂತಾದುವನ್ನು ಪ್ರಸಂಗವಶದಿಂದ ಹಿಂದೆಯೇ ಹೇಳಲಾಯಿತು. ಈಗ ಅವುಗಳನ್ನೆಲ್ಲ ಇಲ್ಲಿ ಕ್ರಮವಾಗಿ ಕೂಡಿಸಿ ಹೇಳಿದೆ. ಪ್ರಯೋಜನದ ಸಿದ್ಧಿಗೆ ಕಾರಣವಾಗುವಂಥವು ಅರ್ಥಪ್ರಕೃತಿಗಳು.

ಟಿಪ್ಪಣಿ : ಐದು ಅರ್ಥಪ್ರಕೃತಿಗಳನ್ನು ಇಲ್ಲಿ ಹೇಳಿದೆ. ಇತಿವೃತ್ತದ ಚರಮಸಿದ್ಧಿಗಾಗಿ ರೂಪಕದಲ್ಲಿ ಈ ಅರ್ಥಪ್ರಕೃತಿಗಳನ್ನು ಬಳಸಿಕೊಳ್ಳಲಾಗುತ್ತದೆ. ಇವುಗಳಲ್ಲಿ ಪತಾಕಾಪ್ರಕರಿಗಳನ್ನು ವಸ್ತುವಿನ ಪ್ರಾಸಂಗಿಕ ವಿಭಾಗ ಹೇಳುವಾಗ [೧–೨೧] ಲಕ್ಷಿಸಿದೆ. ಉಳಿದ ಮೂರು ಮೇಲೆ ಕ್ರಮವಾಗಿ ಬಂದಿವೆ.

ಹೋಲಿಕೆ = ನಾ.ಶಾ.: ೨೧–೨೨; ಸಾ.ದ.: ೬–೬೪, ೬೫.

# ಐದು ಅವಸ್ಥೆಗಳು

## ೨೮. ಐದು ಅವಸ್ಥಾಭೇದಗಳು :

**ಅವಸ್ಥಾಃ ಪಂಚ ಕಾರ್ಯಸ್ಯ ಪ್ರಾರಬ್ಧಸ್ಯ ಫಲಾರ್ಥಿಭಿಃ।**
**ಆರಂಭಯತ್ನಪ್ರಾಪ್ತ್ಯಾಶಾನಿಯತಾಪ್ತಿಫಲಾಗಮಾಃ ॥ ೧೯ ॥**

ಅನು : ಫಲಾರ್ಥಿಗಳಿಂದ [ಎಂದರೆ, ಇತಿವೃತ್ತದ ನಾಯಕರಿಂದ] ಪ್ರಾರಂಭವಾದ ಕಾರ್ಯಕ್ಕೆ [ಅದು ಕೊನೆಗಾಣುವ ಪರ್ಯಂತ],ಆರಂಭ ಯತ್ನ ಪ್ರಾಪ್ತ್ಯಾಶೆ ನಿಯತಾಪ್ತಿ ಫಲಾಗಮ – ಎಂಬ ಐದು ಅವಸ್ಥೆಗಳು [ಉಂಟಾಗುತ್ತವೆ].

ಟಿಪ್ಪಣಿ : 'ಫಲಾಗಮ' ಎಂಬುದಕ್ಕೆ 'ಫಲಯೋಗ' ಎಂದೂ ಹೇಳುತ್ತಾರೆ. [ನೋಡಿಃ ೧–೩೩]. ಇನ್ನು ಮುಂದೆ ಈ ಒಂದೊಂದು ಅವಸ್ಥೆಗಳ ಲಕ್ಷಣವನ್ನೂ ಹೇಳಲಾಗುತ್ತದೆ.

ಹೋಲಿಕೆ = ನಾ.ಶಾ. : ೨೧–೯; ಸಾ.ದ. : ೬–೭೦, ೭೧ (ಸಾ.ದ.ದಲ್ಲಿನ ಲಕ್ಷಣ ಅಕ್ಷರಶಃ ದ.ರೂ.ವನ್ನೆ ಹೋಲುತ್ತದೆ).

## ೨೯. ಆರಂಭಲಕ್ಷಣಃ

**ಔತ್ಸುಕ್ಯಮಾತ್ರಮಾರಂಭಃ ಫಲಲಾಭಾಯ ಭೂಯಸೇ ।**

ಅನು : ಆತ್ಯಂತಿಕವಾದ ಫಲವನ್ನು ಪಡೆಯುವ ಸಲುವಾಗಿ [ಉಂಟಾಗುವ] ಕೇವಲ ಉತ್ಸುಕತೆಯು 'ಆರಂಭ'.

ವ್ಯಾಖ್ಯೆ : 'ಇದನ್ನು ನಾನು ಪಡೆಯುತ್ತೇನೆ' ಎನ್ನುವಂತಹ ಕೇವಲ ನಿಶ್ಚಯವು 'ಆರಂಭ'. ಉದಾ:–[ರತ್ನಾ: ೧–೭; ಈ ಉದಾ.೧–೨೫ ಮತ್ತು ೪೧ರಲ್ಲಿ ಮರುಕೊಳಿಸಿದೆ]: 'ಪ್ರಾರಂಭೇಽಸ್ಮಿನ್ ಸ್ವಾಮಿನೋ ವೃದ್ಧಿಹೇತೌ ದೈವೇ ಚೇತ್ಥಂ ದತ್ತ ಹಸ್ತಾವಲಂಬೇ ।....ವಿಧಿಯ ಸಹಕಾರಹಸ್ತವನ್ನು ಹಿಡಿದು, ನನ್ನ ರಾಜನ ಉನ್ನತಿಗಾಗಿ....'– ಈ ಯೌಗಂಧರಾಯಣನ ಮಾತಿನಲ್ಲಿ, ತನ್ನಿಂದಲೇ ಆಗಬೇಕಾದ, ರತ್ನಾವಲಿಯನ್ನು ಪಡೆಯುವ ಉದಯನನ ಕಾರ್ಯಾರಂಭವು ಸೂಚಿತವಾಗಿದೆ. ಉದಯನನಿಗೆ ರತ್ನಾವಲೀ ಪ್ರಾಪ್ತಿಯ ಫಲವನ್ನು ದೊರಕಿಸಲು ಇಲ್ಲಿ ಯೌಗಂಧರಾಯಣ ತೋರಿಸುವ ಉತ್ಸಾಹವೇ 'ಆರಂಭ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧–೧೦; ಸಾ.ದ. : ೬–೭೧; ಪ್ರತಾಪ : ೩–೪.

## ೩೦. ಪ್ರಯತ್ನಲಕ್ಷಣ :

ಪ್ರಯತ್ನಸ್ತು ತದಪ್ರಾಪ್ತೌ ವ್ಯಾಪಾರೋಽತಿತ್ವರಾನ್ವಿತಃ ॥ ೨೦ ॥

ಅನು : ಅದು [ಎಂದರೆ, ಫಲವು] ದೊರಕದಿರಲು, [ಅದನ್ನು ದೊರಕಿಸಿ ಕೊಳ್ಳುವುದಕ್ಕಾಗಿ] ತ್ವರೆಯಿಂದ ಕಾರ್ಯಪ್ರವೃತ್ತವಾಗುವುದು 'ಪ್ರಯತ್ನ'.

ವ್ಯಾಖ್ಯೆ : ಫಲವು ದೊರೆಯದಿದ್ದಾಗ ಅದಕ್ಕಾಗಿ ಉಪಾಯಗಳನ್ನು ಯೋಜಿಸಿಕೊಂಡು ಕೆಲಸವಲ್ಲಿ ತೊಡಗುವುದು 'ಪ್ರಯತ್ನ'. ಉದಾ:-[ರತ್ನಾ : ಪು.೫೪] ರತ್ನಾವಲಿಯು ಚಿತ್ರರಚನೆ ಮೊದಲಾದವುಗಳ ಮೂಲಕ ವತ್ಸರಾಜನ ಸಮಾಗಮೋಪಾಯಕ್ಕಾಗಿ ಪ್ರಯತ್ನಿಸುತ್ತಾಳೆ: 'ತಹಾವಿ ಣತ್ಥಿ ಅಣ್ಣೋ ದಂಸಣಉವಾಓ ತ್ತಿ ಜಹಾ ತಹಾ ಆಲಿಹಿಅ ಜಹಾಸಮೀಹಿಅಂ ಕರಿಸ್ಸಂ । [ವತ್ಸರಾಜನನ್ನು ನೋಡಲು ಬೇರೆ ಉಪಾಯವಿಲ್ಲ; ಆದ್ದರಿಂದ ನಾನು-ಹೇಗಾದರಾಗಲಿ-ಆತನ ಚಿತ್ರವನ್ನು ರಚಿಸಿ ನನ್ನ ಇಚ್ಛೆ ತೀರಿಸಿಕೊಳ್ಳುತ್ತೇನೆ.]'

ಟಿಪ್ಪಣಿ : ಹೋಲಿಕೆ = ನಾ.ಶಾ. ೨೧-೧೧; ಸಾ.ದ.: ೬-೭೨; ಪ್ರತಾಪ: ೩-೪

## ೩೧. ಪ್ರಾಪ್ತ್ಯಾಶಾಲಕ್ಷಣ :

ಉಪಾಯಾಪಾಯಶಂಕಾಭ್ಯಾಂ ಪ್ರಾಪ್ತ್ಯಾಶಾ ಪ್ರಾಪ್ತಿಸಂಭವಃ ।

ಅನು : [ಫಲವು] ಕೈಗೆ ಸಿಗುವುದಕ್ಕೆ [ಬೇಕಾಗುವ] ಉಪಾಯ [ಮತ್ತು ಅದರ ಸಂಗಡ] ವಿಘ್ನಗಳ ಸಂಶಯ [ಎರಡೂ ಇರುತ್ತಿರಲು ಅದು] 'ಪ್ರಾಪ್ತ್ಯಾಶೆ'.

ವ್ಯಾಖ್ಯೆ : ಉಪಾಯದ ಸಂಗಡ ಅಪಾಯದ ಶಂಕೆಯೂ ಇದ್ದು ಯಾವುದೊಂದು ನಿಶ್ಚಿತ ಫಲಪ್ರಾಪ್ತಿಯ ಸಂಪೂರ್ಣ ನಿರ್ಧಾರವಿಲ್ಲದಿರುವುದು 'ಪ್ರಾಪ್ತ್ಯಾಶೆ'. ಉದಾ:-[ರತ್ನಾ: ೩ನೆಯ ಅಂಕ, ಪು.೧೪೪] ರತ್ನಾವಲಿಯ ವೇಷ ಬದಲಾವಣೆ ಅಭಿಸರಣೆ ಮುಂತಾದವುಗಳ ಮೂಲಕ ವತ್ಸರಾಜನ ಸಮಾಗಮೋಪಾಯವು ನಡೆಯುತ್ತಿರಲು, ವಾಸವದತ್ತೆಯಿಂದುಂಟಾಗುವ ವಿಘ್ನದ ಶಂಕೆ: 'ಏವಂ ಜದಿ ಅಆಲವಾದಾಲೀ ವಿಅ ಆಅಚ್ಛಿಅ ಅಣ್ಣಮೋ ಣ ಣಇಸ್ಸದಿ ವಾಸವದತ್ತಾ । [ಅಕಾಲವಾಯುವಿನಂತೆ ಈಗ ವಾಸವದತ್ತೆಯು ಬಾರದಿದ್ದರೆ]' ಇದರಿಂದ, ನಿಶ್ಚಿತಫಲಪ್ರಾಪ್ತಿ ಅನಿರ್ಧಾರಿತವಾಗಿರುವುದು ಸೂಚಿತವಾಗಿದೆ.

ಟಿಪ್ಪಣಿ : ನಾ.ಶಾ.ದಲ್ಲಿ ಈ ಅವಸ್ಥೆಗೆ 'ಪ್ರಾಪ್ತಿಸಂಭವ' ಎಂಬ ಹೆಸರಿದೆ.

ಹೋಲಿಕೆ = ನಾ.ಶಾ. : ೨೧-೧೨; ಸಾ.ದ. : ೬-೭೨; ಪ್ರತಾಪ : ೩-೪.

## ೩೨. ನಿಯತಾಪ್ತಿಲಕ್ಷಣ :

ಅಪಾಯಾಭಾವತಃ ಪ್ರಾಪ್ತಿರ್ನಿಯತಾಪ್ತಿಃ ಸುನಿಶ್ಚಿತಾ ॥ ೨೧ ॥

ಅನು : ಅಪಾಯಗಳು ಇಲ್ಲದಿರುವುದರಿಂದ [ಫಲ] ದೊರಕುವುದು ಪೂರ್ಣ ನಿಶ್ಚಿತವಾಗಿದ್ದರೆ 'ನಿಯತಾಪ್ತಿ'.

ವ್ಯಾಖ್ಯೆ : ಅಪಾಯವೆಲ್ಲ ಹೋಗಿ, ನಿಶ್ಚಿತಫಲಪ್ರಾಪ್ತಿಯು ನಿರ್ಧಾರಿತವಾಗುವುದು 'ನಿಯತಾಪ್ತಿ'. ಉದಾ:-[ರತ್ನಾ : ಪು.೧೩೮-೧೩೯] 'ವಿಮೂಃ ಸಾಗರಿಕಾ ದುಕ್ಕರಂ ಜೀವಿಸ್ಸದಿ । [ಸಾಗರಿಕೆಯು ದುಷ್ಕರವಾಗಿ ಜೀವಿಸುತ್ತಿದ್ದಾಳೆ]' - ಎಂಬಲ್ಲಿಂದ, 'ಕಿಂ ಣ ಉವಾಯಂ ಚಿಂತೇಸಿ । [ನೀನೇಕೆ ಯಾವ ಉಪಾಯವನ್ನೂ ಚಿಂತಿಸುವುದಿಲ್ಲ?]'-ಎಂಬ ಮಾತಿನ ಅನಂತರ, 'ರಾಜಾಃ ವಯಸ್ಯ, ದೇವೀಪ್ರಸಾದನಂ ಮುಕ್ತ್ವಾ ನಾನ್ಯಮತ್ರೋಪಾಯಂ ಪಶ್ಯಾಮಿ । [ಮಿತ್ರ, ದೇವಿವಾಸವದತ್ತೆಯನ್ನು ಪ್ರಸನ್ನಗೊಳಿಸುವುದಲ್ಲದೆ ಬೇರೆ ಉಪಾಯವನ್ನು ಕಾಣೆ]'-ಹೀಗೆ ಮುಂದಿನ ಅಂಕದ ಘಟನೆಯ ಬಿಂದುವಿನ ರೂಪದಲ್ಲಿ, ವಾಸವದತ್ತೆಯನ್ನು ಪ್ರಸನ್ನಗೊಳಿಸಿ

ಆಕೆಯಿಂದ ಒದಗುವ ವಿಘ್ನವನ್ನು ಪರಿಹರಿಸಿಕೊಳ್ಳುವುದು ಸೂಚಿತವಾಗುತ್ತದೆ. ಇದರಿಂದ ಫಲಪ್ರಾಪ್ತಿ ನಿಯತವಾಗಿರುವುದನ್ನು ಸೂಚಿಸಲಾಗಿದೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೧೩; ಸಾ.ದ. : ೬-೭೩; ಪ್ರತಾಪ : ೩-೫.

## ೩೩. ಫಲಯೋಗಲಕ್ಷಣ :

**ಸಮಗ್ರಫಲಸಂಪತ್ತಿಃ ಫಲಯೋಗೋ ಯಥೋದಿತಃ ।**

ಅನು : [ಹೆಸರಿನಿಂದಲೇ] ಸೂಚಿತವಾಗುವಂತೆ, ಸಂಪೂರ್ಣ ಫಲಸಂಪತ್ತು [ದೊರಕುವುದು] 'ಫಲಯೋಗ'.

ವ್ಯಾಖ್ಯೆ : ಉದಾ:- ರತ್ನಾವಲಿಯಲ್ಲಿ, ಕೊನೆಗೆ ವತ್ಸರಾಜನಿಗೆ ರತ್ನಾವಲಿ ಹಾಗೂ ಚಕ್ರವರ್ತಿಪದವಿ ಇವುಗಳು ದೊರಕುವುವು. ಇದು ಫಲಯೋಗ.

ಟಿಪ್ಪಣಿ : ಹಿಂದೆ [೧-೨೮] ಇದನ್ನು 'ಫಲಾಗಮ' ಎಂದು ಕರೆದಿದೆ. ಪ್ರತಾಪ.ದಲ್ಲೂ 'ಫಲಾಗಮ' ಎಂದೇ ಹೇಳಲಾಗಿದೆ.

ಹೋಲಿಕೆ = ನಾ.ಶಾ. : ೨೧-೧೪; ಸಾ.ದ. : ೬-೭೩; ಪ್ರತಾಪ : ೩-೫.

# ಐದು ಸಂಧಿಗಳು :

## ೩೪. ಯಥಾಸಂಖ್ಯಸಂಧಿಗಳು :

**ಅರ್ಥಪ್ರಕೃತಯಃ ಪಂಚ ಪಂಚಾವಸ್ಥಾಸಮನ್ವಿತಾಃ ॥ ೨೨ ॥**
**ಯಥಾಸಂಖ್ಯೇನ ಜಾಯಂತೇ ಮುಖಾದ್ಯಾಃ ಪಂಚ ಸಂಧಯಃ ।**

ಅನು : ಐದು ಅವಸ್ಥೆಗಳಿಂದ ಕೂಡಿದ ಐದು ಅರ್ಥಪ್ರಕೃತಿಗಳ ಸಂಖ್ಯೆಯನ್ನನುಸರಿಸಿ 'ಮುಖ'ವೇ ಮೊದಲಾದ ಐದು ಸಂಧಿಗಳು ಉಂಟಾಗುತ್ತವೆ.

ವ್ಯಾಖ್ಯೆ : ಐದು ಅರ್ಥಪ್ರಕೃತಿಗಳಿಗೆ ಸರಿಯಾಗಿ ಐದು ಅವಸ್ಥೆಗಳು ಕೂಡಿಕೊಳ್ಳುವ ಕಾರಣ, ಅದೇ ಸಂಖ್ಯೆಗನುಸಾರವಾಗಿ 'ಮುಖ'ವೇ ಮೊದಲಾದ ಐದು ಸಂಧಿಗಳು ಉಂಟಾಗುತ್ತವೆ.

ಟಿಪ್ಪಣಿ : ('ಮುಖ'ವೇ ಮೊದಲಾದ ಐದು ಸಂಧಿಗಳನ್ನು ಇನ್ನುಮುಂದೆ ಲಕ್ಷಿಸಲಾಗುತ್ತದೆ.) ಪ್ರತಾಪ.ದಲ್ಲಿ [೩-೩] ಈ ಭಾಗ ಉದ್ಧೃತವಾಗಿದೆ.

ಹೋಲಿಕೆ = ಸಾ.ದ. : ೬-೭೪.

## ೩೫. ಸಂಧಿಲಕ್ಷಣ :

**ಅಂತರೈಕಾರ್ಥಸಂಬಂಧಃ ಸಂಧಿರೇಕಾನ್ವಯೇ ಸತಿ ॥ ೨೩ ॥**

ಅನು : [ಕಥಾಂಶಗಳಲ್ಲಿ] ಒಂದೇ ಹೊಂದಿಕೆಯಿರುವಾಗ, [ಆತ್ಯಂತಿಕ] ಫಲಕ್ಕಾಗಿ ಒಂದು ಮತ್ತೊಂದರ ನಡುವೆ ಉಂಟಾಗುವ ಸಂಬಂಧ 'ಸಂಧಿ'.

ವ್ಯಾಖ್ಯೆ : ಒಂದೇ ಪ್ರಯೋಜನಕ್ಕಾಗಿ ಹೊಂದಿಕೊಂಡ ಕಥಾಂಶಗಳೊಂದೊಂದರ ಫಲವೂ ಆತ್ಯಂತಿಕವಾದ ಮತ್ತೊಂದು ಫಲವನ್ನು ಕೊಡುವಂತೆ, ಕಥಾಂಶಗಳೊಂದಕ್ಕೊಂದಕ್ಕೆ ನಡುವೆ ಉಂಟಾಗುವ ಸಂಬಂಧಕ್ಕೆ 'ಸಂಧಿ' ಎಂದು ಹೆಸರು.

ಟಿಪ್ಪಣಿ : ಹೋಲಿಕೆ = ಸಾ.ದ. : ೬-೭೫; ಪ್ರತಾಪ : ೩-೩.

## ೩೬. ಐದು ಸಂಧಿಗಳು :

**ಮುಖಪ್ರತಿಮುಖೇ ಗರ್ಭಃ ಸಾವಮರ್ಶೋಽಪಸಂಹೃತಿಃ ।**

ಅನು : ಮುಖ, ಪ್ರತಿಮುಖ, ಗರ್ಭ, ಅವಮರ್ಶ, ಉಪಸಂಹೃತಿ [-ಈ ಐದು ಸಂಧಿಭೇದಗಳು].

ಟಿಪ್ಪಣಿ : 'ಉಪಸಂಹೃತಿ'ಗೆ 'ನಿರ್ವಹಣಸಂಧಿ' ಎಂಬ ಹೆಸರೂ ಉಂಟು; ನೋಡಿ : ೧-೯೬. ಈ ಭಾಗವು ಪ್ರತಾಪ.ದಲ್ಲಿ ಉದ್ಧೃತವಾಗಿದೆ.

ಹೋಲಿಕೆ = ನಾ.ಶಾ. : ೨೧-೩೭; ಸಾ.ದ. : ೬-೬೫, ೬೬.

# ಮುಖಸಂಧಿ ಮತ್ತು ಅದರ ಅಂಗಗಳು :

## ೩೭. ಮುಖಸಂಧಿಲಕ್ಷಣ :

**ಮುಖಂ ಬೀಜಸಮುತ್ಪತ್ತಿರ್ನಾನಾರ್ಥರಸಸಂಭವಾ೧ ॥ ೨೪ ॥**
**ಅಂಗಾನಿ ದ್ವಾದಶೈತಸ್ಯ ಬೀಜಾರಂಭಸಮನ್ವಯಾತ್ ।**

ಅನು : ಹಲವಾರು ಅರ್ಥಗಳನ್ನು ರಸಗಳನ್ನು ಮೂಡಿಸುವ ಬೀಜದ ಸಮುತ್ಪತ್ತಿಯು (ಹುಟ್ಟು) 'ಮುಖ[ಸಂಧಿ]'; 'ಬೀಜ' [ಮತ್ತು] 'ಆರಂಭ'ಗಳನ್ನು ಹೊಂದಿಸುವ ಅದರ ಅಂಗಗಳು ಹನ್ನೆರಡು.

ವ್ಯಾಖ್ಯೆ : ಐದು ಸಂಧಿಗಳು, ಐದು ಅರ್ಥಪ್ರಕೃತಿ ಹಾಗೂ ಐದು ಅವಸ್ಥೆಗಳಿಗೆ ಹೊಂದಿಕೊಂಡಿರುತ್ತವೆ(೧-೩೪). ಅಂತೆಯೇ ಮೊದಲನೆಯದಾದ 'ಮುಖಸಂಧಿ'ಯು 'ಬೀಜ'ವೆಂಬ ಮೊದಲ ಅರ್ಥಪ್ರಕೃತಿ ಹಾಗೂ 'ಆರಂಭ'ವೆಂಬ ಮೊದಲ ಅವಸ್ಥೆ- ಇವುಗಳನ್ನು ಹೊಂದಿರುತ್ತದೆ. ಉಳಿದವೂ ಹೀಗೆಯೇ. 'ಬೀಜ'ದ ಉತ್ಪತ್ತಿಯೇ 'ಮುಖಸಂಧಿ'; 'ಬೀಜ'ವು ವಿವಿಧ ಪ್ರಯೋಜನಗಳಿಗೆ ಮತ್ತು ರಸಗಳಿಗೆ ಕಾರಣವಾಗುತ್ತದೆ. ಪ್ರಹಸನ ಮುಂತಾದವುಗಳಲ್ಲಿ 'ಬೀಜ'ವು ಯಾವ ತ್ರಿವರ್ಗಾದಿ (ಧರ್ಮಾರ್ಥಕಾಮ) ಪ್ರಯೋಜನಗಳಿಗೆ ಕಾರಣವಾಗದಿದ್ದರೂ ಅಲ್ಲಿ, 'ಬೀಜ'ವು ರಸಗಳಿಗೆ ಕಾರಣವಾಗುತ್ತದೆ. ಬೀಜ ಆರಂಭಗಳಿಂದ ಕೂಡಿರುವ ಮುಖಸಂಧಿಯ ಅಂಗಗಳು ಹನ್ನೆರಡು.

ಟಿಪ್ಪಣಿ : ಮೂಲದಲ್ಲಿ 'ನಾನಾರ್ಥರಸಸಂಭವವಾದ ಬೀಜ...' ಎಂದಿದೆ; ಪ್ರಹಸನಗಳಲ್ಲಿ ಯಾವ ಅರ್ಥವೂ ಇಲ್ಲವಲ್ಲ - ಎಂದು ಪ್ರಶ್ನಿಸುವುದಾದರೆ, ಅಲ್ಲಿನ ಬೀಜ ಕೇವಲ ರಸವನ್ನು ಹುಟ್ಟಿಸುತ್ತದೆ - ಎಂದು ಧನಿಕ ವ್ಯಾಖ್ಯಾನಿಸುತ್ತಾನೆ.

'ಬೀಜ' 'ಆರಂಭ'ಗಳ ಲಕ್ಷಣ ಹಿಂದೆ [೧-೨೫ ಮತ್ತು ೨೯] ಬಂದಿದೆ.

ಹೋಲಿಕೆ = ನಾ.ಶಾ. : ೨೧-೩೯; ಸಾ.ದ. : ೬-೭೬, ೭೭; ಪ್ರತಾಪ : ೩-೮.

## ೩೮. ಹನ್ನೆರಡು ಮುಖಾಂಗಗಳು :

**ಉಪಕ್ಷೇಪಃ ಪರಿಕರಃ ಪರಿನ್ಯಾಸೋ ವಿಲೋಭನಮ್ ॥ ೨೫ ॥**
**ಯುಕ್ತಿಃ ಪ್ರಾಪ್ತಿಃ ಸಮಾಧಾನಂ ವಿಧಾನಂ ಪರಿಭಾವನಾ ।**
**ಉದ್ಭೇದಭೇದಕರಣಾನ್ಯನ್ವರ್ಥಾನ್ಯಥ ಲಕ್ಷಣಮ್ ॥ ೨೬ ॥**

---
೧ ಪಾಠ : ಸಂಶ್ರಯಾ.

ಅನು : [ಹನ್ನೆರಡು ಮುಖಾಂಗಗಳು ಇವು :] ಉಪಕ್ಷೇಪ, ಪರಿಕರ, ಪರಿನ್ಯಾಸ, ವಿಲೋಭನ, ಯುಕ್ತಿ, ಪ್ರಾಪ್ತಿ, ಸಮಾಧಾನ, ವಿಧಾನ, ಪರಿಭಾವನಾ, ಉದ್ಭೇದ, ಭೇದ, ಕರಣ; ಇವು ಅನ್ವರ್ಥ(ಹೆಸರಿನಿಂದಲೇ ಅರ್ಥವಾಗುವಂಥವು)ಗಳಾಗಿವೆ. ಇನ್ನು ಅವುಗಳ ಲಕ್ಷಣಗಳು [ನಿರೂಪಿತವಾಗುತ್ತವೆ].

ವ್ಯಾಖ್ಯೆ : ಇವೆಲ್ಲ ತಮ್ಮ ಹೆಸರಿನಿಂದಲೇ ಸ್ಪಷ್ಟವಾಗುತ್ತವೆಯಾದರೂ, ಸೌಲಭ್ಯಕ್ಕಾಗಿ ಅವುಗಳ ಲಕ್ಷಣಗಳನ್ನು ಹೇಳಿದೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೫೯, ೬೦; ಸಾ.ದ. : ೬-೮೧, ೮೨; ಪ್ರತಾಪ : ೩-೯.

## ೩೯. ಉಪಕ್ಷೇಪಲಕ್ಷಣ :

**ಬೀಜನ್ಯಾಸ ಉಪಕ್ಷೇಪಃ**

ಅನು : ಬೀಜವನ್ನು ಇರಿಸುವುದು 'ಉಪಕ್ಷೇಪ'.

ವ್ಯಾಖ್ಯೆ : ಉದಾಃ- [ರತ್ನಾ : ೧-೬; ಈ ಉದಾ :- ೧-೨೫, ಮತ್ತು ೩-೩, ೧೦ಗಳಲ್ಲಿ ಕೂಡ ಬಂದಿದೆ] :

'ದ್ವೀಪಾದನ್ಯಸ್ಮಾದಪಿ ಮಧ್ಯಾದಪಿ ಜಲನಿಧೇರ್ದಿಶೋಽಪ್ಯಂತಾತ್ ।
ಆನೀಯ ಝಟಿತಿ ಘಟಯತಿ ವಿಧಿರಭಿಮತಮಭಿಮುಖೀಭೂತಃ ॥

[ವಿಧಿ ಅನುಕೂಲವಾಗಿದ್ದರೆ ಅದು ನಮಗೆ ಇಷ್ಟವಾದದ್ದನ್ನು ಬೇರೊಂದು ದ್ವೀಪದಿಂದಲಾದರೂ ಅಥವಾ ಸಮುದ್ರಮಧ್ಯದಿಂದಲಾದರೂ ಅಥವಾ ದಿಕ್ಕಿನ ಅಂತ್ಯದಿಂದಲಾದರೂ ತಂದು ಕೂಡಿಸುತ್ತದೆ]' - ಎಂಬಲ್ಲಿ, ಯೌಗಂಧರಾಯಣನು ವತ್ಸರಾಜನಿಗೆ ರತ್ನಾವಲಿ ದೊರೆಯಲು ಅನುಕೂಲದೈವರೂಪವಾದ ತನ್ನ ಉದ್ಯಮವನ್ನು ಬೀಜದಂತೆ ಉಪಕ್ಷೇಪಿಸುವನು (ಇರಿಸುವನು) ಎಂಬ ಕಾರಣ ಅದು 'ಉಪಕ್ಷೇಪ'.

ಟಿಪ್ಪಣಿ : ನಾ.ಶಾ. ಮತ್ತು ಸಾ.ದ.ದ ಪ್ರಕಾರ ಕಾವ್ಯಾರ್ಥದ ಸಮುತ್ಪತ್ತಿ 'ಉಪಕ್ಷೇಪ'.

ಹೋಲಿಕೆ = ನಾ.ಶಾ. : ೨೧-೭೧; ಸಾ.ದ. : ೬-೮೩; ಪ್ರತಾಪ : ೩-೯.

## ೪೦. ಪರಿಕ್ರಿಯಾಲಕ್ಷಣ :

**ತದ್ಬಾಹುಲ್ಯಂ ಪರಿಕ್ರಿಯಾ ।**

ಅನು : ಅದರ [ಎಂದರೆ ಬೀಜದ] ಹೆಚ್ಚಳವು 'ಪರಿಕ್ರಿಯೆ' [ಅಥವಾ 'ಪರಿಕರ'].

ವ್ಯಾಖ್ಯೆ : ಉದಾಃ- [ರತ್ನಾ : ಪು. ೧೩]'ಅನ್ಯಥಾ ಕ್ವ ಸಿದ್ಧಾದೇಶಪ್ರತ್ಯಯಪ್ರಾರ್ಥಿತಾಯಾಃ ಸಿಂಹಲೇಶ್ವರದುಹಿತುಃ ಸಮುದ್ರೇ ಪ್ರವಹಣಭಂಗಮಗ್ನೋತ್ಥಿತಾಯಾಃ ಫಲಕಾಸಾದನಮ್ ।'[ಇಲ್ಲದಿದ್ದರೆ, ಸಿದ್ಧರ ಆದೇಶದಂತೆ ನಾವು ನಮ್ಮ ರಾಜನಿಗಾಗಿ ಪ್ರಾರ್ಥಿಸಿದ ಸಿಂಹಲೇಶ್ವರ ಪುತ್ರಿಯು ಹಡಗೊಡೆದು ಮುಳುಗಿದರೂ ಕೂಡ, ಮತ್ತೆ ಮೇಲೇಳಲು ಸಮುದ್ರದಲ್ಲಿ ಹಲಗೆ ಹೇಗೆ ಸಿಕ್ಕುತ್ತಿತ್ತು?]-ಇ., ಯಿಂದ, 'ಸರ್ವಥಾ ಸ್ಪೃಶಂತಿ ಸ್ವಾಮಿನಮಭ್ಯುದಯಾಃ ।'[ನಿಶ್ಚಯವಾಗಿ ನಮ್ಮ ರಾಜನು ಹೇಗೂ ಅಭ್ಯುದಯವನ್ನು ಹೊಂದುತ್ತಾನೆ]-ಎಂಬಲ್ಲಿ, ಬೀಜದ ಉತ್ಪತ್ತಿಯ ವಿಶೇಷಕಾರ್ಯವು 'ಪರಿಕ್ರಿಯಾ'.

ಟಿಪ್ಪಣಿ : ನಾ.ಶಾ. ಮತ್ತು ಸಾ.ದ.ದ ಪ್ರಕಾರ ಕಾವ್ಯಾರ್ಥಸಮುತ್ಪತ್ತಿಯ ಹೆಚ್ಚಳ 'ಪರಿಕರ'. ತತ್ = ಬೀಜದ (ಪ್ರತಾಪ).

ಹೋಲಿಕೆ = ನಾ.ಶಾ. : ೨೧-೭೨; ಸಾ.ದ. : ೬-೮೩; ಪ್ರತಾಪ : ೩-೯.

## ೪೧. ಪರಿನ್ಯಾಸಲಕ್ಷಣ :

**ತನ್ನಿಷ್ಪತ್ತಿಃಪರಿನ್ಯಾಸೋ**

ಅನು : ಅದರ [ಎಂದರೆ, ಪರಿಕ್ರಿಯೆಯ] ಸಿದ್ಧಿಯು 'ಪರಿನ್ಯಾಸ'.

ವ್ಯಾಖ್ಯೆ : ಉದಾ– [ರತ್ನಾ : ೧–೭ : ಈ ಉದಾ– ೧–೨೫ ಮತ್ತು ೨೯ರಲ್ಲೂ ಬಂದಿದೆ] :

'ಪ್ರಾರಂಭೇಽಸ್ಮಿನ್ ಸ್ವಾಮಿನೋ ವೃದ್ಧಿಹೇತೌ ದೈವೇ ಚೇತ್ಥಂ ದತ್ತಹಸ್ತಾವಲಂಬೇ ।
ಸಿದ್ಧೇರ್ಭ್ರಾಂತಿರ್ನಾಸ್ತಿ ಸತ್ಯಂ ತಥಾಪಿ ಸ್ವೇಚ್ಛಾಕಾರೀ ಭೀತ ಏವಾಸ್ಮಿ ಭರ್ತುಃ ॥

[ನನ್ನ ಒಡೆಯನ ಅಭಿವೃದ್ಧಿಗೆ ಕಾರಣವಾದ ಈ ಕಾರ್ಯವು, ದೈವದ ಅನುಕೂಲಹಸ್ತದಿಂದ, ಸಿದ್ಧಿಸುವುದರಲ್ಲಿ ಅನುಮಾನವಿಲ್ಲ. ಆದರೂ ಸ್ವೇಚ್ಛೆಯಿಂದ ಈ ಕಾರ್ಯವನ್ನು ಕೈಕೊಂಡಿರುವ ನನಗೆ ಒಡೆಯನವೇ ಹೆದರಿಕೆ]' – ಇಲ್ಲಿ ಯೌಗಂಧರಾಯಣನು ತನ್ನ ಕಾರ್ಯ ಮತ್ತು ದೈವಾನುಕೂಲಗಳ ಸಿದ್ಧಿಯನ್ನು ಹೇಳುವುದು 'ಪರಿನ್ಯಾಸ'.

ಟಿಪ್ಪಣಿ : ನಾ.ಶಾ.ದಲ್ಲಿ, ಪರಿಕ್ರಿಯೆಯ ಸಿದ್ಧಿಯ ಕಥನವು 'ಪರಿನ್ಯಾಸ' ಎಂದಿದೆ.

ಹೋಲಿಕೆ = ನಾ.ಶಾ. : ೨೧–೭೨; ಸಾ.ದ. : ೬–೮೪; ಪ್ರತಾಪ : ೩–೯.

## ೪೨. ವಿಲೋಭನಲಕ್ಷಣ :

**[1]ಗುಣಾಖ್ಯಾನಂ[1] ವಿಲೋಭನಮ್ ॥ ೨೭ ॥**

ಅನು : [ಫಲದಾಯಿಯಾದ ವಸ್ತುವಿನ] ಗುಣವನ್ನು ವರ್ಣಿಸುವುದು 'ವಿಲೋಭನ'.

ವ್ಯಾಖ್ಯೆ : ಉದಾ– [ರತ್ನಾ : ೧–೨೩; ಇದು ೧–೪೮ರಲ್ಲೂ ಬಂದಿದೆ] :

'ಅಸ್ತಾಪಾಸ್ತಸಮಸ್ತಭಾಸಿ ನಭಸಃ ಪಾರಂ ಪ್ರಯಾತೇ ರವಾ –
ವಾಸ್ಥಾನೀಂ ಸಮಯೇ ಸಮಂ ನೃಪಜನಃ ಸಾಯಂತನೇ ಸಂಪತನ್ ।
ಸಂಪ್ರತ್ಯೇಷ ಸರೋರುಹದ್ಯುತಿಮುಷಃ ಪಾದಾಂಸ್ತವಾಸೇವಿತುಂ
ಪ್ರೀತ್ಯುತ್ಕರ್ಷಕೃತೋ ದೃಶಾಮುದಯನಸ್ಯೇಂದೋರಿವೋದ್ವೀಕ್ಷತೇ ॥

[ಎಲೈ ಮಹಾರಾಜನೆ, ಸೂರ್ಯನು ತನ್ನ ಸಮಸ್ತ ಕಾಂತಿಯನ್ನೂ ಕಳೆದುಕೊಂಡು ಆಕಾಶದ ಅಪರದಿಗ್ಭಾಗಕ್ಕೆ ಪ್ರಯಾಣ ಮಾಡಲಾಗಿ ಸಾಯಂಕಾಲ ಸಮಯದಲ್ಲಿ ರಾಜಲೋಕವೆಲ್ಲವೂ ಒಂದುಗೂಡಿ–ಪದ್ಮಕಾಂತಿಯನ್ನು ಗೆದ್ದಂತಿರುವ, ಕಣ್ಣುಗಳಿಗೆ ಪ್ರೀತ್ಯುತ್ಕರ್ಷವನ್ನುಂಟುಮಾಡುವ–ನಿನ್ನ ಪಾದ (ಚರಣ ಮತ್ತು ಕಿರಣ)ಗಳನ್ನು ಈಗ ಸೇವಿಸಲು ಆಸ್ಥಾನಕ್ಕೆ ಬಂದು ಉದಯನೇಂದುವನ್ನು ನೋಡುವಂತೆ ನಿನ್ನನ್ನು ನೋಡುತ್ತಾರೆ.]' – ಇಲ್ಲಿ, ವೈತಾಲಿಕಮುಖದಿಂದ ಬಂದಿರುವ, ಚಂದ್ರಸಮಾನನಾದ ಉದಯನನ ಗುಣವರ್ಣನೆಯು ಸಾಗರಿಕೆಯಲ್ಲಿ ಅನುರಾಗಬೀಜವನ್ನು ಕೆರಳಿಸಿ ಅವಳಲ್ಲಿ 'ವಿಲೋಭನ'ವನ್ನುಂಟುಮಾಡುತ್ತದೆ; ಮುಂದಿನ ಸಮಾಗಮಕ್ಕೆ ಸಹಾಯ ಮಾಡುತ್ತದೆ. ಇದು 'ವಿಲೋಭನ'.

ಮತ್ತು [ವೇಣೀ : ೧–೨೨ರಿಂದ ೨೫ರ ವರೆಗೆ]

'ಮಂಥಾಯಸ್ತಾರ್ಣವಾಂಭಃಪ್ಲುತಕುಹರವಲನ್ಮಂದರಧ್ವಾನಧೀರಃ
ಕೋಣಾಘಾತೇಷು ಗರ್ಜತ್ಪ್ರಲಯಘನಘಟಾನ್ಯೋನ್ಯಸಂಘಟ್ಟಚಂಡಃ ।
ಕೃಷ್ಣಾಕ್ರೋಧಾಗ್ರದೂತಃಕುರುಕುಲನಿಧನೋತ್ಪಾತನಿರ್ಘಾತವಾತಃ
ಕೇನಾಸ್ಮತ್ಸಿಂಹನಾದಪ್ರತಿರಸಿತಸಖೋ ದುಂದುಭಿಸ್ತಾಡಿತೋಽಯಮ್ ।

[1] ಪಾಠ : ಗುಣಾಖ್ಯಾನಾತ್ (ಇದೇ ಲಕ್ಷಣ ಪುನರುಕ್ತವಾಗಿರುವ ಸಾ.ದ.ವಲ್ಲಿ 'ಗುಣಾಖ್ಯಾನಮ್' ಎಂಬ ಪಾಠವೇ ಇದೆ.)

[ಕಡೆಗೋಲಿನಿಂದ ಕ್ಷುಭಿತವಾದ ಸಮುದ್ರಜಲದಲ್ಲಿ ತಿರುಗುತ್ತಿರುವ ಮಂದರ ಪರ್ವತದ ಧ್ವನಿಯಂತೆ ಗಂಭೀರವಾದ, ಸಹಸ್ರ ಭೇರಿಗಳು ಹೊಡೆದುಕೊಳ್ಳುತ್ತಿರಲು, ಅಂತಹ ಪ್ರಚಂಡ ಧ್ವನಿಯ ಜೊತೆಯಲ್ಲಿ ಪ್ರಲಯಕಾಲದ ಘನಘಟೆಗಳ ಪರಸ್ಪರ ಘರ್ಷಣೆಯಂತೆ ಭಯಂಕರವಾದ, ದ್ರೌಪದಿಯ ಕ್ರೋಧಕ್ಕೆ ಅಗ್ರದೂತನಂತಿರುವ, ಕುರುಕುಲನಾಶಕ್ಕಾಗಿ ಅಪ್ಪಳಿಸಿ ಬರುವ ಉತ್ಪಾತವಾತದಂತಿರುವ, ನಮ್ಮ ಸಿಂಹನಾದಕ್ಕೆ ಸರಿಸಮನಾಗಿರುವ ಈ ದುಂದುಭಿಯನ್ನು ಯಾರು ಹೊಡೆದರು?]'-ಎಂಬಲ್ಲಿಂದ '...ಯಶೋದುಂದುಭಿಃ' ಎಂಬಲ್ಲಿಯವರೆಗೆ-ದ್ರೌಪದಿಯ ವಿಲೋಭನಕಾರ್ಯವು 'ವಿಲೋಭನ'.

ಟಿಪ್ಪಣಿ : ವಿಲೋಭನ = ಬೀಜಗುಣವರ್ಣನ (ಪ್ರತಾಪ).

ಹೋಲಿಕೆ = ನಾ.ಶಾ. : ೨೧-೭೩; ಸಾ.ದ. : ೬-೮೪; ಪ್ರತಾಪ : ೩-೯.

## ೪೩. ಯುಕ್ತಿಲಕ್ಷಣ :

**ಸಂಪ್ರಧಾರಣಮರ್ಥಾನಾಂ ಯುಕ್ತಿಃ**

ಅನು : ಪ್ರಯೋಜನಗಳ ಸರಿಯಾದ ನಿಶ್ಚಯ [ಅಥವಾ ಸಮರ್ಥನೆಯು] 'ಯುಕ್ತಿ'.

ವ್ಯಾಖ್ಯೆ : ಉದಾಃ- [ರತ್ನಾ : ಪು. ೧೫] : 'ಮಯಾಪಿ ಚೈನಾಂ ದೇವೀಹಸ್ತೇ ಸಬಹುಮಾನಂ ನಿಕ್ಷಿಪತಾ ಯುಕ್ತಮೇವಾನುಷ್ಠಿತಮ್ । ಕಥಿತಂ ಚ ಮಯಾ ಯಥಾ ಬಾಭ್ರವ್ಯಃ । ಕಂಚುಕೀ ಸಿಂಹಲೇಶ್ವರಾಮಾತ್ಯೇನ ವಸುಭೂತಿನಾ ಸಹ ಕಥಂಕಥಮಪಿ ಸಮುದ್ರಾದುತ್ತೀರ್ಯ ಕೋಶಲೋಚ್ಛಿತ್ತಯೇ ಗತಸ್ಯ ರುಮಣ್ವತೋ ಘಟಿತಃ । [ಇವಳನ್ನು ಬಹುಮಾನಪುರಸ್ಸರವಾಗಿ ದೇವಿಯ ಹಸ್ತದಲ್ಲಿಟ್ಟು ನಾನೂ ಯುಕ್ತವನ್ನೆ ಮಾಡಿದೆ. ಕಂಚುಕಿಯಾದ ಬಾಭ್ರವ್ಯನು ಸಿಂಹಲೇಶ್ವರನ ಮಂತ್ರಿ ವಸುಭೂತಿಯೊಂದಿಗೆ ಹೇಗೋ ಸಮುದ್ರದಿಂದ ಪಾರಾಗಿ ದಡವನ್ನು ಸೇರುತ್ತಿರಲು, ಕೋಶಲದೇಶದ ಮೇಲೆ ದಂಡೆತ್ತಿ ಹೋಗಿದ್ದ ರುಮಣ್ವಂತನಿಗೆ ಸಿಕ್ಕಿದನೆಂದು ಈಗ ನಾನು ಕೇಳಿದ್ದೇನೆ.]' – ಇದರಿಂದ, ಅಂತಃಪುರದಲ್ಲಿರುವ ಸಾಗರಿಕೆ ವತ್ಸರಾಜನ ಕಣ್ಣಿಗೆ ಬೀಳುತ್ತಾಳೆ; ಅದರಿಂದ ಮುಂದೆ ವತ್ಸರಾಜರತ್ನಾವಲಿಯರ ಸಮಾಗಮ ಪ್ರಯೋಜನವಾಗುತ್ತದೆ – ಎಂಬ ನಿಶ್ಚಯ ಮತ್ತು ಬಾಭ್ರವ್ಯವಸುಭೂತಿಯರಿಂದ ಈ ಸಮಾಗಮಕ್ಕೆ ಉಂಟಾಗುವ ಪ್ರಯೋಜನದ ನಿಶ್ಚಯ – ಇವು ವ್ಯಕ್ತವಾಗಿವೆ. ಇದು 'ಯುಕ್ತಿ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೭೩; ಸಾ.ದ. : ೬-೮೪.

## ೪೪. ಪ್ರಾಪ್ತಿಲಕ್ಷಣ :

**ಪ್ರಾಪ್ತಿಃ ಸುಖಾಗಮಃ ।**

ಅನು : ಸುಖ ಬರುವುದು 'ಪ್ರಾಪ್ತಿ'.

ವ್ಯಾಖ್ಯೆ : ಉದಾಃ- [ವೇಣೀ : ಪು. ೧೯ ಮತ್ತು ೧-೧೫] : 'ಚೇಟೀಃ ಭಟ್ಟಿಣಿ, ಪರಿಕುವಿದೋ ವಿಅ ಕುಮಾರೋ ಲಕ್ಖೀಅದಿ' [ಭರ್ತ್ರಿ, ಕುಮಾರ ಭೀಮಸೇನನು ಕ್ರುದ್ಧನಾದಂತೆ ತೋರುತ್ತದೆ] ಈ ಉಪಕ್ರಮದಲ್ಲಿ, ಭೀಮಃ –

'ಮಥ್ನಾಮಿ ಕೌರವಶತಂ ಸಮರೇ ನ ಕೋಪಾದ್ದುಃಶಾಸನಸ್ಯ ರುಧಿರಂ ನ ಪಿಬಾಮ್ಯುರಸ್ತಃ ।
ಸಂಚೂರ್ಣಯಾಮಿ ಗದಯಾ ನ ಸುಯೋಧನೋರೂ ಸಂಧಿಂ ಕರೋತು ಭವತಾಂ
ನೃಪತಿಃ ಪಣೇನ ॥

[ಸಮರದಲ್ಲಿ ನೂರ್ವರು ಕೌರವರನ್ನು ನಾನು ನಾಶಮಾಡಿಹಾಕುವುದಿಲ್ಲವೇನು? ದುಃಶಾಸನನ ಎದೆಯಿಂದ ರಕ್ತವನ್ನು ಹೀರದಿರುತ್ತೇನೆಯೆ? ಸುಯೋಧನನ ತೊಡೆಗಳನ್ನು ಗದೆಯಿಂದ ಪುಡಿಗುಟ್ಟಿಹಾಕುವುದಿಲ್ಲವೆ? – ನಿಮ್ಮ ರಾಜನು (ಯಾವುದಾದರೂ) ಶರತ್ತಿನಿಂದ ಸಂಧಿಮಾಡಿಕೊಳ್ಳಲಿ.] ದ್ರೌಪದೀ–ಣಾಧ, ಅಸ್ಸುದಪುವ್ವಂ ಖು ಏದಂ ವಅಣಂ । ತಾ ಪುಣೋ ಪುಣೋ ಭಣ ।' [ನಾಥ, ಹಿಂದೆ ಎಂದೂ ಇಂತಹ ಮಾತನ್ನು ಕೇಳಲಿಲ್ಲ, ಪುನಃ ಹೇಳು, ಪುನಃ ಹೇಳು.] ಇಲ್ಲಿ ಭೀಮಕ್ರೋಧದಿಂದ ದ್ರೌಪದಿಗೆ ಒದಗುವ ಸುಖ 'ಪ್ರಾಪ್ತಿ'.

ಮತ್ತು–[ರತ್ನಾ : ಪು. ೪೬] 'ಸಾಗರಿಕಾ–(ಶ್ರುತ್ವಾ ಸಹರ್ಷಂ ಪರಿವೃತ್ಯ ಸಸ್ಪೃಹಂ ಪಶ್ಯಂತೀ ।) ಕಥಂ ಅಅಂ ಸೋ ರಾಆ ಉದಯಣೋ ಜಸ್ಸ ಅಹಂ ತಾದೇಣ ದಿಣ್ಣಾ । ತಾ ಪರಪ್ಪೇಸಣ ದೂಸಿದಂ ಮೇ ಜೀವಿದಂ ಏದಸ್ಸ ದಂಸಣೇಣ ಬಹುಮದಂ ಸಂಜಾದಂ ।' [(ಕೇಳಿ ಹರ್ಷದಿಂದ ತಿರುಗಾಡುತ್ತ ಆಸೆಯಿಂದ ನೋಡುತ್ತ) ನನ್ನ ತಂದೆಯು ನನ್ನನ್ನು ಯಾರಿಗೆ ಕೊಟ್ಟಿರುವನೊ ಆ ಉದಯನರಾಜನೇ ಇವನೇನು? ಹಾಗಾದರೆ, ಪರರ ಸೇವೆಯಿಂದ ಕಲುಷಿತವಾದ ಈ ಜೀವಿತವು ಆತನ ದರ್ಶನದಿಂದ ಸಫಲವಾಯಿತು.] – ಹೀಗೆ ಸಾಗರಿಕೆಗೆ ಸುಖ ಉಂಟಾಗುವುದು 'ಪ್ರಾಪ್ತಿ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧–೭೪; ಸಾ.ದ. : ೬–೮೪; ಪ್ರತಾಪ : ೩–೯.

## ೪೫. ಸಮಾಧಾನಲಕ್ಷಣ :

### ಬೀಜಾಗಮಃ ಸಮಾಧಾನಂ

### ಅನು : ಬೀಜದ ಆಗಮನ (ಮೂಡಿಬರುವಿಕೆ) 'ಸಮಾಧಾನ'.

ವ್ಯಾಖ್ಯೆ : ಉದಾ– [ರತ್ನಾ : ಪು .೩೯] : 'ಸಾಗರಿಕಾ–ಭಟ್ಟಿಣಿ, ಏದಂ ಸವ್ವಂ ಸಜ್ಜಂ । [ಭರ್ತ್ರಿ, ಎಲ್ಲವೂ ಸಿದ್ಧವಾಗಿದೆ.] ವಾಸವದತ್ತಾ–(ನಿರೂಪ್ಯಾತ್ಮಗತಂ) ಅಹೋ, ಪಮಾದೋ ಪರಿಅಣಸ್ಸ । ಜಸ್ಸ ಏವ್ವ ದಂಸಣಪಹಾದೋ ಪಅತ್ತೇಣ ರಕ್ಖೀಅದಿ ತಸ್ಸ ಜ್ಜೇವ ಕಹಂ ದಿಟ್ಟಿಗೋಅರಂ ಆಅದಾ । ಭೋದು, ಏವ್ವಂ ದಾವ। (ಪ್ರಕಾಶಂ) ಹಂಜೇ ಸಾಗರಿಏ, ಕೀಸ ತುಮಂ ಅಜ್ಜ ಪರಾಹೀಣೇ ಪರಿಅಣೇ ಮಅಣೂಸವೇ ಸಾರಿಅಂ ಮೋತ್ತೂಣ ಇಹಾಗದಾ । ತಾ ತಹಿಂ ಜ್ಜೇವ ಗಚ್ಛ' [(ನೋಡಿ ತನ್ನಷ್ಟಕ್ಕೆ) ಓ, ಪರಿಚಾರಕರ ಪ್ರಮಾದ. ಯಾವನ ದೃಷ್ಟಿಗೆ ಬೀಳದಂತೆ ಇಷ್ಟು ದಿನ ತಡೆದಿಟ್ಟಿದ್ದೆನೊ ಅವನ ದೃಷ್ಟಿಗೇ ಬಿದ್ದಳು. ಆಗಲಿ, ಹೀಗೆ ಮಾಡುತ್ತೇನೆ. (ಪ್ರಕಾಶ) ಹಂಜೇ ಸಾಗರಿಕೆ, ಪರಿಜನರೆಲ್ಲ ಈ ಮದನೋತ್ಸವದಲ್ಲಿ ಬೇರೆ ಕೆಲಸಗಳಿಗೆ ತೊಡಗಿರುವಾಗ ಸಾರಿಕೆಯನ್ನು ಬಿಟ್ಟು ಇಲ್ಲಿ ಹೇಗೆ ಬಂದೆ? ನೀನು ಅಲ್ಲಿಗೇ ಹೋಗು.] ಈ ಉಪಕ್ರಮದಲ್ಲಿ, 'ಸಾಗರಿಕಾ–(ಸ್ವಗತಂ) ಸಾರಿಆ ದಾವ ಮಏ ಸುಸಂಗದಾಏ ಹತ್ಥೇ ಸಮಪ್ಪಿದಾ । ಪೇಕ್ಖಿದುಂ ಚ ಮೇ ಕುತೂಹಲಂ । ತಾ ಅಲಕ್ಖಿ ಆ ಪೇಕ್ಖಿಸ್ಸಂ ।' [(ಸ್ವಗತ) ಸಾರಿಕೆಯನ್ನು ಸುಸಂಗತೆಯ ಕೈಯಲ್ಲಿ ಕೊಟ್ಟು ಬಂದಿದ್ದೇನೆ. ನನಗೆ ನೋಡುವ ಕುತೂಹಲ. ಆದ್ದರಿಂದ ನಾನು ಇವರಿಗೆ ಕಾಣದಂತೆ ನೋಡುತ್ತ ನಿಲ್ಲುತ್ತೇನೆ.] – ಇಲ್ಲಿ, ವಾಸವದತ್ತೆ ರತ್ನಾವಲೀವತ್ಸರಾಜರ ಪರಸ್ಪರ ದರ್ಶನ ವಾಗದಿರಲೆಂದು ಸಾರಿಕೆಯ ನೆಪ ಹೇಳಿದರೆ, ಸಾರಿಕೆಯನ್ನು ಸುಸಂಗತೆಯ ಕೈಯಲ್ಲಿಟ್ಟು ಸಾಗರಿಕೆ ಯಾರಿಗೂ ಕಾಣದಂತೆ ಅಲ್ಲಿ ನಿಲ್ಲುತ್ತಾಳೆ. ಇದು ವತ್ಸರಾಜನ ಸಮಾಗಮಕ್ಕೆ ಕಾರಣವಾದ ಬೀಜದ ಉಪಾದಾನವಾಗಿದೆ; ಬೀಜದ ಈ ಉಪಾದಾನವೇ 'ಸಮಾಧಾನ'.

ಮತ್ತು–[ವೇಣೀ : ೧–೨೧; ಇದು ೧–೯ರಲ್ಲೂ ಬಂದಿದೆ.] : 'ಭೀಮಃ–ಭವತು । ಪಾಂಚಾಲರಾಜತನಯೆ, ಶ್ರೂಯತಾಮಚಿರೇಣೈವ ಕಾಲೇನ,

> ಚಂಚದ್ಭುಜಭ್ರಮಿತಚಂಡಗದಾಭಿಘಾತಸಂಚೂರ್ಣಿತೋರುಯುಗಲಸ್ಯ ಸುಯೋಧನಸ್ಯ ।
> ಸ್ತ್ಯಾನಾವನದ್ಧಘನಶೋಣಿತಶೋಣಪಾಣಿರುತ್ತಂಸಯಿಷ್ಯತಿ ಕಚಾಂಸ್ತವ ದೇವಿ ಭೀಮಃ ॥'

[ಭೀಮ–ಆಗಲಿ. ಎಲೈ ಪಾಂಚಾಲರಾಜತನಯೆ, ಕೇಳು–ಅನತಿಕಾಲದಲ್ಲಿಯೇ, ದೇವಿ, ನನ್ನ ಕುಶಲವಾದ ತೋಳುಗಳು ತಿರುಗಿಸುವ ಭಯಂಕರ ಗದೆಯ ಪ್ರಹಾರದಿಂದ ಸುಯೋಧನನ ಎರಡು ತೊಡೆಗಳನ್ನೂ ಪುಡಿಪುಡಿಯಾಗಿ, ಘನರಕ್ತದಿಂದ ತುಂಬಿ ಕೆಂಪಾದ ದೃಢಹಸ್ತಗಳಿಂದ ಈ ಭೀಮನು ನಿನ್ನ ಮುಡಿಯನ್ನು ಕಟ್ಟುವನು.]–ಹೀಗೆ ಮುಡಿಕಟ್ಟುವ ಉದ್ದೇಶಕ್ಕೆ ಬೀಜದ ಪುನರುಪಾದಾನವು 'ಸಮಾಧಾನ'.

ಟಿಪ್ಪಣಿ : 'ಬೀಜ'ಲಕ್ಷಣಕ್ಕೆ ೧–೨೫ ನೋಡಿ.

ಹೋಲಿಕೆ = ನಾ.ಶಾ. : ೨೧–೭೪; ಸಾ.ದ. : ೬–೮೫; ಪ್ರತಾಪ : ೩–೯.

## ೪೬. ವಿಧಾನಲಕ್ಷಣ :

ವಿಧಾನಂ ಸುಖದುಃಖಕೃತ್ ॥ ೨೮ ॥

ಅನು : ಸುಖದುಃಖ[ಗಳೆರಡನ್ನೂ]ಉಂಟುಮಾಡುವುದು 'ವಿಧಾನ'.

ವ್ಯಾಖ್ಯೆ : ಉದಾ:- [ಮಾಮಾ : ೧-೩೨; ಇದು ೪-೫೭ರಲ್ಲೂ ಬಂದಿದೆ] :

'ಯಾನ್ತ್ಯಾ ಮುಹುರ್ವಲಿತಕಂಧರಮಾನನಂ ತದಾವೃತ್ತವೃಂತಶತಪತ್ರನಿಭಂ ವಹನ್ತ್ಯಾ ।
ದಿಗ್ಧೋಽಮೃತೇನ ಚ ವಿಷೇಣ ಚ ಪಕ್ಷ್ಮಲಾಕ್ಷ್ಯಾ ಗಾಢಂ ನಿಖಾತ ಇವ ಮೇ ಹೃದಯೇ ಕಟಾಕ್ಷಃ ॥'

[ಅವಳು ಹೋಗುವಾಗ ಕೊರಳನ್ನು ಕೊಂಕಿಸಿ ಕಮಲವೃಂತದ ಮೇಲಿರುವ ಮಂಡು ತಾವರೆಯಂತಹ ಮುಖವನ್ನು ಮತ್ತೆ ಮತ್ತೆ ಹೊರಳಿಸಿ ನೋಡಿದ-ತುಂಬುಗೂದಲುರೆಪ್ಪೆಯಿದ್ದು ಅಮೃತ ಮತ್ತು ವಿಷ ತುಂಬಿದ-ಅವಳ ಕಡೆಗಣ್ಣೋಟವು ಇಂದಿಗೂ ನನ್ನ ಹೃದಯದಲ್ಲಿ ನಟ್ಟಂತಿದೆ.]

ಮತ್ತು - [ಮಾ.ಮಾ : ೧-೨೨] :

'ಯದ್ವಿಸ್ಮಯಸ್ತಿ ಮಿತಮಸ್ತ ಮಿತಾನ್ಯಭಾವಮಾನಂದಮಂದಮಮೃತಪ್ಲವನಾದಿವಾಭೂತ್ ।
ತತ್ಸಂನಿಧೌತದಧುನಾ ಹೃದಯಂ ಮದೀಯಮಂಗಾರಚುಂಬಿತಮಿವ ವ್ಯಥಮಾನಮಾಸ್ತೇ ॥'

[ಅವಳು ಸಮೀಪದಲ್ಲಿದ್ದಾಗ ವಿಸ್ಮಯದಿಂದ ನಿಶ್ಚಲವಾಗಿದ್ದ ಉಳಿದೆಲ್ಲ ಭಾವಗಳೂ ಅಳಿದುಹೋಗಿದ್ದ, ಅಮೃತಸ್ನಾನದಿಂದೆಂಬಂತೆ ಆನಂದದಿಂದ ಮಂದವಾಗಿದ್ದ-ನನ್ನ ಹೃದಯವು ಈಗ ಅಗ್ನಿಚುಂಬನದಿಂದೆಂಬಂತೆ ವ್ಯಥಿತವಾಗಿದೆ.]-ಹೀಗೆ ಮಾಲತಿಯ ಅನುರಾಗದರ್ಶನದಿಂದ, ಸಮಾಗಮಕ್ಕೆ ಕಾರಣವಾಗುವ ಬೀಜಕ್ಕೆ ಅನುಗುಣವಾಗಿಯೇ ಸುಖದುಃಖಗಳೆರಡೂ ಉಂಟಾಗುತ್ತವೆ. ಇದು 'ವಿಧಾನ'.

ಮತ್ತು-[ವೇಣೀ : ೧-೨೬] : 'ದ್ರೌಪದೀ-ಣಾಧ, ಪುಣೋವಿ ತುಮ್ಹೇಹಿಂ ಅಹಂ ಆಅಚ್ಛಿಅ ಸಮಾಸಾಸಿದವ್ವಾ । [ನಾಥ, ನೀವು ಪುನಃ ಬಂದು ನನ್ನನ್ನು ಸಮಾಧಾನಪಡಿಸಬೇಕು.] ಭೀಮಃ-ನನು ಪಾಂಚಾಲರಾಜತನಯೆ, ಕಿಮದ್ಯಾಪ್ಯಲೀಕಾಶ್ವಾಸನಯಾ।,

ಭೂಯಃ ಪರಿಭವಕ್ಲಾಂತಿಲಜ್ಜಾವಿಧುರಿತಾನನಮ್ ।
ಅನಿಃಶೇಷಿತಕೌರವ್ಯಂ ನ ಪಶ್ಯಸಿ ವೃಕೋದರಮ್ ॥'

[ಪಾಂಚಾಲರಾಜತನಯೆ, ಈಗಲೂ ಕೇವಲ ಜಳ್ಳು ಆಶ್ವಾಸನದಿಂದ ಏನಾದೀತು? ದೇವಿ, ಕೌರವರನ್ನೆಲ್ಲ ನಿಃಶೇಷಗೊಳಿಸುವವರೆಗೆ ಪರಾಭವದ ದುಃಖದಿಂದ ಮತ್ತು ಲಜ್ಜೆಯಿಂದ ರಹಿತವಾದ ವೃಕೋದರನ ಈ ಮುಖವನ್ನು ನೀನು ಮತ್ತೆ ನೋಡುವುದಿಲ್ಲ.]-ಹೀಗೆ ಸಂಗ್ರಾಮದ ಸುಖ ದುಃಖಗಳು 'ವಿಧಾನ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೭೫; ಸಾ.ದ. : ೬-೮೫; ಪ್ರತಾಪ : ೩-೯.

## ೪೭. ಪರಿಭಾವಲಕ್ಷಣ :

ಪರಿಭಾವೋಽದ್ಭುತಾವೇಶಃ

ಅನು : ಅದ್ಭುತವಾದ ಆವೇಶವು 'ಪರಿಭಾವ[ನಾ]'.

ವ್ಯಾಖ್ಯೆ : ಉದಾ:- [ರತ್ನಾ : ಪು. ೪೪]'ಸಾಗ-(ದೃಷ್ಟ್ವಾ ಸವಿಸ್ಮಯಂ) ಕಧಂ ಪಚ್ಚಕ್ಖೋಜ್ಜೇವ ಅಣಂಗೋ ಪೂಅಂ ಪಡಿಚ್ಛೇದಿತಾ। ಅಹಂಪಿ ಇಧ ಠ್ಠಿದಾ ಜ್ಜೇವ ಣಂ ಪೂಜ ಇಸ್ಸಂ।' [(ವಿಸ್ಮಯದಿಂದ ನೋಡಿ) ಇದೇನು, ಕಾಮದೇವನು ಹೇಗೆ ಪ್ರತ್ಯಕ್ಷನಾಗಿ ಪೂಜೆಯನ್ನು ಸ್ವೀಕರಿಸುತ್ತಿದ್ದಾನೆ! ನಾನು ಕೂಡ ಇಲ್ಲಿ ನಿಂತೇ ಈತನನ್ನು ಪೂಜಿಸುತ್ತೇನೆ.]-ಇಲ್ಲಿ, ಸಾಗರಿಕೆ ಹೇಳುವ ಮಾತಿನಲ್ಲಿ ಲೋಕೋತ್ತರ ವಿಷಯದಿಂದ ಹುಟ್ಟಿದ ಅದ್ಭುತರಸದ ಆವೇಶ 'ಪರಿಭಾವನಾ'.

ಮತ್ತು-[ವೇಣೀ : ಪು. ೩೦] : 'ದ್ರೌಪದೀ-ಕಿಂ ದಾಣಿಂ ಏಸೋ ಪಲಅಜಲಧರತ್ಥಣಿದಮಂಸಲೋ ಖಣೇ ಖಣೇ ಸಮರದುಂದುಭೀ ತಾಡೀಅದಿ ತ್ತಿ।' [ಇದೇನು, ಈಗ ಪ್ರಲಯದ ಮೇಘಧ್ವನಿಗೆ ಸಮಾನವಾದ ಈ ಸಮರದುಂದುಭಿಯು ಕ್ಷಣಕ್ಷಣದಲ್ಲಿಯೂ ಬಡಿಯಲ್ಪಡುತ್ತಿದೆ.]-ಎಂಬಲ್ಲಿ ಲೋಕೋತ್ತರವಾದ ಸಮರ ದುಂದುಭಿಯ ರವದಿಂದ ಉಂಟಾಗುವ ವಿಸ್ಮಯದ ರಸಾವೇಶವು 'ಪರಿಭಾವನಾ'.

ಟಿಪ್ಪಣಿ: ೧-೩೮ರಲ್ಲಿ 'ಪರಿಭಾವನಾ' ಎಂದದ್ದು ಇಲ್ಲಿ 'ಪರಿಭಾವ' ಎಂದು ಸಂಕ್ಷಿಪ್ತವಾಗಿದೆ.

ಹೋಲಿಕೆ = ನಾ.ಶಾ. : ೨೧-೭೫; ಸಾ.ದ. : ೬-೮೬; ಪ್ರತಾಪ : ೩-೯.

## ೪೮. ಉದ್ಭೇದಲಕ್ಷಣ :

**ಉದ್ಭೇದೋ ಗೂಢಭೇದನಮ್ ।**

ಅನು : ರಹಸ್ಯವನ್ನು ಭೇದಿಸುವುದು 'ಉದ್ಭೇದ'.

ವ್ಯಾಖ್ಯೆ : ಉದಾ:- [ರತ್ನಾ : ೧-೨೩; ಈ ಶ್ಲೋಕಕ್ಕೆ ೧-೪೨ ನೋಡಿ]'ಅಸ್ತಾಪಾಸ್ತ...' ಎಂಬಲ್ಲಿ, ವತ್ಸರಾಜನೇ ಮನ್ಮಥನೆಂದು ತಿಳಿದಿರುವಾಗ, ವೈತಾಲಿಕರ ಮಾತಿನ 'ಉದಯನ' ಎಂಬ ಶಬ್ದದಿಂದ, ಆ ರಹಸ್ಯವು ಪ್ರಕಟವಾಗುತ್ತದೆ. ಬೀಜಕ್ಕೆ ಸಹಾಯಕವಾದ ಈ ಗೂಢಭೇದನವೇ 'ಉದ್ಭೇದನ'.

ಮತ್ತು-[ವೇಣೀ : ಪು. ೨೯ ಮತ್ತು ೧-೨೪] 'ಆರ್ಯ, ಕಿಮಿದಾನೀಮಧ್ಯವಸ್ಯತಿ ಗುರುಃ' [ಆರ್ಯ, ಈಗ ಪೂಜ್ಯ ಯುಧಿಷ್ಠಿರನು ಏನನ್ನು ನಿಶ್ಚಯಿಸುತ್ತಾನೆ?]- ಎಂದು ಆರಂಭವಾಗುವಲ್ಲಿ,'(ನೇಪಥ್ಯೇ)

ಯತ್ಸತ್ಯವ್ರತಭಂಗಭೀರುಮನಸಾ ಯತ್ನೇನ ಮಂದೀಕೃತಂ
  ಯದ್ವಿಸ್ಮರ್ತುಮಪೀಹಿತಂ ಶಮವತಾ ಶಾಂತಿಂ ಕುಲಸ್ಯೇಚ್ಛತಾ।
ತದ್ದ್ಯೂತಾರಣಿಸಂಭೃತಂ ನೃಪಸುತಾ ಕೇಶಾಂಬರಾಕರ್ಷಣೈಃ
  ಕ್ರೋಧಜ್ಯೋತಿರಿದಂ ಮಹತ್ಕುರುವನೇ ಯೌಧಿಷ್ಠಿರಂ ಜೃಂಭತೇ ॥

[ಸತ್ಯವ್ರತದ ಭಂಗಕ್ಕೆ ಮನಸ್ಸು ಭಯಗೊಂಡು ಪ್ರಯತ್ನಪೂರ್ವಕ ಮಂದಗೊಳಿಸಲ್ಪಟ್ಟ, ಕುಲದ ಶಾಂತಿಯ ಇಚ್ಛೆಯಿಂದ ಶಮೆಯನ್ನು ತಂದುಕೊಂಡು ಮರೆತುಹೋಗುವುದರಲ್ಲಿದ್ದ, ದ್ಯೂತವೆಂಬ ಅರಣಿಯಲ್ಲಿ ಸಂಗ್ರಹಿತವಾಗಿದ್ದ ಯುಧಿಷ್ಠಿರನ ಕ್ರೋಧಜ್ಯೋತಿಯು ದ್ರೌಪದಿಯ ಕೇಶಾಂಬರಾಕೃಷ್ಟಿಯಿಂದ ಮಹತ್ತಾದ ಕುರುವನದಲ್ಲಿ ವಿಜೃಂಭಿಸುತ್ತಿದೆ.]'ಭೀಮಃ-(ಸಹರ್ಷಂ) ಜೃಂಭತಾಂ ಜೃಂಭತಾಂ ಸಂಪ್ರತ್ಯಪ್ರತಿಹತಮಾರ್ಯಸ್ಯ ಕ್ರೋಧಜ್ಯೋತಿಃ।' [(ಸಂತಸದಿಂದ) ಆರ್ಯನ ಕ್ರೋಧಜ್ಯೋತಿಯು ಈಗ ವಿಜೃಂಭಿಸಲಿ!]-ದ್ರೌಪದಿಯ ಮುಡಿಕಟ್ಟುವ ಉದ್ದೇಶಕ್ಕೆ ಹೊಂದಿ ಯುಧಿಷ್ಠಿರನ ಕ್ರೋಧ ಪ್ರಕಟವಾಗಿದೆ; ಇದು 'ಉದ್ಭೇದ'.

ಟಿಪ್ಪಣಿ : 'ಬೀಜಾರ್ಥವು ಚಿಗುರುವುದು ಉದ್ಭೇದ' ಎಂದು ನಾ.ಶಾ.ದಲ್ಲಿ ಇದನ್ನು ಲಕ್ಷಿಸಿದೆ; ಸಾ.ದ.ದಲ್ಲೂ ಅದನ್ನೆ ಅನುಸರಿಸಿದೆ. ಸಾ.ದ.ದಲ್ಲಿ ಅದಕ್ಕೆ ಉದಾಹರಣೆಯಾಗಿ, ಧನಿಕನು ವಿಧಾನ(೧-೪೬)ಕ್ಕೆ ಕೊಟ್ಟಿರುವ ವೇಣೀ. ಉದಾ.ನ್ನು ಕೊಟ್ಟಿದೆ.

ಹೋಲಿಕೆ = ನಾ.ಶಾ. : ೨೧-೭೬; ಸಾ.ದ. : ೬-೮೬; ಪ್ರತಾಪ : ೩-೯.

## ೪೯. ಕರಣಲಕ್ಷಣ :

**ಕರಣಂ ಪ್ರಕೃತಾರಂಭೋ**

ಅನು : ಪ್ರಸ್ತುತ [ವಿಷಯ]ದ ಆರಂಭವು'ಕರಣ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೪೪] : 'ಣಮೋ ದೇ ಕುಸುಮಾಉಹ, ತಾ ಅಮೋಹ ದಂಸಣೋ ಮೇ ಭವಿಸ್ಸಸಿ ತ್ತಿ ದಿಟ್ಠಂ ಜಂ ಪೇಕ್ಖಿದವ್ವಂ। ತಾ ಜಾವ ಣ ಕೋ ವಿ ಮಂ ಪೇಕ್ಖ ಇ ತಾ ಗಮಿಸ್ಸಂ।' [ಕುಸುಮಾಯುಧನೆ, ನಿನಗೆ ನಮಸ್ಕಾರ. ನನಗೆ ಇದು ಅಮೋಘದರ್ಶನ. ನೋಡತಕ್ಕುದನ್ನು ನೋಡಿಯಾಯಿತು. ಯಾರಾದರೂ

ನೋಡಿಬಿಟ್ಟಾರು, ಈಗಲೇ ಹೊರಡುತ್ತೇನೆ] ಈ ಮಾತಿನ ಮೂಲಕ, ಮುಂದಿನ ಅಂಕವಲ್ಲಿ ಪ್ರಸ್ತುತವಾದ ನಿರ್ವಿಘ್ನದರ್ಶನದ ಆರಂಭವು ಸೂಚಿತವಾಗಿದೆ. ಇದೇ 'ಕರಣ'.

ಮತ್ತು-[ವೇಣೀ : ಪು. ೩೧] : 'ತತ್ಪಾಂಚಾಲಿ, ಗಚ್ಛಾಮೋ ವಯಮಿದಾನೀಂ ಕುರುಕುಲ ಕ್ಷಯಾಯ ।' [ಆದ್ದರಿಂದ, ಪಾಂಚಾಲಿ, ನಾವು ಕುರುಕುಲನಾಶಕ್ಕಾಗಿ ಹೋಗುತ್ತೇವೆ.] 'ಸಹದೇವಃ-ಆರ್ಯ, ಗಚ್ಛಾಮ ಇದಾನೀಂ ಗುರುಜನಾನುಜ್ಞಾತಾ ವಿಕ್ರಮಾನುರೂಪಮಾಚರಿತುಮ್ ।' [ಆರ್ಯ, ಗುರುಜನರ ಆಜ್ಞೆ ಪಡೆದಾಗಿದೆ. ವಿಕ್ರಮಕ್ಕೆ ತಕ್ಕುದನ್ನು ಮಾಡಲು ಹೋಗುತ್ತೇವೆ.] – ಇಲ್ಲಿ ಮುಂದಿನ ಅಂಕವಲ್ಲಿ ಬರಲಿರುವ ಸಂಗ್ರಾಮದ ಆರಂಭವು ಸೂಚಿತವಾಗಿದೆ.

ಇಲ್ಲಿ ಉದ್ದೇಶ (ಸಂಸ್ಕೃತಮೂಲ : ಕುರುಕುಲಕ್ಷಯಾಯ, ವಿಕ್ರಮಾನುರೂಪಮಾಚರಿತುಂ) ಮತ್ತು ಪ್ರತಿನಿರ್ದೇಶ ಎಂದರೆ ವಿಧೇಯರೂಪವಾದ ಕ್ರಿಯೆ (ಸಂ.ಮೂ. : ಗಚ್ಛಾಮಃ) ಇವುಗಳ ಕ್ರಮ ವ್ಯತ್ಯಾಸವಾಗಿದೆ. ಇಲ್ಲಿ ಹೋಗುವ ಕ್ರಿಯೆ ಮುಖ್ಯವಲ್ಲ; ಹೊರಟ ಉದ್ದೇಶ ಮುಖ್ಯ. ಆದ್ದರಿಂದ ಕ್ರಿಯಾಪದ ಮುಂಚೆ ಬಂದು ಆಮೇಲೆ ಉದ್ದೇಶ ಸೂಚಿತವಾಗಿದೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧–೭೬; ಸಾ.ದ. : ೬–೮೬, ೮೭; ಪ್ರತಾಪ : ೩–೯.

## ೫೦. ಭೇದಲಕ್ಷಣ :

ಭೇದಃ ಪ್ರೋತ್ಸಾಹನಾ ಮತಾ ॥ ೨೯ ॥

ಅನು : ಪ್ರೋತ್ಸಾಹವನ್ನುಂಟುಮಾಡುವುದು 'ಭೇದ' ಎಂದು ಅಭಿಪ್ರಾಯ.

ವ್ಯಾಖ್ಯೆ : ಉದಾ:– [ವೇಣೀ : ೧–೨೪] 'ಣಾಧ, ಮಾ ಕ್ಖು ಜಣ್ಣಸೇಣೀಪರಿಭವುದ್ದೀವಿದಕೋವಾ ಅಣವೇಕ್ಖಿದಸರೀರಾ ಪರಿಕ್ಕಮಿಸ್ಸಧ । ಜದೋ ಅಪ್ಪಮತ್ತಸಂಚರಣೀಯಾಇಂಸುಣೀಯಂತಿ ರಿಉಬಲಾಇಂ ।' [ನಾಥ, ಯಾಜ್ಞಸೇನಿಯ ಪರಿಭವದಿಂದ ಕ್ರೋಧೋದ್ದೀಪಿತರಾಗಿ, ದೇಹದಮೇಲೆ ಯೋಚನೆಯಿಲ್ಲದೆ ಹೊರಡಬೇಡಿರಿ. ಏಕೆಂದರೆ ಶತ್ರುಬಲವು ಪ್ರಮತ್ತ ಸಂಚಾರಕ್ಕೆ ಯೋಗ್ಯವಲ್ಲವೆಂದು ಹೇಳುತ್ತಾರೆ.]'ಭೀಮಃ– ಅಯಿ ಸುಕ್ಷತ್ರಿಯೆ,

ಅನ್ಯೋನ್ಯಾಸ್ಫಾಲಭಿನ್ನದ್ವಿಪರುಧಿರವಸಾಮಾಂಸಮಸ್ತಿಷ್ಕಪಂಕೇ
ಮಗ್ನಾನಾಂ ಸ್ಯಂದನಾನಾಮುಪರಿಕೃತಪದನ್ಯಾಸವಿಕ್ರಾಂತಪತ್ತೌ ।
ಸ್ಫೀತಾಸೃಕ್ಪಾನಗೋಷ್ಠೀರಸದಶಿವಶಿವಾತೂರ್ಯನೃತ್ಯತ್ಕಬಂಧೇ
ಸಂಗ್ರಾಮೈಕಾರ್ಣವಾಂತಃಪಯಸಿ ವಿಚರಿತುಂ ಪಂಡಿತಾಃ ಪಾಂಡುಪುತ್ರಾಃ ॥'

[ಎಲೈ ಸುಕ್ಷತ್ರಿಯೆ, ಪರಸ್ಪರ ಸಂಘರ್ಷಣೆಯಿಂದ ಸೀಳಿದ ಆನೆಗಳ ರಕ್ತ ವಪೆ ಮಾಂಸ ಮಸ್ತಿಷ್ಕಗಳ ಕೆಸರಿನಲ್ಲಿ ರಥಗಳು ಹುಗಿದುಹೋಗುತ್ತಿರಲು ವೀರರಾದ ಪದಾತಿಗಳು ಅದರ ಮೇಲೆ ಪಾದಗಳನ್ನಿಡುತ್ತಾರೆ; ಹೊಳೆಯುವ ರಕ್ತವನ್ನು ಹೀರುತ್ತ ಪಾನಗೋಷ್ಠಿಯಲ್ಲಿ ತೊಡಗಿರುವ ನರಿಗಳ ಅಮಂಗಲ ಧ್ವನಿಯೇ ತೂರ್ಯವಾಗಿರಲು ಛಿನ್ನ ಮುಂಡಗಳು ಕುಣಿಯುತ್ತವೆ–ಅಂತಹ ಯುದ್ಧದ ಅಪಾರ ಸಮುದ್ರಜಲದಲ್ಲಿ ವಿಹರಿಸುವ ಕುಶಲರಾಗಿದ್ದಾರೆ ಪಾಂಡವರು.] – ಹೀಗೆ ವಿಷಣ್ಣಳಾದ ದ್ರೌಪದಿಗೆ ಕ್ರೋಧೋತ್ಸಾಹಬೀಜಕ್ಕೆ ಅನುಗುಣವಾಗಿ ಪ್ರೋತ್ಸಾಹನೆ ಕೊಡುವುದು 'ಭೇದ'.

–ಮೇಲೆ ಮುಖಸಂಧಿಯ ಹನ್ನೆರಡು ಅಂಗಗಳನ್ನು ಹೇಳಲಾಯಿತು. ಈ ಅಂಗಗಳು, ಅರ್ಥಪ್ರಕೃತಿಗಳಲ್ಲಿ ಮೊದಲನೆಯದಾದ 'ಬೀಜ'ದ ದ್ಯೋತಕವಾಗಿ ಹಾಗೂ ಅವಸ್ಥೆಗಳಲ್ಲಿ 'ಆರಂಭ'ದ ದ್ಯೋತಕವಾಗಿ ಇವೆ. ಇವುಗಳನ್ನು ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ರೂಪಕಗಳಲ್ಲಿ ತರತಕ್ಕದ್ದು. ಇವುಗಳಲ್ಲಿ ಅವಶ್ಯವಾಗಿ ಯೋಜಿಸಲೇಬೇಕಾದವುಗಳು : ಉಪಕ್ಷೇಪ, ಪರಿಕರ, ಪರಿನ್ಯಾಸ, ಯುಕ್ತಿ, ಉದ್ಭೇದ, ಸಮಾಧಾನ – ಈ ಆರು.

ಟಿಪ್ಪಣಿ : ಅರ್ಥಪ್ರಕೃತಿಲಕ್ಷಣಕ್ಕೆ ೧-೨೭, 'ಬೀಜ'ಕ್ಕೆ ೧-೨೫, ಅವಸ್ಥೆಗೆ ೧-೨೮, ಆರಂಭಕ್ಕೆ ೧-೨೯ ನೋಡಿ. 'ಸಂಘಾತ ಭೇದವೇ ಭೇದ' ಎಂದು ನಾ.ಶಾ.ದಲ್ಲಿ ಭೇದಲಕ್ಷಣವನ್ನು ಹೇಳಿದೆ; ಸಾ.ದ.ದಲ್ಲಿ ಅದನ್ನೆ ಅನುಸರಿಸಲಾಗಿದ್ದರೂ, ವ್ಯಾಖ್ಯೆಯಲ್ಲಿ, 'ಕೆಲವರು ಪ್ರೋತ್ಸಾಹನವನ್ನು ಭೇದ ಎನ್ನುತ್ತಾರೆ' ಎಂದು ಸೇರಿಸಲಾಗಿದೆ.

ಹೋಲಿಕೆ = ನಾ.ಶಾ. : ೨೧-೭೭; ಸಾ.ದ. : ೬-೮೭; ಪ್ರತಾಪ : ೩-೯.

# ಪ್ರತಿಮುಖಸಂಧಿ ಮತ್ತು ಅದರ ಅಂಗಗಳು :

## ೫೧. ಪ್ರತಿಮುಖಸಂಧಿಲಕ್ಷಣ :

**ಲಕ್ಷ್ಯಾಲಕ್ಷ್ಯ೧ತಯೋದ್ಭೇದಗಸ್ತಸ್ಯ ಪ್ರತಿಮುಖಂ ಭವೇತ್ ।**
**ಬಿಂದುಪ್ರಯತ್ನಾನುಗಮಾದಂಗಾನ್ಯಸ್ಯ ತ್ರಯೋದಶ ॥ ೩೦ ॥**

ಅನು : [ಹಲವೊಮ್ಮೆ] ಕಂಡು [ಮತ್ತೆ ಹಲವೊಮ್ಮೆ] ಕಾಣದೆ [ಉಂಟಾಗುವ] ಅದರ [ಎಂದರೆ, ಬೀಜದ] ಒಡೆಯುವಿಕೆಯು (ಉದ್ಭೇದ, ಪ್ರಕಟವಾಗುವಿಕೆ) 'ಪ್ರತಿಮುಖ' ವಾಗುತ್ತದೆ. ಬಿಂದುಪ್ರಯತ್ನಗಳ ಹೊಂದಿಕೆಯಿಂದ [ಉಂಟಾಗುವ] ಅದರ ಅಂಗಗಳು ಹದಿಮೂರು.

ವ್ಯಾಖ್ಯೆ: ಒಮ್ಮೆ ಕಾಣಿಸುವ ಒಮ್ಮೆ ಕಾಣಿಸದಿರುವ ಅದರ ಎಂದರೆ ಬೀಜದ, ಉದ್ಭೇದ ಎಂದರೆ ಪ್ರಕಾಶನವು 'ಪ್ರತಿಮುಖ'. ಉದಾ- ರತ್ನಾವಲಿಯ ಮೊದಲನೆಯ ಅಂಕದಲ್ಲಿ ವತ್ಸರಾಜಸಾಗರಿಕೆಯರ ಸಮಾಗಮಕ್ಕೆ ಕಾರಣವಾಗುವ ಅನುರಾಗಬೀಜವನ್ನು ಇಟ್ಟದೆ; ಎರಡನೆಯ ಅಂಕದಲ್ಲಿ, ವಿದೂಷಕಸುಸಂಗತೆಯರು ಅರಿಯುವುದರ ಮೂಲಕ ಸ್ವಲ್ಪ ಸ್ವಲ್ಪ ಹಾಗೂ ಚಿತ್ರಫಲಕವೃತ್ತಾಂತದಿಂದ ವಾಸವದತ್ತೆ ಗ್ರಹಿಸುವುದರ ಮೂಲಕ ಸ್ವಲ್ಪ ಸ್ವಲ್ಪ- ಹೀಗೆ ಆ ಬೀಜವು ಸ್ವಲ್ಪ ಸ್ವಲ್ಪ ಮೇಲೆ ಕಾಣುತ್ತದೆ ಮತ್ತೆ ಅದೃಶ್ಯವಾಗುತ್ತದೆ. ಅದು ಪ್ರತಿಮುಖಸಂಧಿ.

ಮತ್ತು-ವೇಣೀಸಂಹಾರದ ಎರಡನೆಯ ಅಂಕದಲ್ಲಿ ಯುಧಿಷ್ಠಿರನ ಕ್ರೋಧಬೀಜವು ಭೀಷ್ಮಾದಿಗಳ ಮರಣದಿಂದ ಸ್ವಲ್ಪ ಲಕ್ಷ್ಯವೂ ಕರ್ಣಾದಿಗಳು ಇನ್ನೂ ಬದುಕಿರುವುದರಿಂದ ಸ್ವಲ್ಪ ಅಲಕ್ಷ್ಯವೂ ಆಗಿ ಪ್ರಕಟವಾಗಿದೆ : [ವೇಣೀ : ೨-೫ ಮತ್ತು ೨-೨೮] :

'ಸಹಭೃತ್ಯಗಣಂ ಸಬಾಂಧವಂ ಸಹಮಿತ್ರಂ ಸಸುತಂ ಸಹಾನುಜಮ್ ।
ಸ್ವಬಲೇನ ನಿಹಂತಿ ಸಂಯುಗೇ ನಚಿರಾತ್ಪಾಂಡುಸುತಃ ಸುಯೋಧನಮ್ ॥'

[ಅನತಿಕಾಲದಲ್ಲಿಯೇ ಪಾಂಡುಸುತನು ತನ್ನ ಬಲದಿಂದಲೇ ಸುಯೋಧನನನ್ನು ಭೃತ್ಯಗಣ ಬಾಂಧವರು ಮಿತ್ರರು ಮಕ್ಕಳು ತಮ್ಮಂದಿರು ಎಲ್ಲರೊಟ್ಟಿಗೆ ಯುದ್ಧದಲ್ಲಿ ಕೊಂದುಹಾಕುತ್ತಾನೆ.] ಮತ್ತು,

'ದುಃಶಾಸನಸ್ಯ ಹೃದಯಕ್ಷತಜಾಂಬುಪಾನೇ ದುರ್ಯೋಧನಸ್ಯ ಚ ಯಥಾ ಗದಯೋರುಭಂಗೇ ।
ತೇಜಸ್ವಿನಾಂ ಸಮರಮೂರ್ಧನಿ ಪಾಂಡವಾನಾಂ ಜ್ಞೇಯಾ ಜಯದ್ರಥವಧೇಽಪಿ ತಥಾ ಪ್ರತಿಜ್ಞಾ ॥'

[ದುಃಶಾಸನನ ಬಿರಿದ ಎದೆಯ ನೆತ್ತರನ್ನು ಕುಡಿಯುವಾಗ ಮತ್ತು ಗದೆಯಿಂದ ದುರ್ಯೋಧನನ ತೊಡೆ ಮುರಿಯುವಾಗ ಹೇಗೋ ಹಾಗೆಯೇ ಜಯದ್ರಥನ ವಧೆಯಲ್ಲಿ ಕೂಡ ತೇಜಸ್ವಿಗಳಾದ ಪಾಂಡವರು ರಣಭೂಮಿಯಲ್ಲಿ ಪ್ರತಿಜ್ಞೆಯನ್ನು ಪೂರೈಸಿಕೊಳ್ಳುವ ರೀತಿಯು ಗಮನಾರ್ಹವಾಗಿದೆ.] – ಹೀಗೆ ಬೀಜದ ಉದ್ಭೇದವು 'ಪ್ರತಿಮುಖಸಂಧಿ'.

---

೧ ಪಾಠ : ಇವೋದ್ಭೇದಃ

ಮೊದಲನೆಯ ಅಂಕದಲ್ಲಿ ಸ್ಥಾಪಿತವಾದ ಬೀಜದ 'ಬಿಂದು'ರೂಪ ಮತ್ತು ಅರ್ಥಪ್ರಕೃತಿಗಳಲ್ಲಿ ಎರಡನೆಯದಾದ 'ಪ್ರಯತ್ನ' ಇವುಗಳ ಹೊಂದಿಕೆಯಿಂದ, ಇದರ ಅಂಗಗಳು ಹದಿಮೂರು.

ಟಿಪ್ಪಣಿ : ಬೀಜಲಕ್ಷಣಕ್ಕೆ ೧–೨೫, ಬಿಂದುವಿಗೆ ೧–೨೬, ಪ್ರಯತ್ನಕ್ಕೆ ೧–೩೦ ನೋಡಿ.

ಹೋಲಿಕೆ = ನಾ.ಶಾ. ೨೧–೪೦; ಸಾ.ದ. : ೬–೭೭, ೭೮; ಪ್ರತಾಪ : ೩–೧೧.

## ೫೨. ಪ್ರತಿಮುಖದ ಹದಿಮೂರು ಅಂಗಗಳು :

ವಿಲಾಸಃ ಪರಿಸರ್ಪಶ್ಚ ವಿಧೂತಂ ಶಮನರ್ಮಣೀ ।

ನರ್ಮದ್ಯುತಿಃ ೧ಪ್ರಗಮನಂ೧ ನಿರೋಧಃ ಪರ್ಯುಪಾಸನಮ್ ॥ ೩೧ ॥

ವಜ್ರಂ ಪುಷ್ಪಮುಪನ್ಯಾಸೋ ವರ್ಣಸಂಹಾರ ಇತ್ಯಪಿ ।

ಅನು : [ಪ್ರತಿಮುಖದ ಹದಿಮೂರು ಅಂಗಗಳು] ವಿಲಾಸ, ಪರಿಸರ್ಪ, ವಿಧೂತ, ಶಮ, ನರ್ಮ, ನರ್ಮದ್ಯುತಿ, ಪ್ರಗಮನ, ನಿರೋಧ, ಪರ್ಯುಪಾಸನ, ವಜ್ರ, ಪುಷ್ಪ, ಉಪನ್ಯಾಸ, ವರ್ಣಸಂಹಾರ – ಇವು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧–೬೧, ೬೨; ಸಾ.ದ. : ೬–೮೭, ೮೮, ೮೯; ಪ್ರತಾಪ : ೩–೧೧.

## ೫೩. ವಿಲಾಸಲಕ್ಷಣ :

೨ರತ್ಯರ್ಥೇಹಾ೨ ವಿಲಾಸಃ ಸ್ಯಾತ್

ಅನು : ರತಿಯ (ಸುಖದ ) ಇಚ್ಛೆಯು 'ವಿಲಾಸ'ವಾಗಿದೆ.

ವ್ಯಾಖ್ಯೆ : ಉದಾ:– [ರತ್ನಾ. ಪು. ೫೩]'ಸಾಗ–ಹಿಅಅ, ಪಸೀದ ಪಸೀದ । ಕಿಂ ಇಮಿಣಾ ಆಆಸಮೇತ್ತಫಲೇಣ ದುಲ್ಲಹಜಣಪ್ಪತ್ಥಣಾಣುಬಂಧೇಣ' [ಹೃದಯವೆ, ಪ್ರಸನ್ನವಾಗು. ದುರ್ಲಭರಾದವರನ್ನು ಕುರಿತು ಪ್ರಾರ್ಥಿಸಿದರೆ ಅದರಿಂದ ಆಯಾಸ ಮಾತ್ರವಲ್ಲದೆ ಮತ್ತೇನು?]–ಎಂಬಲ್ಲಿಂದ, 'ತಹಾವಿ ಆಲೇಕ್ಖಗದಂ ತಂ ಜಣಂ ಕದುಅ ಜಧಾಸಮೀಹಿದಂ ಕರಿಸ್ಸಂ । ತಹಾವಿ ತಸ್ಸ ಣತ್ಥಿ ಅಣ್ಣೋ ದಂಸಣೋವಾಲು ತ್ತಿ ।'[ಆಗಲಿ, ಆತನ ಚಿತ್ರವನ್ನು ಬರೆದು ನನ್ನ ಇಚ್ಛೆಯಂತೆ ಮಾಡುತ್ತೇನೆ. ಅದಲ್ಲದೆ ಅವನನ್ನು ನೋಡಲು ಬೇರೆ ಉಪಾಯವಿಲ್ಲ]–ಇಲ್ಲಿ, ಸಾಗರಿಕೆಗೆ ಚಿತ್ರದಿಂದಲೇ ಉಂಟಾದ ವತ್ಸರಾಜನ ಸಮಾಗಮಸುಖದ ಇಚ್ಛೆಯು ಪ್ರಕಟವಾಗಿದೆ; ಬೀಜವನ್ನು ಹೊಂದಿಕೊಂಡ ಆಕೆಯ ಪ್ರಯತ್ನರೂಪವಾದ ಚಿತ್ರಲೇಖನಚೇಷ್ಟೆಯು 'ವಿಲಾಸ'.

ಟಿಪ್ಪಣಿ : ನಾ.ಶಾ. ಮತ್ತು ಸಾ.ದ.ಗಳಲ್ಲಿ 'ರತಿಭೋಗ' ಎಂದೂ ಪ್ರತಾಪ.ದಲ್ಲಿ 'ಸಂಭೋಗ' ಎಂದೂ ಹೇಳಿದೆ.

ಹೋಲಿಕೆ = ನಾ.ಶಾ. : ೨೧–೭೮; ಸಾ.ದ. : ೬೯; ಪ್ರತಾಪ : ೩–೧೧.

## ೫೪. ಪರಿಸರ್ಪಲಕ್ಷಣ :

ದೃಷ್ಟನಷ್ಟಾನುಸರ್ಪಣಮ್ ॥ ೩೨ ॥

ಪರಿಸರ್ಪೋ

ಅನು : [ಒಮ್ಮೆ] ಕಂಡು [ಮತ್ತೆ] ಕಳೆದುಹೋಗಿರುವುದನ್ನು ಅರಸುವುದು 'ಪರಿಸರ್ಪ'.

---

೧ ಪಾಠ : ಪ್ರಗಯಣಮ್(ನಾ.ಶಾ.ವಲ್ಲಿ ಇವಕ್ಕೆ 'ಪ್ರಗಣಂ', 'ಪ್ರಗಣನಂ' ಎಂದೂ, ಸಾ.ದ.ದಲ್ಲಿ 'ಪ್ರಗಮನಂ' ಎಂದೂ, ಪ್ರತಾಪ.ದಲ್ಲಿ 'ಪ್ರಗಮ' ಎಂದೂ ಹೇಳಿದೆ; ನಾ.ಶಾ.ದಲ್ಲಿ ಇವಕ್ಕೇ 'ಪ್ರಶಮನಂ' ಎಂಬ ಪಾಠಾಂತರ ಕೂಡ ಉಂಟು.)

೨ ಪಾಠ : ರತ್ಯುತ್ಥೇಹಾ.

ವ್ಯಾಖ್ಯೆ : ಉದಾ– [ವೇಣೀ : ೨–೨] : 'ಕಂಚುಕೀ–ಯೋಽಯಮುದ್ಯತೇಷು ಬಲವತ್ಸು, ಅಥವಾ ಕಿಂ ಬಲವತ್ಸು, ವಾಸುದೇವಸಹಾಯೇಷ್ವರಿಷ್ವನ್ಯಾಪ್ಯಂತಃಪುರಸುಖಮನುಭವತಿ ಇದಮಪರಮಯಥಾತಥಂ ಸ್ವಾಮಿನಃ,

ಆಶಸ್ತ್ರಗ್ರಹಣಾದಕುಂಠಪರಶೋಸ್ತಸ್ಯಾಪಿ ಜೇತಾ ಮುನೇ –

ಸ್ತಾಪಾಯಾಸ್ಯ ನ ಪಾಂಡುಸೂನುಭಿರಯಂ ಭೀಷ್ಮಃ ಶರೈಃ ಶಾಯಿತಃ ।

ಪ್ರೌಢಾನೇಕಧನುರ್ಧರಾರಿವಿಜಯಶ್ರಾಂತಸ್ಯ ಚೈಕಾಕಿನೋ

ಬಾಲಸ್ಯಾಯಮರಾತಿಲೂನಧನುಷಃ ಪ್ರೀತೋಽಭಿಮನ್ಯೋರ್ವಧಾತ್ ॥'

[ಕಂಚುಕಿ–ವೈರಿಗಳು ಉದ್ಯಮಶೀಲರಾಗಿ ಬಲಶಾಲಿಗಳಾಗಿರಲು, ಅಥವಾ ಬಲಶಾಲಿಗಳೇನು, ವಾಸುದೇವನ ಸಹಾಯವುಳ್ಳವರಾಗಿರಲು, ಈ ನಮ್ಮ ರಾಜ ದುರ್ಯೋಧನನು ಅಂತಃಪುರಸುಖವನ್ನನುಭವಿಸುತ್ತಿದ್ದಾನೆ. ಸ್ವಾಮಿಯ ಮತ್ತೊಂದು ಅನುಚಿತ(ಕಾರ್ಯ)ವಿದು. ಕೈಯಲ್ಲಿ ಶಸ್ತ್ರವನ್ನು ಹಿಡಿದಂದಿನಿಂದ ಮೊದಲಾಗಿ ಎಂದೂ ಕುಂಠಿತವಾಗದ ಕೊಡಲಿಯುಳ್ಳ ಆ ಪ್ರಸಿದ್ಧ ಮುನಿಯನ್ನು (ಪರಶುರಾಮನನ್ನು) ಕೂಡ ಜಯಿಸಿದ ಈ ಭೀಷ್ಮನು ಪಾಂಡವರ ಶರಗಳಲ್ಲಿ ಮಲಗಿದುದು ದುರ್ಯೋಧನನಿಗೆ ದುಃಖಕೊಡಲಿಲ್ಲ. ಈಗ, – ಬಲಿಷ್ಠರಾದ ಅನೇಕಾನೇಕ ಧನುರ್ಧಾರಿಗಳಾದ ಶತ್ರುಗಳನ್ನು ಜಯಿಸಿ ಬಳಲಿರುವಾಗ ಶತ್ರುಗಳು ಆತನ ಧನುಸ್ಸನ್ನೆ ಮುರಿದುಹಾಕಿರಲು – ಏಕಾಕಿಯಾದ ಬಾಲಕ ಅಭಿಮನ್ಯುವಿನ ವಧೆಯಿಂದ ಸುಯೋಧನನಿಗೆ ಸಂತೋಷವಾಗಿದೆ.] – ಕಂಚುಕಿ ಹೇಳುವ ಈ ಮಾತಿನಲ್ಲಿ – ಭೀಷ್ಮಾದಿಗಳ ವಧೆಯಿಂದ ದೃಷ್ಟವಾಗಿ ಅನಂತರ ಅಭಿಮನ್ಯುವಿನ ವಧೆಯಿಂದ ಬೀಜವು ನಷ್ಟವಾಯಿತು. ಆದರೆ ವಾಸುದೇವನ ಸಹಾಯವುಳ್ಳ ಬಲಿಷ್ಠ ಪಾಂಡವರ ಸಂಗ್ರಾಮರೂಪವಾದ ಬಿಂದುಬೀಜಪ್ರಯತ್ನಗಳಿಗೆ ಹೊಂದಿ, ಕಂಚುಕಿಯ ಮಾತಿನಲ್ಲಿ, ಮತ್ತೆ ಬೀಜದ ಅನುಸರಣವು ಬಂದಿದೆ.

ಮತ್ತು–ರತ್ನಾ.ಲ್ಲಿ, ಸಾರಿಕೆಯ ಮಾತು ಮತ್ತು ಚಿತ್ರದರ್ಶನಗಳಿಂದ ಒಮ್ಮೆ ಕಂಡು ಮತ್ತೆ ನಷ್ಟವಾದ ಸಾಗರಿಕೆಯ ಅನುರಾಗಬೀಜವನ್ನು ವತ್ಸರಾಜನು 'ಕ್ವಾಸೌ ಕ್ವಾಸೌ' [ಅವಳೆಲ್ಲಿ ಅವಳೆಲ್ಲಿ ] – ಈ ಮಾತುಗಳಿಂದ ಪುನಃ ಅರಸುತ್ತಾನೆ. ಇದು 'ಪರಿಸರ್ಪ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧–೭೮; ಸಾ.ದ. : ೬–೯೦; ಪ್ರತಾಪ : ೩–೧೧.

## ೫೫. ವಿಧೂತಲಕ್ಷಣ :

**ವಿಧೂತಂ ಸ್ಯಾದರತಿಃ**

ಅನು : ರತಿ (ಸುಖ) ಇಲ್ಲದಿರುವುದು 'ವಿಧೂತ'.

ವ್ಯಾಖ್ಯೆ : ಉದಾ– [ರತ್ನಾ : ಪು. ೬೨, ೨–೧] : 'ಸಾಗ–ಸಹಿ, ಅಹಿಅಂ ಮೇ ಸಂತಾವೋ ಬಾಧೇದಿ ।' [ಸಖಿ, ಸಂತಾಪದಿಂದ ಬಹಳ ಬಾಧೆಪಡುತ್ತಿದ್ದೇನೆ]. '(ಸುಸಂಗತಾ ದೀರ್ಘಿಕಾತೋ ನಲಿನೀದಲಾನಿ ಮೃಣಾಲಿಕಾಶ್ಚಾನೀಯಾಸ್ಯಾ ಅಂಗೇ ದದಾತಿ)' [ಸುಸಂಗತೆಯು ಸರೋವರದಿಂದ ಕಮಲದ ದಲ ಮತ್ತು ದಂಟುಗಳನ್ನು ತಂದು ಆಕೆಯ ಅವಯವಗಳ ಮೇಲೆ ಇರಿಸುತ್ತಾಳೆ.] 'ಸಾಗ–(ತಾನಿ ಕ್ಷಿಪಂತೀ) ಸಹಿ, ಅವಣೇಹಿ ಏದಾಇಂ । ಕಿಂ ಅಆರಣೇ ಅತ್ತಾಣಂ ಆಯಾಸೇಸಿ । ಣಂ ಭಣಾಮಿ, ದುಲ್ಲಹಜಣಾಣುರಾಓ ಲಜ್ಜಾ ಗರುಈ ಪರವ್ವಸೋ ಅಪ್ಪಾ । ಪಿಅಸಹಿ ವಿಸಮಂ ಪೇಮ್ಮಂ ಮರಣಂ ಸರಣಂ ಣವರ ಏಕ್ಕಂ ॥' [(ಅವುಗಳನ್ನು ತಳ್ಳಿಹಾಕಿ) ಸಖೀ, ಇವುಗಳನ್ನು ದೂರ ಎಸೆ. ಅಕಾರಣವಾಗಿ ಏಕೆ ದಣಿಯುತ್ತೀಯೆ? ಹೇಳುತ್ತೇನೆ ಕೇಳು,– ದುರ್ಲಭನಾದವನಲ್ಲಿ ಪ್ರೇಮ, ಮಿತಿಮೀರಿದ ಲಜ್ಜೆ, ಪರಾಧೀನ ಆತ್ಮ–ಇವುಗಳಿಂದ, ಪ್ರಿಯಸಖಿ, ಈ ಪ್ರೇಮ ವಿಷಮವಾಗಿದೆ, ನನಗೆ ಕೇವಲ ಮರಣವೇ ಶರಣು.] – ಹೀಗೆ ಸಾಗರಿಕೆಯು, ಅನುರಾಗಬೀಜಕ್ಕೆ ಅನುಗುಣವಾಗಿ, ಶೀತೋಪಚಾರಗಳನ್ನು ವಿಧೂನನಗೊಳಿಸುತ್ತಾಳೆ (ತಿರಸ್ಕರಿಸುತ್ತಾಳೆ)–ಅದು 'ವಿಧೂತ'.

ಮತ್ತು-(ವೇ.ಸಂ. ಎರಡನೆಯ ಅಂಕ) ಭಾನುಮತಿಯ ದುಸ್ಸ್ವಪ್ನದರ್ಶನ, ದುರ್ಯೋಧನನ ಅನಿಷ್ಟಶಂಕೆ ಅಥವಾ ಪಾಂಡವವಿಜಯಶಂಕೆ ಇವುಗಳಿಂದ ರತಿಯ ವಿಧೂನನವು 'ವಿಧೂತ.'

ಟಿಪ್ಪಣಿ : 'ವಿನಯಾದಿಗಳನ್ನು ಸ್ವೀಕರಿಸದಿರುವುದು ವಿಧೂತ' ಎಂದು ನಾ.ಶಾ.ದಲ್ಲಿ ಹೇಳಿದೆ. ಅದನ್ನೆ ಅನುಸರಿಸುವ ಸಾ.ದ.ದ ವ್ಯಾಖ್ಯೆಯಲ್ಲಿ, 'ಕೆಲವರು ಅರತಿಯನ್ನು ವಿಧೂತ ಎನ್ನುತ್ತಾರೆ' ಎಂದೂ ಸೇರಿಸಿದೆ.

ಹೋಲಿಕೆ = ನಾ.ಶಾ. : ೨೧-೭೯; ಸಾ.ದ. : ೬-೯೦; ಪ್ರತಾಪ : ೩-೧೧.

## ೫೬. ಶಮಲಕ್ಷಣ :

ತಚ್ಛಮಃ ಶಮಃ ।

ಅನು : ಅದರ [ಎಂದರೆ, ಅರತಿಯ] ತಣಿವು 'ಶಮ'.

ವ್ಯಾಖ್ಯೆ : ಅದರ ಎಂದರೆ, ರತಿ ಇಲ್ಲದಿರುವಿಕೆಯ ಉಪಶಮನವೇ 'ಶಮ'. ಉದಾ:-[ರತ್ನಾ: ಪು. ೮೭] 'ರಾಜಾ-ವಯಸ್ಯ, ಅನಯಾ ಲಿಖಿತೋಽಹಮಿತಿ ಯತ್ಸತ್ಯಮಾತ್ಮನ್ಯಪಿ ಮೇ ಬಹುಮಾನಸ್ತತ್ಕಥಂ ನ ಪಶ್ಯಾಮಿ ।' [ಮಿತ್ರ, ನಿಜವಾಗಿಯೂ ನನ್ನ ಚಿತ್ರವನ್ನು ಆಕೆಯೇ ಬರೆದಳೆಂಬುದು ನನಗೂ ಬಹುಮಾನವಲ್ಲವೇನು? ನಾನೇಕೆ ನೋಡಬಾರದು?] ಎಂದು ಆರಂಭವಾಗಿ, 'ಸಾಗ-ಹಿಅಅ, ಸಮಸ್ಸಸ । ಮಣೋರಹೋ ವಿ ದೇ ಏತ್ತಿ ಅಂ ಭೂಮಿಂ ಣ ಗದೋ ।' [ಹೃದಯವೆ, ಸಮಾಧಾನ ಹೊಂದು. ನಿನ್ನ ಮನೋರಥವು ಇಷ್ಟು ದೂರ ಹೋಗಿರಲಿಲ್ಲ.] – ಹೀಗೆ ಅರತಿಯ ಕಿಂಚಿತ್ ಉಪಶಮನವು 'ಶಮ'.

ಟಿಪ್ಪಣಿ : 'ಶಮ'ಕ್ಕೆ ಬದಲಾಗಿ ನಾ.ಶಾ.ದಲ್ಲಿ 'ತಾಪನ' ಎಂಬ ಅಂಗವನ್ನು ಹೇಳಿದೆ; 'ಅಪಾಯದರ್ಶನವು ತಾಪನ' ಎಂಬುದು ಲಕ್ಷಣ. ಸಾ.ದ.ದಲ್ಲೂ ಹಾಗೆಯೇ ಹೇಳಿದೆ. ಧನಿಕನು 'ವಿಧೂತ'ಕ್ಕೆ ಕೊಟ್ಟಿರುವ ಉದಾ.ಯನ್ನೆ (ರತ್ನಾ : ಪು. ೬೨) ಸಾ.ದ.ದಲ್ಲಿ 'ತಾಪನ'ಕ್ಕೆ ಕೊಟ್ಟಿದೆ. ನೋಡಿ : ನಾ.ಶಾ. : ೨೧-೭೯; ಸಾ.ದ. : ೬-೯೧.

ಹೋಲಿಕೆ = ಪ್ರತಾಪ : ೩-೧೧.

## ೫೭. ನರ್ಮಲಕ್ಷಣ :

ಪರಿಹಾಸವಚೋ ನರ್ಮ

ಅನು : ಪರಿಹಾಸದ ಮಾತು 'ನರ್ಮ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೯೦] : 'ಸುಸಂಗತಾ-ಸಹಿ, ಜಸ್ಸ ಕಏ ತುಮಂ ಆಅದಾ ಸೋ ಅಅಂ ಪುರದೋ ಚಿಟ್ಠದಿ । [ಸಖಿ, ನೀನು ಯಾವನ ಸಲುವಾಗಿ ಬಂದಿರುವೆಯೋ ಅವನೇ ಎದುರು ನಿಂತಿದ್ದಾನೆ.] ಸಾಗ-ಸುಸಂಗದೆ, ಕಸ್ಸ ಕಏ ಅಹಂ ಆಅದಾ। [ಸುಸಂಗತೆ, ನಾನು ಯಾರ ಸಲುವಾಗಿ ಬಂದಿದ್ದೇನೆ?] ಸುಸಂ-ಅಇ ಅಪ್ಪಸಂಕಿದೇ, ಣಂ ಚಿತ್ತಫಲ ಅಸ್ಸ। ತಾ ಗೇಣ್ಹ ಏದಂ। [ಎಲೈ ಆತ್ಮಶಂಕಿತೆ, ಚಿತ್ರಫಲಕದ ಸಲುವಾಗಿಯಲ್ಲವೆ? ಅದನ್ನು ತೆಗೆದುಕೋ.]' – ಇಲ್ಲಿನ ಬೀಜಯುಕ್ತವಾದ ಪರಿಹಾಸವಚನವು ನರ್ಮ.

ಮತ್ತು-[ವೇಣೀ : ಪು. ೪೯] '(ದುರ್ಯೋಧನಶ್ಚೇಟೀಹಸ್ತಾದರ್ಘಪಾತ್ರಮಾದಾಯದೇವ್ಯಾಃ ಸಮರ್ಪಯತಿ । ಪುನಃ) [ದುರ್ಯೋಧನನು ಚೇಟಿಯ ಹಸ್ತದಿಂದ ಅರ್ಘಪಾತ್ರವನ್ನು ಕೊಂಡು ದೇವಿಗೆ ಕೊಡುತ್ತಾನೆ ಮತ್ತೆ] ಭಾನುಮತೀ-(ಅರ್ಘಂ ದತ್ವಾ) ಹಲಾ, ಉವಣೇಹಿ ಮೇ ಕುಸುಮಾಇಂ ಜಾವ ಅವರಾಣಂ ಪಿ ದೇವಾಣಂ ಸಪರಿಅಂ ಣಿವತ್ತೇಮಿ (ಹಸ್ತೌ ಪ್ರಸಾರಯತಿ । ದುರ್ಯೋಧನಃ ಪುಷ್ಪಾಣ್ಯುಪನಯತಿ । ಭಾನುಮತ್ಯಾಸ್ತತ್ ಸ್ಪರ್ಶಜಾತಕಂಪಾಯಾ ಹಸ್ತಾತ್ಪುಷ್ಪಾಣಿ ಪತಂತಿ।) [(ಅರ್ಘ್ಯ ಕೊಟ್ಟು) ಎಲ್ಲಿ, ಹೂವುಗಳನ್ನು ಕೊಡು. ಅಷ್ಟರಲ್ಲಿ ಉಳಿದ ದೇವರ ಪೂಜೆ ಮಾಡುತ್ತೇನೆ. (ಕೈ ಚಾಚುತ್ತಾಳೆ. ದುರ್ಯೋಧನನು ಹೂವುಗಳನ್ನು ಕೊಡುತ್ತಾನೆ. ಆ ಹಸ್ತಸ್ಪರ್ಶದಿಂದ ಭಾನುಮತಿಯ ಕೈ ನಡುಗಿ ಹೂವುಗಳು ಕೆಳಗೆ ಬೀಳುತ್ತವೆ.)]' – ಇಲ್ಲಿ,

ದುಃಸ್ವಪ್ನದರ್ಶನದ ಶಾಂತಿಗಾಗಿ ದೇವಪೂಜೆಯನ್ನು ಕೈಕೊಂಡ ಭಾನುಮತಿಗೆ ದುರ್ಯೋಧನನ ಪರಿಹಾಸದಿಂದ ವಿಘ್ನ ಒದಗುತ್ತದೆ. ಅದು ಬೀಜವನ್ನು ಉದ್ಘಾಟಿಸುವ ಕಾರಣ 'ನರ್ಮ'.

ಟಿಪ್ಪಣಿ : ಈ 'ನರ್ಮ' ಬೇರೆ, ಮುಂದೆ (೨-೭೯) ಬರುವ ಕೈಶಿಕೀಸಂಬಂಧವಾದ 'ನರ್ಮ' ಬೇರೆ.

ಹೋಲಿಕೆ = ನಾ.ಶಾ. : ೨೧-೮೦; ಸಾ.ದ. : ೬-೯೧; ಪ್ರತಾಪ : ೩-೧೧.

## ೫೮. ನರ್ಮದ್ಯುತಿಲಕ್ಷಣ :

ಧೃತಿಸ್ತಜ್ಜಾ ದ್ಯುತಿರ್ಮತಾ ॥ ೩೩ ॥

ಅನು : ಅದರಿಂದ [ಎಂದರೆ, ಪರಿಹಾಸದಿಂದ೧] ಹುಟ್ಟಿದ ಧೈರ್ಯ (ಸಮಾಧಾನ)ವು '[ನರ್ಮ]ದ್ಯುತಿ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೯೭] 'ಸುಸಂ-ಸಹಿ, ಅದಿ ಣಿಟ್ಠುರಾ ದಾಣಿಂ ಸಿ ತುಮಂ । ಜಾ ಏವಂ ಪಿ ಭಟ್ಟಿಣಾ ಹತ್ಥಾವಲಂಬಿದಾ ಕೋವಂ ಣ ಮುಂಚಸಿ । [ಸಖಿ, ಈಗ ನೀನು ಅತಿ ನಿಷ್ಠುರಳಾಗಿರುವೆ. ಭರ್ತೃ ಕೈ ಹಿಡಿದಿರುವಾಗಲೂ ಕೋಪವನ್ನು ಬಿಡುವುದಿಲ್ಲ.] ಸಾಗ-(ಸಭ್ರೂಭಂಗಮೀಷದ್ವಿಹಸ್ಯ) ಸುಸಂಗದೇ, ದಾಣಿಂ ಪಿ ಣ ವಿರಮಸಿ । [(ಹುಬ್ಬುಗಂಟಿಕ್ಕಿ ನಸುನಕ್ಕು) ಸುಸಂಗತೆ, ಈಗಲೂ ನೀನು ಸುಮ್ಮನಾಗುವುದಿಲ್ಲ.]'- ಎನ್ನುವಲ್ಲಿ, ಅನುರಾಗಬೀಜದ ಉದ್ಘಾಟನೆಯ ಸಮೇತವಾಗಿ, ನರ್ಮದಿಂದ ಹುಟ್ಟಿದ ಧೃತಿ 'ನರ್ಮದ್ಯುತಿ'.

ಟಿಪ್ಪಣಿ : 'ಕ್ರೀಡಾರ್ಥವಾದ ಹಾಸ್ಯ ನರ್ಮ, ದೋಷವನ್ನು ಮುಚ್ಚಲು ಬಳಸುವ ಹಾಸ್ಯ ನರ್ಮದ್ಯುತಿ' ಎಂದು ನಾ.ಶಾ.ದಲ್ಲಿ ಲಕ್ಷಿಸಲಾಗಿದೆ.

ಹೋಲಿಕೆ = ನಾ.ಶಾ. : ೨೧-೮೦; ಸಾ.ದ. : ೬-೯೧, ೯೨; ಪ್ರತಾಪ : ೩-೧೧.

## ೫೯. ಪ್ರಗಮನಲಕ್ಷಣ :

ಉತ್ತರಾವಾಕ್ಪ್ರಗಮನಂ೨

ಅನು : [ನುಡಿಗೆ] ಮರುನುಡಿ 'ಪ್ರಗಮನ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೮೧, ೨-೧೫] : 'ವಿದೂ-ಭೋ ವಅಸ್ಸ, ದಿಟ್ಠಿ ಆ ವಡ್ಢಸೇ । [ಎಲೈ ಮಿತ್ರನೆ, ನಿನಗೆ ಶುಭೋದಯ] ರಾಜಾ-(ಸಕೌತುಕಂ) ವಯಸ್ಯ, ಕಿಮೇ ತತ್ ॥ [(ಕುತೂಹಲದಿಂದ) ಮಿತ್ರ, ಏನದು?] ವಿದೂ-ಭೋ ಏದಂ ಕ್ಖು ತಂ ಜಂ ಮಏ ಭಣಿದಂ ತುಮಂ ಏವ್ವ ಆಲಿಹಿದೋ । ಕೋ ಅಣ್ಣೋ ಕುಸುಮಾಉಹವ್ವವದೇಸೇಣ ಣಿಣ್ಹವೀ ಅದಿ । [ಅದೇ, ನಾನು ಹೇಳಿದ್ದು ನಿನ್ನದೇ ಚಿತ್ರ; ಕಾಮದೇವನ ಹೆಸರಿನಿಂದ ಮರೆಮಾಜಲು ಬೇರಾವ ವ್ಯಕ್ತಿಯ ಚಿತ್ರ ಬಂದೀತು!]' ಇತ್ಯಾದಿಯಿಂದ,

'ಪರಿಚ್ಯುತಸ್ತತ್ಕುಚಕುಂಭಮಧ್ಯಾತ್ಕಿಂ ಶೋಷಮಾಯಾಸಿ ಮೃಣಾಲಹಾರ ।
ನ ಸೂಕ್ಷ್ಮತಂತೋರಪಿ ತಾವಕಸ್ಯ ತತ್ರಾವಕಾಶೋ ಭವತಃ ಕಿಮು ಸ್ಯಾತ್ ॥'

[ಮೃಣಾಲಹಾರವೆ, ಅವಳ ಕುಚಕುಂಭಗಳ ನಡುವಿನಿಂದ ಬಿದ್ದು ಏಕೆ ಬಾಡಿಹೋಗಿರುವೆ? ಅಲ್ಲಿ ನಿನ್ನ ಸೂಕ್ಷ್ಮವಾದ ಒಂದು ಎಳೆಗೂ ಅವಕಾಶವಿಲ್ಲದಿರುವಾಗ ನಿನಗೆ ಹೇಗೆ ಅವಕಾಶ ದೊರೆತೀತು?] - ಎಂಬಲ್ಲಿಯವರೆಗೆ ವಿದೂಷಕ ರಾಜ ಸಾಗರಿಕೆ ಸುಸಂಗತೆಯರ ಪರಸ್ಪರ ಮಾತು ಮುಂದಿನ ಅನುರಾಗದ ಬೀಜವನ್ನು ಉದ್ಘಾಟಿಸುತ್ತವೆ; ಅದು 'ಪ್ರಗಮನ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೮೧; ಸಾ.ದ. : ೬-೯೨; ಪ್ರತಾಪ : ೩-೧೧.

---

೧ ನೋಡಿ : ಸಾ.ದ. : ೬-೯೧, ೯೨.

೨ ಪಾಠ : ಪ್ರಗಯಣಮ್; ಇವರ ವ್ಯಾಖ್ಯೆಯಲ್ಲಿನ ಪಾಠವಲ್ಲಿ ಕೂಡ ಇದೇ ಭೇದವುಂಟು. (೧-೫೭ರ ಅಡಿಟಿಪ್ಪಣಿ ನೋಡಿ); ನಾ.ಶಾ.ದಲ್ಲಿ 'ಪ್ರಶಮನ' ಎಂದಿದೆ. ಅಲ್ಲಿ 'ಪ್ರಗಣನ' ಎಂಬ ಪಾಠಾಂತರವೂ ಉಂಟು.

## ೬೦. ನಿರೋಧಲಕ್ಷಣ :

**ಹಿತರೋಧೋ ನಿರೋಧನಮ್ ।**

ಅನು : ಹಿತದ ತಡೆಯು 'ನಿರೋಧನ'.

ವ್ಯಾಖ್ಯೆ : ಉದಾ:-[ರತ್ನಾ : ಪು. ೯೯] 'ರಾಜಾ-ಧಿಙ್ ಮೂರ್ಖ!

ಪ್ರಾಪ್ತಾ ಕಥಮಪಿ ದೈವಾತ್ಕಂಠಮನೀತೈವ ಸಾ ಪ್ರಕಟರಾಗಾ ।

ರತ್ನಾವಲೀವ ಕಾಂತಾ ಮಮ ಹಸ್ತಾದ್ಭ್ರಂಶಿತಾ ಭವತಾ ॥'

[ಛೀ, ಮೂರ್ಖ, ಹೇಗೋ ದೈವವಶಾತ್ ದೊರಕಿದ ರಾಗರಂಜಿತವಾದ ರತ್ನಾವಳಿಯಂತಿರುವ ಕಾಂತೆ ಕೊರಳಿಡೆ ಬರುವ ಮುನ್ನವೇ ನನ್ನ ಕೈ ತಪ್ಪಿಸಿದೆ.]-ಇಲ್ಲಿ, ವತ್ಸರಾಜನ ಸಾಗರಿಕಾ ಸಮಾಗಮದ ಹಿತವನ್ನು, ವಿದೂಷಕನು-ವಾಸವದತ್ತೆ ಬಂದುದನ್ನು ಸೂಚಿಸಿ-ತಡೆದನು. ಆದ್ದರಿಂದ 'ನಿರೋಧನ'.

ಟಿಪ್ಪಣಿ : 'ವ್ಯಸನಸಂಪ್ರಾಪ್ತಿಯು ನಿರೋಧ' ಎಂದು ನಾ.ಶಾ. ದಲ್ಲಿ ಹೇಳಿದೆ. ಸಾ.ದ. ಮತ್ತು ಪ್ರತಾಪ.ಗಳಲ್ಲಿ ಕೂಡ ಅದೇ ಬಗೆಯ ಲಕ್ಷಣ ಬಂದಿದೆ. ಆದರೆ ಇವೆರಡಲ್ಲಿ ಹೆಸರು 'ನಿರೋಧ'ಕ್ಕೆ ಬದಲಾಗಿ 'ವಿರೋಧ'ವಾಗಿದೆ. ಈ ಭಾಗವನ್ನು 'ಹಿತಕಾರಿಯಾದ ತಡೆ' ಎಂದು ಹ್ಯಾಸ್ ಅನುವಾದಿಸಿದ್ದಾರೆ. [ನೋಡಿ : ಹ್ಯಾಸ್ ೧-೬೦]

ಹೋಲಿಕೆ = ನಾ.ಶಾ. : ೨೧-೮೧; ಸಾ.ದ. : ೬-೯೨; ಪ್ರತಾಪ : ೩-೧೧.

## ೬೧. ಪರ್ಯುಪಾಸನಲಕ್ಷಣ

**ಪರ್ಯುಪಾಸ್ತಿರನುನಯಃ**

ಅನು : ಅನುನಯವು (ಒಲಿಸಿಕೊಳ್ಳುವುದು) 'ಪರ್ಯುಪಾಸ್ತಿ' (ಪರ್ಯುಪಾಸನ).

ವ್ಯಾಖ್ಯೆ : ಉದಾ:- [ರತ್ನಾ : ೨-೨೦] : 'ರಾಜಾ –

ಪ್ರಸೀದೇತಿ ಬ್ರೂಯಾಮಿದಮಸತಿಕೋಪೇ ನ ಘಟತೇ

ಕರಿಷ್ಯಾಮ್ಯೇವಂ ನೋ ಪುನರಿತಿ ಭವೇದಭ್ಯುಪಗಮಃ ।

ನ ಮೇ ದೋಷೋಽಸ್ತೀತಿ ತ್ವಮಿದಮಪಿ ಹಿ ಜ್ಞಾಸ್ಯಸಿ ಮೃಷಾ

ಕಿಮೇತಸ್ಮಿನ್ವಕ್ತುಂ ಕ್ಷಮಮಿತಿ ನ ವೇದ್ಮಿ ಪ್ರಿಯತಮೇ ॥

['ಪ್ರಸನ್ನಳಾಗು' ಎಂದು ಹೇಳೆನು. ನಿನಗೆ ಕೋಪವಿಲ್ಲವಾಗ ಅದು ಹೊಂದುವುದಿಲ್ಲ.'ಇನ್ನು ಹೀಗೆ ಮಾಡುವುದಿಲ್ಲ' ಎಂದರೆ ತಪ್ಪನ್ನು ಒಪ್ಪಿಕೊಂಡಂತಾಗುವುದು. 'ನನ್ನಲ್ಲಿ ದೋಷವಿಲ್ಲ' ಎಂದರೆ ನಾನು ಸುಳ್ಳು ಹೇಳುತ್ತೇನೆಂದು ನೀನು ತಿಳಿಯುವೆ. ಎಲೈ ಪ್ರಿಯತಮೆ, ಈ ವಿಷಯದಲ್ಲಿ ಏನು ಹೇಳಬೇಕೆಂಬುದೇ ತಿಳಿಯ ದಾಗಿದೆ.]' – ಹೀಗೆ, ಚಿತ್ರದಲ್ಲಿ ನಾಯಕ ನಾಯಿಕೆಯರು ಒಟ್ಟಿಗೆ ಚಿತ್ರಿತವಾಗಿರುವುದನ್ನು ಕಂಡು ಕುಪಿತಳಾದ ವಾಸವದತ್ತೆಯನ್ನು ಅನುನಯಗೊಳಿಸುವುದು 'ಪರ್ಯುಪಾಸನ'.

ಟಿಪ್ಪಣಿ : ಹಿಂದೆ (೧-೩೨) 'ಪರ್ಯುಪಾಸನ' ಎಂದು ಹೇಳಿದುದನ್ನು ಇಲ್ಲಿ 'ಪರ್ಯುಪಾಸ್ತಿ' ಎಂದಿದೆ. ನಾ.ಶಾ., ಸಾ.ದ.ಗಳಲ್ಲಿ 'ಕೋಪಗೊಂಡವನ ಅನುನಯವು ಪರ್ಯುಪಾಸನ' ಎಂದಿದೆ.

ಹೋಲಿಕೆ = ನಾ.ಶಾ. : ೨೧-೮೨; ಸಾ.ದ. : ೬-೯೨, ೯೩; ಪ್ರತಾಪ : ೩-೧೧.

## ೬೨. ಪುಷ್ಪಲಕ್ಷಣ :

**ಪುಷ್ಪಂ ವಾಕ್ಯಂ ವಿಶೇಷವತ್ ॥ ೩೪ ॥**

ಅನು : ವಿಶೇಷರೀತಿಯ ಮಾತು 'ಪುಷ್ಪ'.

ವ್ಯಾಖ್ಯೆ : ಉದಾ:- [ರತ್ನಾ : ೯೭, ೨-೧೮] : '(ರಾಜಾ ಸಾಗರಿಕಾಂ ಹಸ್ತೇ ಗೃಹೀತ್ವಾ ಸ್ಪರ್ಶಂ ನಾಟಯತಿ ।) [(ರಾಜನು ಸಾಗರಿಕೆಯ ಕೈಹಿಡಿದು ಸ್ಪರ್ಶಸುಖವನ್ನಭಿನಯಿಸುವನು)] ವಿದೂ-ಭೋ, ಏಸಾ ಅಪುವ್ವಾ ಸಿರೀ ತುಏ ಸಮಾಸಾದಿದಾ । [ಈ ಅಪೂರ್ವಶ್ರೀಯನ್ನು ನೀನು ಪಡೆದೆ.] ರಾಜಾ-ವಯಸ್ಯ, ಸತ್ಯಂ । ಶ್ರೀರೇಷಾ ಪಾಣಿರಪ್ಯಸ್ಯಾಃ ಪಾರಿಜಾತಸ್ಯ ಪಲ್ಲವಃ । ಕುತೋಽನ್ಯಥಾ ಸ್ರವತ್ಯೇಷ ಸ್ವೇದಚ್ಛದ್ಮಾಮೃತದ್ರವಃ ॥ [ಮಿತ್ರ, ಸತ್ಯ. ನಿಶ್ಚಯವಾಗಿಯೂ ಆಕೆ ಲಕ್ಷ್ಮಿ. ಆಕೆಯ ಕೈಯೊ ಪಾರಿಜಾತದ ಚಿಗುರು. ಇಲ್ಲದಿದ್ದರೆ ಅದು ಸ್ವೇದರೂಪದ ಅಮೃತಬಿಂದುಗಳನ್ನು ಸುರಿಸುವುದು ಹೇಗೆ?]'-ಹೀಗೆ ನಾಯಕನಾಯಿಕೆಯರ ಸಾಕ್ಷಾದ್ದರ್ಶನದಲ್ಲಿ ಅನುರಾಗಬೀಜಪ್ರಕಟನೆಯು ವಿಶೇಷ (ಹೆಚ್ಚಳ) ರೀತಿಯಲ್ಲಿ ಆದದ್ದು 'ಪುಷ್ಪ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೮೨; ಸಾ.ದ. : ೬-೯೩; ಪ್ರತಾಪ : ೩-೧೧.

## ೬೩. ಉಪನ್ಯಾಸಲಕ್ಷಣ :

೧ಉಪನ್ಯಾಸಸ್ತು ಸೋಪಾಯಂ೧

ಅನು : [ಮಾತು] ಉಪಾಯಸಹಿತವಾಗಿದ್ದರೆ 'ಉಪನ್ಯಾಸ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೯೩] : 'ಸುಸಂ-ಭಟ್ಟಾ ಅಲಂ ಸಂಕಾಏ । ಮಏ ವಿ ಭಟ್ಟಿಣೀೋ ಪಸಾಏಣ ಕೀಲಿದಂ ಏವ್ವ । ತಾ ಕಿಂ ಕಣ್ಣಾಭರಣಕೇಣ । ಅದೋ ವಿ ಮೇ ಗರುಓ ಪಸಾಓ, ಜಂ ಕೀಸ ತಏ ಅಹಂ ಏತ್ಥ ಆಲಿಹಿಅ ತ್ತಿ ಕುವಿಆ ಮೇ ಪಿಅಸಹೀ ಸಾಅರಿಆ । ತಾ ಪಸಾದೀಅದು ।' [ಭರ್ತ, ಶಂಕೆ ಬೇಡ. ನಾನು ಕೂಡ ಭರ್ತನ ಪ್ರಸನ್ನತೆಯಿಂದ ವಿನೋದ ಮಾಡಿದೆ. ಈ ಕರ್ಣಾಭರಣ ಏಕೆ? ಆಕೆಯ ಚಿತ್ರವನ್ನು ಬರೆದೆನೆಂದು ಕೋಪಗೊಂಡ ನನ್ನ ಪ್ರಿಯಸಖಿ ಸಾಗರಿಕೆಯನ್ನು ನೀನು ಸಂತೋಷಗೊಳಿಸಿದರೆ ಅದೇ ಮಹಾಪ್ರಸಾದ.]- ಸುಸಂಗತೆಯ ಈ ಮಾತಿನಲ್ಲಿ 'ಸಾಗರಿಕೆಯ ಚಿತ್ರ ಬರೆದವಳು ನಾನು, ನಿನ್ನ ಚಿತ್ರ ಬರೆದವಳು ಸಾಗರಿಕೆ' ಎಂದು ಸೂಚಿತವಾಗುವ ಪ್ರಸನ್ನತೆಯ ಮಾತು ಬೀಜವನ್ನು ಪ್ರಕಟಗೊಳಿಸುತ್ತದೆ. ಅದು 'ಉಪನ್ಯಾಸ'.

ಟಿಪ್ಪಣಿ : ನಾ.ಶಾ.ದ ಪ್ರಕಾರ 'ಉಪಪತ್ತಿಕೃತವಾದ ಅರ್ಥವು ಉಪನ್ಯಾಸ'.

ಹೋಲಿಕೆ = ನಾ.ಶಾ. : ೨೧-೮೩; ಸಾ.ದ. : ೬-೯೩; ಪ್ರತಾಪ : ೩-೧೧.

## ೬೪. ವಜ್ರಲಕ್ಷಣ :

ವಜ್ರಂ ಪ್ರತ್ಯಕ್ಷನಿಷ್ಠುರಮ್ ।

ಅನು : [ಒಬ್ಬನ] ಎದುರಿನಲ್ಲೆ [ಆಡುವ] ನಿಷ್ಠುರ [ವಾಕ್ಯ]ವು 'ವಜ್ರ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೦೩] : 'ವಾಸವದತ್ತಾ-(ಫಲಕಂ ನಿರ್ದಿಶ್ಯ) ಅಜ್ಜಉತ್ತ, ಏಸಾವಿ ಜಾ ತುಹ ಸಮೀವೇ, ಏದಂ ಕಿಂ ವಸಂತಅಸ್ಸ ವಿಣ್ಣಾಣಂ ।' [(ಚಿತ್ರಫಲಕವನ್ನು ತೋರಿಸಿ) ಆರ್ಯಪುತ್ರ, ಯಾರಿವಳು ನಿನ್ನ ಸಮೀಪದಲ್ಲಿ? ಇದೇನು ವಸಂತಕನ ಕೌಶಲವೋ?] ಮತ್ತು, 'ಅಜ್ಜಉತ್ತ, ಮಮಾವಿ ಏದಂ ಚಿತ್ತಕಮ್ಮ ಪೇಕ್ಖಂತೀಏ ಸೀಸವೇ ಅಣಾ ಸಮುಪ್ಪಣ್ಣಾ ।' [ಆರ್ಯಪುತ್ರ, ಈ ಚಿತ್ರವನ್ನು ನೋಡಿ ನನಗೆ ಕೂಡ ತಲೆನೋವು ಬಂದಿತು.] - ಹೀಗೆ ವತ್ಸರಾಜ ಸಾಗರಿಕೆಯರ ಅನುರಾಗವನ್ನು ಎತ್ತಿಹೇಳುವ, ವಾಸವದತ್ತೆಯ ಪ್ರತ್ಯಕ್ಷ ನಿಷ್ಠುರವಾದ ಮಾತು 'ವಜ್ರ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೮೩; ಸಾ.ದ. : ೬-೯೩; ಪ್ರತಾಪ : ೩-೧೧.

---

೧ ಪಾಠ : ಪ್ರಸಾದನಮುಪನ್ಯಾಸಃ (ಸಾ.ದ.ದಲ್ಲಿನ ಲಕ್ಷಣ ಹೀಗಿದೆ : ಉಪನ್ಯಾಸಃ ಪ್ರಸಾದನಮ್.)

## ೬೫. ವರ್ಣಸಂಹಾರಲಕ್ಷಣ :

೧ಚಾತುರ್ವರ್ಣ್ಯೋಗಪಗಮನಂ ವರ್ಣಸಂಹಾರ ಇಷ್ಯತೇ ॥ ೩೫॥

ಅನು : ನಾಲ್ಕೂ ವರ್ಣಗಳ ಬೆರಕೆ 'ವರ್ಣಸಂಹಾರ'.

ವ್ಯಾಖ್ಯೆ : ಉದಾ:- [ಮಹಾ : ೩-೫] :

'ಪರಿಷದಿಯಮೃಷೀಣಾಮೇಷ ವೃದ್ಧೋ ಯುಧಾಜಿತ್
ಸಹ ನೃಪತಿರಮಾತ್ಯೈರ್ಲೋಮಪಾದಶ್ಚ ವೃದ್ಧಃ।
ಅಯಮವಿರತಯಜ್ಞೋ ಬ್ರಹ್ಮವಾದೀ ಪುರಾಣಃ
ಪ್ರಭುರಪಿಜನಕಾನಾಮದ್ರುಹೋ ಯಾಚಕಾಸ್ತೇ ॥'

[ಮುನಿಗಳ ಸಭೆಯಿದು, ವೀರನಾದ ಯುಧಾಜಿತ್ತು ಇವನು, ಅಮಾತ್ಯರಿಂದೊಡಗೂಡಿದ ವೃದ್ಧನಾದ ಲೋಮಪಾದಮಹಾರಾಜನಿವನು, ಯಾವಾಗಲೂ ಯಜ್ಞಮಾಡುತ್ತಿರುವ ಬ್ರಹ್ಮವಾದಿಯಾದ ಜನಕ ವಂಶಸ್ಥರ ರಾಜ(ಜನಕ)ನಿವನು. – ಇವರೆಲ್ಲರೂ ನಿನ್ನ ಕೋಪಶಾಂತಿಗಾಗಿ ಪ್ರಾರ್ಥಿಸುತ್ತಾರೆ.]

ರಾಮವಿಜಯದಲ್ಲಿ ಆಸೆಯುಳ್ಳವರು ಪರಶುರಾಮನ ಕೋಪದ ಶಾಂತಿಗಾಗಿ ಪ್ರಾರ್ಥಿಸುವ ಈ ಮಾತು ಋಷಿ ಕ್ಷತ್ರಿಯ ಅಮಾತ್ಯ ಮೊದಲಾದ ವರ್ಣಗಳ ಬೆರಕೆಯನ್ನು ತೋರಿಸುತ್ತದೆ. ಇದು 'ವರ್ಣಸಂಹಾರ'. ಈ ಹದಿಮೂರು ಪ್ರತಿಮುಖಾಂಗಗಳು, ಮುಖಸಂಧಿಯಲ್ಲಿ ಸ್ಥಾಪಿತವಾದ ಬಿಂದುವಿಗೆ ಹೊಂದಿ ಮತ್ತು ಮುಖ್ಯಬೀಜ ಅಂಗಬೀಜಗಳಿಗೆ ಹಾಗೂ ಪ್ರಯತ್ನಕ್ಕೆ ಹೊಂದಿ ಯೋಜಿತವಾಗತಕ್ಕದ್ದು. ಇವುಗಳಲ್ಲಿ, ಪರಿಸರ್ಪ ಪ್ರಶಮ (ಪ್ರಗಮನ?) ವಜ್ರ ಉಪನ್ಯಾಸ ಪುಷ್ಪ – ಇವು ಮುಖ್ಯವಾದವು. ಉಳಿದವುಗಳನ್ನು ಅವಕಾಶಕ್ಕೆ ತಕ್ಕಂತೆ ಯೋಜಿಸಬಹುದು.

ಟಿಪ್ಪಣಿ : ನಾ.ಶಾ.ದಲ್ಲಿ ಹೇಳಿದ 'ವರ್ಣಸಂಹಾರಲಕ್ಷಣ' ಇಲ್ಲಿ ಯಥಾವತ್ತಾಗಿ ಬಂದಿದೆ. ಅದನ್ನು ಅಭಿನವಗುಪ್ತ ಹೀಗೆ ವ್ಯಾಖ್ಯಾನಿಸಿದ್ದಾನೆ : [ಬ.ನಾ.ಶಾ. : ೩ನೆಯ ಭಾಗ : ಪು. ೪೭] "ವರ್ಣ ಎಂದರೆ ಪಾತ್ರ; ಬೇರೆಬೇರೆಯಾಗಿರುವ ಪಾತ್ರಗಳನ್ನು ಒಂದೆಡೆ ಕೂಡಿಸುವುದು ವರ್ಣಸಂಹಾರ".

ಹೋಲಿಕೆ = ನಾ.ಶಾ. : ೨೧-೮೪; ಸಾ.ದ. : ೬-೯೪; ಪ್ರತಾಪ : ೩-೧೧.

# ಗರ್ಭಸಂಧಿ ಮತ್ತು ಅದರ ಅಂಗಗಳು :

## ೬೬. ಗರ್ಭಸಂಧಿಲಕ್ಷಣ :

ಗರ್ಭಸ್ತು ದೃಷ್ಟನಷ್ಟಸ್ಯ ಬೀಜಸ್ಯಾನ್ವೇಷಣಂ ಮುಹುಃ ।
ದ್ವಾದಶಾಂಗಃ ಪತಾಕಾ ಸ್ಯಾನ್ನ ವಾ ಸ್ಯಾತ್ಪ್ರಾಪ್ತಿಸಂಭವಃ ॥ ೩೬ ॥

ಅನು : [ಒಮ್ಮೆ] ಕಂಡು [ಮತ್ತೆ] ಅಡಗಿಹೋಗುವ ಬೀಜವನ್ನು ಪುನಃ ಪುನಃ ಹುಡುಕುವುದು 'ಗರ್ಭ[ಸಂಧಿ]'. [ಅದರಲ್ಲಿ] ಹನ್ನೆರಡು ಅಂಗಗಳು. [ಅಲ್ಲಿ] ಪತಾಕಾ ಇರಬಹುದು ಅಥವಾ ಇಲ್ಲದಿರಬಹುದು. [ಆದರೆ] ಪ್ರಾಪ್ತಿಸಂಭವ [ಇದ್ದೇ] ಇರುತ್ತದೆ..

ವ್ಯಾಖ್ಯೆ : ಪ್ರತಿಮುಖಸಂಧಿಯಲ್ಲಿ ಲಕ್ಷ್ಯಾಲಕ್ಷ್ಯವಾಗಿ ಸ್ವಲ್ಪ ಪ್ರಕಟವಾಗಿರುವ ಬೀಜವು ಇಲ್ಲಿ ವಿಶೇಷವಾಗಿ ಪ್ರಕಟವಾಗುತ್ತದೆ; ಆ ಬೀಜವು ವಿಘ್ನದ ಮೂಲಕವಾಗಿ ಒಮ್ಮೆ ಅಡಗಿ ಮತ್ತೊಮ್ಮೆ ಹೊರತೋರುತ್ತದೆ ಮತ್ತೆ ಕಡಿದುಹೋಗುತ್ತದೆ ಮತ್ತೆ ಹೊರತೋರುತ್ತದೆ ಮತ್ತೆ ಕಡಿದುಹೋಗುತ್ತದೆ. – ಹೀಗೆ ಕಂಡು ಅಡಗುವ

೧ ಪಾಠ : ಚಾತುರ್ವರ್ಣ್ಯೋ.

ಬೀಜವನ್ನು ಪುನಃಪುನಃ ಅನ್ವೇಷಿಸುವುದು 'ಗರ್ಭಸಂಧಿ'. ನಿಶ್ಚಿತಫಲವು ನಿರ್ಧಾರವಾಗದಿರುವ 'ಪ್ರಾಪ್ತ್ಯಾಶೆ' ಎಂಬ ಅವಸ್ಥೆಯೇ ಗರ್ಭಸಂಧಿಯ ಗುರುಳು. ಆದ್ದರಿಂದ ಇಲ್ಲಿ ಪ್ರಾಪ್ತ್ಯಾಶೆ (ಪ್ರಾಪ್ತಿಸಂಭವ) ಇದ್ದೇ ಇರುತ್ತವೆ. ಪತಾಕೆ ಇರಬಹುದು ಅಥವಾ ಇಲ್ಲದಿರಬಹುದು.

ಉದಾ:- [ರತ್ನಾ : ೩ನೆಯ ಅಂಕ] : ವತ್ಸರಾಜನಿಗೆ ವಾಸವದತ್ತೆಯಿಂದ ಉಂಟಾಗಬಹುದಾದ ಅಪಾಯವು ಹೋಗಿ, ವಾಸವದತ್ತೆಯ ವೇಷದಲ್ಲಿ ಸಾಗರಿಕೆಯ ಅಭಿಸರಣದ ಉಪಾಯದಿಂದ, ವಿದೂಷಕನ ಆ ಮಾತುಗಳಿಂದ ಸಾಗರಿಕೆ ದೊರೆವಳೆಂಬ ಆಸೆ ಮೊದಲು; ಪುನಃ ವಾಸವದತ್ತೆಯಿಂದ ಆ ಆಸೆ ಕಡಿದುಹೋಗುತ್ತದೆ; ಪುನಃ ಪ್ರಾಪ್ತಿ, ಪುನಃ ವಿಚ್ಛೇದ, ಪುನಃ ಅಪಾಯನಿವಾರಣೆಗಾಗಿ ಉಪಾಯ ಕಂಡುಹಿಡಿಯುವುದು : 'ಣಾತ್ಥಿ ದೇವೀಪ್ಪಸಾದಣಂ ಮುಕ್ಕಾಣ್ಣ ಉಪಾಯಃ' [ದೇವಿಯನ್ನು ಸಮಾಧಾನಗೊಳಿಸುವುದಲ್ಲದೆ ಬೇರೆ ಉಪಾಯ ವಿಲ್ಲ] – ಹೀಗೆ 'ಗರ್ಭಸಂಧಿ' ಯೋಜಿತವಾಗಿದೆ. ಅದರಲ್ಲಿ ಹನ್ನೆರಡು ಅಂಗಗಳು.

ಟಿಪ್ಪಣಿ : ಬೀಜಲಕ್ಷಣಕ್ಕೆ ೧–೨೫, ಪತಾಕಾಕ್ಕೆ ೧–೨೧, ಪ್ರಾಪ್ತ್ಯಾಶೆಗೆ ೧–೩೧ ನೋಡಿ.

ನಾ.ಶಾ. ಮತ್ತು ಸಾ.ದ.ಗಳಲ್ಲಿ ಹದಿಮೂರನೆಯದಾದ 'ಪ್ರಾರ್ಥನಾ' ಎಂಬ ಅಂಗವನ್ನೂ ಹೇಳಿದೆ. ೧–೮೦ರ ಟಿಪ್ಪಣಿ ನೋಡಿ.

ಈ ಭಾಗದ ಕೊನೆಯಲ್ಲಿ ಹ್ಯಾಸ್ ಅವರು ಹೀಗೆ ಅನುವಾದಿಸಿದ್ದಾರೆ: "ಅಲ್ಲಿ 'ಪತಾಕಾ' ಇರತಕ್ಕದ್ದು; ಅಥವಾ ಪ್ರಾಪ್ತಿಸಂಭವ ಇರಬಾರದು." [ನೋಡಿ : ಹ್ಯಾಸ್–೧–೬೬] ಅದು ಸರಿಯಲ್ಲವೆಂಬುದು ಸ್ಪಷ್ಟ.

ಹೋಲಿಕೆ = ನಾ.ಶಾ. : ೨೧–೪೧; ಸಾ.ದ. : ೬–೭೮, ೭೯; ಪ್ರತಾಪ : ೩–೧೨.

## ೬೭. ಹನ್ನೆರಡು ಗರ್ಭಾಂಗಗಳು :

**ಅಭೂತಾಹರಣಂ ಮಾರ್ಗೋ ರೂಪೋದಾಹರಣೇ ಕ್ರಮಃ ।**
**ಸಂಗ್ರಹಶ್ಚಾನುಮಾನಂ ಚ ತೋಟಕಾಧಿಬಲೇ ತಥಾ ॥ ೩೭ ॥**
**ಉದ್ವೇಗಸಂಭ್ರಮಾಕ್ಷೇಪಾ ಲಕ್ಷಣಂ ಚ ಪ್ರಣೀಯತೇ ।**

ಅನು : [ಗರ್ಭಸಂಧಿಯ ಹನ್ನೆರಡು ಅಂಗಗಳು ಇವು:] ಅಭೂತಾಹರಣ, ಮಾರ್ಗ, ರೂಪ, ಉದಾಹರಣ, ಕ್ರಮ, ಸಂಗ್ರಹ, ಅನುಮಾನ, ತೋಟಕ, ಅಧಿಬಲ, ಉದ್ವೇಗ, ಸಂಭ್ರಮ, ಆಕ್ಷೇಪ. [ಇವುಗಳೊಂದೊಂದರ] ಲಕ್ಷಣವನ್ನೂ [ಮುಂದೆ] ಹೇಳಿದೆ.

ಟಿಪ್ಪಣಿ : ೧–೬೬ರ ಮತ್ತು ೧–೮೦ರ ಟಿಪ್ಪಣಿ ನೋಡಿ.

ಹೋಲಿಕೆ = ನಾ.ಶಾ. : ೨೧–೬೩ರಿಂದ ೬೫; ಸಾ.ದ. : ೬–೬೪, ೬೫; ಪ್ರತಾಪ : ೩–೧೩.

## ೬೮. ಅಭೂತಾಹರಣಲಕ್ಷಣ :

**ಅಭೂತಾಹರಣಂ ಛದ್ಮ**

ಅನು : ಕಪಟವು 'ಅಭೂತಾಹರಣ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೧೯] 'ಸಾಹು ರೇ ಅಮಚ್ಚ ವಸಂತಅ ಸಾಹು । ಅದಿಸಇದೋ ತುಏ ಅಮಚ್ಚೋ ಜೋಗಂಧರಾಅಣೋ ಇಮಾಏ ಸಂಧಿವಿಗ್ಗಹ ಚಿಂತಾಏ' [ಸಾಧು, ಎಲೈ ಅಮಾತ್ಯ ವಸಂತಕ, ಸಾಧು. ಈ ಸಂಧಿವಿಗ್ರಹವನ್ನು ಚಿಂತಿಸುವಲ್ಲಿ ಮಂತ್ರಿ ಯೌಗಂಧರಾಯಣನನ್ನೂ ಮೀರಿಸಿದ್ದೀಯೆ.]– ಇತ್ಯಾದಿಯಲ್ಲಿ, ಸಾಗರಿಕೆಯು ವಾಸವದತ್ತೆಯ ವೇಷ ಧರಿಸಿ ವತ್ಸರಾಜನ ಬಳಿ ಅಭಿಸರಣ ಬರುವುದು ಛದ್ಮ; ವಿದೂಷಕ ಹಾಗೂ ಕಾಂಚನ ಮಾಲೆಯ ವೇಷದಲ್ಲಿರುವ ಸುಸಂಗತೆ ಇವರಿಬ್ಬರ ನಡುವಿನ ಮಾತಿನ ಮೂಲಕ, ಪ್ರವೇಶಕದಲ್ಲಿ, ಈ ಛದ್ಮದ ಸೂಚನೆ ಬಂದಿದೆ. ಇದು 'ಅಭೂತಾಹರಣ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧–೮೫; ಸಾ.ದ. : ೬–೯೬; ಪ್ರತಾಪ : ೩–೧೩.

## ೬೯. ಮಾರ್ಗಲಕ್ಷಣ :

ಮಾರ್ಗಸ್ತತ್ತ್ವಾರ್ಥಕೀರ್ತನಮ್ ॥ ೩೮ ॥

ಅನು : ಇರುವ ವಿಷಯವನ್ನು ಹೇಳುವುದು 'ಮಾರ್ಗ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೧೬] : 'ವಿದೂ-ದಿಟ್ಠಿಆ ವಡ್ಢಸಿ ಸಮೀಹಿದಬ್ಭ ಧಿಕಾವಿ ಕಜ್ಜಸಿದ್ಧೀಏ। [ನೀನು ಅದೃಷ್ಟಶಾಲಿ, ಇಚ್ಛಿಸಿದ್ದಕ್ಕಿಂತ ಹೆಚ್ಚು ಫಲ ದೊರೆತಿದೆ.] ರಾಜಾ-ವಯಸ್ಯ ಕುಶಲಂ ಪ್ರಿಯಾಯಾಃ? [ಮಿತ್ರ, ಪ್ರಿಯೆ ಕುಶಲವಾಗಿರುವಳಲ್ಲವೆ?] ವಿದೂ-ಅಇರೇಣ ಸಅಂ ಜ್ಜೇವ್ವ ಪೇಕ್ಖಿಅ ಜಾಣಹಿಸಿ। [ಶೀಘ್ರವಲ್ಲಿ ನೀನೇ ನೋಡಿ ತಿಳಿಯುವೆ.] ರಾಜಾ-ದರ್ಶನಮಪಿ ಭವಿಷ್ಯತಿ? [ನೋಡಲಾಗುತ್ತದೆಯೇನು?] ವಿದೂ-(ಸಗರ್ವಂ) ಕೀಸ ಣ ಭವಿಸ್ಸದಿ ಜಸ್ಸ ದೇ ಉವಹಸಿದವಿಹಪ್ಪದಿಬುದ್ಧಿವಿಹವೋ ಅಹಂ ಅಮಚ್ಚೋ। [(ಗರ್ವದಿಂದ) ಬೃಹಸ್ಪತಿಯನ್ನು ಅಪಹಾಸ್ಯಮಾಡುವ ಬುದ್ಧಿಯುಳ್ಳ ನಾನೇ ಅಮಾತ್ಯನಾಗಿರುವಾಗ ಏಕೆ ಆಗುವುದಿಲ್ಲ?] ರಾಜಾ-ತಥಾಪಿ ಕಥಮಿತಿ ಶ್ರೋತುಮಿಚ್ಛಾಮಿ। [ಆದರೂ, ಹೇಗೆ ಎಂದು ತಿಳಿಯಲಿಚ್ಛಿಸುತ್ತೇನೆ.] ವಿದೂ-(ಕರ್ಣೇ ಕಥಯತಿ)....ಏವ್ವಂ। [(ಕಿವಿಯಲ್ಲಿ ಹೇಳುವನು).... ಹೀಗೆ.]' - ಇಲ್ಲಿ, ವಿದೂಷಕನು ಸಾಗರಿಕಾಸಮಾಗಮವನ್ನು ಸೂಚಿಸುವುದರಿಂದ ರಾಜನಿಗೆ ನಿಶ್ಚಿತವಾದ ವಿಷಯವು ತಿಳಿಯುತ್ತದೆ. ಹೀಗೆ, ಇರುವ ವಿಷಯವನ್ನು ಹೇಳಿದ್ದರಿಂದ ಅದು 'ಮಾರ್ಗ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೮೫; ಸಾ.ದ. : ೬-೯೬; ಪ್ರತಾಪ : ೩-೧೩.

## ೭೦. ರೂಪಲಕ್ಷಣ :

ರೂಪಂ ವಿತರ್ಕವದ್ವಾಕ್ಯಂ

ಅನು : ವಿತರ್ಕದ ಮಾತು 'ರೂಪ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೨೪, ೩-೯] : 'ರಾಜಾ-ಅಹೋ, ಕಿಮಪಿ ಕಾಮಿಜನಸ್ಯ ಸ್ವಗೃಹಿಣೀಸಮಾಗಮಪರಿಭಾವಿನೋಽಭಿನವಂ ಜನಂ ಪ್ರತಿ ಪಕ್ಷಪಾತಃ। ತಥಾ ಹಿ,

> ಪ್ರಣಯವಿಶದಾಂ ದೃಷ್ಟಿಂ ವಕ್ತ್ರೇ ದದಾತಿ ನ ಶಂಕಿತಾ
> ಘಟಯತಿ ಘನಂ ಕಂಠಾಶ್ಲೇಷೇ ರಸಾನ್ನ ಪಯೋಧರೌ।
> ವದತಿ ಬಹುಶೋ ಗಚ್ಛಾಮೀತಿ ಪ್ರಯತ್ನಧೃತಾಪ್ಯಹೋ
> ರಮಯತಿತರಾಂ ಸಂಕೇತಸ್ಥಾ ತಥಾಪಿ ಹಿ ಕಾಮಿನೀ ॥

ಕಥಂ ಚಿರಯತಿ ವಸಂತಕಃ? ಕಿಂ ನು ಖಲು ವಿದಿತಃ ಸ್ಯಾದಯಂ ವೃತ್ತಾಂತೋ ದೇವ್ಯಾಃ' ರಾಜ-ಅಹಾ, ತನ್ನ ಪತ್ನಿಯ ಸಮಾಗಮದಿಂದ ಪರಿಭವಗೊಂಡ ಕಾಮಿಗೆ ಹೊಸ ಜನದ ಮೇಲೆ ಪಕ್ಷಪಾತವಿರುವುದು ಸಹಜವೇ ಸರಿ-ಕಾಮಿನಿಯು ಸಂಕೇತಸ್ಥಳಕ್ಕೆ ಬಂದಿದ್ದರೂ ಭಯಗೊಂಡು ವಿಶದವಾದ ಪ್ರಣಯದೃಷ್ಟಿಯನ್ನು (ನಾಯಕನ) ಮುಖದಲ್ಲಿ ಬೀರುವುದಿಲ್ಲ. ಕೊರಳನಾಲಿಂಗಿಸುವಾಗ ಪ್ರೇಮಭರಿತಳಾಗಿ ತನ್ನ ಘನಸ್ತನಗಳನ್ನೊತ್ತುವುದಿಲ್ಲ. ಬಲವಾಗಿ ಹಿಡಿದರೂ ಪದೇಪದೇ 'ಹೋಗುತ್ತೇನೆ' ಎನ್ನುತ್ತಾಳೆ. ಹಾಗಾಗಿ ಹೆಚ್ಚು ರಮಿಸುತ್ತಾಳೆ....ವಸಂತಕನು ಏಕೆ ತಡಮಾಡುತ್ತಿದ್ದಾನೆ? ಅಥವಾ ಈ ವೃತ್ತಾಂತವು ದೇವಿಗೆ ತಿಳಿದುಬಿಟ್ಟಿತೋ ಏನೋ?] - ಹೀಗೆ, ರತ್ನಾವಲಿಯ ಪ್ರಾಪ್ತಿಯ ಆಸೆಗೆ ಹೊಂದಿಕೊಂಡೇ, ದೇವಿಯ ಶಂಕೆಯೂ ಉಂಟಾಗುವಂತಹ ಮಾತು ವಿತರ್ಕ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೮೬; ಸಾ.ದ. : ೬-೯೭; ಪ್ರತಾಪ : ೩-೧೩.

## ೭೧. ಉದಾಹರಣಲಕ್ಷಣ :

**ಸೋತ್ಕರ್ಷಂ ಸ್ಯಾದುದಾಹೃತಿಃ ।**

ಅನು : ಅತಿಶಯವಾದ ಅದು [ಎಂದರೆ, ಮಾತು] 'ಉದಾಹೃತಿ'.

ವ್ಯಾಖ್ಯೆ : ಉದಾ– [ರತ್ನಾ : ಪು. ೧೧೫] : 'ವಿದೂ–(ಸಹರ್ಷಂ) ಹೀ ಹೀ ಭೋಃ, ಕೋಸಂಬೀರಜ್ಜ ಲಾಹೇಣಾವಿ ಣ ತಾದಿಸೋ ವಅಸ್ಸಸ್ಸ ಪರಿತೋಸೋ ಆಸಿ, ಯಾದಿಸೋ ಮಮ ಸಆಸಾದೋ ಪಿಅವಅಣಂ ಸುಣಿಅ ಭವಿಸ್ಸದಿ ತ್ತಿ ತಕ್ಕೇಮಿ ।' [(ಹರ್ಷದಿಂದ) ಹ್ಹಿ! ಹ್ಹಿ! ನನ್ನ ಪ್ರಿಯವಚನವನ್ನು ಕೇಳಿ ವಯಸ್ಯನಿಗೆ ಆಗುವ ಪರಿತೋಷ ಕೌಶಾಂಬೀರಾಜ್ಯದ ಲಾಭದಿಂದಲೂ ಆಗುವುದಿಲ್ಲ – ಎಂದು ಊಹಿಸುತ್ತೇನೆ.] – ಇಲ್ಲಿ, ರತ್ನಾವಲಿ ದೊರೆಯುವ ವಾರ್ತೆಯು ಕೌಶಾಂಬೀರಾಜ್ಯದ ಲಾಭಕ್ಕಿಂತ ಮಿಗಿಲೆನ್ನುವ ಅತಿಶಯವಾದ ಮಾತು 'ಉದಾಹೃತಿ'.

ಟಿಪ್ಪಣಿ : ಉದಾಹೃತಿ = ಉದಾಹರಣ (೧–೬೭). ಹೋಲಿಕೆ = ನಾ.ಶಾ. : ೨೧–೮೬; ಸಾ.ದ. : ೬–೯೭; ಪ್ರತಾಪ : ೩–೧೩.

## ೭೨. ಕ್ರಮಲಕ್ಷಣ (ಸ್ವಮತ) :

**ಕ್ರಮಃ ಸಂಚಿಂತ್ಯಮಾನಾಪ್ತಿಃ**

ಅನು : ತುಂಬ ಯೋಚಿಸುತ್ತಿರುವುದನ್ನು ಪೊಂದುವುದು 'ಕ್ರಮ'.

ವ್ಯಾಖ್ಯೆ : ಉದಾ– [ರತ್ನಾ : ಪು. ೧೨೮, ೩–೧೦] : 'ರಾಜಾ–ಉಪನತಪ್ರಿಯಾಸಮಾಗಮೋತ್ಸವಸ್ಯಾಪಿ ಮೇ ಕಿಮಿದಮತ್ಯರ್ಥಮುತ್ತಾಮ್ಯತಿ ಚೇತಃ । ಅಥವಾ,

ತೀವ್ರಃ ಸ್ಮರಸಂತಾಪೋ ನ ತಥಾದೌ ಬಾಧತೇ ಯಥಾಸನ್ನೇ ।
ತಪತಿ ಪ್ರಾವೃಷಿ ಸುತರಾಮಭ್ಯರ್ಣಜಲಾಗಮೋ ದಿವಸಃ ॥

[ಪ್ರಿಯೆಯ ಸಮಾಗಮೋತ್ಸವವನ್ನು ಸದ್ಯದಲ್ಲೆ ಹೊಂದಲಿರುವೆನಾದರೂ ನನ್ನ ಮನಸ್ಸೇಕೆ ಹೀಗೆ ಕಳವಳ ಗೊಳ್ಳುತ್ತಿದೆ? ಅಥವಾ, ಹೀಗಿರಬೇಕು : ಮಳೆಗಾಲದಲ್ಲಿ ಇನ್ನೇನು ಮಳೆ ಸುರಿಯಬೇಕಾದಾಗ ದಿನವು ಅತ್ಯಂತ ತಾಪದಿಂದ ಕೂಡಿರುತ್ತದೆ; ಅಂತೆಯೇ ಸ್ಮರಸಂತಾಪವು ಹತ್ತಿರವಾದಾಗ ಬಾಧಿಸುವಷ್ಟು ತೀವ್ರವಾಗಿ ಮೊದಲಲ್ಲಿ ಬಾಧಿಸುವುದಿಲ್ಲ.] ವಿದೂ–(ಆಕರ್ಣ್ಯ) ಭೋದಿಸಾಗರಿಏ, ಏಸೋ ಪಿಅವಅಸ್ಸೋ ತುಮಂ ಜ್ಜೇವ ಉದ್ದಿಸಿಅ ಉಕ್ಕಂಠಾಣಿಬ್ಭರಂ ಮಂತೇದಿ । ತಾ ನಿವೇದೇಮಿ ಸೇ ತುಹಾಗಮಣಂ । [(ಕಿವಿಗೊಟ್ಟು) ಅಮ್ಮಾ, ಸಾಗರಿಕೆ, ಈ ನನ್ನ ಪ್ರಿಯ ಮಿತ್ರನು ನಿನ್ನನ್ನು ಕುರಿತು ಉತ್ಕಂಠೆಯಿಂದ ಚಿಂತಿಸುತ್ತಿದ್ದಾನೆ. ನಿನ್ನ ಆಗಮನವನ್ನು ಆತನಿಗೆ ತಿಳಿಸುತ್ತೇನೆ.]' – ಇಲ್ಲಿ, ಸಾಗರಿಕಾಸಮಾಗಮವನ್ನೆ ಇಚ್ಛಿಸುತ್ತಿದ್ದ ವತ್ಸರಾಜನಿಗೆ ಭ್ರಾಂತಸಾಗರಿಕೆಯ [ಎಂದರೆ, ಸಾಗರಿಕೆಯ ವೇಷದಲ್ಲಿ ಬಂದಿರುವ ವಾಸವದತ್ತೆಯ] ಪ್ರಾಪ್ತಿಯಾಗುತ್ತದೆ. ಅದು 'ಕ್ರಮ'.

ಟಿಪ್ಪಣಿ : ಮೇಲಿನ ಉದಾ.ಲ್ಲಿ ವತ್ಸರಾಜನಿಗೆ ನಿಜವಾಗಿ ಸಾಗರಿಕೆಯ ಪ್ರಾಪ್ತಿಯಾಗುವುದಿಲ್ಲ; ವಾಸವದತ್ತೆ ಸಾಗರಿಕೆಯ ವೇಷದಲ್ಲಿ ಅಲ್ಲಿ ಬಂದಿರುತ್ತಾಳೆ, ಅಷ್ಟೆ.

ಮುಂದಿನ ಟಿಪ್ಪಣಿ ನೋಡಿ.

## ೭೩. ಕ್ರಮಲಕ್ಷಣ (ಪರಮತ) :

**ಭಾವಜ್ಞಾನಮಥಾಪರೇ ॥ ೩೯ ॥**

ಅನು : ಇನ್ನು ಕೆಲವರು ಭಾವಜ್ಞಾನವನ್ನು [ಕ್ರಮ ಎನ್ನುತ್ತಾರೆ].

ವ್ಯಾಖ್ಯೆ : 'ಕ್ರಮ'ದ ಲಕ್ಷಣವನ್ನು ಕುರಿತು ಮತಭೇದವಿರುವುದರಿಂದ, ಬೇರೆಯವರ ಮತವನ್ನೂ ಇಲ್ಲಿ ಹೇಳಿದೆ. ಈ ಲಕ್ಷಣಕ್ಕೆ ಉದಾ:- [ರತ್ನಾ : ಪು. ೧೨೯; ೩-೧೧ರಿಂದ ೧೩] : 'ರಾಜಾ-(ಉಪಸೃತ್ಯ) ಪ್ರಿಯೆ ಸಾಗರಿಕೆ,

ಶೀತಾಂಶುರ್ಮುಖಮುತ್ಪಲೇ ತವ ದೃಶೌ ಪದ್ಮಾನುಕಾರೌಕರೌ
ರಂಭಾಗರ್ಭನಿಭಂ ತವೋರುಯುಗಲಂ ಬಾಹೂ ಮೃಣಾಲೋಪಮೌ।
ಇತ್ಯಾಹ್ಲಾದಕರಾಖಿಲಾಂಗಿ ರಭಸಾನ್ನಿಃಶಂಕಮಾಲಿಂಗ್ಯ ಮಾ -
ಮಂಗಾನಿ ತ್ವಮನಂಗತಾಪವಿಧುರಾಣ್ಯೇಹ್ಯೇಹಿ ನಿರ್ವಾಪಯ ॥'

[ರಾಜ : (ಹತ್ತಿರ ಸಾರಿ) ಪ್ರಿಯೆ ಸಾಗರಿಕೆ, ನಿನ್ನ ಮುಖವು ಚಂದ್ರನನ್ನೂ ಕಣ್ಣುಗಳು ಉತ್ಪಲವನ್ನೂ ಕೈಗಳು ಪದ್ಮವನ್ನೂ ಹೋಲುತ್ತವೆ; ನಿನ್ನ ಎರಡು ತೊಡೆಗಳು ಬಾಳೆಯ ದಿಂಡಿನಂತಿವೆ; ಬಾಹುಗಳು ಕಮಲದ ದಂಟುಗಳಂತಿವೆ; ಹೀಗೆ ಎಲ್ಲ ಅಂಗಗಳೂ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವಂತಿರುವ ನೀನು, ನಿಃಶಂಕೆಯಿಂದ ಬೇಗ ಬಂದು ನನ್ನನ್ನು ಆಲಂಗಿಸು. ಮನ್ಮಥತಾಪದಿಂದ ಬಳಲಿರುವ ನನ್ನ ಅಂಗಗಳನ್ನು ಶಾಂತಗೊಳಿಸು, ಬಾ, ಬಾ.] ಎಂಬಲ್ಲಿಂದ, 'ಇಹ ತವಪ್ಯಸ್ಯೈವ ಬಿಂಬಾಧರೇ' ಎಂಬಲ್ಲಿನವರೆಗೆ-ಸಾಗರಿಕೆಯ ವೇಷದಲ್ಲಿರುವ ವಾಸವದತ್ತೆಯು ವತ್ಸರಾಜನ ನಿಜವಾದ ಭಾವವನ್ನು ತಿಳಿಯುವಳು. ಇದು 'ಕ್ರಮ'.

ಟಿಪ್ಪಣಿ : ನಾ.ಶಾ. ಮತ್ತು ಸಾ.ದ.ದಲ್ಲಿ ಬರುವ ಲಕ್ಷಣ ಈ ಎರಡನೆಯದನ್ನೆ ಹೋಲುತ್ತದೆ. ಪ್ರತಾಪ.ದಲ್ಲಿನ ಲಕ್ಷಣ ಮೊದಲನೆಯದನ್ನು ಹೋಲುತ್ತದೆ. (ಮಾ.ಮಾ.ದ ಜಗದ್ಧರವ್ಯಾಖ್ಯಾನದಲ್ಲಿ, 'ಭವಿಷ್ಯತ್‌ಜ್ಞಾನವು ಕ್ರಮ' ಎಂದು ಹೇಳಿರುವ ಲಕ್ಷಣವೊಂದನ್ನು ಉದ್ಧರಿಸಿ ಅದು ಭರತನದೆಂದು ಹೇಳಲಾಗಿದೆ. ಸಿಲ್‌ವೇನ್ ಲೇವಿ ಅವರು ಮೊದಲು ಸೂಚಿಸಿದ ಈ ಅಂಶವನ್ನು ಹ್ಯಾಸ್ ಎತ್ತಿ ಹೇಳಿದ್ದಾರೆ.)

ಹೋಲಿಕೆ = ನಾ.ಶಾ. : ೨೧-೮೭; ಸಾ.ದ. : ೬-೯೭; ಪ್ರತಾಪ : ೩-೧೩.

## ೭೪. ಸಂಗ್ರಹಲಕ್ಷಣ :

ಸಂಗ್ರಹಃ ಸಾಮದಾನೋಕ್ತಿಃ

ಅನು : ಸಾಮದಾನಗಳ ಮಾತು 'ಸಂಗ್ರಹ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೧೭] : 'ಸಾಧು ವಯಸ್ಯ, ಸಾಧು। ಇದಂ ತೇ ಪಾರಿತೋಷಿಕಂ ಕಟಕಂ ದದಾಮಿ।' [ಸಾಧು ಮಿತ್ರ, ಸಾಧು. ಇದೋ ಈ ಕಟಕವನ್ನು ನಿನಗೆ ಬಹುಮಾನವಾಗಿ ಕೊಡುತ್ತೇನೆ.]' – ಹೀಗೆ ಸಾಗರಿಕಾಸಮಾಗಮಕ್ಕೆ ಸಹಕಾರಿಯಾದ ವಿದೂಷಕನನ್ನು ಸಾಮದಾನಗಳಿಂದ ಸಂಗ್ರಹಿಸುವುದು (ಒಳಗುಮಾಡಿಕೊಳ್ಳುವುದು) 'ಸಂಗ್ರಹ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೮೭; ಸಾ.ದ. : ೬-೯೭, ೯೮; ಪ್ರತಾಪ : ೩-೧೩.

## ೭೫. ಅನುಮಾನಲಕ್ಷಣ :

ಅಭ್ಯೂಹೋ ಲಿಂಗತೋಽನುಮಾ।

ಅನು : [ಯಾವುದಾದರೊಂದು] ಚಿಹ್ನೆಯಿಂದ ಊಹೆಮಾಡುವುದು 'ಅನುಮಾ[ನ]'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೩೭, ೩-೧೫] : 'ರಾಜಾ - ಧಿಙ್ ಮೂರ್ಖ, ತ್ವತ್ಕೃತ ಏವಾಯಮಾಪತಿತೋಽಸ್ಮಾಕಮನರ್ಥಃ। ಕುತಃ,

ಸಮಾರೂಢಾ ಪ್ರೀತಿ ಪ್ರಣಯಬಹುಮಾನಾತ್ಪ್ರತಿದಿನಂ
ವ್ಯಲೀಕಂ ವೀಕ್ಷ್ಯೇದಂ ಕೃತಮಕೃತಪೂರ್ವಂ ಖಲು ಮಯಾ।
ಪ್ರಿಯಾ ಮುಂಚತ್ಯದ್ಯ ಸ್ಫುಟಮಸಹನಾ ಜೀವಿತಮಸೌ
ಪ್ರಕೃಷ್ಟಸ್ಯ ಪ್ರೇಮ್ಣಃ ಸ್ಖಲಿತಮವಿಷಹ್ಯಂ ಹಿ ಭವತಿ ॥

[ನಾನು ಮೂರ್ಖ, ನನ್ನಿಂದಲೇ ನಮಗೆ ಈ ಅನರ್ಥ ಒದಗಿತು. ಏಕೆಂದರೆ, ಪ್ರಣಯದ ಸನ್ಮಾನದಿಂದ ನಮ್ಮಿಬ್ಬರಲ್ಲಿ ದಿನದಿನವೂ ಪ್ರೇಮವು ಬೆಳೆಯುತ್ತಿತ್ತು; ಆದರೆ ಈಗ, ನಾನು ಹಿಂದೆಂದೂ ಮಾಡದಂಥ ಅಪರಾಧ ಮಾಡಿದುದನ್ನು ನೋಡಿ ನನ್ನ ಪ್ರಿಯೆಯು ಸಹನೆ ತಪ್ಪಿ ಪ್ರಾಣ ಬಿಡುವುದು ಸ್ಪಷ್ಟವಾಗಿದೆ. ನಿಶ್ಚಲವಾದ ಆಕರ್ಷಣೆಯುಳ್ಳ ಪ್ರೇಮದಲ್ಲಿ ತಪ್ಪು ಸಂಭವಿಸಿದರೆ ಸಹಿಸಲಸಾಧ್ಯವಾಗುತ್ತದೆ.] ವಿದೂ – ಭೋ ವಅಸ್ಸ, ವಾಸವದತ್ತಾ ಕಿಂ ಕರಿಸ್ಸದಿ ತ್ತಿ ಣ ಜಾಣಾಮಿ। ಸಾಗರಿಆ ಉಣ ದುಕ್ಕರಂ ಜೀವಿಸ್ಸದಿ ತ್ತಿ ತಕ್ಕೇಮಿ। [ಎಲೈ ಮಿತ್ರ, ವಾಸವದತ್ತೆ ಏನು ಮಾಡುವಳೆಂದು ತಿಳಿಯದು. ಆದರೆ, ಸಾಗರಿಕೆ ಜೀವಿಸುವುದೇ ದುಷ್ಕರ ಎಂದು ನನ್ನ ಊಹೆ.]' – ಇಲ್ಲಿ, ಸಾಗರಿಕೆಯಲ್ಲಿ ಉಂಟಾದ ಪ್ರೇಮದಿಂದ ತನ್ನ ಬಗೆಗಿರುವ ಅತ್ಯಂತವಾದ ಪ್ರೇಮ ತಪ್ಪಲು ವಾಸವದತ್ತೆಯು ಮರಣಹೊಂದುತ್ತಾಳೆ – ಎಂಬ ಊಹೆಯು 'ಅನುಮಾನ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೮೮; ಸಾ.ದ. : ೬-೬೮; ಪ್ರತಾಪ : ೩-೧೩.

## ೭೬. ಅಧಿಬಲಲಕ್ಷಣ (ಸ್ವಮತ) :

**ಅಧಿಬಲಮಭಿಸಂಧಿಃ**

ಅನು : [ಚಾತುರ್ಯದಿಂದ ಮಾಡುವ] ಮೋಸ (ಸಂಚು) 'ಅಧಿಬಲ'.

ವ್ಯಾಖ್ಯೆ : ಉದಾ– [ರತ್ನಾ : ಪು. ೧೨೬] : 'ಕಾಂಚನಮಾಲಾ – ಭಟ್ಟಿಣಿ, ಇಅಂ ಸಾ ಚಿತ್ತಸಾಲಿಆ। ತಾ ವಸಂತಅಸ್ಸ ಸಣ್ಣಂ ಕರೇಮಿ। (ಛೋಟಿಕಾಂ ದದಾತಿ।) [ಭರ್ತ್ರಿ, ಇದೇ ಆ ಚಿತ್ರಶಾಲೆ. ವಸಂತಕನಿಗೆ ಸಂಜ್ಞೆಮಾಡುತ್ತೇನೆ. (ಬೆರಳು ಆಡಿಸುವಳು)]' – ಇಲ್ಲಿ, ಸಾಗರಿಕೆ ಮತ್ತು ಸುಸಂಗತೆಯರ ವೇಷದಲ್ಲಿರುವ ಕಾಂಚನ ಮಾಲಾ ಮತ್ತು ವಾಸವದತ್ತೆಯರು ರಾಜ ವಿದೂಷಕರನ್ನು ಚಾತುರ್ಯದಿಂದ ಮೋಸಗೊಳಿಸುತ್ತಾರೆ. ಇದು 'ಅಧಿಬಲ'.

ಟಿಪ್ಪಣಿ : 'ಅಧಿಬಲ'ದ ಬೇರೊಂದು ಲಕ್ಷಣಕ್ಕೆ ೭೭ (ಅ) ನೋಡಿ.

ಈ 'ಅಧಿಬಲ'ಕ್ಕೂ ೩-೨೧ರಲ್ಲಿ ಬರುವ 'ಅಧಿಬಲ'ಕ್ಕೂ ಸಂಬಂಧವಿಲ್ಲ.

ಹೋಲಿಕೆ = ನಾ.ಶಾ. : ೨೧-೯೦; ಸಾ.ದ. : ೬-೯೯; ಪ್ರತಾಪ : ೩-೧೩.

## ೭೭. ತೋಟಕಲಕ್ಷಣ (ಸ್ವಮತ) :

**ಸಂರಬ್ಧಂ ತೋಟಕಂ ವಚಃ ॥ ೪೦ ॥**

ಅನು : ರೋಷದ [ಅಥವಾ ಪ್ರಕ್ಷುಬ್ಧತೆಯ] ಮಾತು 'ತೋಟಕ'.

ವ್ಯಾಖ್ಯೆ : ಉದಾ– [ರತ್ನಾ : ಪು. ೧೪೭] : 'ವಾಸವ – (ಉಪಸೃತ್ಯ) ಅಜ್ಜಉತ್ತ, ಜುತ್ತಮಿಣಂ ಸರಿಸಮಿಣಂ। (ಪುನಃ ಸರೋಷಂ) ಅಜ್ಜ ಉತ್ತ, ಉಟ್ಠೇಹಿ। ಕಿಂ ಅಜ್ಜವಿ ಆಹಿಜಾಣವಿ ಸೇವಾದುಕ್ಖಮಣು ಭವೀಅದಿ। ಕಂಚಣಮಾಲೆ, ಏದೇಣ ಜ್ಜೇವ ಪಾಸೇಣ ಬಂಧಿಅ ಆಣೇಹಿ ಏಣಂ ದುಟ್ಠಬಮ್ಹಣಂ। ಏದಂ ಪಿ ದುಟ್ಠಕಣ್ಣಅಂ ಅಗ್ಗದೋ ಕರೇಹಿ। [(ಹತ್ತಿರ ಬಂದು) ಆರ್ಯಪುತ್ರ, ಇದು ಯುಕ್ತವಾದದ್ದು; ನಿನಗೆ ಸದೃಶವಾದದ್ದು. (ಪುನಃ ರೋಷದಿಂದ) ಆರ್ಯಪುತ್ರ, ಏಳು. ಈಗಲೂ ಕುಲೀನಳ ಸೇವೆಯ ದುಃಖ ವನ್ನನುಭವಿಸುತ್ತಿರುವೆಯೇನು? ಕಾಂಚನಮಾಲೆ, ಇದೇ ಪಾಶದಿಂದ ಈ ಬ್ರಾಹ್ಮಣನನ್ನು ಕಟ್ಟಿ ತಾ. ಈ ದುಷ್ಟ

ಕನ್ಯೆ ಮುಂದೆ ಬರಲಿ.]' – ಇಲ್ಲಿ, ಸಾಗರಿಕಾಸಮಾಗಮಕ್ಕೆ ವಿಘ್ನರೂಪವಾಗಿ ಪ್ರಾಪ್ತಿ ಅನಿಶ್ಚಿತವಾಗುವಂತೆ ಮಾಡುವ ವಾಸವದತ್ತೆಯ ರೋಷದ ಮಾತು 'ತೋಟಕ'.

ಮತ್ತು – [ವೇಣೀ : ೩–೩೪ರಿಂದ ४೬] : 'ಪ್ರಯತ್ನಪರಿಬೋಧಿತಃ ಸ್ತುತಿಭಿರದ್ಯ ಶೇಷೇನಿಶಾಮ್ । [ಸ್ತುತಿಮಾಡಿ ಪ್ರಯತ್ನದಿಂದ ಎಬ್ಬಿಸಲ್ಪಡುವವರೆಗೆ ನೀನು ಇಂದು ರಾತ್ರಿ ನಿದ್ದೆಮಾಡು]' ಎಂಬಲ್ಲಿಂದ, 'ಧೃತಾಯುಧೋ ಯಾವದಹಂ ತಾವದನ್ಯೈಃ ಕಿಮಾಯುಧೈಃ । [ನಾನು ನನ್ನವೇ ಆದ ಆಯುಧಗಳನ್ನು ಧರಿಸುವವರೆಗೆ ಬೇರೆ ಆಯುಧಗಳಿಂದೇನು?]' – ಇಲ್ಲಿಯವರೆಗೆ, ಸೇನಾಭೇದಕಾರಿಯೂ ಪಾಂಡವರ ವಿಜಯ ಪ್ರಾಪ್ತಿಯ ಆಸೆಗೆ ಹೊಂದಿಕೊಂಡದ್ದೂ ಆದ ಕರ್ಣ ಅಶ್ವತ್ಥಾಮರ ಪರಸ್ಪರವಾದ ರೋಷದ ಮಾತು 'ತೋಟಕ'.

ಟಿಪ್ಪಣಿ : 'ತೋಟಕ'ದ ಬೇರೊಂದು ಲಕ್ಷಣಕ್ಕೆ ೭೭ (ಆ) ನೋಡಿ.

ಸಾ.ದ.ದಲ್ಲಿ ಇದನ್ನು 'ತ್ರೋಟಕ' ಎಂದು ಹೇಳಿದೆ.

ಹೋಲಿಕೆ = ನಾ.ಶಾ. : ೨೧–೮೯; ಸಾ.ದ. : ೬–೯೯; ಪ್ರತಾಪ ೩–೧೩.

* * *

ಸೂಚನೆ : ४೧ನೆಯ ಶ್ಲೋಕವೆಂದು ಮೂಲಗ್ರಂಥದಲ್ಲಿ ಮುದ್ರಿತವಾಗಿರುವ ಮುಂದಿನ ಎರಡು ಖಂಡಗಳಲ್ಲಿ ಅಧಿಬಲ ಮತ್ತು ತೋಟಕಗಳ ಲಕ್ಷಣವನ್ನು ಮತ್ತೆ ಹೇಳಿದೆ. ಇದು ಬೇರೆ ಯಾವುದೋ ಗ್ರಂಥದ ಭಾಗವೆಂದೂ, ಧನಿಕನ ವ್ಯಾಖ್ಯೆಯಲ್ಲಿಯೇ ಇರತಕ್ಕ ಉದ್ಧರಣೆಯಲ್ಲದೆ ಧನಂಜಯನ ಕಾರಿಕೆಯಲ್ಲವೆಂದೂ ಹಾಲ್ ನಿಶ್ಚಯಿಸಿದ್ದಾರೆ. [ನೋಡಿ : ಹಾಲ್ : ೧–೩೭, ಬಿ, ೨]. ಹ್ಯಾಸ್‌ರವರೂ ಅವರನ್ನೆ ಅನುಸರಿಸಿದ್ದಾರೆ. [ನೋಡಿ : ಹ್ಯಾಸ್ : ೧–೭೭]. ಇವು ಗ್ರಂಥಾಂತರ ಲಕ್ಷಣಗಳೆಂದು ಧನಿಕನೂ ಸೂಚಿಸಿದ್ದಾನೆ. ಈ ಕಾರಣದಿಂದ ಆ ಎರಡು ಖಂಡಗಳನ್ನು ಇಲ್ಲಿ ಬೇರೆಯಾಗಿ ಕೊಟ್ಟಿದೆ.

ಇಲ್ಲಿ ಬರುವ 'ಅಧಿಬಲ' ಲಕ್ಷಣಕ್ಕೂ ಮೇಲೆ ೭೬ರಲ್ಲಿ ಬಂದಿರುವುದಕ್ಕೂ ವ್ಯತ್ಯಾಸವಿದೆ. ಗರ್ಭಾಂಗವಾದ ಈ 'ಅಧಿಬಲ'ವನ್ನು ವೀಥ್ಯಂಗವಾದ ಮತ್ತೊಂದು 'ಅಧಿಬಲ'ದೊಡನೆ (೩–೨೦) ಕೂಡಿಸಿ ಭ್ರಮೆಗೊಳಿಸುವಂತಿದೆ ಇಲ್ಲಿನ ಲಕ್ಷಣ – ಎಂದು ಹ್ಯಾಸ್ ಸೂಚಿಸಿದ್ದಾರೆ. 'ತೋಟಕ'ದ ಲಕ್ಷಣ ಮಾತ್ರ ಎರಡೂ ಕಡೆಯಲ್ಲೂ ಒಂದೇ ಆಗಿದೆ. (ನೋಡಿ : ೭೭ ಆ.)

## ೭೭ (ಅ) ಅಧಿಬಲಲಕ್ಷಣ (ಗ್ರಂಥಾಂತರ) :

**ತೋಟಕಸ್ಯಾನ್ಯಥಾಭಾವಂ ಬ್ರುವತೇಽಧಿಬಲಂ ಬುಧಾಃ ।**

ಅನು : ತೋಟಕದಿಂದ ಬೇರೆಯಾದ [ಎಂದರೆ, ತೋಟಕಕ್ಕೆ ವಿರುದ್ಧವಾದ] ಭಾವವನ್ನು ಪಂಡಿತರು 'ಅಧಿಬಲ' ಎನ್ನುತ್ತಾರೆ.

ವ್ಯಾಖ್ಯೆ : ಉದಾ:– [ರತ್ನಾ : ಪು. ೧೩೫, ೩–೧४] : 'ರಾಜಾ – ದೇವಿ, ಏವಮಪಿ ಪ್ರತ್ಯಕ್ಷದೃಷ್ಟವ್ಯಲೀಕಃ ಕಿಂ ವಿಜ್ಞಾಪಯಾಮಿ,

ಆತಾಮ್ರತಾಮಪನಯಾಮಿ ವಿಲಕ್ಷ ಏಷ ಲಾಕ್ಷಾಕೃತಾಂ ಚರಣಯೋಸ್ತವ ದೇವಿ ಮೂರ್ಧ್ನಾ ।
ಕೋಪೋಪರಾಗಜನಿತಾಂ ತು ಮುಖೇಂದುಬಿಂಬೇ ಹರ್ತುಂ ಕ್ಷಮೋ ಯದಿ ಪರಂ
ಕರುಣಾ ಮಯಿ ಸ್ಯಾತ್ ॥'

[ದೇವಿ, ಅಪರಾಧವು ಪ್ರತ್ಯಕ್ಷವಾಗಿರುವಾಗ ಕೂಡ ಇನ್ನೇನು ಹೇಳಲಿ? ದೇವಿ, ಲಜ್ಜಿತನಾದ ನಾನು ನಿನ್ನ ಚರಣಗಳಲ್ಲಿ ತಲೆಯಿಟ್ಟು ಅಲ್ಲಿರುವ ಅಲತಿಗೆಯ ಕೆಂಪನ್ನು ಹೋಗಲಾಡಿಸುತ್ತೇನೆ. ಆದರೆ ನೀನು ನನ್ನ ಮೇಲೆ ವಿಶೇಷವಾದ ದಯೆಯನ್ನು ತೋರಿಸಿದರೆ ಮಾತ್ರ, ಕೋಪಗ್ರಹಣ (ಕೋಪ ಹಿಡಿ)ದ ನಿನ್ನ ಮುಖಚಂದ್ರನ ಕೆಂಪನ್ನು ಹರಣಮಾಡಲು ಸಮರ್ಥನಾಗುತ್ತೇನೆ.]

ಟಿಪ್ಪಣಿ : ಕೋಪದ ಮಾತು ತೋಟಕ; ಅದರ ಅನ್ಯಥಾಭಾವವೆಂದರೆ ವಿನಯದ ಮಾತು, ಅನುನಯದ ಮಾತು.

## ೭೭ (ಆ) ತೋಟಕಲಕ್ಷಣ (ಗ್ರಂಥಾಂತರ) :

**ಸಂರಬ್ಧವಚನಂ ಯತ್ತು ತೋಟಕಂ ತದುದಾಹೃತಮ್ ॥ ೪೧ ॥**

ಅನು : ರೋಷದ [ಅಥವಾ ಪ್ರಕ್ಷುಬ್ಧತೆಯ] ಮಾತು ಯಾವುದೊ ಅದು 'ತೋಟಕ' ವೆಂದು ಉದಾಹೃತವಾಗಿದೆ.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೩೪] : 'ರಾಜಾ – ಪ್ರಿಯೆ ವಾಸವದತ್ತೆ, ಪ್ರಸೀದ ಪ್ರಸೀದ । [ಪ್ರಿಯೆ ವಾಸವದತ್ತೆ, ಪ್ರಸನ್ನಳಾಗು.] ವಾಸವ – (ಅಶ್ರೂಣಿ ಧಾರಯಂತೀ) ಅಜ್ಜಉತ್ತ, ಮಾ ಏವಂ ಭಣ । ಅಣ್ಣ ಸಂಕಂತಾಇಂ ಖು ಏದಾಇಂ ಅಕ್ಖರಾಇಂ ತ್ತಿ । [(ಕಂಬನಿಮಿಡಿಯುತ್ತ) ಆರ್ಯಪುತ್ರ, ಹಾಗೆ ಹೇಳಬೇಡ. ಈ ಮಾತುಗಳು ಈಗ ನಿಶ್ಚಯವಾಗಿ ಬೇರೊಬ್ಬರಿಗೆ ಹೇಳುವಂಥವು.]'

ಮತ್ತು – [ವೇಣೀ : ಪು. ೧೦೫] : 'ರಾಜಾ – ಅಯೇ ಸುಂದರಕ, ಕಚ್ಚಿತ್ಕುಶಲಮಂಗ ರಾಜಸ್ಯ । [ಎಲೈ ಸುಂದರಕ, ಅಂಗರಾಜನಿಗೆ ಕುಶಲವೆ?] ಪುರುಷಃ – ಕುಸಲಂ ಸರೀರಮೇತ್ತಕೇಣ । [ಶರೀರಮಾತ್ರದಿಂದ ಕುಶಲ ನಾಗಿದ್ದಾನೆ.] ರಾಜಾ – ಕಿಂ ತಸ್ಯ ಕಿರೀಟಿನಾ ಹತಾ ಧೌರೇಯಾಃ, ಕ್ಷತಃ ಸಾರಥಿಃ, ಭಗ್ನೋ ವಾ ರಥಃ । [ಏನು, ಅವನ ಕುದುರೆಗಳನ್ನು ಅರ್ಜುನನು ಕೊಂದನೆ? ಸಾರಥಿ ಗಾಯವಡೆದನೆ? ಅಥವಾ ರಥ ಮುರಿಯಿತೆ?] ಪುರುಷಃ – ದೇವ, ಣ ಭಗ್ಗೋ ರಹೋ । ಭಗ್ಗೋ ಸೇ ಮಣೋರಹೋ । [ದೇವ, ರಥ ಭಗ್ನವಾಗಲಿಲ್ಲ, ಆತನ ಮನೋರಥ ಭಗ್ನವಾಯಿತು.] ರಾಜಾ – (ಸಸಂಭ್ರಮಂ) ಕಥಮ್ [(ಉದ್ವಿಗ್ನನಾಗಿ) ಹೇಗೆ?]'

ಟಿಪ್ಪಣಿ : ೭೭ರ ಟಿಪ್ಪಣಿ ನೋಡಿ.

* * *

## ೭೮. ಉದ್ವೇಗಲಕ್ಷಣ :

**ಉದ್ವೇಗೋಽರಿಕೃತಾ ಭೀತಿಃ**

ಅನು : ಶತ್ರುಗಳಿಂದ ಉಂಟಾದ ಭೀತಿ 'ಉದ್ವೇಗ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೪೯] : 'ಸಾಗ – (ಆತ್ಮಗತಂ) ಕಹಂ ಅಕಿದ ಪುಣ್ಣೇಹಿಂ ಅತ್ತಣೋ ಇಚ್ಛಾಏ ಮರಿಉಂ ಪಿ ಣ ಪಾರೀಅದಿ। [(ತನ್ನಲ್ಲೆ) ಪುಣ್ಯ ಮಾಡದ ಕಾರಣ ಇಚ್ಛೆಯಂತೆ ಸಾಯುವುದಕ್ಕೂ ಆಗುವುದಿಲ್ಲವೇನು?]' – ಇಲ್ಲಿ, ಸಾಗರಿಕೆಗೆ ವಾಸವದತ್ತೆಯಿಂದ ಉಂಟಾದ ಭಯ ಉದ್ವೇಗ. 'ಶತ್ರುವಿನಿಂದ ಉಂಟಾದ ಭಯ ಉದ್ವೇಗ' ಎಂದು ಲಕ್ಷಣದಲ್ಲಿ ಹೇಳಿದೆ. ಸಾಗರಿಕಾ ವಾಸವದತ್ತೆಯರು ಪರಸ್ಪರ ಶತ್ರುಗಳೆ ಎಂಬ ಸಂದೇಹ ಬರಬಹುದು. ಹೌದು. ಯಾವನು ತನಗೆ ಅಪಕಾರವನ್ನೆಸಗುತ್ತಾನೋ ಅವನು ಶತ್ರು.

ಮತ್ತು – [ವೇಣೀ : ಪು. ೯೬] 'ಸೂತಃ – (ಶ್ರುತ್ವಾ ಸಭಯಂ) ಕಥಮಾಸನ್ನ ಏವಾಸೌ ಕೌರವರಾಜಪುತ್ರ ಮಹಾವನೋತ್ಪಾತಮಾರುತೋ ಮಾರುತಿರನುಪಲಬ್ಧಸಂಜ್ಞಶ್ಚ ಮಹಾರಾಜಃ। ಭವತು। ದೂರಮುಪಹರಾಮಿ ಸ್ಯಂದನಮ್। ಕದಾಚಿದಯಮನಾರ್ಯೋ ದುಃಶಾಸನ ಇವಾಸ್ಮಿನ್ನಪ್ಯನಾರ್ಯಮಾಚರಿಷ್ಯತಿ । [(ಕೇಳಿ ಭಯದಿಂದ) ಏನಿದು, ಕೌರವರಾಜಪುತ್ರರೆಂಬ ಮಹಾವನಕ್ಕೆ ಉತ್ಪಾತಮಾರುತವೆಂಬಂತಿರುವ ಮಾರುತಿಯು ಹತ್ತಿರ ಬಂದನು. ಮಹಾರಾಜನು ಎಚ್ಚರತಪ್ಪಿಬಿಟ್ಟನು. ಆಗಲಿ, ರಥವನ್ನು ದೂರ ಒಯ್ಯುತ್ತೇನೆ. ಎಲ್ಲಿಯಾದರೂ ಆ ಅನಾರ್ಯನು ದುಃಶಾಸನನಿಗೆ ಮಾಡಿದಂತೆಯೇ ಅನಾರ್ಯ ಕೃತ್ಯವನ್ನು ಮಾಡಿಬಿಟ್ಟಾನು.]' – ಶತ್ರುವಿನಿಂದುಂಟಾದ ಈ ಭೀತಿ 'ಉದ್ವೇಗ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೯೦; ಸಾ.ದ. : ೬-೧೦೦; ಪ್ರತಾಪ : ೩-೧೩.

## ೭೯. ಸಂಭ್ರಮಲಕ್ಷಣ :

**ಶಂಕಾತ್ರಾಸೌ ಚ ಸಂಭ್ರಮಃ ।**

ಅನು : ಸಂಶಯ ಬಳಲಿಕೆಗಳು 'ಸಂಭ್ರಮ'.

ವ್ಯಾಖ್ಯೆ : ಉದಾಃ – [ರತ್ನಾ : ೧೪೧] : 'ವಿದೂ – (ಪಶ್ಯನ್) ಕಾ ಉಣ ಏಸಾ । (ಸಸಂಭ್ರಮಂ) ಕಧಂ ದೇವೀ ವಾಸವದತ್ತಾ ಉತ್ತಾಣಂ ವಾವಾದೇದಿ। [(ನೋಡಿ) ಮತ್ತೆ ಇವಳು ಯಾರಿರಬಹುದು? (ಗಾಬರಿಯಾಗಿ) ದೇವೀ ವಾಸವದತ್ತೆಯು ತನ್ನನ್ನು ತಾನು ಕೊಂದುಕೊಳ್ಳುತ್ತಿರುವಳೇನು?] ರಾಜಾ – (ಸಸಂಭ್ರಮ ಮುಪಸರ್ಪನ್) ಕ್ವಾಸೌ ಕ್ವಾಸೌ [(ಗಾಬರಿಯಿಂದ ಹತ್ತಿರ ಹೋಗುತ್ತ) ಎಲ್ಲಿ ಅವಳು? ಎಲ್ಲಿ ಅವಳು?]' – ಇಲ್ಲಿ, ವಾಸವದತ್ತೆಯ ಬುದ್ಧಿಯಿಂದ ಹಿಡಿಯಲ್ಪಟ್ಟ ಸಾಗರಿಕೆಯ ಮರಣಶಂಕೆಯಿಂದ 'ಸಂಭ್ರಮ'.

ಮತ್ತು – [ವೇಣೀ : ಪು. ೯೩, ೭೨] : '(ನೇಪಥ್ಯೇ ಕಲಕಲಃ) ಅಶ್ವತ್ಥಾಮಾ – (ಸಸಂಭ್ರಮಂ) ಮಾತುಲ ಮಾತುಲ, ಕಷ್ಟಮೇಷ ಏಷ ಭ್ರಾತುಃ ಪ್ರತಿಜ್ಞಾಭಂಗಭೀರುಃ ಕಿರೀಟೀಸಮಂ ಶರವರ್ಷೈರ್ದುರ್ಯೋಧನ ರಾಧೇಯಾವಭಿದ್ರವತಿ। ಸರ್ವಥಾ ಪೀತಂ ಶೋಣಿತಂ ದುಃಶಾಸನಸ್ಯ ಭೀಮೇನ। [(ನೇಪಥ್ಯದಲ್ಲಿ ಕೋಲಾಹಲ) ಅಶ್ವ – (ಗಾಬರಿಯಿಂದ) ಮಾವ, ಮಾವ, ಎಂತಹ ಕಷ್ಟ, ಅಣ್ಣನ ಪ್ರತಿಜ್ಞೆಗೆ ಭಂಗ ಬಂದೀತೆಂದು ಬೆದರುವ ಈ ಅರ್ಜುನನು ಶರವರ್ಷಗಳಿಂದ ದುರ್ಯೋಧನರಾಧೇಯರನ್ನು ಮುಚ್ಚಿಬಿಡುತ್ತಿದ್ದಾನೆ. ನಿಶ್ಚಯವಾಗಿಯೂ ಭೀಮನು ದುಃಶಾಸನನ ರಕ್ತವನ್ನು ಹೀರಿದ.]' – ಹೀಗೆ ಶಂಕೆ. '(ಪ್ರವಿಶ್ಯ ಸಂಭ್ರಾಂತಃ ಸಪ್ರಹಾರಃ) ಸೂತಃ – ತ್ರಾಯತಾಂ ತ್ರಾಯತಾಂ ಕುಮಾರಃ [ಕುಮಾರನನ್ನು ರಕ್ಷಿಸು, ರಕ್ಷಿಸು.]' – ಹೀಗೆ ತ್ರಾಸ; ಈ ರೀತಿಯಲ್ಲಿ ದುಃಶಾಸನದ್ರೋಣವಧೆಗಳನ್ನು ಸೂಚಿಸುವ ಹಾಗೂ ಪಾಂಡವರ ವಿಜಯ ಪ್ರಾಪ್ತಿಯ ಆಸೆಗೆ ಹೊಂದಿ ಕೊಂಡಿರುವ, ಶಂಕೆ ತ್ರಾಸಗಳು 'ಸಂಭ್ರಮ'.

ಟಿಪ್ಪಣಿ : ನಾ.ಶಾ. ಮತ್ತು ಸಾ.ದ. ಗಳಲ್ಲಿ ಈ ಅಂಗಕ್ಕೆ 'ವಿದ್ರವ' ಎಂಬ ಹೆಸರು ಬಂದಿದೆ. ೧-೭೫ ಟಿಪ್ಪಣಿ ನೋಡಿ.

ಹೋಲಿಕೆ = ನಾ.ಶಾ. : ೨೧-೯೧; ಸಾ.ದ. : ೬-೧೦೦; ಪ್ರತಾಪ : ೩-೧೧.

## ೮೦. ಆಕ್ಷೇಪಲಕ್ಷಣ :

**ಗರ್ಭಬೀಜಸಮುದ್ಭೇದಾದಾಕ್ಷೇಪಃ ಪರಿಕೀರ್ತಿತಃ ॥ ೪೨ ॥**

ಅನು : ಗರ್ಭದ ಬೀಜವನ್ನು ಸಂಪೂರ್ಣವಾಗಿ ಒಡೆದು ಹೊರತೋರಿಸುವುದು 'ಆಕ್ಷೇಪ' ಎಂದು ಕೀರ್ತಿತವಾಗಿದೆ.

ವ್ಯಾಖ್ಯೆ : ಉದಾಃ – [ರತ್ನಾ : ಪು. ೧೩೯, ೧೪೮, ೧೫೦] : 'ರಾಜಾ – ವಯಸ್ಯ, ದೇವೀಪ್ರಸಾದನಂ ಮುಕ್ತ್ವಾ ನಾನ್ಯಮತ್ರೋಪಾಯಂ ಪಶ್ಯಾಮಿ। [ಮಿತ್ರ, ದೇವಿಯನ್ನು ಪ್ರಸನ್ನಗೊಳಿಸುವುದಲ್ಲದೆ ಬೇರೆ ಉಪಾಯವು ಕಾಣುವುದಿಲ್ಲ.]' – ಇಲ್ಲಿ, ಮತ್ತೆ ಬೇರೆಡೆ, 'ಸರ್ವಥಾ ದೇವೀಪ್ರಸಾದನಂ ಪ್ರತಿ ನಿಷ್ಪ್ರತ್ಯಾಶೀಭೂತಾಃ ಸ್ಮಃ [ದೇವಿ ಪ್ರಸನ್ನಳಾಗುವಳೆಂದು ನಮಗೆ ಸರ್ವಥಾ ಆಸೆಯಿಲ್ಲ.]', ಮತ್ತು, 'ತತ್ಕಿಮಿಹ ಸ್ಥಿತೇನ ದೇವೀಮೇವ ಗತ್ವಾ ಪ್ರಸಾದಯಾಮಿ। [ಇಲ್ಲಿ ನಿಂತು ಮಾಡುವುದೇನು? ದೇವಿಯ ಬಳಿ ಹೋಗಿ ಆಕೆಯನ್ನು ಪ್ರಸನ್ನಗೊಳಿಸುತ್ತೇನೆ.]' – ಸಾಗರಿಕಾಸಮಾಗಮದ ಸಿದ್ಧಿಯು ದೇವಿಯ ಪ್ರಸನ್ನತೆಯನ್ನವಲಂಬಿಸಿದ್ದು ಎನ್ನುವ ಗರ್ಭ ಬೀಜದ ಉದ್ಭೇದವು 'ಆಕ್ಷೇಪ'.

ಮತ್ತು – [ವೇಣೀ : ಪು. ೧೦೩] : 'ಸುಂದರಕಃ – ಅಹವಾ ಕಿಮೇತ್ಥ ದೇವ್ವಂ ಉಆಲಹಾಮಿ । ತಸ್ಸ ಕ್ಖು ಏದಂ ಣಿಬ್ಭಚ್ಚಿದವಿದುರವಅಣಬೀಅಸ್ಸ ಪರಿಭೂದಪಿದಾಮಹಹಿದೋವದೇಸಂಕುರಸ್ಸ ಸಉಣಿಪ್ಪೋಚ್ಚಾ ಹಣಾರೂಢಮೂಲಸ್ಸ ಕೂಡವಿಸಾಹಿಣೋ ಪಂಚಾಲೀಕೇಸಗ್ಗಹಣ ಕುಸುಮಸ್ಸ ಫಲಂ ಪರಿಣಮೇದಿ। [ಅಥವಾ ನಾನೇಕೆ ದೈವವನ್ನು ನಿಂದಿಸಲಿ? ವಿದುರನ ಮಾತುಗಳನ್ನು ತಿರಸ್ಕರಿಸಿದ್ದು ಬೀಜ, ಭೀಷ್ಮನ ಹಿತೋಪದೇಶವನ್ನು

ಅಪಮಾನಗೊಳಿಸಿದ್ದು ಮೊಳಕೆ, ಶಕುನಿಯ ಪ್ರೋತ್ಸಾಹದಿಂದ ಬೆಳೆದ ಬುಡ, ಇಂತಹ ಈ ಅನ್ಯತವಿಷವೃಕ್ಷವು ಪಾಂಚಾಲಿಯ ಕೇಶಗ್ರಹಣದಲ್ಲಿ ಹೂಬಿಟ್ಟು ಈಗ ಫಲಕೊಡುತ್ತಿದೆ.]' – ಹೀಗೆ ಫಲೋನ್ಮುಖವಾದ ಬೀಜ ಪ್ರಕಟವಾಗಿದೆ; ಇದು 'ಆಕ್ಷೇಪ'.

ಈ ಹನ್ನೆರಡು ಗರ್ಭಾಂಗಗಳು 'ಪ್ರಾಪ್ತ್ಯಾಶೆ'ಯನ್ನು ಪ್ರದರ್ಶಿಸುವಂತೆ ಯೋಜಿತವಾಗತಕ್ಕದ್ದು. ಇವುಗಳಲ್ಲಿ, ಅಭೂತಾಹರಣ ಮಾರ್ಗ ತೋಟಕ ಅಧಿಬಲ ಆಕ್ಷೇಪ–ಇವು ಮುಖ್ಯವಾದವು. ಉಳಿದವನ್ನು ಯಥಾವಕಾಶ ಯೋಜಿಸಬಹುದು.

ಟಿಪ್ಪಣಿ : 'ಗರ್ಭ'ಕ್ಕೆ ೧–೬೬, 'ಬೀಜ'ಕ್ಕೆ ೧–೨೫ ನೋಡಿ.

ನಾ.ಶಾ.ವಲ್ಲಿ ಇದನ್ನು 'ಆಕ್ಷಿಪ್ತ' ಎಂದಿದೆ; ಸಾ.ದ.ವಲ್ಲಿ 'ಕ್ಷಿಪ್ತಿ' ಎಂಬ ಹೆಸರಿದೆ. ಲಕ್ಷಣಗಳು ಎಲ್ಲವೂ ಒಂದೆ. ಪ್ರತಾಪ.ವಲ್ಲಿ 'ಇಷ್ಟಾರ್ಥೋಪಾಯದ ಅನುಸರಣ ಆಕ್ಷೇಪ' ಎಂದಿದೆ.

ನಾ.ಶಾ., ಸಾ.ದ.ಗಳಲ್ಲಿ 'ಪ್ರಾರ್ಥನಾ' ಎಂಬ ಹದಿಮೂರನೆಯ ಅಂಗವೊಂದನ್ನು ಹೇಳಿದೆ. ಆದರೆ, 'ನಿರ್ವಹಣ' [೧–೯೬]ವಲ್ಲಿ 'ಪ್ರಶಸ್ತಿ' [೧–೧೦೦] ಎಂಬ ಅಂಗವೊಂದಿದೆಯಷ್ಟೆ. ಈ, 'ಪ್ರಾರ್ಥನಾ' 'ಪ್ರಶಸ್ತಿ'ಗಳು ವಿಕಲ್ಪಗಳಾಗಿದ್ದು ಯಾವುದಾದರೊಂದನ್ನು ಇಟ್ಟುಕೊಳ್ಳಬಹುದೆಂದು ಸಾ.ದ.ವಲ್ಲಿ ಹೇಳಿದೆ. ಅಲ್ಲಿಗೆ ಒಟ್ಟು ಅಂಗಗಳು ನಿಯತವಾಗಿ ಅರುವತ್ತು ನಾಲ್ಕೇ ಇರುತ್ತವೆ.

ನೋಡಿ : ಸಾ.ದ. : ೬–೯೮ರ ಮೂಲ ವ್ಯಾಖ್ಯೆ.

ಹೋಲಿಕೆ = ನಾ.ಶಾ. : ೨೧–೮೯; ಸಾ.ದ. : ೬–೯೯; ಪ್ರತಾಪ : ३–೧३.

# ಅವಮರ್ಶಸಂಧಿ ಮತ್ತು ಅದರ ಅಂಗಗಳು :

## ೮೧. ಅವಮರ್ಶಸಂಧಿಲಕ್ಷಣ :

**ಕ್ರೋಧೇನಾವಮೃಶೇದ್ಯತ್ರ ವ್ಯಸನಾದ್ವಾ ವಿಲೋಭನಾತ್ ।**
**ಗರ್ಭನಿರ್ಭಿನ್ನಬೀಜಾರ್ಥಃ ೧ಸೋಽವಮರ್ಶೋಽಂಗಸಂಗ್ರಹಃ೧ ॥ ४३ ॥**

ಅನು : ಕೋಪ, ವ್ಯಸನ ಅಥವಾ ಲೋಭದಿಂದ ಪರ್ಯಾಲೋಚಿಸುವಲ್ಲಿ [ಇರುವ] ಅಂಗಗಳ ಸಂಗ್ರಹವು 'ಅವಮರ್ಶ[ಸಂಧಿ]'. ಗರ್ಭದಲ್ಲಿ ಚೆನ್ನಾಗಿ ಒಡೆದು ಪ್ರಕಟವಾದ ಬೀಜವು [ಅಲ್ಲಿನ] ವಿಷಯವಾಗಿದೆ.

ವ್ಯಾಖ್ಯೆ : ಚೆನ್ನಾಗಿ ಪರ್ಯಾಲೋಚಿಸತಕ್ಕದ್ದು 'ಅವಮರ್ಶನ'; ಅದು ಉಳ್ಳದ್ದು 'ಅವಮರ್ಶ'. ಅದು ಕ್ರೋಧ ಇಲ್ಲವೆ ವ್ಯಸನ ಇಲ್ಲವೆ ಲೋಭದಿಂದ ಉಂಟಾಗಬಹುದು. ಗರ್ಭಸಂಧಿಯಲ್ಲಿ ಪ್ರಕಟವಾದ ಬೀಜಕ್ಕೆ ಸಂಬಂಧಿಸಿ, ನಿಶ್ಚಿತಫಲಪ್ರಾಪ್ತಿಯ ನಿರ್ಧಾರವನ್ನು ಕುರಿತು ಒತ್ತಿ ಪರಿಶೀಲನಮಾಡುವುದು 'ಅವಮರ್ಶಸಂಧಿ'.

ಉದಾ:– [ರತ್ನಾ: ४ನೆಯ ಅಂಕ; ಪು.೧೮೬]: ಅಗ್ನಿವಿದ್ರವದ ವರೆಗೆ, ವಾಸವದತ್ತೆಯಿಂದ ಯಾವ ಅಪಾಯವೂ ಒದಗದಂತೆ ರತ್ನಾವಲಿಯನ್ನು ಹೊಂದುವುದರ ಬಗ್ಗೆ ವಿಮರ್ಶೆ ನಡೆಯುವುದು.

ಮತ್ತು–[ವೇಣೀ: ೬–೧]: ದುರ್ಯೋಧನನ ರಕ್ತದಿಂದ ತೊಯ್ದು ಭೀಮನು ಬರುವ ಪರ್ಯಂತ:–

'ತೀರ್ಣೇ ಭೀಷ್ಮಮಹೋದಧೌ ಕಥಮಪಿ ದ್ರೋಣಾನಲೇ ನಿರ್ವೃತೇ
ಕರ್ಣಾಶೀವಿಷಭೋಗಿನಿ ಪ್ರಶಮಿತೇ ಶಲ್ಯೇಽಪಿ ಯಾತೇ ದಿವಮ್ ।
ಭೀಮೇನ ಪ್ರಿಯಸಾಹಸೇನ ರಭಸಾದಲ್ಪಾವಶೇಷೇ ಜಯೇ
ಸರ್ವೇ ಜೀವಿತಸಂಶಯಂ ವಯಮಮೀ ವಾಚಾ ಸಮಾರೋಪಿತಾಃ ॥'

೧ ಪಾಠ : ಸೋಽಪಮರ್ಶ ಇತಿ ಸ್ಮೃತಃ ।

[ಭೀಷ್ಮಮಹೋದಧಿಯನ್ನು ಹೇಗೋ ದಾಟಿದ್ದಾಯಿತು. ದ್ರೋಣಾಗ್ನಿ ನಂದಿತು. ಕರ್ಣಸರ್ಪ ಪ್ರಶಾಂತವಾಯ್ತು. ಶಲ್ಯನೂ ಸ್ವರ್ಗಕ್ಕೆ ಹೋದನು. ಇನ್ನು ಜಯ ಸ್ವಲ್ಪದರಲ್ಲಿ ಉಳಿದಿದೆ. ಹೀಗಿರುವಾಗ ಈಗ ಸಾಹಸಪ್ರಿಯನಾದ ಭೀಮನ ರಭಸದ ಮಾತಿನಿಂದ ನಮ್ಮೆಲ್ಲರ ಜೀವಿತ ಸಂಶಯವು ಕೊನೆಗೊಂಡಿದೆ.] - ಇಲ್ಲಿ 'ಅಲ್ಪಾವಶೇಷೋ ಜಯೋ (ಜಯವು ಸ್ವಲ್ಪದರಲ್ಲಿ ಉಳಿದಿದೆ)'-ಎಂಬಲ್ಲಿ, ಭೀಷ್ಮಾದಿಮಹಾರಥಿಕರೇ ಮೊದಲಾದ, ಶತ್ರುಗಳ ವಧೆಯಿಂದ ನಿಶ್ಚಿತ ವಿಜಯದ ಪರ್ಯಾಲೋಚನೆ ನಡೆದಿದೆ. ಇದು 'ಅವಮರ್ಶಸಂಧಿ'.

ಟಿಪ್ಪಣಿ : ನಾ.ಶಾ.ವಲ್ಲಿ ಇದಕ್ಕೆ 'ವಿಮರ್ಶಸಂಧಿ' ಎಂಬ ಹೆಸರೂ ಇದೆ; ಸಾ.ದ.ವಲ್ಲಿ ಇದಕ್ಕೆ 'ವಿಮರ್ಶ' ಎಂದಿದೆ. ಈ ಗ್ರಂಥದಲ್ಲೆ 'ಅವಮರ್ಶ'ಗೆ 'ವಿಮರ್ಶ' ಎಂಬ ಹೆಸರೂ ಬಂದಿದೆ. (ನೋಡಿ : ೩-೫೯, ೬೧)

ಹೋಲಿಕೆ = ನಾ.ಶಾ. : ೨೧-೪೨; ಸಾ.ದ. : ೬-೭೯, ೮೦; ಪ್ರತಾಪ : ೩-೧೪.

## ೮೨. ಹದಿಮೂರು ಅವಮರ್ಶಾಂಗಗಳು :

**ತತ್ರಾಪವಾದಸಂಫೇಟೌ ವಿದ್ರವದ್ರವಶಕ್ತಯಃ ।**
**ದ್ಯುತಿಃ ಪ್ರಸಂಗಶ್ಛಲನಂ ವ್ಯವಸಾಯೋ ವಿರೋಧನಮ್ ॥ ೪೪ ॥**
**ಪ್ರರೋಚನಾ ವಿಚಲನಮಾದಾನಂ ಚ ತ್ರಯೋದಶ ।**

ಅನು : ಅಲ್ಲಿ [ಎಂದರೆ, ಅವಮರ್ಶಸಂಧಿಯಲ್ಲಿ] ಹದಿಮೂರು [ಅಂಗಗಳಿವೆ; ಅವು]: ಅಪವಾದ, ಸಂಫೇಟ, ವಿದ್ರವ, ದ್ರವ, ಶಕ್ತಿ, ದ್ಯುತಿ, ಪ್ರಸಂಗ, ಛಲನ, ವ್ಯವಸಾಯ, ವಿರೋಧನ, ಪ್ರರೋಚನ, ವಿಚಲನ, ಆದಾನ.

ಟಿಪ್ಪಣಿ : ಹೋಲಿಕೆ = ನಾ.ಶಾ.: ೨೧-೬೫ರಿಂದ ೬೭; ಸಾ.ದ.: ೬-೧೦೧-೧೦೨; ಪ್ರತಾಪ: ೩-೧೫.

## ೮೩. ಅಪವಾದಲಕ್ಷಣ :

**ದೋಷಪ್ರಖ್ಯಾಽಪವಾದಃ ಸ್ಯಾತ್**

ಅನು : ದೋಷವನ್ನು ಎತ್ತಿ ಹೇಳುವುದು 'ಅಪವಾದ'.

ವ್ಯಾಖ್ಯೆ : ಉದಾ:- [ರತ್ನಾ: ಪು. ೧೫೩, ೧೬೨]: 'ಸುಸಂಗತಾ-ಸಾ ಖು ತವಸ್ಸಿಣೀ ಭಟ್ಟಿಣೀಏ ಉಜ್ಜಇಣಿಂ ಣೀಅದಿತ್ತಿ ಪವಾದಂ ಕರಿಅ ಉವತ್ಥಿದೇ ಅದ್ಧರತ್ತೇ ಣ ಜಾಣೀಅದಿ ಕಹಿಂಪಿ ಣೀದೇತ್ತಿ । [ಆ ತಪಸ್ವಿನಿ (ಸಾಗರಿಕೆ)ಯು ಉಜ್ಜಯಿನಿಗೆ ಕಳುಹಿಸಲ್ಪಟ್ಟಳೆಂದು ಸುದ್ದಿ ಹುಟ್ಟಿಸಿದ ಭರ್ತ್ರಿಯು ಆಕೆಯನ್ನು ಅರ್ಧರಾತ್ರಿಯಲ್ಲಿ ಎಲ್ಲಿ ಕಳುಹಿಸಿದಳೆಂಬುದು ತಿಳಿಯದು.] ವಿದೂ.-(ಸೋದ್ವೇಗಂ) ಅದಿಣಿಗ್ಘಿಣಂ ಕ್ಖು ಕಿದಂ ದೇವೀಏ। [ದೇವಿಯು ಅತಿ ನಿರ್ಘೃಣವಾದುದನ್ನು ಮಾಡಿದಳು]'-ಮತ್ತು, 'ಭೋ, ವಅಸ್ಸ ಮಾ ಖು ಅಣ್ಣಾವಾ ಸಂಭಾವೇಹಿ। ಮಾ ಖು ದೇವೀಏ ಉಜ್ಜಇಣೀಏ ಪೇಸಿದಾ । ಅದೋ ಅಪ್ಪಿಅಂ ತ್ತಿ ಕಹಿದಂ । [ಎಲೈ ಮಿತ್ರ, ಖಂಡಿತವಾಗಿ ಬೇರೆ ಭಾವಿಸಬೇಡ. ನಿಶ್ಚಯವಾಗಿ ದೇವಿಯು ಆಕೆಯನ್ನು ಉಜ್ಜಯಿನಿಗೆ ಕಳುಹಿಸಿದಳೆಂದು ಕೇಳುತ್ತೇನೆ. ಆದ್ದರಿಂದಲೇ ನಾನು 'ಅಪ್ರಿಯ'ವೆಂದು ಹೇಳಿದೆ.] ರಾಜಾ-ಅಹೊ, ನಿರನುರೋಧಾ ಮಯಿ ದೇವೀ । [ದೇವಿ ನನ್ನಲ್ಲಿ ಕ್ರೂರಳಾಗಿದ್ದಾಳೆ.]'-ಹೀಗೆ ವಾಸವದತ್ತೆಯಲ್ಲಿನ ದೋಷವನ್ನು ಎತ್ತಿಹೇಳುವುದು 'ಅಪವಾದ'.

ಮತ್ತು-[ವೇಣೀ : ಪು. ೧೫೭] : 'ಯುಧಿಷ್ಠಿರಃ-ಪಾಂಚಾಲಕ, ಕಚ್ಚಿದಾಸಾದಿತಾ ತಸ್ಯ ದುರಾತ್ಮನಃ ಕೌರವಾಪಸದಸ್ಯ ಪದವೀ । [ಪಾಂಚಾಲಕ, ಆ ದುರಾತ್ಮನಾದ ಕೌರವಕಲಂಕನ ಹಾದಿಯು ತಿಳಿಯಿತೆ?] ಪಾಂಚಾ-ನ ಕೇವಲಂ ಪದವೀ । ಸ ಏವ ದುರಾತ್ಮಾ ದೇವೀಕೇಶಪಾಶಸ್ಪರ್ಶಪಾತಕಪ್ರಧಾನಹೇತುರುಪಲಬ್ಧಃ ।[ಕೇವಲ ಹಾದಿಯಲ್ಲ; ದೇವಿಯ ಕೇಶಪಾಶಸ್ಪರ್ಶದ ಪಾತಕಕ್ಕೆ ಪ್ರಧಾನಕಾರಣನಾದ ಆ ದುರಾತ್ಮನೂ ದೊರೆತನು.]' ಹೀಗೆ ದುರ್ಯೋಧನನ ದೋಷವನ್ನು ಎತ್ತಿಹೇಳುವುದು 'ಅಪವಾದ'.

ಟಿಪ್ಪಣಿ: ಹೋಲಿಕೆ = ನಾ.ಶಾ.:೭೨-೯೨; ಸಾ.ದ.: ೬-೧೦೨; ಪ್ರತಾಪ: ೩-೧೫.

## ೮೪. ಸಂಫೇಟಲಕ್ಷಣ :

ಸಂಫೇಟೋ ರೋಷಭಾಷಣಮ್ ।

ಅನು : ರೋಷದ ಮಾತು 'ಸಂಫೇಟ'.

ವ್ಯಾಖ್ಯೆ : ಉದಾ-[ವೇಣೀ : ಪು. ೧೬೫; ೬-೧೦, ೧೧] : 'ಭೋ ಕೌರವರಾಜ, ಕೃತಂ ಬಂಧುನಾಶದರ್ಶನಮನ್ಯುನಾ । ಮೈವಂ ವಿಷಾದಂ ಕೃಥಾಃ । ಪರ್ಯಾಪ್ತಾಃ ಪಾಂಡವಾಃ ಸಮರಾಯಾಹಮ ಸಹಾಯ ಇತಿ।,

ಪಂಚಾನಾಂ ಮನ್ಯಸೇಽಸ್ಮಾಕಂ ಯಂ ಸುಯೋಧಂ ಸುಯೋಧನ।
ದಂಶಿತಸ್ಯಾತ್ತಶಸ್ತ್ರಸ್ಯ ತೇನ ತೇಽಸ್ತು ರಣೋತ್ಸವಃ॥

[ಕೌರವರಾಜ, ಬಂಧುಗಳ ನಾಶವನ್ನು ನೋಡಿ ಉಂಟಾದ ಕೋಪ ಸಾಕು. ಯುದ್ಧದಲ್ಲಿ ಪಾಂಡವರು ಸಬಲರು, ನಾನು ಅಸಹಾಯಕ-ಎಂದು ವಿಷಾದಪಡಬೇಡ. ಎಲೈ ಸುಯೋಧನ, ನಾವು ಐವರಲ್ಲಿ ಯಾವನು ನಿನಗೆ ಸಮಯೋಧನೆಂದು ತೋರುವನೊ, ಕವಚಾಸ್ತ್ರಸಮೇತನಾದ ಆತನೊಡನೆ ನಿನ್ನ ರಣೋತ್ಸವವಾಗಲಿ.]

ರಾಜಾ-ಕರ್ಣದುಃಶಾಸನವಧಾತ್ತುಲ್ಯಾವೇವ ಯುವಾಂ ಮಮ।
ಅಪ್ರಿಯೋಽಪಿ ಪ್ರಿಯೋ ಯೋದ್ಧುಂ ತ್ವಮೇವ ಪ್ರಿಯಸಾಹಸಃ॥

[ಕರ್ಣದುಃಶಾಸನರನ್ನು ಕೊಂದಿರುವ ಕಾರಣ, (ಅರ್ಜುನ ಮತ್ತು ನೀನು) ನೀವಿಬ್ಬರೂ ನನಗೆ ಸಮಾನರೇ. ಆದರೂ ಸಾಹಸಪ್ರಿಯನಾದ ನೀನೇ, ಅಪ್ರಿಯನಾಗಿದ್ದರೂ, ಯುದ್ಧಮಾಡುವುದಕ್ಕೆ ಪ್ರಿಯನು.]'-ಹೀಗೆ ಪರಸ್ಪರ ಕ್ರೋಧ ತಿರಸ್ಕಾರ ಕಠಿನವಾಕ್ಯ ಕಲಹಪ್ರಸ್ತಾಪಗಳಿಂದ ಘೋರ ಸಂಗ್ರಾಮಕ್ಕೆ ಸಿದ್ಧರಾದ ಭೀಮದುರ್ಯೋಧನರೊಳಗಿನ ಅನ್ಯೋನ್ಯವಾದ ರೋಷಭಾಷಣವು, ವಿಜಯಬೀಜವನ್ನು ಹೊಂದಿದೆ. ಇದು 'ಸಂಫೇಟ'.

ಟಿಪ್ಪಣಿ : ಹೋಲಿಕೆ = ಸಾ.ಶಾ. : ೨೧-೯೨; ಸಾ.ದ. : ೬-೧೦೨; ಪ್ರತಾಪ : ೩-೧೫.

## ೮೫. ವಿದ್ರವಲಕ್ಷಣ :

ವಿದ್ರವೋ ವಧಬಂಧಾದಿಃ

ಅನು : ಕೊಲೆ ಸೆರೆಹಿಡಿಯುವುದು ಇತ್ಯಾದಿಗಳು 'ವಿದ್ರವ'.

ವ್ಯಾಖ್ಯೆ : ಉದಾ- [ಛಲಿತರಾಮ : ಒಂದು ಅನುಪಲಬ್ಧರೂಪಕ.] :

'ಯೇನಾವೃತ್ಯ ಮುಖಾನಿ ಸಾಮ ಪಠತಾಮತ್ಯಂತಮಾಯಾಸಿತಂ
ಬಾಲ್ಯೇ ಯೇನ ಹೃತಾಕ್ಷಸೂತ್ರವಲಯಪ್ರತ್ಯರ್ಪಣೈಃ ಕ್ರೀಡಿತಮ್।
ಯುಷ್ಮಾಕಂ ಹೃದಯಂ ಸ ಏಷ ವಿಶಿಖೈರಾಪೂರಿತಾಂಸಸ್ಥಲೋ
ಮೂರ್ಛಾಘೋರತಮಃಪ್ರವೇಶವಿವಶೋ ಬದ್ಧ್ವಾ ಲವೋ ನೀಯತೇ॥'

[ಯಾವ ಲವನು ಬಾಲ್ಯದಲ್ಲಿ - ಸಾಮವೇದವನ್ನು ಪಠಿಸುತ್ತಿದ್ದ ನಿಮ್ಮ ಮುಖವನ್ನು ಮುಚ್ಚಿ ತುಂಬ ತೊಂದರೆ ಕೊಡುತ್ತಿದ್ದನೊ, ನಿಮ್ಮ ರುದ್ರಾಕ್ಷಮಾಲೆಯನ್ನು ಅಪಹರಿಸುತ್ತ ಪುನಃ ಹಿಂದಕ್ಕೆ ಕೊಟ್ಟು ಆಟವಾಡುತ್ತಿದ್ದನೊ, ನಿಮ್ಮ ಹೃದಯವಾದ ಆತನು, ಭುಜಗಳು ಬಾಣಗಳಿಂದ ತುಂಬಿರಲು ಮೂರ್ಛೆಹೋಗಿದ್ದಾನೆ. ಘೋರ ಮೂರ್ಛೆಗೆ ಸಂದು ವಿವಶನಾಗಿರುವ ಆತನನ್ನು ಕಟ್ಟಿ ಕೊಂಡೊಯ್ಯುತ್ತಿದ್ದಾರೆ.]

ಮತ್ತು - [ರತ್ನಾ : ೪-೧೪, ಪು. ೧೮೪] :

'ಹರ್ಮ್ಯಾಣಾಂ ಹೇಮಶೃಂಗಶ್ರಿಯಮಿವ ಶಿಖರೈರರ್ಚಿಷಾಮಾದಧಾನಃ
ಸಾಂದ್ರೋದ್ಯಾನದ್ರುಮಾಗ್ರಗ್ಲಪನಪಿಶುನಿತಾತ್ಯಂತತೀವ್ರಾಭಿತಾಪಃ।
ಕುರ್ವನ್ಕ್ರೀಡಾಮಹೀಧ್ರಂ ಸಜಲಜಲಧರಶ್ಯಾಮಲಂ ಧೂಮಪಾತೈ -
ರೇಷ ಪ್ಲೋಷಾರ್ತಯೋಷಿಜ್ಜನ ಇಹ ಸಹಸೈವೋತ್ಥಿತೋಽಂತಃಪುರೇಽಗ್ನಿಃ॥'

[ಈ ಅಂತಃಪುರಕ್ಕೆ ಒಮ್ಮೆಲೆ ಬೆಂಕಿ ಹತ್ತಿದೆ. ಬೆಂಕಿಯ ನಾಲಗೆಗಳು ರಾಜಗೃಹಗಳಿಗೆ ಸ್ವರ್ಣಗಿರಿಯ ಶೋಭೆಯನ್ನಿತ್ತಿವೆಯೊ ಎಂಬಂತಿವೆ. ಸಾಂದ್ರವಾದ ಉದ್ಯಾನವೃಕ್ಷಗಳ ತುದಿಯೆಲ್ಲ ಉರಿದು ತೀವ್ರ ಸಂತಾಪವನ್ನು ಸೂಚಿಸುತ್ತಿವೆ. ಹೊಗೆ ತುಂಬಿರಲು ಕ್ರೀಡಾಶೈಲವು ನೀರುತುಂಬಿದ ಕಪ್ಪುಮೋಡವಂತಾಗಿವೆ. ಸ್ತ್ರೀಜನರೆಲ್ಲ ಜ್ವಾಲೆಯಿಂದ ಆರ್ತರಾಗಿದ್ದಾರೆ.] – ಎಂಬುದು ಮತ್ತು, 'ವಾಸವ – ಅಜ್ಜಉತ್ತ, ಣ ಕ್ಖು ಅಹಂ ಅತ್ತಣೋ ಕಾರಣಾದೋ ಭಣಾಮಿ । ಏಸಾ ಮಏ ಣಿಗ್ಘಿಣ ಹಿಅಏಏ ಸಂಜದಾ ಸಾಗರಿಆ ವಿವಜ್ಜದಿ ।' [ಆರ್ಯಪುತ್ರ, ನಾನು ನನ್ನ ವಿಷಯಕ್ಕಾಗಿ ಹೇಳುವುದಿಲ್ಲ. ದಯಾರಹಿತಹೃದಯೆಯಾದ ನನ್ನಿಂದ ಸಾಗರಿಕೆಯು ವಿಪತ್ತಿಗೊಳಗಾಗುವಳು.] – ಈ ಮುಂತಾದ ಪದಬಂಧ ಅಗ್ನಿಗಳಿಂದ 'ವಿದ್ರವ'.

ಟಿಪ್ಪಣಿ : ನಾ.ಶಾ., ಸಾ.ದ. ಗಳಲ್ಲಿ 'ಗರ್ಭಸಂಧಿ'ಯ 'ಸಂಭ್ರಮ' [೧–೭೯] ಎಂಬ ಅಂಗಕ್ಕೆ ಬದಲಾಗಿ 'ವಿದ್ರವ' ಎಂಬ ಅಂಗ ಬಂದಿದೆ. ಇಲ್ಲಿನ 'ವಿದ್ರವ' ಎಂಬ ಅಂಗಕ್ಕೆ ಬದಲಾಗಿ ಅವುಗಳಲ್ಲಿ 'ಖೇದ' ಎಂಬ ಅಂಗ ಬಂದಿದೆ. [ನೋಡಿ : ನಾ.ಶಾ. : ೨೧–೯೫; ಸಾ.ದ. : ೬–೧೦೫]. ಅದರ ಲಕ್ಷಣ : ಮನಸ್ಸಿನ ವ್ಯಾಪಾರ ಶಾರೀರಕ ಚೇಷ್ಟೆಗಳು ಇವುಗಳಿಂದ ಉಂಟಾಗುವ ಶ್ರಮ ಖೇದ. ಅದರೆ ನಾ.ಶಾ. ದಲ್ಲಿ ಇಲ್ಲಿನ 'ದ್ರವ'ಕ್ಕೇ [೮೬ನೇ ಖಂಡ] 'ವಿದ್ರವ' ಎಂಬ ಹೆಸರಿದೆ.

ಹೋಲಿಕೆ = ಪ್ರತಾಪ : ೩–೧೫.

## ೮೬. ದ್ರವಲಕ್ಷಣ :

**ದ್ರವೋ ಗುರುತಿರಸ್ಕೃತಿಃ ॥ ೪೫ ॥**

ಅನು : ಹಿರಿಯರನ್ನು ತಿರಸ್ಕರಿಸುವುದು 'ದ್ರವ'.

ವ್ಯಾಖ್ಯೆ : ಉದಾಃ–[ಉತ್ತರ : ೫–೩೪] :

'ವೃದ್ಧಾಸ್ತೇನ ವಿಚಾರಣೀಯಚರಿತಾಸ್ತಿಷ್ಠಂತು ಹುಂ ವರ್ತತೇ
ಸುಂದಸ್ತ್ರೀದಮನೇಽಪ್ಯಖಂಡಯಶಸೋ ಲೋಕೇ ಮಹಾಂತೋ ಹಿ ತೇ।
ಯಾನಿ ತ್ರೀಣ್ಯಕುತೋಮುಖಾನ್ಯಪಿ ಪದಾನ್ಯಾಸನ್ ಖರಾಯೋಧನೇ
ಯದ್ವಾ ಕೌಶಲಮಿಂದ್ರಸೂನುದಮನೇ ತತ್ರಾಪ್ಯಭಿಜ್ಞೋ ಜನಃ॥'

[ಅವರು ಹಿರಿಯರು; ಅವರ ಚಾರಿತ್ಯವನ್ನು ವಿಚಾರಿಸತಕ್ಕದ್ದಲ್ಲ; ಆಗಲಿ. ಸುಂದಸ್ತ್ರೀ(ತಾಟಕಿ)ಯನ್ನು ದಮನ ಮಾಡಿದರೂ ಕೂಡ ಲೋಕದಲ್ಲಿ ಅವರ ಕೀರ್ತಿ ಕಡಿಮೆಯಾಗಲಿಲ್ಲ. ಮಹಾಪುರುಷರಲ್ಲವೇ ಅವರು? ಖರನೊಡನೆ ಯುದ್ಧಮಾಡುವಾಗ ಮುಖ ತಿರುಗಿಸದೆ ಮೂರು ಹೆಜ್ಜೆ ಹಿಂದಕ್ಕೆ ಸರಿದದ್ದು ಮತ್ತು ವಾಲಿಯ ವಧೆಯಲ್ಲಿ ಕೌಶಲ ತೋರಿದ್ದು – ಎಲ್ಲರಿಗೂ ತಿಳಿದದ್ದೇ ಆಗಿದೆ.] - ಹೀಗೆ ಲವನು ಗುರುವಾದ ರಾಮನನ್ನು ತಿರಸ್ಕರಿಸುವುದು 'ದ್ರವ'.

ಮತ್ತು – [ವೇಣೀ : ೬–೨೦] :'ಯುಧಿಷ್ಠಿರಃ–ಭಗವಾನ್ ಕೃಷ್ಣಾಗ್ರಜ ಸುಭದ್ರಾಭ್ರಾತಃ,
ಜ್ಞಾತಿಪ್ರೀತಿರ್ಮನಸಿ ನ ಕೃತಾ ಕ್ಷತ್ರಿಯಾಣಾಂ ನ ಧರ್ಮೋ
ರೂಢಂ ಸಖ್ಯಂ ತದಪಿ ಗಣಿತಂ ನಾನುಜಸ್ಯಾರ್ಜುನೇನ।
ತುಲ್ಯಃ ಕಾಮಂ ಭವತು ಭವತಃ ಶಿಷ್ಯಯೋಃ ಸ್ನೇಹಬಂಧಃ
ಕೋಽಯಂ ಪಂಥಾ ಯದಸಿ ವಿಗುಣೋ ಮಂದಭಾಗ್ಯೇ ಮಯೀತ್ಥಮ್ ॥'

[ಭಗವಾನ್ ಕೃಷ್ಣಾಗ್ರಜ ಸುಭದ್ರಾಸಹೋದರ, (ನೀನು) ಬಂಧುಪ್ರೀತಿಯನ್ನು ಮನಸ್ಸಿನಲ್ಲಿಡಲಿಲ್ಲ; ಕ್ಷತ್ರಿಯ ಧರ್ಮವನ್ನೂ ಆಚರಿಸಲಿಲ್ಲ; ಸಹೋದರನಾದ ಕೃಷ್ಣನ ಮತ್ತು ಅರ್ಜುನನ ನಡುವೆ ರೂಢವಾದ ಸ್ನೇಹವನ್ನೂ ಲೆಕ್ಕಿಸಲಿಲ್ಲ; ನಿನ್ನ ಶಿಷ್ಯರುಗಳಿಬ್ಬರಲ್ಲಿಯೂ (ಭೀಮದುರ್ಯೋಧನರು) ಸಮಾನವಾದ ಪ್ರೇಮವಿರಬೇಕಾದದ್ದು ಸರಿ. ಆದರೆ ಮಂದಭಾಗ್ಯನಾದ ನನ್ನನ್ನು ಕುರಿತು ವಿರೋಧವನ್ನು ತೋರಿಸುವ ಈ ಹಾದಿ ಯಾವುದು?] – ಹೀಗೆ ಯುಧಿಷ್ಠಿರನು ಗುರುವಾದ ಬಲಭದ್ರನನ್ನು ತಿರಸ್ಕರಿಸುವುದು 'ದ್ರವ'.

ಟಿಪ್ಪಣಿ : ನಾ.ಶಾ. ದಲ್ಲಿ ಇದನ್ನು 'ವಿದ್ರವ' ಎಂದು ಕರೆಯಲಾಗಿದೆ.

ಹೋಲಿಕೆ = ನಾ.ಶಾ. : ೨೧-೯೩; ಸಾ.ದ.: ೬-೧೦೩; ಪ್ರತಾಪ : ३-೧೫.

## ೮೭. ಶಕ್ತಿಲಕ್ಷಣ :

**ವಿರೋಧಶಮನಂ ಶಕ್ತಿಃ**

ಅನು : ವಿರೋಧವನ್ನು ಶಾಂತಗೊಳಿಸುವುದು 'ಶಕ್ತಿ'.

ವ್ಯಾಖ್ಯೆ : ಉದಾ–[ರತ್ನಾ : ೪-೧] : 'ರಾಜಾ –

ಸವ್ಯಾಜೈಃ ಶಪಥೈಃ ಪ್ರಿಯೇಣ ವಚಸಾ ಚಿತ್ತಾನುವೃತ್ತ್ಯಾಧಿಕಂ
ವೈಲಕ್ಷ್ಯೇಣ ಪರೇಣ ಪಾದಪತನೈರ್ವಾಕ್ಯೈಃ ಸಖೀನಾಂ ಮುಹುಃ ।
ಪ್ರತ್ಯಾಸತ್ತಿಮುಪಾಗತಾ ನ ಹಿ ತಥಾ ದೇವೀ ರುದತ್ಯಾ ಯಥಾ
ಪ್ರಕ್ಷಾಲ್ಯೇವ ತಯೈವ ಬಾಷ್ಪಸಲಿಲೈಃ ಕೋಪೋಽಪನೀತಃ ಸ್ವಯಮ್ ॥'

[ಬರಿಯ ಶಪಥಗಳಿಂದ, ಪ್ರಿಯವಾಕ್ಯಗಳಿಂದ, ಅವಳ ಮನಸ್ಸನ್ನೆ ಅನುಸರಿಸುವುದರಿಂದ, ವಿಶೇಷ ವ್ಯಸನದೊಡನೆ ಕಾಲಿಗೆ ಬೀಳುವುದರಿಂದ ಅಥವಾ ಸಖಿಯರು ಮತ್ತೆ ಮತ್ತೆ ಹೇಳುತ್ತಿದ್ದ ಸಂತೈಕೆಯ ಮಾತುಗಳಿಂದ – ಈ ಯಾವುದರಿಂದಲೂ ದೇವಿ ವಾಸವದತ್ತೆಯು ಪ್ರಸನ್ನಳಾಗಲಿಲ್ಲ. ಹಾಗೇ ಅಳುತ್ತ ಕಂಬನಿಯಿಂದ ಕೋಪವನ್ನು ತೊಳೆದುಕೊಂಡಂತೆ ತಾನೇ ನಿವಾರಿಸಿಕೊಂಡಳು] - ಹೀಗೆ ಸಾಗರಿಕಾಸಮಾಗಮಕ್ಕೆ ವಿರುದ್ಧಳಾದ ವಾಸವದತ್ತೆಯ ಕೋಪವು ಶಾಂತವಾಗುವುದು 'ಶಕ್ತಿ'.

ಮತ್ತು – [ಉತ್ತರ : ೬-೧೧] : 'ಲವಃ –

ವಿರೋಧೋ ವಿಶ್ರಾಂತಃ ಪ್ರಸರತಿ ರಸೋ ನಿರ್ವೃತಿಘನ –
ಸ್ತದೌದ್ಧತ್ಯಂ ಕ್ವಾಪಿ ವ್ರಜತಿ ವಿನಯಃ ಪ್ರಹ್ವಯತಿ ಮಾಮ್ ।
ಝಟಿತ್ಯಸ್ಮಿನ್ದೃಷ್ಟೇ ಕಿಮಪಿ ಪರವಾನಸ್ಮಿ ಯದಿ ವಾ
ಮಹಾರ್ಘಸ್ತೀರ್ಥಾನಾಮಿವ ಹಿ ಮಹತಾಂ ಕೋಽಪ್ಯತಿಶಯಃ ॥'

[ನಾನಿವನನ್ನು ನೋಡಿದೊಡನೆ ವಿರೋಧವು ಶಾಂತವಾಯಿತು. ಘನಶಾಂತಿಯ ಆನಂದವು ವ್ಯಾಪಿಸುತ್ತಿದೆ. ಔದ್ಧತ್ಯವು ಎಲ್ಲೊ ಮಾಯವಾಗುತ್ತಿದೆ. ವಿನಯವು ನನ್ನನ್ನು ಸೆಳೆಯುತ್ತಿದೆ. ಹೇಗೋ ನಾನು ಪರಾಧೀನನಾಗುತ್ತಿದ್ದೇನೆ. ಮಹಾತ್ಮರ ಮಹಿಮೆ ಮಹಾಕ್ಷೇತ್ರಗಳಂತೆ ಅನರ್ಘವಾದದ್ದು ಮತ್ತು ಪ್ರಭಾವಯುತವಾದದ್ದು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೯೩; ಸಾ.ದ.: ೬-೧೦೪; ಪ್ರತಾಪ : ३-೧೫.

## ೮೮. ದ್ಯುತಿಲಕ್ಷಣ :

**ತರ್ಜನೋದ್ವೇಜನೇ ದ್ಯುತಿಃ ।**

ಅನು : ಬೆದರಿಸುವುದು ಉದ್ವೇಗಗೊಳಿಸುವುದು 'ದ್ಯುತಿ'.

ವ್ಯಾಖ್ಯೆ : ಉದಾ:- [ವೇಣೀ : ಪು. ೧೬೧, ೬-೭] : 'ಏತಚ್ಚ ವಚನಮುಪಶ್ರುತ್ಯ ರಾಮಾನುಜಸ್ಯ ಸಕಲನಿಕುಂಜಪೂರಿತಾಶಾತಿರಿಕ್ತಮುದ್ಭ್ರಾಂತಸಲಿಲಚರಶತಸಂಕುಲಂ ತ್ರಾಸೋದ್ವೃತ್ತ ನಕ್ರಗ್ರಾಹಮಾಲೋಡ್ಯ ಸರಃಸಲಿಲಂ ಭೈರವಂ ಚ ಗರ್ಜಿತ್ವಾ ಕುಮಾರವೃಕೋದರೇಣಾಭಿಹಿತಮ್,

ಜನ್ಮೇಂದೋರಮಲೇ ಕುಲೇ ವ್ಯಪದಿಶಸ್ಯದ್ಯಾಪಿ ಧತ್ಸೇ ಗದಾಂ
ಮಾಂ ದುಃಶಾಸನಕೋಷ್ಣಶೋಣಿತಸುರಾಕ್ಷೀಬಂ ರಿಪುಂ ಭಾಷಸೇ ।
ದರ್ಪಾಂಧೋ ಮಧುಕೈಟಭದ್ವಿಷಿ ಹರಾವಪ್ಯುದ್ಧತಂ ಚೇಷ್ಟಸೇ
ಮತ್ತ್ರಾಸಾನ್ನೃಪಶೋ ವಿಹಾಯ ಸಮರಂ ಪಂಕೇಽಧುನಾ ಲೀಯಸೇ ॥'

[ಕೃಷ್ಣನ ಈ ಮಾತನ್ನು ಕೇಳಿ ಕುಮಾರ ಭೀಮಸೇನನು – ಸರೋವರದ ನೀರು ತಳಮಳಿಸಿ ತುಳುಕಿ ದಡದ ಪೊದೆಗಳನ್ನೆಲ್ಲ ತುಂಬಿ ಹರಿಯುವಂತೆ, ನೂರಾರು ಜಲಚರಜಂತುಗಳು ಭ್ರಾಂತಿಪಡುವಂತೆ, ಮೀನು ಮೊಸಳೆಗಳು ಹೆದರಿ ದಡ ಸೇರುವಂತೆ – ಭಯಂಕರವಾಗಿ ಗರ್ಜಿಸಿ ಹೇಳಿದನು : ಅಕಲಂಕವಾದ ಚಂದ್ರವಂಶದಲ್ಲಿ ಹುಟ್ಟಿರುವೆನೆಂದು ನೆಪ ಹೇಳುತ್ತೀಯೆ. ಈಗಲೂ ಗದೆಯನ್ನು ಧರಿಸಿರುವೆ; ದುಃಶಾಸನನ ಬಿಸಿರಕ್ತದ ಮದ್ಯಪಾನಮಾಡಿ ಮತ್ತನಾದ ನನ್ನನ್ನು ಶತ್ರುವೆಂದು ಕರೆಯುವೆ. ಮದಾಂಧನಾಗಿ ಮಧುಕೈಟಭವೈರಿಯಾದ ಕೃಷ್ಣನಲ್ಲಿ ಕೂಡ ಒರಟುತನ ಮಾಡುವೆ. ಎಲೈ ನರಪಶುವೆ, ನನ್ನ ಹೆದರಿಕೆಯಿಂದ ಈಗ ಕಾಳಗವನ್ನು ಬಿಟ್ಟು ಕೆಸರಿನಲ್ಲಿ ಅಡಗಿಕೊಂಡಿರುವೆ.] – ಇಲ್ಲಿಂದ ಮೊದಲಾಗಿ 'ತ್ಯಕ್ತ್ವೋತ್ಥಿತಃ ಸರಭಸಂ' (ಸರೋವರವನ್ನು ಬಿಟ್ಟು ರಭಸದಿಂದ ಮೇಲೆದ್ದನು) – ಎಂಬಲ್ಲಿಯವರೆಗೆ ಕಠಿನವಾದ ಮಾತು ಮತ್ತು ಸರೋವರದ ನೀರು ತಳಮಳ ಗೊಳ್ಳುವಂತೆ ಮಾಡಿದುದು ಇವುಗಳಿಂದ ದುರ್ಯೋಧನನನ್ನು ಬೆದರಿಸುವುದು ರೇಗಿಸುವುದು ಬರುತ್ತವೆ; ಪಾಂಡವರ ವಿಜಯಕ್ಕೆ ಅನುಕೂಲವಾಗಿ ದುರ್ಯೋಧನನನ್ನು ಸರೋವರದಿಂದೆಬ್ಬಿಸುವ ಈ ಕಾರ್ಯ 'ದ್ಯುತಿ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೯೫; ಸಾ.ದ : ೬-೧೦೪; ಪ್ರತಾಪ : ३-೧೫.

## ೮೯. ಪ್ರಸಂಗಲಕ್ಷಣ :

**ಗುರುಕೀರ್ತನಂ ಪ್ರಸಂಗಃ**

ಅನು : ಹಿರಿಯರನ್ನು [ಅಥವಾ ಮಹತ್ತ್ವದ ವಸ್ತುವಿಷಯಗಳನ್ನು] ಹೊಗಳುವುದು [ಅಥವಾ ಎತ್ತಿಹೇಳುವುದು] 'ಪ್ರಸಂಗ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೮೦] : 'ದೇವ, ಯಾಸೌ ಸಿಂಹಲೇಶ್ವರೇಣ ಸ್ವದುಹಿತಾ ರತ್ನಾವಲೀ ನಾಮಾಯುಷ್ಮತೀ ವಾಸವದತ್ತಾಂ ದಗ್ಧಾಮುಪಶ್ರುತ್ಯ ದೇವಾಯ ಪೂರ್ವಪ್ರಾರ್ಥಿತಾ ಸತೀ ಪ್ರತಿದತ್ತಾ। [ದೇವ, ದೇವಿ ವಾಸವದತ್ತೆಯು ದಗ್ಧಳಾದಳೆಂದು ಕೇಳಿ, ಸಿಂಹಲೇಶ್ವರನು, ಹಿಂದೆ ತಮಗಾಗಿ ಕೇಳಿದ್ದ ತನ್ನ ಮಗಳಾದ ರತ್ನಾವಲಿಯೆಂಬ ಆಯುಷ್ಮತಿಯನ್ನು ಈಗ ಕೊಟ್ಟಿದ್ದಾನೆ; (ಅದಳೇ ಈಕೆ)]' – ಇಲ್ಲಿ, ರತ್ನಾವಲೀ ಲಾಭಕ್ಕೆ ಅನುಕೂಲವಾದ ಯೌಗಂಧರಾಯಣನ ಮಾತಿನಿಂದ ಹಿರಿಯರ ವಿಷಯ ಬಂದು ಪ್ರಸಂಗಾನುಸಾರವಾಗಿ ಅವರನ್ನು ಸ್ಮರಿಸುವ ಕಾರಣ 'ಪ್ರಸಂಗ'.

ಮತ್ತು – [ಮೃಚ್ಛ : ಪು. ೨೨೯, ೧೦-೧೨; ೨-೪ರಲ್ಲಿ ಪುನಃ ಬಂದಿದೆ] : 'ಚಾಂಡಾಲಕಃ – ಏಸ ಸಾಗಲದತ್ತಸ್ಸ ಸುಓ ಅಜ್ಜವಿಣಅದತ್ತಸ್ಸ ಣತ್ತೂ ಚಾಲುದತ್ತೋ ವಾವಾದಿದುಂ ವಜ್ಝಟ್ಠಾಣಂ ಣೀಅದಿ। ಏದೇಣ ಕಿಲ ಗಣಿಆ ವಸಂತಸೇಣಾ ಸುವಣ್ಣಲೋಭೇಣ ವಾವಾದಿದತ್ತಿ। [ಈತ ಸಾಗರದತ್ತನ ಪುತ್ರ, ಆರ್ಯ ವಿನಯದತ್ತನ ಪೌತ್ರ, ಚಾರುದತ್ತ; ಕೊಲೆಗಾಗಿ ವಧ್ಯಸ್ಥಾನಕ್ಕೆ ಕೊಂಡೊಯ್ಯಲ್ಪಡುತ್ತಿದ್ದಾನೆ. ಹಣದ ಆಸೆಯಿಂದ ಈತನು ವೇಶ್ಯೆ ವಸಂತಸೇನೆಯನ್ನು ಕೊಂದನಂತೆ.] ಚಾರುದತ್ತಃ –

ಮಖಶತಪರಿಪೂತಂ ಗೋತ್ರಮುದ್ಭಾಸಿತಂ ಯತ್ಸದಸಿ ನಿಬಿಡಚೈತ್ಯಬ್ರಹ್ಮಘೋಷೈಃ ಪುರಸ್ತಾತ್
ಮಮ ನಿಧನದಶಾಯಾಂ ವರ್ತಮಾನಸ್ಯ ಪಾಪೈಸ್ತದಸದೃಶಮನುಷ್ಯೈರ್ಘುಷ್ಯತೇ
ಘೋಷಣಾಯಾಮ್ ॥

[ಶತಯುಗಪರಿಪೂತವಾದ ಯಾವ ನಮ್ಮ ಕುಲದ ಕೀರ್ತಿ ಯಜ್ಞವೇದಿಕೆಗಳ ಮಂತ್ರಘೋಷಗಳಿಂದ ಬೆಳಗುತ್ತಿದ್ದಿತೋ ಅದೀಗ ನನ್ನ ಮರಣಕಾಲದಲ್ಲಿ ನಾನು ಬದುಕಿರುವಂತೆಯೇ ಪಾಪಿಗಳಾದ ಹೀನ ಜನರಿಂದ ಡಂಗುರವಾಗಿ ಘೋಷಿಸಲ್ಪಡುತ್ತಿವೆ.]' – ಹೀಗೆ ಚಾರುದತ್ತನು ಪ್ರಸಂಗವಶದಿಂದ ತನ್ನ ಹಿರಿಯ ವಂಶವನ್ನು ಕೀರ್ತಿಸುವುದು 'ಪ್ರಸಂಗ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೯೪; ಸಾ.ದ. : ೬-೧೦೪; ಪ್ರತಾಪ : ೩-೧೫.

## ೯೦. ಛಲನಲಕ್ಷಣ :

**ಛಲನಂ ಚಾವಮಾನನಮ್ ॥ ೪೬ ॥**

ಅನು : [ಯಾರೊಬ್ಬರನ್ನು] ಅವಮಾನಗೊಳಿಸುವುದು 'ಛಲನ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೬೨] : 'ರಾಜಾ–ಅಹೋ, ನಿರನುರೋಧಾಮಯಿ ದೇವೀ। [ದೇವಿಯು ನನ್ನ ಬಗೆಗೆ ನಿಷ್ಕರುಣಳಾಗಿದ್ದಾಳೆ]'- ಹೀಗೆ, ವಾಸವದತ್ತೆಯು ಒಪ್ಪದಿರುವಾಗ, ವತ್ಸರಾಜನು ಆಕೆಯನ್ನು ಅವಜ್ಞೆ ಮಾಡುವುದು 'ಛಲನ'.

ಮತ್ತು–[ರಾಮಾಭ್ಯುದಯ : ೭ನೆಯ ಶತಮಾನದ ಕೊನೆಯಲ್ಲಿ ಯಶೋವರ್ಮನಿಂದ ರಚಿತವಾದುದೆಂದು ತಿಳಿಯುವ ಅಪ್ರಕಟಿತರೂಪಕ] : ಸೀತೆಯನ್ನು ಪರಿತ್ಯಜಿಸಿ ಅವಮಾನಗೊಳಿಸುವುದು 'ಛಲನ'.

ಟಿಪ್ಪಣಿ : ಇದಕ್ಕೆ ನಾ.ಶಾ., ಸಾ.ದ.ಗಳಲ್ಲಿ 'ಛಾದನ' ಎಂಬ ಹೆಸರೂ, ಪ್ರತಾಪ.ದಲ್ಲಿ 'ಚಲನ' ಎಂಬ ಹೆಸರೂ ಇದೆ.

ಹೋಲಿಕೆ = ನಾ.ಶಾ. : ೨೧-೯೭; ಸಾ.ದ. : ೬-೧೦೭; ಪ್ರತಾಪ : ೩-೧೫.

## ೯೧. ವ್ಯವಸಾಯ ಲಕ್ಷಣ:

**ವ್ಯವಸಾಯಃ ಸ್ವಶಕ್ತ್ಯುಕ್ತಿಃ**

ಅನು : ತನ್ನ ಶಕ್ತಿಯ [ಬಗೆಗೆ ಹೇಳಿಕೊಳ್ಳುವ] ಮಾತು 'ವ್ಯವಸಾಯ'.

ವ್ಯಾಖ್ಯೆ : ಉದಾ:- [ರತ್ನಾ : ೪-೮, ೯] : 'ಐಂದ್ರಜಾಲಿಕಃ-

ಕಿಂ ಧರಣೀಏ ಮಿಅಂಕೋ ಆಆಸೇ ಮಹಿಹರೋ ಜಲೇ ಜಲಣೋ।
ಮಜ್ಝಣ್ಹಮ್ಮಿ ಪಓಸೋ ದಾವಿಜ್ಜಉ ದೇಹಿ ಅಣತ್ತಿಂ ॥

ಅಹವಾ ಕಿಂ ಬಹುಣಾ ಜಂಪಿಏಣ,

ಮಜ್ಝ ಪಇಣ್ಣಾ ಏಸಾ ಭಣಾಮಿ ಹಿಅಏಣ ಜಂ ಮಹಸಿ ದಟ್ಠುಂ।
ತಂ ತೇ ದಾವೇಮಿ ಫುಡಂ ಗುರುಣೋ ಮಂತಪ್ಪಹಾವೇಣ ॥'

[ಭೂಮಿಯಲ್ಲಿ ಚಂದ್ರನನ್ನು, ಆಕಾಶದಲ್ಲಿ ಪರ್ವತವನ್ನು, ಜಲದಲ್ಲಿ ಅಗ್ನಿಯನ್ನು, ಮಧ್ಯಾಹ್ನದಲ್ಲಿ ಪ್ರದೋಷವನ್ನು ತೋರಿಸಬೇಕೇನು? –ಆಜ್ಞೆಯನ್ನು ಕೊಡು. ಅಥವಾ, ಹೆಚ್ಚು ಹೇಳಲೇಕೆ? ನನ್ನ ಪ್ರತಿಜ್ಞೆ ಇದು, ಹೇಳುತ್ತೇನೆ : ನಿನಗೆ ಏನನ್ನು ನೋಡಬೇಕೆಂಬ ಇಚ್ಛೆಯಿದ್ದರೆ ಅದನ್ನು ಗುರುವಿನ ಮಂತ್ರಗಳ ಮಹಿಮೆಯಿಂದ, ಸ್ಪಷ್ಟವಾಗಿ ತೋರಿಸುತ್ತೇನೆ.] – ಹೀಗೆ ಐಂದ್ರಜಾಲಿಕನು ಮಿಥ್ಯವಾದ ಅಗ್ನಿ ಸಂಭ್ರಮದಿಂದ ವತ್ಸರಾಜನ

ಹೃದಯಸ್ಥೆಯಾದ ಸಾಗರಿಕೆಯ ದರ್ಶನಕ್ಕೆ ಅನುಕೂಲವಾದ ತನ್ನ ಶಕ್ತಿಯನ್ನು ಪ್ರಕಟಿಸುತ್ತಾನೆ. ಇದು 'ವ್ಯವಸಾಯ'.

ಮತ್ತು-[ವೇಣೀ : ೬-೬] :

'ನೂನಂ ತೇನಾದ್ಯ ವೀರೇಣ ಪ್ರತಿಜ್ಞಾಭಂಗಭೀರುಣಾ।

ಬಧ್ಯತೇ ಕೇಶಪಾಶಸ್ತೇ ಸ ಚಾಸ್ಯಾಕರ್ಷಣೇ ಕ್ಷಮಃ॥

[ಪ್ರತಿಜ್ಞಾಭಂಗಕ್ಕೆ ಹೆದರುವ ವೀರನಾದ ಭೀಮಸೇನನು ನಿಶ್ಚಯವಾಗಿ ಇಂದು ನಿನ್ನ ಕೇಶಪಾಶವನ್ನು ಕಟ್ಟುತ್ತಾನೆ. ಮತ್ತು ಅವನು ಅದನ್ನು ಕಟ್ಟುವಲ್ಲಿ ಪೂರ್ಣ ಸಮರ್ಥನಾಗಿದ್ದಾನೆ.]' – ಹೀಗೆ ಯುಧಿಷ್ಠಿರನು ತನ್ನ ದಂಡ ಶಕ್ತಿಯನ್ನು ವರ್ಣಿಸುವುದು 'ವ್ಯವಸಾಯ'.

ಟಿಪ್ಪಣಿ : ನಾ.ಶಾ.ದ ಪ್ರಕಾರ ಪ್ರತಿಜ್ಞಾದೋಷದಿಂದ ಬಂದಿದ್ದು 'ವ್ಯವಸಾಯ' ; ಸಾ.ದ.ದ ಪ್ರಕಾರ ಪ್ರತಿಜ್ಞೆಯ ಕಾರಣದಿಂದ ಬಂದಿದ್ದು 'ವ್ಯವಸಾಯ'.

ಹೋಲಿಕೆ = ನಾ.ಶಾ. : ೨೧-೯೪ ; ಸಾ.ದ. : ೬-೧೦೩ ; ಪ್ರತಾಪ : ೩-೧೫.

## ೯೨. ವಿರೋಧನಲಕ್ಷಣ :

೧ಸಂರಬ್ಧಾನಾಂ೧ ವಿರೋಧನಮ್ ।

ಅನು : ಉತ್ತೇಜಿತರಾದವರ [ಸ್ವಸಾಮರ್ಥ್ಯ ಕೀರ್ತನವು] 'ವಿರೋಧನ'.

ವ್ಯಾಖ್ಯೆ : ಉದಾ:- [ವೇಣೀ : ಪು. ೧೪೭, ೫-೩೦ ರಿಂದ ३೪ ; ३-೨೦ರಲ್ಲೂ ಈ ಉದಾ. ಭಾಗಶಃ ಬಂದಿದೆ.] : 'ರಾಜಾ-ರೇರೇ ಮರುತ್ತನಯ, ಕಿಮೇವಂ ವೃದ್ಧಸ್ಯ ರಾಜ್ಞಃ ಪುರತೋ ನಿಂದಿತವ್ಯಮಾತ್ಮಕರ್ಮ ಶ್ಲಾಘಸೇ। ಅಪಿ ಚ,

ಕೃಷ್ಟಾ ಕೇಶೇಷು ಭಾರ್ಯಾ ತವ ತವ ಚ ಪಶೋಸ್ತಸ್ಯ ರಾಜ್ಞಸ್ತಯೋರ್ವಾ

ಪ್ರತ್ಯಕ್ಷಂ ಭೂಪತೀನಾಂ ಮಮ ಭುವನಪತೇರಾಜ್ಞಯಾ ದ್ಯೂತದಾಸೀ।

ಅಸ್ಮಿನ್ವೈರಾನುಬಂಧೇ ತವ ಕಿಮಪಕೃತಂ ತೈರ್ಹತಾ ಯೇ ನರೇಂದ್ರಾ

ಬಾಹ್ವೋರ್ವೀರ್ಯಾತಿಸಾರದ್ರವಿಣಗುರುಮದಂ ಮಾಮಜಿತ್ವೈವ ದರ್ಪಃ॥

[ಎಲೆಲೆ ಮರುತ್ತನಯ, ವೃದ್ಧರಾಜನ ಎದುರಿನಲ್ಲಿ ನಿನ್ನ ನಿಂದ್ಯವಾದ ಕರ್ಮವನ್ನು ಏತಕ್ಕಾಗಿ ಶ್ಲಾಘಿಸಿ ಕೊಳ್ಳುತ್ತಿದ್ದೀಯೆ? ಮತ್ತೂ ಪಶುವಾದ ನಿನ್ನ ಮತ್ತು ಆ ನಿನ್ನ ರಾಜನ ಮತ್ತು ಇಬ್ಬರಿಗೂ ಮಡದಿಯಾದ, ದ್ಯೂತದಲ್ಲಿ ನಮಗೆ ದಾಸಿಯಾದ ದ್ರೌಪದಿಯನ್ನು, ಭುವನಪತಿಯಾದ ನಾನು, ರಾಜರುಗಳ ಎದುರಿನಲ್ಲಿ ಮುಡಿ ಎಳೆಸಿದೆ. ಈ ದ್ವೇಷದ ಸಂಬಂಧದಲ್ಲಿ ನೀನು ಕೊಂದಿರುವ ಯಾವ ನರೇಂದ್ರರಿಂದ ನಿನಗೆ ಏನು ಅಪಕಾರವಾಯಿತು? ಅತಿಶಯವಾದ ಭುಜಬಲದ ಮದವುಳ್ಳ ನನ್ನನ್ನು ಗೆಲ್ಲದೆ ಈ ದರ್ಪವೇತಕ್ಕೆ?] (ಭೀಮಃ ಕ್ರೋಧಂ ನಾಟಯತಿ।) ಅರ್ಜುನಃ – ಆರ್ಯ, ಪ್ರಸೀದ। ಕಿಮತ್ರ ಕ್ರೋಧೇನ।

ಅಪ್ರಿಯಾಣಿ ಕರೋತ್ಯೇಷ ವಾಚಾ ಶಕ್ತೋ ನ ಕರ್ಮಣಾ।

ಹತಭ್ರಾತೃಶತೋ ದುಃಖೀ ಪ್ರಲಾಪೈರಸ್ಯ ಕಾ ವ್ಯಥಾ॥

[(ಭೀಮನು ಕ್ರೋಧವನ್ನು ನಟಿಸುತ್ತಾನೆ) ಅರ್ಜುನ- ಆರ್ಯ, ಪ್ರಸನ್ನನಾಗು. ಕೋಪವೇಕೆ? ಇವನು ಮಾತಿನಲ್ಲಿ ಅಪ್ರಿಯ ಮಾಡುವನಲ್ಲದೆ ಕಾರ್ಯದಲ್ಲಿ ಶಕ್ತನಲ್ಲ. ನೂರು ಜನ ಸಹೋದರರು ಮಡಿದಿರಲು ದುಃಖಿಯಾಗಿರುವ ಆತನ ಪ್ರಲಾಪಗಳಿಗಾಗಿ ವ್ಯಥೆಯೇಕೆ?] ಭೀಮಃ -ಅರೇಭರತಕುಲಕಲಂಕ,

---

೧ ಪಾಠ : ಸಂರಂಭೋಕ್ತಿಃ

ಅದ್ಯೈವ ಕಿಂ ನ ವಿಸೃಜೇಯಮಹಂ ಭವಂತಂ ದುಃಶಾಸನಾನುಗಮನಾಯ ಕಟುಪ್ರಲಾಪಿನ್ ।
ವಿಘ್ನಂ ಗುರೂ ನ ಕುರುತೋ ಯದಿ ಮತ್ಕರಾಗ್ರನಿರ್ಭಿನ್ನವಕ್ಷಸರಣಿತಾಸ್ಥಿನಿ ತೇ ಶರೀರೇ ॥

ಅನ್ಯಚ್ಚ ಮೂಢ,

ಶೋಕಂ ಸ್ತ್ರೀವನ್ನಯನಸಲಿಲೈರ್ಯತ್ಪರಿತ್ಯಾಜಿತೋಽಸಿ
ಭ್ರಾತುರ್ವಕ್ಷಃಸ್ಥಲವಿವಲನೇ ಯಚ್ಚ ಸಾಕ್ಷೀಕೃತೋಽಸಿ ।
ಆಸೀದೇತತ್ತವ ಕುನೃಪತೇಃ ಕಾರಣಂ ಜೀವಿತಸ್ಯ
ಕ್ರುದ್ಧೇ ಯುಷ್ಮತ್ಕುಲಕಮಲಿನೀಕುಂಜರೇ ಭೀಮಸೇನೇ ॥

[ಎಲೈ ಭರತಕುಲಕಲಂಕ, ಎಲೈ ಕಟುಪ್ರಲಾಪಿಯೆ, ಹಿರಿಯರಿಬ್ಬರು ವಿಘ್ನಮಾಡವೆ ಹೋಗಿದ್ದರೆ ನನ್ನ ಕರಾಗ್ರದಿಂದ ಸೀಳಲ್ಪಟ್ಟು ನಿನ್ನ ಶರೀರದ ಎಲುಬುಗಳು ಅನುರಣಿಸುತ್ತಿರಲು ಇಂದೇ ನಿನ್ನನ್ನು ದುಃಶಾಸನನ ಬೆನ್ನ ಹಿಂದೆ ಕಳುಹಿಸದಿರುತ್ತಿದ್ದನೆ? ಮತ್ತು ಎಲೈ ಮೂರ್ಖ, ನಿನ್ನ ಸಹೋದರನ ವಕ್ಷಃಸ್ಥಲವನ್ನು ಸೀಳುವಾಗ ಹೆಣ್ಣಿನಂತೆ ಕಣ್ಣೀರು ಸುರಿಸುತ್ತ ಸಾಕ್ಷೀಸ್ವರೂಪನಾಗಿ ನಿಂತಿದ್ದೆಯಲ್ಲವೆ? ಅದನ್ನು ನೋಡಲೆಂಬ ಕಾರಣದಿಂದಲೇ, ನಿಮ್ಮ ಕುಲಕಮಲಿನಿಗೆ ಕುಂಜರಸ್ವರೂಪನಾಗಿರುವ ಭೀಮಸೇನನು ಕ್ರುದ್ಧನಾಗಿದ್ದರೂ, ನಿನ್ನ ಪ್ರಾಣವು ಉಳಿದುಕೊಂಡಿತು.] ರಾಜಾ–ದುರಾತ್ಮನ್ ಭರತಕುಲಾಪಸದ ಪಾಂಡವಪಶೋ, ನಾಹಂ ಭವಾನಿವ ವಿಕತ್ಥನಾಪ್ರಗಲ್ಭಃ। ಕಿಂತು,

ದ್ರಕ್ಷ್ಯಂತಿ ನ ಚಿರಾತ್ಸುಪ್ತಂ ಬಾಂಧವಾಸ್ತ್ವಾಂ ರಣಾಂಗಣೇ ।
ಮದ್ಗದಾಭಿನ್ನವಕ್ಷೋಽಸ್ಥಿವೇಣಿಕಾಭಂಗಭೀಷಣಮ್॥

[ದುರಾತ್ಮ, ಭರತಕುಲಾಪಸದ, ಪಾಂಡವಪಶುವೆ, ನಾನು ನಿನ್ನಂತೆ ಆತ್ಮಶ್ಲಾಘನೆಯಲ್ಲಿ ಪಂಡಿತನಲ್ಲ. ಆದರೆ, ಅತ್ಯಲ್ಪಕಾಲದಲ್ಲಿಯೇ ರಣರಂಗದಲ್ಲಿ ನನ್ನ ಗದೆಯಿಂದ ಎದೆಯ ಎಲುಬಿನ ಹಂದರ ಚೂರಾಗಿರಲು ಭಯಂಕರವಾಗಿ ಮಲಗಿರುವ ನಿನ್ನನ್ನು ನಿನ್ನ ಬಾಂಧವರು ನೋಡುವರು.]'– ಇಲ್ಲಿ, ಉತ್ತೇಜಿತರಾದ ಭೀಮದುರ್ಯೋಧನರ ಸ್ವಸಾಮರ್ಥ್ಯಕಥನವು 'ವಿರೋಧನ'.

ಟಿಪ್ಪಣಿ : ನಾ.ಶಾ.ದ ಪ್ರಕಾರ, 'ಉತ್ತೇಜಿತರಾದವರ ಉತ್ತರೋತ್ತರ ಸಂಭಾಷಣೆ' ವಿರೋಧನ ; ಸಾ.ದ.ದ ಪ್ರಕಾರ, 'ಕಾರ್ಯದಲ್ಲಿ ವಿಘ್ನಪ್ರಾಪ್ತಿ' ವಿರೋಧನ ; ಪ್ರತಾಪ.ದಲ್ಲಿ ಇದನ್ನು 'ನಿರೋಧನ' ಎಂದಿದೆ.

ಹೋಲಿಕೆ = ನಾ.ಶಾ. : ೨೧–೯೬ ; ಸಾ.ದ. : ೬–೧೦೫ ; ಪ್ರತಾಪ : ೩–೧೫.

## ೬೩. ಪ್ರರೋಚನಾಲಕ್ಷಣ :

**ಸಿದ್ಧಾಮಂತ್ರಣತೋ ಭಾವಿದರ್ಶಿಕಾ ಸ್ಯಾತ್ಪ್ರರೋಚನಾ ॥ ೪೭ ॥**

ಅನು : ಸಿದ್ಧಾಮಂತ್ರಣದಿಂದ ಭವಿಷ್ಯವನ್ನು ನೋಡುವುದು 'ಪ್ರರೋಚನಾ'.

ವ್ಯಾಖ್ಯೆ : ಉದಾ:– [ವೇಣೀ ಪು. ೧೬೫, ೬–೧೨, ಪು. ೧೬೭] : 'ಪಾಂಚಾಲಕಃ – ಅಹಂ ಚ ದೇವೇನ ಚಕ್ರಪಾಣಿನಾ.....' ಎಂಬಲ್ಲಿಂದ, 'ಕೃತಂ ಸಂದೇಹೇನ,

ಪೂರ್ಯಂತಾಂ ಸಲಿಲೇನ ರತ್ನಕಲಶಾ ರಾಜ್ಯಾಭಿಷೇಕಾಯ ತೇ
ಕೃಷ್ಣಾತ್ಯಂತಚಿರೋಜ್ಝಿತೇ ಚ ಕಬರೀಬಂಧೇ ಕರೋತು ಕ್ಷಣಮ್ ।
ರಾಮೇ ಶಾತಕುಠಾರಭಾಸುರಕರೇ ಕ್ಷತ್ರದ್ರುಮೋಚ್ಛೇದಿನಿ
ಕ್ರೋಧಾಂಧೇ ಚ ವೃಕೋದರೇ ಪರಿಪತತ್ಯಾಜೌ ಕುತಃ ಸಂಶಯಃ ॥

[ಸಂದೇಹ ಬೇಡ. ನಿನ್ನ ರಾಜ್ಯಾಭಿಷೇಕದ ಸಲುವಾಗಿ ರತ್ನಕುಂಭಗಳಲ್ಲಿ ನೀರನ್ನು ತುಂಬಲಿ. ದ್ರೌಪದಿಯು ಬಹುಕಾಲದಿಂದ ಕಟ್ಟದೆಯೆ ಬಿಟ್ಟಿರುವ ಮುಡಿಯನ್ನು ಕಟ್ಟಿ ಉತ್ಸವಮಾಡಲಿ. ಹರಿತವಾದ ಕೈಕೊಡಲಿ ಹೊಳೆಯುತ್ತಿರಲು ಕ್ಷತ್ರಿಯ ವೃಕ್ಷಸಮೂಹವನ್ನು ಕಡಿದೊಟ್ಟುವ ಪರಶುರಾಮ ಹಾಗೂ ರಣದಲ್ಲಿ

ಮುನ್ನುಗ್ಗುತ್ತಿರುವ ಕ್ರೋಧಾಂಧನಾದ ಭೀಮ– ಇವರಿಬ್ಬರ ವಿಜಯಕ್ಕೆ ಸಂಶಯವೆಲ್ಲಿ?]' –ಎಂಬಲ್ಲಿಂದ, 'ಮಂಗಲಾನಿ ಕರ್ತುಮಾಜ್ಞಾಪಯತಿ ದೇವೋ ಯುಧಿಷ್ಠಿರಃ [ದೇವ ಯುಧಿಷ್ಠಿರನು ಮಂಗಲಗಳನ್ನು ಮಾಡಲು ಆಜ್ಞಾಪಿಸುತ್ತಾನೆ.]' –ಎಂಬಲ್ಲಿಯವರೆಗೆ, ದ್ರೌಪದಿಯ ಕೇಶಸಂಗ್ರಹ ಹಾಗೂ ಯುಧಿಷ್ಠಿರರಾಜ್ಯಾಭಿಷೇಕ ಇವುಗಳನ್ನು, ಅವು ಭವಿಷ್ಯದ ವಿಷಯವಾಗಿದ್ದರೂ, ಸಿದ್ಧಿಯಿಂದ ಮುಂಗಾಣುವುದು 'ಪ್ರರೋಚನಾ'.

ಟಿಪ್ಪಣಿ : 'ಸಿದ್ಧಾಮಂತ್ರಣ' ಎಂದರೆ 'ಸಿದ್ಧಿ ಪಡೆದ ವ್ಯಕ್ತಿಯೊಬ್ಬನ ಸೂಚನೆ'ಎಂದು ನಮ್ಮ ಮತ. ಹ್ಯಾಸ್ 'ಸಿದ್ಧಾ ಮಂತ್ರಣ' ಎಂಬುವಕ್ಕೆ ಸಿದ್ಧಿಯ (ಎಂದರೆ ಫಲದ) ಭರವಸೆ ಎಂದು ಅನುವಾದಿಸಿದ್ದಾರೆ. [ನೋಡಿ : ಹ್ಯಾಸ್ : ೧–೯೩].

'ಪ್ರಯೋಜನದ ಉಪಸಂಹಾರವನ್ನು ತೋರಿಸುವುದು ಪ್ರರೋಚನಾ' ಎಂಬುದು ನಾ.ಶಾ. ಮತ್ತು ಸಾ.ದ.ಗಳ ಲಕ್ಷಣ.

ಹೋಲಿಕೆ = ನಾ.ಶಾ. : ೨೧–೯೮; ಸಾ.ದ. : ೬ –೧೦೬; ಪ್ರತಾಪ : ೩–೧೫.

## ೯೪. ವಿಚಲನಲಕ್ಷಣ :

### ವಿಕತ್ಥನಾ ವಿಚಲನಂ

ಅನು : [ತನ್ನ ಬಗೆಗೆ ] ತುಂಬ ಹೇಳಿಕೊಳ್ಳುವುದು (ಆತ್ಮಶ್ಲಾಘನೆ) 'ವಿಚಲನ'.

ವ್ಯಾಖ್ಯೆ : ಉದಾಃ– [ವೇಣೀ : ೫–೨೭,೨೮; ಈ ಉದಾಃ– ೩–೨೦ರಲ್ಲಿ ಮರುಕೊಳಿಸಿದೆ.] 'ಭೀಮಃ –ತಾತ, ಅಂಬ,

ಸಕಲರಿಪುಜಯಾಶಾ ಯತ್ರ ಬದ್ಧಾ ಸುತೈಸ್ತೇ ತೃಣಮಿವ ಪರಿಭೂತೋ ಯಸ್ಯ ಗರ್ವೇಣ ಲೋಕಃ ।
ರಣಶಿರಸಿ ನಿಹಂತಾ ತಸ್ಯ ರಾಧಾಸುತಸ್ಯ ಪ್ರಣಮತಿ ಪಿತರೌ ವಾಂ ಮಧ್ಯಮಃ ಪಾಂಡವೋಽಯಮ್ ॥

ಅಪಿ ಚ, ತಾತ,

ಚೂರ್ಣಿತಾಶೇಷಕೌರವ್ಯಃ ಕ್ಷೀಬೋ ದುಃಶಾಸನಾಸೃಜಾ ।
ಭಂಕ್ತಾ ಸುಯೋಧನಸ್ಯೋರ್ವೋರ್ಭೀಮೋಽಯಂ ಶಿರಸಾಂಚತಿ ॥'

[ತಾತ, ಅಂಬಾ, ನಿಮ್ಮ ಪುತ್ರರ ಸಕಲ ಶತ್ರುಗಳನ್ನೂ ಜಯಿಸುವ ಆಸೆಯಿಂದ ಬದ್ಧನಾಗಿದ್ದ ಗರ್ವದಿಂದ ಲೋಕವನ್ನು ತೃಣವೆಂದು ತಿರಸ್ಕರಿಸಿದ ಕರ್ಣನನ್ನು, ಯುದ್ಧದಲ್ಲಿ ಶಿರಚ್ಛೇದನ ಮಾಡಿರುವ ಪಾಂಡವ ಮಧ್ಯಮನಾದ ನಾನು ತಂದೆತಾಯಿಗಳಾದ ನಿಮಗೆ (ಧೃತರಾಷ್ಟ್ರ ಗಾಂಧಾರಿಯರಿಗೆ) ನಮಸ್ಕರಿಸುತ್ತೇನೆ. ಮತ್ತು, ತಾತ, ಎಲ್ಲ ಕೌರವರನ್ನೂ ನಾಶಮಾಡಿದ, ದುಃಶಾಸನನ ರಕ್ತವನ್ನು ಹೀರಿ ಮತ್ತನಾದ, ದುರ್ಯೋಧನನ ತೊಡೆಗಳನ್ನು ಒಡೆಯಲಿರುವ ಈ ಭೀಮನು ಶಿರಸಾ ವಂದಿಸುತ್ತಾನೆ.]– ಇಲ್ಲಿ, ವಿಜಯಬೀಜವನ್ನು ಹೊಂದಿದ ಭೀಮನ ಸ್ವಗುಣಾವಿಷ್ಕರಣವು 'ವಿಚಲನ'.

ಮತ್ತು – [ರತ್ನಾ : ೪–೧೯; ೧–೧೯ರಲ್ಲಿ ಭಾಗಶಃ ಬಂದಿದೆ.] : 'ಯೌಗಂಧ–

ದೇವ್ಯಾ ಮದ್ವಚನಾದ್ಯಥಾಭ್ಯುಪಗತಃ ಪತ್ಯುರ್ವಿಯೋಗಸ್ತದಾ
ಸಾ ದೇವಸ್ಯ ಕಲತ್ರಸಂಘಟನಯಾ ದುಃಖಂ ಮಯಾ ಸ್ಥಾಪಿತಾ ।
ತಸ್ಯಾಃ ಪ್ರೀತಿಮಯಂ ಕರಿಷ್ಯತಿ ಜಗತ್ಸ್ವಾಮಿತ್ವಲಾಭಃ ಪ್ರಭೋಃ
ಸತ್ಯಂ ದರ್ಶಯಿತುಂ ತಥಾಪಿ ವದನಂ ಶಕ್ನೋಮಿ ನೋ ಲಜ್ಜಯಾ ॥'

[ನನ್ನ ಮಾತಿನಿಂದ ದೇವಿಯು ಪತಿಯ ವಿರಹವನ್ನು ಒಪ್ಪಿದಳು; ನಾನೋ ದೇವನಿಗೆ ಮತ್ತೊರ್ವ ಮಡದಿಯನ್ನು ಹೊಂದಿಸಿಕೊಟ್ಟು ಆಕೆಗೆ ದುಃಖವನ್ನುಂಟುಮಾಡಿದೆ. ಆದರೆ, ಪ್ರಭುವಿಗೆ ಜಗತ್ಸ್ವಾಮಿತ್ವವು ಲಭಿಸುವುದು ಆಕೆಗೆ

ಹರ್ಷವನ್ನು ಕೊಡುತ್ತದೆ. ಏನಾದರೂ, ನಿಜವಾಗಿಯೂ ನಾನು ಸಾಚಿಕೆಯಿಂದ ಆಕೆಗೆ ಮುಖ ತೋರಿಸಲಾರದವನಾಗಿದ್ದೇನೆ.] – ಹೀಗೆ ಹೇಳುವ ಅನ್ಯಪರನಾದ ಯೌಗಂಧರಾಯಣನ, 'ಮಯಾ ಜಗತ್ಸ್ವಾಮಿತ್ವಾನುಬಂಧೀ ಕನ್ಯಾಲಾಭೋ ವತ್ಸರಾಜಸ್ಯ ಕೃತಃ' (ವತ್ಸರಾಜನಿಗೆ ಜಗತ್ಸ್ವಾಮಿತ್ವಸಹಿತವಾದ ಕನ್ಯಾಲಾಭ ವುಂಟಾಗುವಂತೆ ನಾನು ಮಾಡಿದೆ.) ಮುಂತಾದ ಸ್ವಗುಣಕೀರ್ತನೆಯು 'ವಿಚಲನ'.

ಟಿಪ್ಪಣಿ : ನಾ.ಶಾ.ದಲ್ಲಿ [೨೧-೯೬] ಇವರ ಬದಲು 'ನಿಷೇಧ' ಎಂಬ ಅಂಗವೂ ಸಾ.ದ.ದಲ್ಲಿ [೬-೧೦೫] 'ಪ್ರತಿಷೇಧ' ಎಂಬ ಅಂಗವೂ ಬಂದಿವೆ. ಅವರ ಲಕ್ಷಣ : ಇಚ್ಛಿಸಿದ ಪ್ರಯೋಜನಕ್ಕೆ ಪ್ರತಿಬಂಧಕವೊದಗುವುದು.

ಹೋಲಿಕೆ = ಪ್ರತಾಪ : ೩-೧೫.



## ೯೫. ಆದಾನಲಕ್ಷಣ :

ಆದಾನಂ ಕಾರ್ಯಸಂಗ್ರಹಃ ।

ಅನು : [ರೂಪಕದಲ್ಲಿ ಹರಡಿರುವ ವಿವಿಧ ಫಲಗಳನ್ನು ಅರ್ಥಾತ್] ಕಾರ್ಯಗಳನ್ನು ಒಟ್ಟುಗೂಡಿಸುವುದು 'ಆದಾನ'.

ವ್ಯಾಖ್ಯೆ : ಉದಾ:- [ವೇಣೀ : ೬-೩೭] : 'ಭೀಮಃ-ನನು ಭೋಃ ಸಮಂತಪಂಚಕ ಸಂಚಾರಿಣಃ,

ರಕ್ಷೋ ನಾಹಂ ನ ಭೂತಂ ರಿಪುರುಧಿರಜಲಾಪ್ಲಾವಿತಾಂಗಃ ಪ್ರಕಾಮಂ

ನಿಸ್ತೀರ್ಣೋರುಪ್ರತಿಜ್ಞಾ ಜಲನಿಧಿಗಹನಃ ಕ್ರೋಧನಃ ಕ್ಷತ್ರಿಯೋಽಸ್ಮಿ ।

ಭೋ ಭೋ ರಾಜನ್ಯವೀರಾಃ ಸಮರಶಿಖಿಶಿಖಾದಗ್ಧಶೇಷಾಃ ಕೃತಂ ವ-

ಸ್ತ್ರಾಸೇನಾನೇನ ಲೀನೈರ್ಹತಕರಿತುರಗಾಂತರ್ಹಿತೈರಾಸ್ಯತೇ ಯತ್ ॥'

[ಎಲೈ ಸಮಂತಪಂಚಕದಲ್ಲಿ ಸಂಚರಿಸುವವರೆ, ನಾನು ರಾಕ್ಷಸನಲ್ಲ, ಭೂತನಲ್ಲ; ಶತ್ರುರಕ್ತದಿಂದ ಮೈಯ್ ತೊಯ್ದ ನಾನು ಮಹದಾಶೆಯುಳ್ಳವ, ಪ್ರತಿಜ್ಞೆಯೆಂಬ ಮಹಾಸಾಗರವನ್ನು ದಾಟಿರುವ ಕ್ರೋಧಶೀಲ ಕ್ಷತ್ರಿಯನು. ಸಮರಾಗ್ನಿಯ ಜ್ವಾಲೆಯಿಂದ ಭಸ್ಮವಾಗಿ ಉಳಿದ ಓವೋ ರಾಜನ್ಯ ವೀರರೆ, ಸತ್ತು ಬಿದ್ದ ಆನೆಕುದುರೆಗಳ ಹಿಂದೆ ಮುಚ್ಚಿ ಅಡಗಿಕೊಂಡಿರುವುದೇಕೆ? ಇನ್ನು ಭಯಪಡಬೇಕಾದ್ದಿಲ್ಲ] – ಹೀಗೆ ಸಮಸ್ತರಿಪುಗಳ ವಧೆಯ ಕಾರ್ಯಗಳನ್ನು ಸಂಗ್ರಹಿಸಿರುವುದು 'ಆದಾನ'.

ಮತ್ತು – [ರತ್ನಾ : ಪು. ೧೮೭, ೪-೧೯; ಇಲ್ಲಿನ ಕೊನೆಯ ಭಾಗವು ೧-೯ಳರಲ್ಲಿ ಪೂರ್ಣ ಉದ್ಧೃತವಾಗಿದೆ.] : 'ಸಾಗರಿಕಾ – (ದಿಶೋಽವಲೋಕ್ಯ) ದಿಟ್ಠಿಆ ಸಮಂತಾದೋ ಪಜ್ಜಲಿದೋ ಭಅವಂ ಹುಅವಹೋ ಅಜ್ಜ ಕರಿಸ್ಸದಿ ದುಕ್ಖಾವಸಾಣಂ । [(ದಿಕ್ಕುಗಳನ್ನು ನೋಡಿ) ಸುತ್ತಲೂ ಪ್ರಜ್ವಲಿಸುವ ಅಗ್ನಿದೇವನು ಇಂದು ದುಃಖನಾಶನವನ್ನು ಮಾಡುವನಲ್ಲವೆ?]'-ಎಂಬಲ್ಲಿ ಬೇರೆ ವಿಷಯದ ಮಧ್ಯೆ ದುಃಖಾವಸಾನಕಾರ್ಯದ ಸಂಗ್ರಹವೂ ಬಂದಿರುವುದರಿಂದ ಅದು 'ಆದಾನ'. ಮತ್ತು '......ಜಗತ್ಸ್ವಾಮಿತ್ವಲಾಭಃ ಪ್ರಭೋಃ......' ಹೀಗೆ 'ಆದಾನ'ವು ಬಂದಿದೆ.

– ಇವೇ ಹದಿಮೂರು ಅವಮರ್ಶಾಂಗಗಳು. ಇವುಗಳಲ್ಲಿ ಅಪವಾದ, ಶಕ್ತಿ, ವ್ಯವಸಾಯ, ಪ್ರರೋಚನ, ಆದಾನ – ಈ ಐದು ಪ್ರಧಾನವಾದವು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೯೭; ಸಾ.ದ. : ೬-೧೦೭; ಪ್ರತಾಪ : ೩-೧೫.

# ನಿರ್ವಹಣ (ಉಪಸಂಹೃತಿ) ಸಂಧಿ ಮತ್ತು ಅದರ ಅಂಗಗಳು

## ೯೬. ನಿರ್ವಹಣಸಂಧಿಲಕ್ಷಣ :

**ಬೀಜವಂತೋ ಮುಖಾದ್ಯರ್ಥಾ ವಿಪ್ರಕೀರ್ಣಾ ಯಥಾಯಥಮ್ ॥ ೪೮ ॥**
**ಐಕಾರ್ಥ್ಯಮುಪನೀಯಂತೇ ಯತ್ರ ನಿರ್ವಹಣಂ ಹಿ ತತ್ ।**

ಅನು : ಬೀಜವನ್ನು ತನ್ನಲ್ಲಿ ಉಳ್ಳುದಾಗಿ, ಮುಖ [ಪ್ರತಿಮುಖ ಗರ್ಭ ಅವಮರ್ಶ] ಇವುಗಳಲ್ಲಿ ಹೇಗೆ [ಉಚಿತವೋ] ಹಾಗೆ ತೊಡರಿ ಹರಡಿರುವ [ಹಲವಾರು] ವಿಷಯ ಗಳು, [ಪ್ರಧಾನವಾದ] ಒಂದು ಅರ್ಥಕ್ಕೆ ಹೊಂದಿಕೊಳ್ಳುವಲ್ಲಿ 'ನಿರ್ವಹಣ' ಸಂಧಿ ಯುಂಟಾಗುವುದು.

ವ್ಯಾಖ್ಯೆ: ಉದಾ:- [ವೇಣೀ : ಪು. ೧೯೭] : 'ಕಂಚುಕೀ - (ಉಪಸೃತ್ಯ ಸಹರ್ಷಂ) ಮಹಾರಾಜ, ವರ್ಧಸೇ ವರ್ಧಸೇ । ಅಯಂ ಖಲು ಕುಮಾರಭೀಮಸೇನಃ ಸುಯೋಧನಕ್ಷತಜಾರುಣೀಕೃತಸಕಲಶರೀರೋ ದುರ್ಲಕ್ಷ ವ್ಯಕ್ತಿಃ' [(ಹತ್ತಿರ ಬಂದು ಹರ್ಷದಿಂದ) ಮಹಾರಾಜ, ವಿಜಯವಾಗಲಿ. ಸುಯೋಧನನ ಅಂಗಕ್ಷತಿಯಿಂದ ಉತ್ಪನ್ನವಾದ ರಕ್ತದಲ್ಲಿ ದೇಹವೆಲ್ಲ ಕೆಂಪಾಗಿರುವ ಈ ಕುಮಾರ ಭೀಮಸೇನನು ನಿಶ್ಚಯವಾಗಿ ನೋಡಲು ಅಸಾಧ್ಯನಾಗಿದ್ದಾನೆ.] - ಹೀಗೆ, ಮುಖಾದಿಸಂಧಿಗಳಲ್ಲಿ ತಮ್ಮ ತಮ್ಮ ಜಾಗದಲ್ಲಿ ಹರಡಿಕೊಂಡಿದ್ದ ದ್ರೌಪದೀ ಕೇಶಸಂಗ್ರಹದ ಬೀಜಗಳನ್ನು ಏಕತ್ರ ಯೋಜಿಸಿದೆ. ಇದು 'ನಿರ್ವಹಣಸಂಧಿ'.

ಮತ್ತು - [ರತ್ನ : ಪು. ೧೭೭] : 'ವಸುಭೂತಿಃ - (ಸಾಗರಿಕಾಂ ನಿರ್ವರ್ಣ್ಯಾಪವಾರ್ಯ) ಬಾಭ್ರವ್ಯ, ಸುಸದೃಶೀಯಂ ರಾಜಪುತ್ರ್ಯಾ । [(ಸಾಗರಿಕೆಯನ್ನು ನೋಡಿ ಬೇರೆಯಾಗಿ ಹೇಳುವನು) ಬಾಭ್ರವ್ಯ, ಈಕೆ ರಾಜಪುತ್ರಿಯನ್ನೆ ಹೋಲುತ್ತಾಳೆ.]' - ಹೀಗೆ, ಸಾಗರಿಕಾ ರತ್ನಾವಲೀ ವಸುಭೂತಿ ಬಾಭ್ರವ್ಯ ಮೊದಲಾದವರ ಕಾರ್ಯಗಳು ಮುಖಾದಿಸಂಧಿಗಳಲ್ಲಿ ಹರಡಿದ್ದು ಅಂತ್ಯದಲ್ಲಿ ಅವೆಲ್ಲ ವತ್ಸರಾಜನೊಬ್ಬನ ಕಾರ್ಯಾರ್ಥವಾಗಿ ಯೋಜಿತವಾಗಿವೆ. ಇದು 'ನಿರ್ವಹಣಸಂಧಿ'.

ಟಿಪ್ಪಣಿ : 'ನಿರ್ವಹಣ'ಕ್ಕೆ 'ಉಪಸಂಹೃತಿ' ಎಂದೂ ಹೇಳಲಾಗಿದೆ. [ನೋಡಿ : ೧-೩೬] ಸಾ.ದ.ವಲ್ಲೂ ಹೀಗೆ ಎರಡು ಹೆಸರುಗಳು ಬಂದಿವೆ.

ಹೋಲಿಕೆ = ನಾ.ಶಾ. : ೨೧-೪೩; ಸಾ.ದ. : ೬-೭೯, ೮೦; ಪ್ರತಾಪ : ೩-೧೬

## ೯೭. ಹದಿನಾಲ್ಕು ನಿರ್ವಹಣಾಂಗಗಳು :

**ಸಂಧಿರ್ವಿಬೋಧೋ ಗ್ರಥನಂ ನಿರ್ಣಯಃ ಪರಿಭಾಷಣಮ್ ॥ ೪೯ ॥**
**ಪ್ರಸಾದಾನಂದಸಮಯಾಃ ಕೃತಿಭಾಷೋಪಗೂಹನಾಃ ।**
**ಪೂರ್ವಭಾವೋಪಸಂಹಾರೌ ಪ್ರಶಸ್ತಿಶ್ಚ ಚತುರ್ದಶ ॥ ೫೦ ॥**

ಅನು : [ನಿರ್ವಹಣಸಂಧಿಯಲ್ಲಿ] ಸಂಧಿ, ವಿಬೋಧ, ಗ್ರಥನ, ನಿರ್ಣಯ, ಪರಿಭಾಷಣ, ಪ್ರಸಾದ, ಆನಂದ, ಸಮಯ, ಕೃತಿ, ಭಾಷ, ಉಪಗೂಹನಾ, ಪೂರ್ವಭಾವ, ಉಪ ಸಂಹಾರ ಮತ್ತು ಪ್ರಶಸ್ತಿ [-ಹೀಗೆ] ಹದಿನಾಲ್ಕು [ಅಂಗಗಳಿವೆ].

ಟಿಪ್ಪಣಿ : 'ಉಪಸಂಹಾರ' ಕ್ಕೆ 'ಕಾವ್ಯಸಂಹಾರ' ಎಂದೂ[೧-೧೦೯] ಹೆಸರಿದೆ.

ಹೋಲಿಕೆ = ನಾ.ಶಾ. : ೨೧-೬೭ ರಿಂದ ೬೯; ಸಾ.ದ. : ೭-೧೦೮, ೧೦೯; ಪ್ರತಾಪ : ೩-೧೭, ೧೮.

## ೯೮. ಸಂಧಿಲಕ್ಷಣ :

### ಸಂಧಿರ್ಬೀಜೋಪಗಮನಂ

ಅನು: ಬೀಜವು ಸಮೀಪಕ್ಕೆ ಬರುವುದು 'ಸಂಧಿ'.

ವ್ಯಾಖ್ಯೆ : ಉದಾ:- [ರತ್ನಾ: ಪು. ೧೭೭]: 'ವಸುಭೂತಿ:- ಬಾಭ್ರವ್ಯ, ಸುಸದೃಶೀಯಂ ರಾಜಪುತ್ರ್ಯಾ। [ಬಾಭ್ರವ್ಯ, ಈಕೆ ರಾಜಪುತ್ರಿಯನ್ನ ಹೋಲುತ್ತಾಳೆ.] ಬಾಭ್ರವ್ಯಃ – ಮಮಾಪ್ಯೇವಮೇವ ಪ್ರತಿಭಾತಿ। [ನನಗೂ ಹಾಗೆಯೇ ಭಾಸವಾಗುತ್ತವೆ.] ' – ಇಲ್ಲಿ, ನಾಯಿಕಾ ರೂಪವಾದ ಬೀಜವು ಪುನಃ ಸಮೀಪವಾಗುತ್ತದೆ. ಅದು 'ಸಂಧಿ'.

ಮತ್ತು–[ವೇಣೀ : ೧–೨೧; ಈ ಉದಾ:- ೧-೪೫ರಲ್ಲೂ ಬಂದಿದೆ.] : 'ಭೀಮಃ – ಭವತಿ ಯಜ್ಞವೇದಿ ಸಂಭವೇ, ಸ್ಮರತಿ ಭವತೀ ಯತ್ತನ್ಮಯೋಕ್ತಮ್,

ಚಂಚದ್ಭುಜಭ್ರಮಿತಚಂಡಗದಾಭಿಘಾತಸಂಚೂರ್ಣಿತೋರುಯುಗಲಸ್ಯ ಸುಯೋಧನಸ್ಯ।
ಸ್ತ್ಯಾನಾವಬದ್ಧಘನಶೋಣಿತಶೋಣಪಾಣಿರುತ್ತಂಸಯಿಷ್ಯತಿ ಕಚಾಂಸ್ತವದೇವಿ ಭೀಮಃ ॥'

[ಎಲೈ ಯಜ್ಞವೇದಿಸಂಭವೆ, ನಾನು ಹೇಳಿದ ಮಾತು ಜ್ಞಾಪಕವಿದೆಯೆ? – ದೇವಿ, ನನ್ನ ಕುಶಲವಾದ ತೋಳುಗಳು ತಿರುಗಿಸುವ ಭಯಂಕರ ಗದೆಯ ಪ್ರಹಾರದಿಂದ ಸುಯೋಧನನ ಎರಡು ತೊಡೆಗಳೂ ಪುಡಿಪುಡಿಯಾಗಿರಲು, ಘನರಕ್ತದಿಂದ ತುಂಬಿ ಕೆಂಪಾದ ದೃಢಹಸ್ತಗಳಿಂದ ಈ ಭೀಮನು ನಿನ್ನ ಮುಡಿಯನ್ನು ಕಟ್ಟುವನು.] - ಹೀಗೆ ಮುಖದಲ್ಲಿ ಸ್ಥಾಪಿತವಾದ ಬೀಜವು ಮರಳಿ ಹತ್ತಿರ ಬರುವುದು 'ಸಂಧಿ'.

ಟಿಪ್ಪಣಿ : ನಿರ್ವಹಣಾಂಗವಾದ ಈ 'ಸಂಧಿ'ಗೂ ಮುಖಾದಿ ಮುಖ್ಯ 'ಸಂಧಿ'ಗಳಿಗೂ(೧–೩೫) ಸಂಬಂಧವಿಲ್ಲ.

ಹೋಲಿಕೆ = ನಾ.ಶಾ. : ೨೧-೯೯; ಸಾ.ದ.: ೬–೧೧೦; ಪ್ರತಾಪ : ೩–೧೮.

## ೯೯. ವಿಬೋಧಲಕ್ಷಣ :

### ವಿಬೋಧಃ ಕಾರ್ಯಮಾರ್ಗಣಮ್ ।

ಅನು : ಕಾರ್ಯವನ್ನು [ಎಂದರೆ, ಇತಿವೃತ್ತದ ಮುಖ್ಯಫಲವನ್ನು ಪುನಃ] ಹುಡುಕುವುದು 'ವಿಬೋಧ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೧೯೦] : 'ವಸುಭೂತಿಃ – (ನಿರೂಪ್ಯ) ದೇವ, ಕುತ ಇಯಂ ಕನ್ಯಕಾ। [(ನಿರೂಪಿಸಿ) ದೇವ, ಈ ಕನ್ನಿಕೆ ಎಲ್ಲಿಯವಳು ?] ರಾಜಾ – ದೇವೀ ಜಾನಾತಿ। [ ದೇವಿ ವಾಸವದತ್ತೆ ಬಲ್ಲಳು.] ವಾಸವದತ್ತಾ – ಅಜ್ಜ ಉತ್ತ, ಏಸಾ ಸಾಗರಾದೋ ಪಾವಿಅತ್ತಿ ಭಣಿಅ ಅಮಚ್ಚ ಜೋಗಂಧರಾಅಣೇಣ ಮಮ ಹತ್ಥೇ ನಿಹಿದಾ। ಅದೋ ಜ್ಜೇವ ಸಾಗರಿಅತ್ತಿ ಸದ್ದಾವೀಅದಿ। [ ಆರ್ಯಪುತ್ರ, ಇವಳು ಸಾಗರದಲ್ಲಿ ದೊರೆತಳೆಂದು ಅಮಾತ್ಯ ಯೌಗಂಧರಾಯಣನು ನನ್ನ ಕೈಯಲ್ಲಿ ತಂದಿಟ್ಟನು. ಆದ್ದರಿಂದ ಆಕೆಗೆ ಸಾಗರಿಕಾ ಎಂಬ ಹೆಸರು.] ರಾಜಾ – (ಆತ್ಮಗತಂ) ಯೌಗಂಧರಾಯಣೇನ ನ್ಯಸ್ತಾ। ಕಥಮಸೌ ಮಮಾನಿವೇದ್ಯ ಕರಿಷ್ಯತಿ। [(ಆತ್ಮಗತ) ಯೌಗಂಧರಾಯಣನು ತಂದಿಟ್ಟನು. ಅವನು ನನಗೆ ತಿಳಿಸದೆ ಹೇಗೆ ಈ ಕಾರ್ಯ ಮಾಡಿದ ?]' – ಹೀಗೆ ರತ್ನಾವಲೀ ಕಾರ್ಯದ ಅನ್ವೇಷಣವು 'ವಿಬೋಧ'.

ಮತ್ತು – [ವೇಣೀ : ಪು. ೨೦೦] : 'ಭೀಮಃ– ಮುಂಚತು ಮುಂಚತು ಮಮಾರ್ಯಾ ಕ್ಷಣಮೇಕಮ್। [ಆರ್ಯ, ಒಂದು ಕ್ಷಣ ನನ್ನನ್ನು ಬಿಡು, ಬಿಡು.] ಯುಧಿ – ಕಿಮಪರಮವಶಿಷ್ಟಮ್। [ಇನ್ನೇನು ಉಳಿದಿದೆ ?] ಭೀಮಃ– ಸುಮಹದವಶಿಷ್ಟಮ್। ಸಂಯಮಯಾಮಿ ತಾವದನೇನ ದುಃಶಾಸನಶೋಣಿತೋಕ್ಷಿತೇನ ಪಾಣಿನಾ ಪಾಂಚಾಲ್ಯಾ ದುಃಶಾಸನಾವಕೃಷ್ಟಂ ಕೇಶ ಹಸ್ತಮ್। [ ಬಹು ದೊಡ್ಡದೇ ಉಳಿದಿದೆ. ದುಃಶಾಸನನ ರಕ್ತದಿಂದ

ಕೆಂಪಾದ ಈ ಹಸ್ತಗಳಿಂದಲೇ, ಆತನಿಂದ ಎಳೆಯಲ್ಪಟ್ಟ ದ್ರೌಪದಿಯ ಕೇಶಹಸ್ತವನ್ನು ಕಟ್ಟುತ್ತೇನೆ.] ಯುಧಿ-ಗಚ್ಛತು ಭವಾನ್ । ಅನುಭವತು ತಪಸ್ವಿನೀ ವೇಣೀಸಂಹಾರಮ್ । [ ಹೋಗು, ತಪಸ್ವಿನಿಯಾದ ದ್ರೌಪದಿ ವೇಣೀಸಂಹಾರವನ್ನು ಅನುಭವಿಸಲಿ.] ' – ಇಲ್ಲಿ ದ್ರೌಪದಿಯ ಕೇಶಸಂಗ್ರಹಕಾರ್ಯದ ಅನ್ವೇಷಣೆ ಬಂದಿದೆ; ಇದು 'ವಿಬೋಧ'.

ಟಿಪ್ಪಣಿ : 'ಕಾರ್ಯ'ಕ್ಕೆ ೧–೨೪ ನೋಡಿ. ಪ್ರತಾಪ.ದಲ್ಲಿ ಲಕ್ಷಣ ಇದೇ ಆಗಿದ್ದರೂ ಹೆಸರು 'ವಿರೋಧ' ಎಂದಿದೆ. ಈ ಗ್ರಂಥದ 'ವಿರೋಧನ' [೧–೯೨] ಎಂಬ ಅಂಗಕ್ಕೆ ಪ್ರತಾಪ.ದಲ್ಲಿ 'ನಿರೋಧನ' ಎಂಬ ಹೆಸರು ಬಂದುದನ್ನು ಗಮನಿಸಬೇಕು.

ಹೋಲಿಕೆ = ನಾ. ಶಾ. : ೨೧–೯೯; ಸಾ.ದ. : ೬–೧೧೦; ಪ್ರತಾಪ : ೩–೧೮.

## ೧೦೦. ಗ್ರಥನಲಕ್ಷಣ :

**ಗ್ರಥನಂ ತದುಪಕ್ಷೇಪೋ**

ಅನು : ಅದರ [ಎಂದರೆ, ಕಾರ್ಯದ] ೧ ಪ್ರಕೃತ ಯೋಜನೆ 'ಗ್ರಥನ'.

ವ್ಯಾಖ್ಯೆ : ಉದಾ– [ರತ್ನಾ : ಪು . ೧೯೫] : 'ಯೌಗಂಧ–ದೇವ, ಕ್ಷಮ್ಯತಾಂ ಯದ್ದೇವಸ್ಯಾನಿವೇದ್ಯ ಮಯ್ಯೈತತ್ಕೃತಮ್ । [ದೇವ, ತಮಗೆ ತಿಳಿಸದೆ ಮಾಡಿದುದಕ್ಕಾಗಿ ಕ್ಷಮಿಸಬೇಕು]' – ಹೀಗೆ, ವತ್ಸರಾಜನಿಗೆ ರತ್ನಾವಲೀ ಪ್ರಾಪ್ತಿಯಾಗಲು ಮಾಡಿದ ಕಾರ್ಯದ ಉಪಕ್ಷೇಪವು 'ಗ್ರಥನ'.

ಮತ್ತು – [ ವೇಣೀ : ಪು. ೧೯೬] : 'ಭೀಮಃ– ಪಾಂಚಾಲಿ, ನ ಖಲು ಮಯಿ ಜೀವತಿ ಸಂಹರ್ತವ್ಯಾ ದುಃಶಾಸನವಿಲುಲಿತಾ ವೇಣಿರಾತ್ಮಪಾಣಿನಾ। ತಿಷ್ಠತು ತಿಷ್ಠತು। ಸ್ವಯಮೇವಾಹಂ ಸಂಹರಾಮಿ। [ಪಾಂಚಾಲಿ, ಆ ದುಃಶಾಸನನು ಬಿಚ್ಚಿರುವ ಮುಡಿಯನ್ನು, ನಾನು ಜೀವಿಸಿರಲಾಗಿ ನೀನು ಕಟ್ಟಬಾರದು. ನಿಲ್ಲು, ನಿಲ್ಲು, ನಾನೇ ಕಟ್ಟುತ್ತೇನೆ.]' – ಹೀಗೆ, ದ್ರೌಪದೀಕೇಶಸಂಯಮನ ಕಾರ್ಯದ ಉಪಕ್ಷೇಪವು 'ಗ್ರಥನ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧–೧೦೦; ಸಾ.ದ. : ೬–೧೧೦; ಪ್ರತಾಪ : ೩–೧೮.

## ೧೦೧. ನಿರ್ಣಯಲಕ್ಷಣ :

**ಅನುಭೂತಾಖ್ಯಾ ತು ನಿರ್ಣಯಃ ॥ ೫೧ ॥**

ಅನು: ಅನುಭವಿಸಿ[ತಿಳಿ]ದುದನ್ನು ಹೇಳುವುದು 'ನಿರ್ಣಯ'.

ವ್ಯಾಖ್ಯೆ : ಉದಾ– [ರತ್ನಾ : ಪು. ೧೯೫] : 'ಯೌಗಂಧ–(ಕೃತಾಂಜಲಿಃ) ದೇವ,ಶ್ರೂಯತಾಮ್। ಇಯಂ ಸಿಂಹಲೇಶ್ವರದುಹಿತಾ ಸಿದ್ಧಾದೇಶೇನೋಪದಿಷ್ಟಾ ಯೋಽಸ್ಯಾಃ ಪಾಣಿಂ ಗ್ರಹೀಷ್ಯತಿ ಸ ಸಾರ್ವಭೌಮೋ ರಾಜಾ ಭವಿಷ್ಯತಿ । ತತ್ಪ್ರತ್ಯಯಾದಸ್ಮಾಭಿಃ ಸ್ವಾಮ್ಯರ್ಥೇ ಬಹುಶಃ ಪ್ರಾರ್ಥ್ಯಮಾನಾಪಿ ಸಿಂಹಲೇಶ್ವರೇಣ ದೇವ್ಯಾ ವಾಸವದತ್ತಾಯಾಶ್ಚಿತ್ತಖೇದಂ ಪರಿಹರತಾ ಯದಾ ನ ದತ್ತಾ ತದಾ ಲಾವಣಕೇ ದೇವೀ ದಗ್ಧೇತಿ ಪ್ರಸಿದ್ಧಿಮುತ್ಪಾದ್ಯ ತದಂತಿಕಂ ಬಾಭ್ರವ್ಯಃ ಪ್ರಹಿತಃ' [(ಕೈಮುಗಿದು) ದೇವ, ಕೇಳಬೇಕು. ಈಕೆ ಸಿಂಹಲೇಶ್ವರನ ಪುತ್ರಿ, ಇವಳ ಕೈಹಿಡಿದವನು ಸಾರ್ವಭೌಮ ರಾಜನಾಗುವನೆಂದು ಸಿದ್ಧರ ಆದೇಶವಿದೆ. ಅದನ್ನು ನಂಬಿ ನಾವು, ಸ್ವಾಮಿಯ ಸಲುವಾಗಿ ಬಹುಬಗೆಯಿಂದ ಪ್ರಾರ್ಥಿಸಿದರೂ, ಅದರಿಂದ ವಾಸವದತ್ತೆಗೆ ಮನೋವ್ಯಥೆಯುಂಟಾದೀತೆಂದು ಸಿಂಹಲೇಶ್ವರನು ಆಕೆಯನ್ನು ಮೊದಲು ಕೊಡಲೊಪ್ಪಲಿಲ್ಲ. ಆಗ, ದೇವಿ ವಾಸವದತ್ತೆಯು ಲಾವಾಣಕದಲ್ಲಿ ದಗ್ಧಳಾದಳೆಂದು ನಾವು ಸುದ್ದಿ ಹುಟ್ಟಿಸಿ ಕೊನೆಯಲ್ಲಿ ಬಾಭ್ರವ್ಯನನ್ನು (ಸಿಂಹಲೇಶ್ವರನಲ್ಲಿ ರತ್ನಾವಲಿಯನ್ನು ಬೇಡುವುದಕ್ಕಾಗಿ) ಕಳುಹಿಸಿದೆವು.] – ಹೀಗೆ, ಯೌಗಂಧರಾಯಣನು ತನ್ನ ಅನುಭವವನ್ನು ಹೇಳುವುದು 'ನಿರ್ಣಯ'.

---

೧ ನೋಡಿ : ಸಾ.ದ. : ೧೧೦ರ ವ್ಯಾಖ್ಯೆ.

ಮತ್ತು - [ವೇಣೀ : ಪು. ೧೯೮, ೬-೩೯] : 'ಭೀಮಃ-ದೇವದೇವ ಅಜಾತಶತ್ರೋಕ್ವಾದ್ಯಾಪಿ ದುರ್ಯೋಧನಹತಕಃ। ಮಯಾ ಹಿ ತಸ್ಯ ದುರಾತ್ಮನಃ,

ಭೂಮೌ ಕ್ಷಿಪ್ತ್ವಾ ಶರೀರಂ ನಿಹಿತಮಿದಮಸೃಕ್ಚಂದನಾಭಂ ನಿಜಾಂಗೇ

ಲಕ್ಷ್ಮೀರಾರ್ಯೇ ನಿಷಿಕ್ತಾ ಚತುರುದಧಿಪಯಃಸೀಮಯಾ ಸಾರ್ಧಮುರ್ವ್ಯಾ

ಭೃತ್ಯಾ ಮಿತ್ರಾಣಿ ಯೋಧಾಃ ಕುರುಕುಲಮಖಿಲಂ ದಗ್ಧಮೇತದ್ರಣಾಗ್ನೌ

ನಾಮೈಕಂ ಯದ್ಬ್ರವೀಷಿ ಕ್ಷಿತಿಪ ತದಧುನಾ ಧಾರ್ತರಾಷ್ಟ್ರಸ್ಯ ಶೇಷಮ್ ॥

[ದೇವದೇವ ಅಜಾತಶತ್ರು, ಆ ನೀಚ ದುರ್ಯೋಧನನು ಈಗ ಇನ್ನೆಲ್ಲಿ? ಆ ದುರಾತ್ಮನ ದೇಹವನ್ನು ಭೂಮಿಯಲ್ಲಿ ಎಸೆದು ಚಂದನದ ಕಾಂತಿಯ ಆತನ ರಕ್ತವನ್ನು ನನ್ನ ಮೈಗೆ ಬಳಿದುಕೊಂಡೆ. ನಾಲ್ಕು ಸಮುದ್ರಗಳ ಜಲವೇ ಎಲ್ಲೆಯಾಗಿರುವ ಭೂಮಿಯಿಂದ ಸಹಿತಳಾದ ರಾಜ್ಯಲಕ್ಷ್ಮಿ ಪೂಜ್ಯನಾದ ನಿನ್ನಲ್ಲಿ ನೆಲೆಸಿದಳು. ಸೇವಕರು ಸ್ನೇಹಿತರು ಸೈನಿಕರು, ಒಟ್ಟು ಕುರುವಂಶವೇ ಈ ರಣಾಗ್ನಿಯಲ್ಲಿ ದಗ್ಧವಾಯಿತು. ನೀನು ಹೇಳುತ್ತಿರುವ ದುರ್ಯೋಧನನ ಹೆಸರೊಂದು ಉಳಿದುಕೊಂಡಿದೆ.] - ಹೀಗೆ, ತನ್ನ ಅನುಭವದ ವಿಷಯವನ್ನು ಹೇಳುವುದು 'ನಿರ್ಣಯ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೧೦೦; ಸಾ.ದ. : ೬-೧೧೦, ೧೧೧; ಪ್ರತಾಪ : ೩-೧೮.

## ೧೦೨. ಪರಿಭಾಷಣಲಕ್ಷಣ :

**ಪರಿಭಾಷಾ ಮಿಥೋ ಜಲ್ಪಃ**

ಅನು : ಪರಸ್ಪರವಾದ ಮಾತು 'ಪರಿಭಾಷಾ' (ಪರಿಭಾಷಣ).

ವ್ಯಾಖ್ಯೆ : ಉದಾ- [ರತ್ನಾ : ಪು. ೧೯೩] : 'ರತ್ನಾವಲೀ-(ಆತ್ಮಗತಂ) ಕಅಪರಾಹಾ ದೇವೀಏ ಣ ಸಕ್ಕುಣೋಮಿ ಮುಹಂ ದಂಸಿದುಂ। [(ಸ್ವಗತ) ದೇವಿಗೆ ಅಪರಾಧ ಮಾಡಿರುವ ನಾನು ಆಕೆಗೆ ಮುಖ ತೋರಿಸಲು ಅಸಮರ್ಥಳಾಗಿದ್ದೇನೆ.] ವಾಸವ-(ಸಾಸ್ರಮ್। ಪುನರ್ಬಾಹೂ ಪ್ರಸಾರ್ಯ।) ಏಹಿ ಅಯಿ ನಿಟ್ಠುರೇ, ಇದಾಣೀಂ ಪಿ ಬಂಧುಸಿಣೇಹಂ ದಂಸೇಹಿ। (ಅಪವಾರ್ಯ) ಅಜ್ಜಉತ್ತ, ಲಜ್ಜಾಮಿ ಕ್ಖು ಅಹಂ ಇಮಿಣಾ ಣಿಸಂಸತ್ತಣೇಣ। ತಾ ಲಹುಂ ಅವಣೇಹಿ ಸೇ ಬಂಧಣಂ। [(ಕಂಬನಿದುಂಬಿ, ಮತ್ತೆ ತೋಳುಗಳನ್ನು ನೀಡಿ) ಎಲೈ ನಿಷ್ಠುರೆ, ಇಲ್ಲಿ ಬಾ. ಈಗಲಾದರೂ ಬಂಧುಸ್ನೇಹವನ್ನು ತೋರಿಸು. (ಬೇರೆಯಾಗಿ) ಆರ್ಯಪುತ್ರ, ಈ ಕಠೋರ ವ್ಯವಹಾರದಿಂದ ನನಗೆ ನಾಚಿಕೆಯಾಗಿದೆ. ಆದ್ದರಿಂದ ಇವಳನ್ನು ಬೇಗ ಬಂಧನದಿಂದ ಬಿಡಿಸು.] ರಾಜಾ-ಯಥಾಹ ದೇವೀ। (ಬಂಧನಮುಪನಯತಿ) [ದೇವಿಯು ಹೇಳಿದಂತಾಗಲಿ. (ಬಂಧನದಿಂದ ಬಿಡಿಸುವನು) ವಾಸವ-(ವಸುಭೂತಿಂ ನಿರ್ದಿಶ್ಯ) ಅಜ್ಜ, ಅಮಚ್ಚಯೋಗಂಧರಾಯಣೇಣಮ್ಹಿ ದುಜ್ಜಣೀಕದಮ್ಹಿ ಜೇಣ ಜಾಣಂತೇಣ ವಿ ಣಚಕ್ಖಿದಂ। [(ವಸುಭೂತಿಗೆ) ಆರ್ಯ, ಅಮಾತ್ಯ ಯೌಗಂಧರಾಯಣನು ತಾನು ತಿಳಿದಿದ್ದರೂ ಹೇಳದೆ ನನ್ನನ್ನು ದುಷ್ಟಳನ್ನಾಗಿ ಮಾಡಿದನು.]'-ಈ ಅನ್ಯೋನ್ಯ ಸಂಭಾಷಣೆಯು 'ಪರಿಭಾಷಣ'.

ಮತ್ತು - [ವೇಣೀ : ಪು. ೨೦೦-೨೦೧] : 'ಭೀಮಃ-ಕೃಷ್ಟಾ ಯೇನಾಸಿ ರಾಜ್ಞಾಂ ಸದಸಿ ನೃಪಶುನಾ ತೇನ ದುಃಶಾಸನೇನ । [ರಾಜಸಭೆಯಲ್ಲಿ ಯಾವ ಮನುಷ್ಯಪಶುವು ಎಳೆದನೊ ಆ ದುಃಶಾಸನನಿಂದ.......]'- ಎಂಬಲ್ಲಿಂದ, ಕ್ವಾಸೌ ಭಾನುಮತೀ ಯೋಪಹಸತಿ ಪಾಂಡವ ದಾರಾನ್ । [ಪಾಂಡವಪತ್ನಿಯನ್ನು ಪರಿಹಾಸ ಮಾಡುತ್ತಿದ್ದ ಆ ಭಾನುಮತಿಯೆಲ್ಲಿ?]'- ಈ ಪರ್ಯಂತದ ಮಾತುಗಳು 'ಪರಿಭಾಷಣ'.

ಟಿಪ್ಪಣಿ : 'ಅಪವಾದದಿಂದ ಕೂಡಿದ ಮಾತು ಪರಿಭಾಷಣ' ಎಂದು ನಾ.ಶಾ. ಮತ್ತು ಸಾ.ದ.ಗಳಲ್ಲಿ ಹೇಳಿದೆ.

ಹೋಲಿಕೆ = ನಾ.ಶಾ. : ೨೧-೧೦೧; ಸಾ.ದ. : ೬-೧೧೧; ಪ್ರತಾಪ : ೩-೧೮.

## ೧೦೩. ಪ್ರಸಾದಲಕ್ಷಣ :

**ಪ್ರಸಾದಃ ಪರ್ಯುಪಾಸನಮ್ ।**

ಅನು : [ಪ್ರಸನ್ನಗೊಳಿಸುವ ಸಲುವಾಗಿ ಭಕ್ತಿಪ್ರೇಮಗಳಿಂದ ಮಾಡುವ ಶುಶ್ರೂಷೆ ಅಥವಾ] ಆರಾಧನೆಯು 'ಪ್ರಸಾದ'.

ವ್ಯಾಖ್ಯೆ : ಉದಾ:- [ರತ್ನಾ : ಪು.೯೫] : 'ದೇವ, ಕ್ಷಮ್ಯತಾಂ [ದೇವ, ಕ್ಷಮಿಸಬೇಕು]'- ಇದು 'ಪ್ರಸಾದ'.

ಮತ್ತು - [ವೇಣೀ : ಪು. ೨೦೦] : '(ದ್ರೌಪದೀಮುಪಸೃತ್ಯ) ದೇವಿ ಪಾಂಚಾಲರಾಜತನಯೇ, ದಿಷ್ಟ್ಯಾ ವರ್ಧಸೇ ರಿಪುಕುಲಕ್ಷಯೇಣ। [(ದ್ರೌಪದಿಯ ಬಳಿಸಾರಿ) ದೇವಿ ಪಾಂಚಾಲರಾಜತನಯೆ, ರಿಪುಕುಲಕ್ಷಯದಿಂದ ನಿನ್ನ ಹರ್ಷವು ವರ್ಧಿಸಲಿ.]'-ಹೀಗೆ ಭೀಮಸೇನನು ದ್ರೌಪದಿಯನ್ನು ಆರಾಧಿಸುವುದು 'ಪ್ರಸಾದ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೧೦೨; ಸಾ.ದ. : ೬-೧೧೨; ಪ್ರತಾಪ : ೩-೧೮.

## ೧೦೪ . ಆನಂದಲಕ್ಷಣ :

**ಆನಂದೋ ವಾಂಛಿತಾವಾಪ್ತಿಃ**

ಅನು : ಬಯಸಿದುದನ್ನು ಪಡೆಯುವುದು 'ಆನಂದ'.

ವ್ಯಾಖ್ಯೆ : ಉದಾ:- [ರತ್ನಾ : ಪು.೯೩] : 'ರಾಜಾ-ಯಥಾಹ ದೇವೀ। (ರತ್ನಾವಲೀಂ ಗೃಹ್ಣಾತಿ) [ದೇವಿಯು ಹೇಳಿದಂತಾಗಲಿ. (ರತ್ನಾವಲಿಯನ್ನು ಸ್ವೀಕರಿಸುವನು)]'-ಹೀಗೆ, ವತ್ಸರಾಜನಿಗೆ ಬಯಕೆಯಿದ್ದ ರತ್ನಾವಲಿಯ ಪ್ರಾಪ್ತಿ 'ಆನಂದ'.

ಮತ್ತು - [ವೇಣೀ : ಪು. ೨೦೨] : 'ದ್ರೌಪದೀ-ಣಾಥ, ವಿಸುಮರಿದಮ್ಹಿ ಏದಂವಾವಾರಂ । ಣಾಥಸ್ಸ ಪಸಾದೇಣ ಪುಣೋ ಸಿಕ್ಖಿಸ್ಸಂ। (ಕೇಶಾನ್ಬಂಧಾತಿ) [ನಾಥ, ಕೇಶಸಂಗ್ರಹದ ವ್ಯವಹಾರವನ್ನೆ ಮರೆತುಬಿಟ್ಟಿದ್ದೇನೆ. ನಿಮ್ಮ ಪ್ರಸಾದದಿಂದ ಮತ್ತೆ ಕಲಿಯುತ್ತೇನೆ. (ಮುಡಿ ಕಟ್ಟಿಕೊಳ್ಳುವಳು.)]' ಹೀಗೆ, ದ್ರೌಪದಿಗೆ ತಾನು ಆಶಿಸಿದ ಕೇಶಸಂಯಮನದ ಪ್ರಾಪ್ತಿಯುಂಟಾಗುವುದು 'ಆನಂದ'.

ಟಿಪ್ಪಣಿ : 'ಪ್ರಯೋಜನಗಳ ಸಮಾಗಮ ಆನಂದ' ಎಂದು ನಾ.ಶಾ.ದಲ್ಲಿ ಹೇಳಿದೆ.

ಹೋಲಿಕೆ = ನಾ.ಶಾ. : ೨೧-೧೦೨; ಸಾ.ದ. : ೬-೧೧೨; ಪ್ರತಾಪ : ೩-೧೮.

## ೧೦೫. ಸಮಯಲಕ್ಷಣ :

**ಸಮಯೋ ದುಃಖನಿರ್ಗಮಃ ॥ ೫೨ ॥**

ಅನು : ದುಃಖ ಸರಿಯುವುದು 'ಸಮಯ'.

ವ್ಯಾಖ್ಯೆ : ಉದಾ:- [ರತ್ನಾ : ಪು. ೯೨] : 'ವಾಸವ-(ರತ್ನಾವಲೀಮಾಲಿಂಗ್ಯ) ಸಮಸ್ಸಸ ಸಮಸ್ಸಸ ಬಹಿಣಿಏ। [(ರತ್ನಾವಲಿಯನ್ನು ಅಪ್ಪಿಕೊಂಡು) ಸಹೋದರಿ, ಸಮಾಧಾನಳಾಗು.]'-ಹೀಗೆ ಭಗಿನಿಯರ ಅನ್ಯೋನ್ಯ ಸಮಾಗಮದಿಂದ ದುಃಖ ಹೋಗುವುದು 'ಸಮಯ'.

ಮತ್ತು - [ವೇಣೀ : ಪು. ೨೦೨, ೬-೪೩] : 'ಭಗವನ್, ಕುತಸ್ತಸ್ಯ ವಿಜಯಾದನ್ಯದ್ಯಸ್ಯ ಭಗವಾನ್ಪುರಾಣಪುರುಷಃ ಸ್ವಯಮೇವ ನಾರಾಯಣೋ ಮಂಗಲಾನ್ಯಾಶಾಸ್ತೇ।

ಕೃತಗುರುಮಹದಾದಿಕ್ಷೋಭಸಂಭೂತಮೂರ್ತಿಂ ಗುಣಿಸಮುದಯನಾಶಸ್ಥಾನಹೇತುಂ ಪ್ರಜಾನಾಮ್ ।

ಅಜಮಮರಮಚಿಂತ್ಯಂ ಚಿಂತಯಿತ್ವಾಪಿ ನ ತ್ವಾಂ ಭವತಿ ಜಗತಿ ದುಃಖೀ ಕಿಂ ಪುನರ್ದೇವ ದೃಷ್ಟ್ವಾ ॥'

[ಭಗವನ್, ಭಗವಂತನೂ ಪುರಾಣಪುರುಷನೂ ಆದ ನಾರಾಯಣನೇ ಸ್ವಯಂ ಮಂಗಲವನ್ನು ಹಾರೈಸಿದಮೇಲೆ ವಿಜಯವಲ್ಲದೆ ಮತ್ತೇನು? ಮಹದಾದಿತತ್ತ್ವಗಳ ಸಂಕ್ಷೋಭೆಯಿಂದ ಸಂಜಾತನಾದ ಮೂರ್ತಿ ನೀನು (ಈ ವ್ಯಕ್ತಪ್ರಪಂಚಕ್ಕೆ ಕಾರಣನು), ತ್ರಿಗುಣಾತ್ಮಕವಿಶ್ವದ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿದ್ದೀಯೆ. ಅಜನೂ, ಅಮರನೂ, ಅಚಿಂತ್ಯನೂ ಆದ ನಿನ್ನನ್ನು ಧ್ಯಾನಮಾಡಿದರೆ ಸಾಕು-ಲೋಕದ ದುಃಖದಿಂದ ಅವನು ಪಾರಾಗುತ್ತಾನೆ. ಎಲೈ ದೇವನೆ, ನಿನ್ನನ್ನು ಕಣ್ಣಾರೆ ಕಂಡವರ ವಿಚಾರ ಹೇಳುವುದೇನು]-ಹೀಗೆ ಯುಧಿಷ್ಠಿರನ ದುಃಖ ಇಲ್ಲವಾಗುವುದು 'ಸಮಯ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೧೦೩; ಸಾ.ದ. : ೬-೧೧೨; ಪ್ರತಾಪ : ૩-೧೮.

## ೧೦೬. ಕೃತಿಲಕ್ಷಣ :

**ಕೃತಿರ್ಲಬ್ಧಾರ್ಥಶಮನಂ**

**ಅನು : ಫಲ ದೊರೆತುದರ ಶಮನವು (ತಣಿವು) 'ಕೃತಿ'.**

ವ್ಯಾಖ್ಯೆ : ಉದಾ:- [ರತ್ನಾ : ಪು. ೧೯೮] : 'ರಾಜಾ-ಕೋ ದೇವ್ಯಾಃ ಪ್ರಸಾದಂ ನ ಬಹು ಮನ್ಯತೇ । [ದೇವಿಯ ಪ್ರಸನ್ನತೆಯನ್ನು ಹೆಚ್ಚಿನದೆಂದು ಯಾರು ತಿಳಿಯುವುದಿಲ್ಲ?] ವಾಸವ-ಅಜ್ಜಉತ್ತ, ದೂರೇ ಸೇ ಮಾದುಉಲಂ । ತಾ ತಧಾ ಕರೇಸು ಜಧಾ ಬಂಧುಅಣಂ ನ ಸುಮರೇದಿ । [ಆರ್ಯಪುತ್ರ, ಈಕೆಯ ತವುರು ದೂರದಲ್ಲಿದೆ. ಆದ್ದರಿಂದ, ಇವಳಿಗೆ ಬಂಧುಜನರ ನೆನಪು ಬರದಂತೆ ಹರ್ಷಗೊಳಿಸು.]'-ಹೀಗೆ, ಪರಸ್ಪರ ಮಾತಿನಿಂದ ವತ್ಸರಾಜನ ಕಷ್ಟ ಪರಿಹಾರವಾಗಿದೆ. ಲಬ್ಧವಾದ ಫಲಕ್ಕೆ ಚ್ಯುತಿಯಿಲ್ಲ. ಆದ್ದರಿಂದ ಇದು ಶಮನ; ಇದೇ 'ಕೃತಿ'.

ಮತ್ತು - [ವೇಣೀ : ಪು. ೨೦೪] : 'ಕೃಷ್ಣ-ಏತೇ ಖಲು ಭಗವಂತೋ ವ್ಯಾಸ ವಾಲ್ಮೀಕಿ.......' ಎಂಬಲ್ಲಿಂದ, 'ಅಭಿಷೇಕಮಾರಬ್ಧವಂತಸ್ತಿಷ್ಠಂತಿ ।' [ಅಭಿಷೇಕವನ್ನು ಆರಂಭಿಸಿ ನಿಂತಿದ್ದಾರೆ]-ಎಂಬಲ್ಲಿಯವರೆಗೆ, ಅಭಿಷೇಕ ಮಂಗಲದಿಂದ ದೊರೆತ ರಾಜ್ಯದ ಸ್ಥಿರೀಕರಣ 'ಕೃತಿ'.

ಟಿಪ್ಪಣಿ: 'ಶಮನ' ಎಂಬುದಕ್ಕೆ 'ತಣಿವು' ಎಂಬುದರ ಜೊತೆಗೆ 'ಸ್ಥಿರೀಕರಣ' ಎಂದೂ ಆಗಬಹುದು.

ನಾ.ಶಾ.ದಲ್ಲಿ ಲಕ್ಷಣ ಇದೇ ಆಗಿದ್ದರೂ ಹೆಸರು 'ದ್ಯುತಿ' ಎಂದಿದೆ.

ಹೋಲಿಕೆ = ನಾ.ಶಾ. : ೨೧-೧೦೧; ಸಾ.ದ. : ೬-೧೧೧; ಪ್ರತಾಪ : ૩-೧೮.

## ೧೦೭. ಭಾಷಣಲಕ್ಷಣ :

**ಮಾನಾದ್ಯಾಪ್ತಿಶ್ಚ ಭಾಷಣಮ್ ।**

**ಅನು : ಮಾನ ಇತ್ಯಾದಿಗಳನ್ನು ಪಡೆಯುವುದು 'ಭಾಷಣ'.**

ವ್ಯಾಖ್ಯೆ : ಉದಾ:- [ರತ್ನಾ : ಪು. ೨೦೦, ೪-೨೦] : 'ರಾಜಾ-ಅತಃಪರಮಪಿ ಪ್ರಿಯಮಸ್ತಿ ।

ಯಾತೋ ವಿಕ್ರಮಬಾಹುರಾತ್ಮಸಮತಾಂ ಪ್ರಾಪ್ತೇಯಮುರ್ವೀತಲೇ

ಸಾರಂ ಸಾಗರಿಕಾ ಸಸಾಗರಮಹೀಪ್ರಾಪ್ತ್ಯೇಕಹೇತುಃ ಪ್ರಿಯಾ ।

ದೇವೀ ಪ್ರೀತಿಮುಪಾಗತಾ ಚ ಭಗಿನೀಲಾಭಾಜ್ಜಿತಾಃ ಕೋಶಲಾಃ

ಕಿಂ ನಾಸ್ತಿ ತ್ವಯಿ ಸತ್ಯಮಾತ್ಯವೃಷಭೇ ಯಸ್ಮೈ ಕರೋಮಿ ಸ್ಪೃಹಾಮ್ ॥'

[ಇದಕ್ಕಿಂತಲೂ ಪ್ರಿಯವಾದದ್ದುಂಟೆ? (ಪುತ್ರ) ವಿಕ್ರಮಬಾಹುವು ಈಗ ನನ್ನ ವಶಿವರ್ತಿಯಾಗಿದ್ದಾನೆ. ಭೂತಲದ ಸಾರಸ್ವರೂಪಿಣಿಯೂ ಪ್ರಿಯಳೂ ಸಾಗರಸಮೇತವಾದ ಭೂತಲವು ನನಗೆ ಪ್ರಾಪ್ತವಾಗಲು ಮುಖ್ಯಕಾರಣಳೂ ಆದ ಈ ಸಾಗರಿಕೆಯು ನನಗೆ ದೊರೆತಳು; ಸಹೋದರಿಯೊಬ್ಬಳು ದೊರಕಿ ವಾಸವದತ್ತೆ ಪ್ರೇಮವನ್ನು ಪಡೆದಳು. ಕೋಶಲದೇಶಗಳನ್ನು ಗೆದ್ದುದಾಯಿತು. ಅಮಾತ್ಯಶ್ರೇಷ್ಠನಾದ ನೀನು ಇರುವಾಗ, ಇಲ್ಲದಿರುವುದೇನು? ನಾನು ಇನ್ನೇನನ್ನು ಇಚ್ಛಿಸಲಿ?]–ಹೀಗೆ ಆಶಿಸಿದ ಅರ್ಥ ಮಾನಗಳು ಲಭಿಸಿದುದು 'ಭಾಷಣ'.

ಟಿಪ್ಪಣಿ : ಹ್ಯಾಸ್ ಹೀಗೆ ಅನುವಾದಿಸಿದ್ದಾರೆ : "ನಿರೀಕ್ಷಿಸಿದ್ದು ಮುಂತಾದುವನ್ನು ಪಡೆಯುವುದು 'ಭಾಷಣ'." [ಹ್ಯಾಸ್ : ೧–೧೦೭]

ನಾ.ಶಾ.ದಲ್ಲಿ ಮತ್ತು ಸಾ.ದ.ದಲ್ಲಿ – ಸಾಮದಾನಾದಿಗಳಿಂದ ಕೂಡಿದ್ದು 'ಭಾಷಣ' ಎಂದು ಹೇಳಿದೆ; 'ಪ್ರಾಪ್ತಕಾರ್ಯದ ಅನುಮೋದನೆ' ಎಂದು ಲಕ್ಷಿಸಿರುವ ಪ್ರತಾಪ.ವು ಇದಕ್ಕೆ 'ಆಭಾಷಣ' ಎಂದಿದೆ.

ಹೋಲಿಕೆ = ನಾ.ಶಾ. : ೨೧–೧೦೪; ಸಾ.ದ. : ೬–೧೧೩; ಪ್ರತಾಪ : ೩–೧೮.

## ೧೦೮. ಪೂರ್ವಭಾವ ಉಪಗೂಹನಗಳ ಲಕ್ಷಣ :

**ಕಾರ್ಯದೃಷ್ಟ್ಯದ್ಭುತಪ್ರಾಪ್ತೀ ಪೂರ್ವಭಾವೋಪಗೂಹನೇ ॥ ೫೩ ॥**

ಅನು : 'ಕಾರ್ಯ'ದ ದರ್ಶನ [ಮತ್ತು] ಅದ್ಭುತವಾದದ್ದು ದೊರಕುವುದು [ಇವು ಕ್ರಮವಾಗಿ] 'ಪೂರ್ವಭಾವ' 'ಉಪಗೂಹನ'ಗಳು.

ವ್ಯಾಖ್ಯೆ : ಕಾರ್ಯದ ದರ್ಶನವು 'ಪೂರ್ವಭಾವ'.

ಉದಾ:– [ರತ್ನಾ : ಪು. ೧೯೮] : 'ಯೌಗಂಧ – ಏವಂ ವಿಜ್ಞಾಯ ಭಗಿನ್ಯಾಃ ಸಂಪ್ರತಿ ಕರಣೀಯೇ ದೇವೀ ಪ್ರಮಾಣಮ್ । [ಇಷ್ಟು ತಿಳಿದಮೇಲೆ ಭಗಿನಿಯನ್ನು ಏನು ಮಾಡುವುದೆಂದು ದೇವಿಯೇ ತಿಳಿಸತಕ್ಕದ್ದು.] ವಾಸವ–ಫುಡಂ ಜ್ಜೇವ ಕಿಂ ಣ ಭಣೇಸಿ । ಪಡಿವಾಏಹಿ ಸೇ ರಅಣ ಮಾಲಂ ತ್ತಿ [ಸ್ಪಷ್ಟವಾಗಿ ಏಕೆ ಹೇಳುವುದಿಲ್ಲ; 'ರತ್ನಮಾಲೆಯನ್ನು ಇವನಿಗೆ ಕೊಡು' ಎಂದು?]'–ಹೀಗೆ, 'ವತ್ಸರಾಜನಿಗೆ ರತ್ನಾವಲಿಯನ್ನು ಕೊಡತಕ್ಕುದು' ಎಂಬ ಅರ್ಥದ ಮಾತಿನಲ್ಲಿ, ಯೌಗಂಧರಾಯಣನ ಅಭಿಪ್ರಾಯದಂತೆ ಪ್ರಾಪ್ತವಾದ 'ಕಾರ್ಯ'ವನ್ನು ವಾಸವದತ್ತೆಯು ನೋಡುವಳು (ತಿಳಿಯುವಳು); ಅದು 'ಪೂರ್ವಭಾವ'.

ಅದ್ಭುತವಾದದ್ದು ದೊರಕುವುದು 'ಉಪಗೂಹನ'.

ಉದಾ:– [ವೇಣೀ : ಪು. ೨೦೨, ೬–೪೨] : '(ನೇಪಥ್ಯೇ) ಮಹಾಸಮರಾನಲದಗ್ಧ ಶೇಷಾಯ ಸ್ವಸ್ತಿ ಭವತೇ ರಾಜನ್ಯಲೋಕಾಯ,

ಕ್ರೋಧಾಂಧೈರ್ಯಸ್ಯ ಮೋಕ್ಷಾತ್ಕ್ಷತನರಪತಿಭಿಃ ಪಾಂಡುಪುತ್ರೈಃ ಕೃತಾನಿ
ಪ್ರತ್ಯಾಶಂ ಮುಕ್ತಕೇಶಾನ್ಯನುದಿನಮಧುನಾ ಪಾರ್ಥಿವಾಂತಃಪುರಾಣಿ ।
ಕೃಷ್ಣಾಯಾಃ ಕೇಶಪಾಶಃ ಕುಪಿತಯಮಸಖೋ ಧೂಮಕೇತುಃ ಕುರೂಣಾಂ
ದಿಷ್ಟ್ಯಾ ಬದ್ಧಃ ಪ್ರಜಾನಾಂ ವಿರಮತು ನಿಧನಂ ಸ್ವಸ್ತಿ ರಾಜನ್ಯಕೇಭ್ಯಃ ॥

[(ನೇಪಥ್ಯದಲ್ಲಿ) ಮಹಾಸಮರಾಗ್ನಿಯಲ್ಲಿ ಸುಟ್ಟುಳಿದ ನಿಮ್ಮ ರಾಜನ್ಯಲೋಕಕ್ಕೆ ಒಳ್ಳೆಯದಾಗಲಿ. ಯಾವ ಕೇಶಪಾಶವು ಬಿಚ್ಚಿರುವುದನ್ನು ಕಂಡು ಕ್ರೋಧಾಂಧರಾದ ಪಾಂಡುಪುತ್ರರು ರಾಜರುಗಳನ್ನು ನಾಶಪಡಿಸಿದರೊ, ಅದರಿಂದ ಈಗ, ಪ್ರತಿ ದಿಕ್ಕಿನಲ್ಲಿಯೂ ಪ್ರತಿನಿತ್ಯವೂ ರಾಜಾಂತಃಪುರಗಳಲ್ಲಿ ಮುಡಿಗಳು ಬಿಚ್ಚಿರುವಂತಾಯಿತು; ಕುಪಿತನಾದ ಯಮನ ಸಖನಂತಿರುವ ಕುರುಕುಲಧೂಮಕೇತುವಿನಂತಿರುವ ದ್ರೌಪದಿಯ ಆ ಕೇಶಪಾಶವನ್ನು ಕಟ್ಟಿದುದಾಯಿತು; ಸಂತೋಷ. ಇನ್ನು ಜನಗಳ ಮರಣ ನಿಲ್ಲಲಿ. ರಾಜನ್ಯರುಗಳಿಗೆ ಮಂಗಲವಾಗಲಿ.] ಯುಧಿ–ದೇವಿ, ಏಷ ತೇ ಮೂರ್ಧಜಾನಾಂ ಸಂಹಾರೋಽಭಿನಂದಿತೋ ನಭಸ್ತಲಚಾರಿಣಾ ಸಿದ್ಧಜನೇನ। [ದೇವಿ, ಇದೊ ನಿನ್ನ ಕೇಶಸಂಗ್ರಹವನ್ನು ನೋಡಿ ಆಕಾಶಗಾಮಿಗಳು ಅಭಿನಂದಿಸುತ್ತಿರುವರು.]' – ಇಲ್ಲಿ ಪ್ರಾಪ್ತವಾದ

ಅದ್ಭುತವಿಷಯವು 'ಉಪಗೂಹನ'. ದೊರೆತ ಫಲದ ಶಮನದಿಂದ ಈ ಮೇಲಿನ ಪ್ರಸಂಗವು 'ಕೃತಿ'ಯೂ ಆಗುತ್ತವೆ.

ಟಿಪ್ಪಣಿ : 'ಕಾರ್ಯ'ಕ್ಕೆ ೧-೨೪ ನೋಡಿ. ವೇಣೀ.ದ ಉದಾ:- 'ಕೃತಿ'ಗೂ (೧-೧೦೬) ಅನ್ವಯಿಸುತ್ತದೆಂದು ವ್ಯಾಖ್ಯಾನಕಾರ ಸೂಚಿಸಿದ್ದಾನೆ.

ನಾ.ಶಾ. ಮತ್ತು ಸಾ.ದ.ಗಳಲ್ಲಿ ಇದಕ್ಕೆ 'ಪೂರ್ವವಾಕ್ಯ' ಎಂಬ ಹೆಸರಿದೆ; ಲಕ್ಷಣ: ಆಡಿದ ಮಾತಿನ ಅರ್ಥವನ್ನು ಪ್ರದರ್ಶಿಸುವಂಥದು 'ಪೂರ್ವವಾಕ್ಯ'.

ಹೋಲಿಕೆ : ಪೂರ್ವಭಾವ ನಾ.ಶಾ. : ೨೧-೧೦೪; ಸಾ.ದ. : ೬-೧೧೩; ಪ್ರತಾಪ : ೩-೧೮.

ಉಪಗೂಹನ ನಾ.ಶಾ. : ೨೧-೧೦೩, ಸಾ.ದ. : ೬-೧೧೨, ೧೧೩; ಪ್ರತಾಪ : ೩-೧೮.

## ೧೦೯. ಕಾವ್ಯಸಂಹಾರಲಕ್ಷಣ :

**ವರಾಪ್ತಿಃ ಕಾವ್ಯಸಂಹಾರಃ**

ಅನು : ಶ್ರೇಷ್ಠವಾದುದನ್ನು ಪಡೆಯುವುದು 'ಕಾವ್ಯಸಂಹಾರ'.

ವ್ಯಾಖ್ಯೆ : ಉದಾ:- [ವೇಣೀ : ಪು. ೨೦೫] 'ಕಿಂ ತೇ ಭೂಯಃ ಪ್ರಿಯಮುಪಕರೋಮಿ । [ಮತ್ತೆ ಯಾವ ಪ್ರಿಯವನ್ನುಂಟುಮಾಡಲಿ?]' - ಹೀಗೆ ಕಾವ್ಯವಿಷಯದ ಉಪಸಂಹಾರವು 'ಕಾವ್ಯಸಂಹಾರ'.

ಟಿಪ್ಪಣಿ : 'ಕಾವ್ಯಸಂಹಾರ'ಕ್ಕೆ 'ಉಪಸಂಹಾರ' [೧-೯೭] ಎಂಬ ಹೆಸರೂ ಬಂದಿದೆ.

ಹೋಲಿಕೆ = ನಾ.ಶಾ. : ೨೧-೧೦೫; ಸಾ.ದ. : ೬-೧೧೪; ಪ್ರತಾಪ : ೩-೧೮.

## ೧೧೦. ಪ್ರಶಸ್ತಿಲಕ್ಷಣ :

**ಪ್ರಶಸ್ತಿಃ ಶುಭಶಂಸನಮ್ ।**

ಅನು : ಶುಭದ ಕೋರಿಕೆ 'ಪ್ರಶಸ್ತಿ'.

ವ್ಯಾಖ್ಯೆ : ಉದಾ:- [ವೇಣೀ : ಪು. ೨೦೬, ೬-೪೬] : 'ಪ್ರೀತತರಶ್ಚೇದ್ಭವಾನ್, ತದಿದಮೇವಮಸ್ತು,

ಅಕೃಪಣಮತಿಃ ಕಾಮಂ ಜೀವ್ಯಾಜ್ಜನಃ ಪುರುಷಾಯುಷಂ
 ಭವತು ಭಗವನ್ ಭಕ್ತಿರ್ದ್ವೈತಂ ವಿನಾ ಪುರುಷೋತ್ತಮೇ ।
ಕಲಿತಭುವನೋ ವಿದ್ವದ್ಬಂಧುರ್ಗುಣೇಷು ವಿಶೇಷವಿ-
 ತ್ಸತತಸುಕೃತೀ ಭೂಯಾದ್ಭೂಪಃ ಪ್ರಸಾಧಿತಮಂಡಲಃ ॥'

[ನೀನು ಅತ್ಯಂತ ಪ್ರೀತನಾಗಿದ್ದರೆ ಇದಾಗಲಿ : ಕೃಪಣಮತಿಗಳಲ್ಲದ ಜನರು ನೂರು ವರ್ಷಕಾಲ ಚೆನ್ನಾಗಿ ಜೀವಿಸಲಿ. ಭಗವಂತನಾದ ಪುರುಷೋತ್ತಮನಲ್ಲಿ ಎರಡಿಲ್ಲದ ಭಕ್ತಿ ಉಂಟಾಗಲಿ. ಲೋಕಪ್ರೇಮಿಯೂ ವಿದ್ವಾಂಸರ ಬಂಧುವೂ ಗುಣವನ್ನು ವಿಶೇಷವಾಗಿ ತಿಳಿಯಬಲ್ಲವನೂ ಪುಣ್ಯಶಾಲಿಯೂ ಆದ ರಾಜನು ಭೂಮಿಯನ್ನು ಪಾಲಿಸಲಿ.] -ಹೀಗೆ ಶುಭವನ್ನು ಕೋರುವುದು 'ಪ್ರಶಸ್ತಿ'.

ಇವು ಹದಿನಾಲ್ಕು ನಿರ್ವಹಣಸಂಧಿಯ ಅಂಗಗಳು. ಹೀಗೆ ಅರುವತ್ತುನಾಲ್ಕು ಅಂಗಗಳಿರುವ ಐದು ಸಂಧಿಗಳು ಪ್ರತಿಪಾದಿತವಾದವು.

ಟಿಪ್ಪಣಿ : ನಾ.ಶಾ., ಸಾ.ದ.ಗಳಲ್ಲಿ 'ಪ್ರಾರ್ಥನಾ' ಎಂಬ ಗರ್ಭಾಂಗವೊಂದನ್ನು ಹೇಳಲಾಗಿದೆ. ಸಾ.ದ. [೬-೯೮ರ ಮೂಲ ವ್ಯಾಖ್ಯೆ]ದಲ್ಲಿ 'ಪ್ರಾರ್ಥನಾ' 'ಪ್ರಶಸ್ತಿ'ಗಳು ವಿಕಲ್ಪಗಳಾಗಿದ್ದು ಯಾವುದೊಂದನ್ನು ಸ್ವೀಕರಿಸತಕ್ಕದ್ದೆಂದು ಹೇಳಿದೆ. (೧-೮೦ರ ಟಿಪ್ಪಣಿ ನೋಡಿ.)

# ಸಂಧ್ಯಂಗಗಳ ಪ್ರಯೋಜನಗಳು

## ೧೧೧. ಸಾಂಗಸಂಧಿಗಳ ಪ್ರಯೋಜನಃ

**ಉಕ್ತಾಂಗಾನಾಂ ಚತುಃಷಷ್ಟಿಃ ಷೋಢಾ ಚೈಷಾಂ ಪ್ರಯೋಜನಮ್ ॥ ೫೪ ॥**

ಅನು : [ಮೇಲೆ] ಹೇಳಲಾದ [ಮುಖಾದಿ ಪಂಚಸಂಧಿಗಳ] ಅರುವತ್ತು ನಾಲ್ಕು ಅಂಗಗಳಿಗೆ ಆರು [ಬಗೆಯ] ಪ್ರಯೋಜನಗಳು.

ವ್ಯಾಖ್ಯೆ : ಅಂಗಗಳ ಪ್ರಯೋಜನ ಆರು ಬಗೆಯೆಂದು ಹೇಳಿ, ಆ ಪ್ರಯೋಜನಗಳಾವುವು ಎಂಬುದನ್ನು ಮುಂದೆ ವಿವರಿಸಿದೆ.

ಟಿಪ್ಪಣಿ : ಮುಖಸಂಧಿಯ ಅಂಗಗಳು೧೨; ಪ್ರತಿಮುಖಾಂಗಗಳು೧೩; ಗರ್ಭಾಂಗಗಳು೧೨; ಅವಮರ್ಶಾಂಗಗಳು೧೩; ನಿರ್ವಹಣಾಂಗಗಳು೧೪. ಒಟ್ಟು೬೪ ಅಂಗಗಳು.

ನೋಡಿ : ೧-೮೦ರ ಟಿಪ್ಪಣಿ.

ಹೋಲಿಕೆ = ನಾ.ಶಾ. : ೨೧-೬೯; ಸಾ.ದ. : ೬-೧೦೫; ಪ್ರತಾಪ : ೩-೧೮.

## ೧೧೨. ಆರು ಪ್ರಯೋಜನಗಳು :

**ಇಷ್ಟಸ್ಯಾರ್ಥಸ್ಯ ರಚನಾ ಗೋಪ್ಯಗುಪ್ತಿಃ ಪ್ರಕಾಶನಮ್ ।**
**ರಾಗಃ ಪ್ರಯೋಗಸ್ಯಾಶ್ಚರ್ಯಂ ವೃತ್ತಾಂತಸ್ಯಾನುಪಕ್ಷಯಃ ॥ ೫೫ ॥**

ಅನು : [ಅರುವತ್ತುನಾಲ್ಕು ಸಂಧ್ಯಂಗಗಳ ಪ್ರಯೋಜನಗಳು ಈ ಆರುಃ] ಉದ್ದಿಷ್ಟ ವಿಷಯದ [ಯೋಗ್ಯವಾದ] ರಚನೆ, ರಹಸ್ಯವಾದುದರ ಮುಚ್ಚಿಕೆ, [ಪ್ರಕಟಿಸಬೇಕಾದ ವಿಷಯದ] ಪ್ರಕಟನೆ, ರಾಗ, ಪ್ರಯೋಗದ ಆಶ್ಚರ್ಯ, ಕಥೆ ಕುಂದದಂತೆ ಮಾಡುವುದು.

ವ್ಯಾಖ್ಯೆ : ಬೇಕಾದ ವಿಷಯದ ಜೋಡಣೆ, ಗೋಪ್ಯವಾದ ವಿಷಯದ ಮುಚ್ಚಿಡುವಿಕೆ, ಪ್ರಕಾಶಿಸಬೇಕಾದ ವಿಷಯದ ಪ್ರಕಟನೆ, ಅಭಿನಯಿಸಬೇಕಾದ ರಾಗದ ವೃದ್ಧಿ, ಚಮತ್ಕಾರಿತ್ವ ಮತ್ತು ಕಾವ್ಯದ ಇತಿವೃತ್ತದ ವಿಸ್ತರ - ಈ ಆರು ಪ್ರಯೋಜನಗಳು.

ಟಿಪ್ಪಣಿ: ರಾಗ = ಭಾವ, ಪ್ರಯೋಗದ ಆಶ್ಚರ್ಯ = ಪ್ರಯೋಗಕೌಶಲ.

ರೂಪಕದ ವಸ್ತುವನ್ನು ಕುರಿತ ವಿಭಜನೆ ಲಕ್ಷಣಗಳು ಈ ಪ್ರಕಾಶದಲ್ಲಿ ಬಂದಿವೆ. ಅದರಲ್ಲಿ, ಈವರೆಗೆ ವಸ್ತುವಿನ ಪ್ರಕಾರಗಳು, ಅರ್ಥಪ್ರಕೃತಿ, ಅವಸ್ಥೆ, ಸಂಧಿ - ಇವುಗಳನ್ನು ಸಾಂಗವಾಗಿ ವಿವರಿಸಲಾಗಿದೆ. ವಸ್ತುವಿನಲ್ಲಿ, ತೋರಿಸಬೇಕಾದದ್ದು ತೋರಿಸಬಾರದಂಥದ್ದು ಮತ್ತು ಕೇಳಿಸಬೇಕಾದದ್ದು, ಕೆಲವರಿಗೆ ಮಾತ್ರ ಕೇಳಿಸಬೇಕಾದದ್ದು ಹಾಗೂ ಕೇಳಿಸಬಾರದ್ದು - ಈ ಮೊದಲಾದ ಭೇದಗಳನ್ನು ಇನ್ನು ಮುಂದೆ ಹೇಳಿದೆ.

ಹೋಲಿಕೆ = ನಾ.ಶಾ. : ೨೧-೫೩, ೫೪ : ಸಾ.ದ. ೬-೧೧೬, ೧೧೭; ಪ್ರತಾಪ : ೩-೧೮.

# ವಸ್ತುವಿನ ಎರಡು ವಿಭಾಗಗಳು

## ೧೧೩. ಸೂಚ್ಯ ಮತ್ತು ದೃಶ್ಯಶ್ರವ್ಯ :

**ದ್ವೇಧಾ ವಿಭಾಗಃ ಕರ್ತವ್ಯಃ ಸರ್ವಸ್ಯಾಪೀಹ ವಸ್ತುನಃ ।**
**ಸೂಚ್ಯಮೇವ ಭವೇತ್ಕಿಂಚಿದ್ದೃಶ್ಯಶ್ರವ್ಯಮಥಾಪರಮ್ ॥ ೫೬ ॥**

ಅನು : ಇಲ್ಲಿ [ಎಂದರೆ, ರೂಪಕದಲ್ಲಿ] ವಸ್ತುಸರ್ವಸ್ವಕ್ಕೂ ಎರಡು ವಿಭಾಗಗಳನ್ನು ಮಾಡತಕ್ಕದ್ದು. [ಎಂದರೆ ವಸ್ತುವಿನಲ್ಲಿ] ಕೆಲವು ಕೇವಲ ಸೂಚ್ಯವೂ ಉಳಿದವು ದೃಶ್ಯ ಶ್ರವ್ಯವೂ (ಕಾಣುಕೇಳುವುದು) ಆಗುವುವು.

ಟಿಪ್ಪಣಿ : ಶ್ರವ್ಯಕಾವ್ಯದಲ್ಲೆ ಈ ಬಗೆಯ ವಾಚ್ಯಸೂಚ್ಯಗಳನ್ನು ಕಾಣಬಹುದು. ದೃಶ್ಯಕಾವ್ಯಗಳಲ್ಲಿ, ಅಲ್ಲಿನ ಪ್ರಯೋಗ ಹಾಗೂ ಬಂಧವೈಶಿಷ್ಟ್ಯಗಳಿಂದಾಗಿ, ವಾಚ್ಯಸೂಚ್ಯಗಳ ವಿವೇಚನೆ ಕವಿಗೆ ತುಂಬ ಹೆಚ್ಚಾಗಿರತಕ್ಕದ್ದು. ಮುಖ್ಯವೂ ತೋರಿಸಲು ಸಾಧ್ಯವೂ ಆದ ವಸ್ತುವಿನ ಭಾಗವನ್ನು 'ದೃಶ್ಯಶ್ರವ್ಯ' ಎಂದೂ, ಪ್ರದರ್ಶನಕ್ಕೆ ಅಸಾಧ್ಯವೂ ಅಸಾಧುವೂ ಆದ ಉಳಿದ ಭಾಗವನ್ನು 'ಸೂಚ್ಯ' ಎಂದೂ ಹೆಸರಿಸಿದೆ.

ಹೋಲಿಕೆ = ಪ್ರತಾಪ : ೩-೧೮.

## ೧೧೪. ಸೂಚ್ಯ ದೃಶ್ಯಶ್ರವ್ಯಗಳ ಔಚಿತ್ಯ :

ನೀರಸೋಽನುಚಿತಸ್ತತ್ರ, ಸಂಸೂಚ್ಯೋ ವಸ್ತುವಿಸ್ತರಃ ।
ದೃಶ್ಯಸ್ತು ಮಧುರೋದಾತ್ತರಸಭಾವನಿರಂತರಃ ॥ ೫೭ ॥

ಅನು : ಅಲ್ಲಿ-ರಸವಿಹೀನವಾದ, [ರೂಪಕಕ್ಕೆ] ಉಚಿತವಲ್ಲದ ವಸ್ತುವಿನ ವಿವರಗಳು ಪೂರ್ಣಸೂಚ್ಯ[ವಾಗತಕ್ಕದ್ದು]; ಉದ್ದಕ್ಕೂ ಮಧುರವಾದ ರಸ ಉದಾತ್ತಭಾವ [ಇರುವಂಥ ವಸ್ತುಭಾಗಗಳು] ದೃಶ್ಯ [ವಾಗತಕ್ಕದ್ದು].

ಟಿಪ್ಪಣಿ : ರಂಗದ ಮೇಲೆ ತೋರಿಸಲೇಬಾರದ ವಿಷಯಗಳಿಗೆ ೩-೩೯ ನೋಡಿ. ರಸಭಾವ ವಿವರಗಳಿಗೆ ೪ನೆಯ ಪ್ರಕಾಶ ನೋಡಿ.

# ಐದು ಅರ್ಥೋಪಕ್ಷೇಪಕಗಳು

## ೧೧೫. ಸೂಚ್ಯಸಾಧನಗಳು :

ಅರ್ಥೋಪಕ್ಷೇಪಕೈಃ ಸೂಚ್ಯಂ ಪಂಚಭಿಃ ಪ್ರತಿಪಾದಯೇತ್ ।
ವಿಷ್ಕಂಭಚೂಲಿಕಾಂಕಾಸ್ಯಾಂಕಾವತಾರಪ್ರವೇಶಕೈಃ ॥ ೫೮ ॥

ಅನು : ವಿಷ್ಕಂಭ, ಚೂಲಿಕಾ, ಅಂಕಾಸ್ಯ, ಅಂಕಾವತಾರ, ಪ್ರವೇಶಕ - ಈ ಐದು ಅರ್ಥೋಪಕ್ಷೇಪಕಗಳಿಂದ ಸೂಚ್ಯ [ವಾದ ವಸ್ತುಭಾಗ]ವನ್ನು ಪ್ರತಿಪಾದಿಸತಕ್ಕದ್ದು.

ಟಿಪ್ಪಣಿ : ವಸ್ತುವಿನಲ್ಲಿ ಎರಡು ವಿಭಾಗ(ದೃಶ್ಯಶ್ರಾವ್ಯ ಮತ್ತು ಸೂಚ್ಯ)ಗಳನ್ನು ಹೇಳಿ, ಅದರಲ್ಲಿ ಸೂಚ್ಯ ವಿಭಾಗದ ಸಾಧನಗಳನ್ನು ಇಲ್ಲಿ ಹೇಳಿದೆ. ಇನ್ನುಮುಂದೆ ಅವುಗಳ ಲಕ್ಷಣಗಳನ್ನು ಹೇಳಲಾಗುತ್ತದೆ.

ಹೋಲಿಕೆ = ನಾ.ಶಾ. : ೨೧-೧೦೮; ಸಾ.ದ. : ೬-೫೪; ಪ್ರತಾಪ : ೩-೧೯.

## ೧೧೬. ವಿಷ್ಕಂಭಲಕ್ಷಣ :

ವೃತ್ತವರ್ತಿಷ್ಯಮಾಣಾನಾಂ ಕಥಾಂಶಾನಾಂ ನಿದರ್ಶಕಃ ।
ಸಂಕ್ಷೇಪಾರ್ಥಸ್ತು ವಿಷ್ಕಂಭೋ ಮಧ್ಯಪಾತ್ರಪ್ರಯೋಜಿತಃ ॥ ೫೯ ॥

ಅನು : ಮಧ್ಯಪಾತ್ರಗಳಿಂದ ಯೋಜಿತವಾಗಿದ್ದು, ಸಂಕ್ಷೇಪದ ಸಲುವಾಗಿ [ಬರುವ] 'ವಿಷ್ಕಂಭ'ವು [ಹಿಂದೆ] ನಡೆದ [ಮತ್ತು ಮುಂದೆ] ನಡೆಯಲಿರುವ ಕಥಾಂಶಗಳನ್ನು ಸೂಚಿಸುವುದು.

ವ್ಯಾಖ್ಯೆ : ಒಂದು ಅಥವಾ ಎರಡು ಮಧ್ಯಮಪಾತ್ರಗಳಿಂದ ಯೋಜಿತವಾಗಿ ಹಿಂದು ಮುಂದಿನ ಕಥಾವಯವಗಳನ್ನು ತಿಳಿಸುವುದು 'ವಿಷ್ಕಂಭಕ'. ಅದರಲ್ಲಿ ಶುದ್ಧ ಮತ್ತು ಸಂಕೀರ್ಣ ಎಂದು ಎರಡು ಬಗೆ; ಅದನ್ನು ಮುಂದೆ ಹೇಳಿದೆ.

ಟಿಪ್ಪಣಿ : 'ವಿಷ್ಕಂಭ' 'ವಿಷ್ಕಂಭಕ' ಎಂಬ ಎರಡು ಹೆಸರುಗಳೂ ಬಳಕೆಯಲ್ಲಿವೆ. ಉತ್ತಮ ಮಧ್ಯಮ ಅಧಮ – ಈ ಪಾತ್ರಭೇದವನ್ನು ಕುರಿತು ಸಾ.ದ. [೩-೪೬]ದಲ್ಲಿ ಹೀಗೆ ಹೇಳಿದೆ :

ಉತ್ತಮಾಃ ಪೀಠಮರ್ದಾದ್ಯಾಃ ಮಧ್ಯೌ ವಿಟವಿದೂಷಕೌ।

ತಥಾ ಶಕಾರಚೇಟಾದ್ಯಾಃ ಅಧಮಾಃ ಪರಿಕೀರ್ತಿತಾಃ ॥

ಹೋಲಿಕೆ = ನಾ.ಶಾ. : ೨೧-೧೦೯; ಸಾ.ದ. : ೬-೫೫; ಪ್ರತಾಪ : ೩-೧೯, ೨೦.

## ೧೧೭. ವಿಷ್ಕಂಭದ ಎರಡು ಭೇದ :

**ಏಕಾನೇಕಕೃತಃ ಶುದ್ಧಃ ಸಂಕೀರ್ಣೋ ನೀಚಮಧ್ಯಮೈಃ ।**

ಅನು : ಒಂದು [ಅಥವಾ] ಒಂದಕ್ಕಿಂತ ಹೆಚ್ಚು [ಮಧ್ಯಮ ಪಾತ್ರಗಳಿಂದ] ಕೂಡಿದ್ದು 'ಶುದ್ಧ [ವಿಷ್ಕಂಭ]'; ನೀಚಮಧ್ಯಮರಿಂಡ ಕೂಡಿದ್ದು 'ಸಂಕೀರ್ಣ [ವಿಷ್ಕಂಭ]'.

ವ್ಯಾಖ್ಯೆ : ಒಂದು ಅಥವಾ ಎರಡು ಮಧ್ಯಮ ಪಾತ್ರಗಳಿಂದ ಶುದ್ಧವೂ, ಮಧ್ಯಮ ಮತ್ತು ಅಧಮ ಪಾತ್ರಗಳು ಕೂಡಿ 'ಸಂಕೀರ್ಣ'ವೂ ಆಗುತ್ತದೆ.

ಟಿಪ್ಪಣಿ : 'ವಿಷ್ಕಂಭ'ವು 'ಮಧ್ಯಮ ಪಾತ್ರಗಳಿಂದ ಯೋಜಿತವಾಗಿರುತ್ತದೆ'ಎಂಬುದು ನಿಶ್ಚಿತ (೧-೧೧೬). ಅದರಲ್ಲಿ ಒಂದು ಮಧ್ಯಮ ಪಾತ್ರದ ಸ್ವಗತ ಮಾತ್ರವಿದ್ದರೆ ಅಥವಾ ಎರಡು ಮಧ್ಯಮ ಪಾತ್ರಗಳ ಸಂಭಾಷಣೆ ಯಿದ್ದರೆ 'ಶುದ್ಧ'ವಾಗುತ್ತದೆ. ಮಧ್ಯಮ ಪಾತ್ರದ ಜೊತೆಯಲ್ಲಿ ಅಧಮ ಪಾತ್ರ ಅಥವಾ ಪಾತ್ರಗಳು ಕೂಡಿ ಕೊಂಡಿದ್ದರೆ ಅದು 'ಸಂಕೀರ್ಣ'ವೆನ್ನಿಸಿಕೊಳ್ಳುತ್ತದೆ. ಆದರೆ, 'ಮಧ್ಯಮ ಪಾತ್ರ ಪ್ರಯೋಜಿತವಲ್ಲದೆ' ಕೇವಲ ಅಧಮ ಪಾತ್ರಗಳಿಂದ ಕೂಡಿದ್ದರೆ ಅದು 'ವಿಷ್ಕಂಭ'ವಾಗುವುದಿಲ್ಲ, ಬದಲು 'ಪ್ರವೇಶಕ'ವಾಗುತ್ತದೆ. ನೋಡಿ: ೧-೧೧೮. ವಿಷ್ಕಂಭದ ಭಾಷೆ ಸಂಸ್ಕೃತ ಅಥವಾ ಶೌರಸೇನೀ ಪ್ರಾಕೃತ.

ಹೋಲಿಕೆ = ನಾ.ಶಾ. : ೨೧-೧೧೦; ಸಾ.ದ. : ೬-೫೬; ಪ್ರತಾಪ : ೩-೨೦.

## ೧೧೮. ಪ್ರವೇಶಕಲಕ್ಷಣ :

**ತದ್ವದೇವಾನುದಾತ್ತೋಕ್ತ್ಯಾ ನೀಚಪಾತ್ರಪ್ರಯೋಜಿತಃ ॥ ೬೦ ॥**

**ಪ್ರವೇಶೋಽಂಕದ್ವಯ ¹ಸ್ಯಾಂತಃ¹ ಶೇಷಾರ್ಥಸ್ಯೋಪಸೂಚಕಃ ।**

ಅನು : ಉದಾತ್ತವಲ್ಲದ ಮಾತುಗಳು [ಮತ್ತು] ನೀಚ ಪಾತ್ರಗಳಿಂದ, ಎರಡು ಅಂಕಗಳ ನಡುವೆ, ಯೋಜಿತವಾಗುವ 'ಪ್ರವೇಶ[ಕ]'ವು ಅದರಂತೆಯೇ [ಎಂದರೆ, ವಿಷ್ಕಂಭ ದಂತೆಯೇ] ಉಳಿದ [ಹಿಂದುಮುಂದಿನ] ವಿಷಯಗಳನ್ನು ಸೂಚಿಸುವುದು.

ವ್ಯಾಖ್ಯೆ : 'ಅದರಂತೆಯೇ' (ತದ್ವದೇವ) ಎಂದು ಹೇಳಿರುವುದರ ಅರ್ಥ ಇದು : ಪ್ರವೇಶಕವೂ ವಿಷ್ಕಂಭದಂತೆಯೇ ಭೂತಭವಿಷ್ಯದ ವಿಷಯಗಳನ್ನು ತಿಳಿಸುತ್ತದೆ. ನೀಚವಾಕ್ಯಗಳು ಹಾಗೂ ನೀಚಪಾತ್ರಗಳು

---

¹ ಪಾಠ : ಅಂತೇ.

ಇಲ್ಲಿ ಯೋಜಿತವಾಗಿರುತ್ತವೆ; ಆ ಕಾರಣದಿಂದಲೇ 'ವಿಷ್ಕಂಭ'ದಿಂದ 'ಪ್ರವೇಶಕ'ವು ಬೇರೆಯಾಗಿದೆ. ಪ್ರವೇಶಕವು ಎರಡು ಅಂಕಗಳ ನಡುವೆ ಯೋಜಿತವಾಗಬೇಕು ಎಂದಿರುವುದರಿಂದ, ಪ್ರಥಮಾಂಕದಲ್ಲಿ 'ಪ್ರವೇಶಕ'ವನ್ನು ಬಳಸತಕೂಡದು.

ಟಿಪ್ಪಣಿ : 'ಪ್ರವೇಶ' 'ಪ್ರವೇಶಕ' ಎಂಬೆರಡೂ ಹೆಸರುಗಳು ಬಳಕೆಯಲ್ಲಿವೆ. ಪ್ರವೇಶಕದ ಭಾಷೆ ಸಂಸ್ಕೃತವಾಗುವಂತಿಲ್ಲ. ಅದು ಮಾಗಧೀ, ಶಕಾರೀ, ಆಭೀರೀ, ಚಾಂಡಾಲೀ, ಪೈಶಾಚೀ ಮುಂತಾದ ಕೀಳು ಪ್ರಾಕೃತವಾಗಿರುತ್ತವೆ.

ಅರ್ಥೋಪಕ್ಷೇಪಗಳನ್ನು ಹೇಳುವಾಗ [೧-೧೧೫] 'ಪ್ರವೇಶಕ'ದ ಹೆಸರು ಅಂತ್ಯದಲ್ಲಿ ಬಂದಿದ್ದರೂ, ಲಕ್ಷಣ ಹಾಗೂ ಪ್ರಾಮುಖ್ಯತೆಯಲ್ಲಿ ಅದು 'ವಿಷ್ಕಂಭ'ವನ್ನು ಹೆಚ್ಚು ಹೋಲುವುದರಿಂದ ಅದಾದೊಡನೆ ಇದು ಲಕ್ಷಿತವಾಗಿದೆ.

ಹೋಲಿಕೆ = ನಾ.ಶಾ. : ೨೧-೧೧೨ರಿಂದ ೧೧೪; ಸಾ.ದ. : ೬-೫೭; ಪ್ರತಾಪ : ೩-೨೨.

## ೧೧೯. ಚೂಲಿಕಾಲಕ್ಷಣ :

**೧ಅಂತರ್ಯವನಿಕಾಸಂಸ್ಥೈಶ್ಚೂಲಿಕಾರ್ಥಸ್ಯ ಸೂಚನಾ ॥ ೬೧ ॥**

ಅನು : [ಪಾತ್ರವು] ತೆರೆಯ ಒಳಗಡೆ ಇದ್ದು [ಕಥಾ] ವಿಷಯವನ್ನು ಸೂಚಿಸುವುದು 'ಚೂಲಿಕಾ'.

ವ್ಯಾಖ್ಯೆ : ನೇಪಥ್ಯಪಾತ್ರದಿಂದ ವಿಷಯವನ್ನು ಸೂಚಿಸುವುದು 'ಚೂಲಿಕಾ'. ಉದಾ:- [ಉತ್ತರ : ದ್ವಿತೀಯಾಂಕದ ಆದಿಯಲ್ಲಿ-ಪು. ೫೧] : '(ನೇಪಥ್ಯೇ) ಸ್ವಾಗತಂ ತಪೋಧನಾಯಾಃ। (ತತಃ ಪ್ರವಿಶತಿ ತಪೋಧನಾ ।) [(ನೇಪಥ್ಯದಲ್ಲಿ) ತಪೋಧನಳಿಗೆ ಸ್ವಾಗತ. (ಅನಂತರ ತಪೋಧನೆಯಾದ ಆತ್ರೇಯೀ ಪ್ರವೇಶಿಸುವಳು.)]' - ಹೀಗೆ ನೇಪಥ್ಯಪಾತ್ರವಾದ ವಾಸಂತಿಕೆಯಿಂದ ಆತ್ರೇಯಿಯ ಬರುವಿನ ಸೂಚನೆ 'ಚೂಲಿಕಾ'.

ಮತ್ತು - [ಮಹಾ : ಚತುರ್ಥಾಂಕದ ಆದಿಯಲ್ಲಿ - ಪು. ೧೧೭] : '(ನೇಪಥ್ಯೇ) ಭೋ ಭೋ ವೈಮಾನಿಕಾಃ, ಪ್ರವರ್ತ್ಯಂತಾಂ ಪ್ರವರ್ತ್ಯಂತಾಂ ಮಂಗಲಾನಿ,

ಕೃಶಾಶ್ವಾಂತೇವಾಸೀ ಜಯತಿ ಭಗವಾನ್ ಕೌಶಿಕಮುನಿಃ
ಸಹಸ್ರಾಂಶೋರ್ವಂಶೇ ಜಗತಿ ವಿಜಯಿ ಕ್ಷತ್ರಮಧುನಾ।
ವಿನೇತಾ ಕ್ಷತ್ರಾರೇರ್ಜಗದಭಯದಾನವ್ರತಧರಃ
ಶರಣ್ಯೋ ಲೋಕಾನಾಂ ದಿನಕರಕುಲೇಂದುರ್ವಿಜಯತೇ ॥'

[(ನೇಪಥ್ಯದಲ್ಲಿ) ಎಲೈ ವೈಮಾನಿಕರೆ, ಮಂಗಲಗಳನ್ನಾರಂಭಿಸಿ, ಕೃಶಾಶ್ವನ ಶಿಷ್ಯನಾದ ಭಗವಾನ್ ವಿಶ್ವಾಮಿತ್ರನು ವಿಜಯಿಯಾಗಿದ್ದಾನೆ. ಜಗತ್ತಿನಲ್ಲಿ ಈಗಲೂ ಸೂರ್ಯವಂಶದ ಕ್ಷತ್ರಿಯ ಜಾತಿಯ ವಿಜಯವಾಗಿದೆ. ಕ್ಷತ್ರಿಯರ ಶತ್ರುವಾದ ಪರಶುರಾಮನನ್ನು ದಾರಿಗೆ ತರತಕ್ಕ, ಜಗತ್ತಿಗೆ ಅಭಯದಾನ ಮಾಡುವ ವ್ರತವಲ್ಲಿತೊಡಗಿರುವ, ಸರ್ವಲೋಕಶರಣ್ಯನಾದ ದಿನಕರಕುಲಚಂದ್ರನಾದ ಶ್ರೀರಾಮಚಂದ್ರನು ಸರ್ವೋತ್ಕರ್ಷ ಹೊಂದಿದ್ದಾನೆ. ]- ಇಲ್ಲಿ, ನೇಪಥ್ಯದ ದೇವಪಾತ್ರಗಳಿಂದ ಪರಶುರಾಮನನ್ನು ರಾಮನು ಸೋಲಿಸಿದನೆಂಬುದು ಸೂಚಿತವಾಗಿದೆ. ಇದು 'ಚೂಲಿಕಾ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೧-೧೧೧; ಸಾ.ದ.: ೬-೫೮; ಪ್ರತಾಪ ೩-೨೦.

## ೧೨೦. ಅಂಕಾಸ್ಯಲಕ್ಷಣ :

**ಅಂಕಾಂತಪಾತ್ರೈರಂಕಾಸ್ಯಂ ಭಿನ್ನಾಂಕಸ್ಯಾರ್ಥಸೂಚನಾತ್ ।**

---

೧ ಪಾಠ : ಅಂತರ್ಜವನಿಕಾ (ನಾ.ಶಾ.ದಲ್ಲಿ 'ಅಂತರ್ಯವನಿಕಾ' ಎಂಬ ಪಾಠವಿದೆ)

ಅನು : [ಯಾವುದೊಂದು] ಅಂಕದ ಕೊನೆಯಲ್ಲಿನ ಪಾತ್ರಗಳಿಂದ ಬೇರೆಯದಾದ [ಎಂದರೆ, ಮುಂದಿನ ] ಅಂಕದ ವಿಷಯವನ್ನು ಸೂಚಿಸುವುದು 'ಅಂಕಾಸ್ಯ'.

ವ್ಯಾಖ್ಯೆ : ಅಂಕಾಂತದ ಪಾತ್ರವೇ 'ಅಂಕಾಂತಪಾತ್ರ'. ಅಂಕಾಂತಪಾತ್ರಗಳಿಂದ ಆ ಅಂಕದಿಂದ ಬೇರೆಯಾದ ಮುಂದಿನ ಅಂಕಮುಖದ ಸೂಚನೆ ಬಂದು, ಅದೇ ಸೂಚನೆಗೆ ಹೊಂದಿ ಮುಂದಿನ ಅಂಕವು ಆರಂಭವಾಗುವುದು 'ಅಂಕಾಸ್ಯ'. ಉದಾ:- [ ಮಹಾ : ದ್ವಿತೀಯಾಂಕದ ಕೊನೆಯಲ್ಲಿ - ಪು. ೮೨ ] : '(ಪ್ರವಿಶ್ಯ) ಸುಮಂತ್ರಃ- ಭಗವಂತೌ ವಸಿಷ್ಠವಿಶ್ವಾಮಿತ್ರೌ ಭವತಃ ಸಭಾರ್ಗವಾನಾಹ್ವಯತಃ। [ (ಪ್ರವೇಶಿಸಿ) ಸುಮಂತ್ರ - ಭಗವಂತರಾದ ವಸಿಷ್ಠವಿಶ್ವಾಮಿತ್ರರು ಭಾರ್ಗವಸಹಿತರಾದ ನಿಮ್ಮನ್ನು ಆಹ್ವಾನಿಸುತ್ತಾರೆ.] ಇತರೇ - ಕ್ವ ಭಗವಂತೌ [ ಎಲ್ಲಿ ಆ ಭಗವಾನರಿಬ್ಬರು?] ಸುಮಂತ್ರಃ- ಮಹಾರಾಜ ದಶರಥಾಂತಿಕೇ । [ ಮಹಾರಾಜ ದಶರಥನ ಸಮೀಪದಲ್ಲಿ.] ಇತರೇ- ತದನುರೋಧಾತ್ತತ್ರೈವ ಗಚ್ಛಾಮಃ। [ ಅವರ ಅಪೇಕ್ಷೆಯಂತೆ ಅಲ್ಲಿಗೇ ಹೋಗೋಣ.]' - ಹೀಗೆ ಅಂಕ ಸಮಾಪ್ತಿಯಾಗಲು, ಮುಂದಿನ ಅಂಕದ ಮೊದಲಲ್ಲಿ, '(ತತಃ ಪ್ರವಿಶಂತ್ಯುಪವಿಷ್ಟಾ ವಸಿಷ್ಠವಿಶ್ವಾಮಿತ್ರ ಪರಶುರಾಮಾಃ ।) [(ಅನಂತರ ಪ್ರವೇಶಃ ಕುಳಿತಿರುವ ವಸಿಷ್ಠವಿಶ್ವಾಮಿತ್ರ ಪರಶುರಾಮರು.)]'- ಹೀಗೆ, ಸುಮಂತ್ರಪಾತ್ರ ಪ್ರವೇಶದ ಮೂಲಕ, ಹಿಂದಿನ ಅಂಕದಲ್ಲಿ, ಶತಾನಂದ ಜನಕ ಕಥಾವಿಷಯವು ಕಡಿದು, ಮುಂದಿನ ಅಂಕದ ಆರಂಭದ ಸೂಚನೆ ಬಂದಿದೆ. ಇದು 'ಅಂಕಾಸ್ಯ'.

ಟಿಪ್ಪಣಿ : ಇದಕ್ಕೆ 'ಅಂಕಮುಖ' ಎಂಬ ಹೆಸರೂ ಇದೆ.

ಹೋಲಿಕೆ = ನಾ.ಶಾ. : ೨೧-೧೧೬; ಸಾ.ದ. : ೬-೫೯, ೬೦; ಪ್ರತಾಪ : ೩-೨೧.

## ೧೨೧. ಅಂಕಾವತಾರಲಕ್ಷಣ :

**ಅಂಕಾವತಾರಸ್ತ್ವಂಕಾಂತೇ [1]ಪಾತೋಽಂಕಸ್ಯಾ[1]ವಿಭಾಗತಃ ॥ ೬೨ ॥**

**ಏಭಿಃ ಸಂಸೂಚಯೇತ್ಸೂಚ್ಯಂ ದೃಶ್ಯಮಂಕೈಃ ಪ್ರದರ್ಶಯೇತ್ ।**

ಅನು : [ಯಾವುದೊಂದು] ಅಂಕದ ಕೊನೆಯಲ್ಲಿ [ಇನ್ನೊಂದು] ಅಂಕವು ಅವಿಭಾಜ್ಯ ವಾಗಿ ಬರುವುದು 'ಅಂಕಾವತಾರ'. ಸೂಚ್ಯ[ವಾದ ವಿಷಯ]ಗಳನ್ನು ಇವುಗಳಿಂದ [ಎಂದರೆ, ಮೇಲೆ ಹೇಳಿದ ಐದು ಬಗೆಯ ಅರ್ಥೋಪಕ್ಷೇಪಕಗಳಿಂದ] ಚೆನ್ನಾಗಿ ಸೂಚಿಸ ತಕ್ಕದ್ದು. ದೃಶ್ಯ[ವಾದ ವಿಷಯ] ಗಳನ್ನು 'ಅಂಕ'ಗಳಲ್ಲಿ ಪ್ರದರ್ಶಿಸತಕ್ಕದ್ದು.

ವ್ಯಾಖ್ಯೆ : ಹಿಂದಿನ ಮತ್ತು ಮುಂದಿನ ಅಂಕಗಳ ನಡುವೆ ಕಥಾವಸ್ತುವು ಕಡಿಯದೆ ಅವಿಚ್ಛಿನ್ನವಾಗಿ ಮುಂದುವರಿಯುತ್ತದೆ; ಹಾಗೂ, ಹಿಂದಿನ ಅಂಕ ಮುಗಿದು ಮುಂದಿನ ಅಂಕ ಪ್ರಾರಂಭವಾಯಿತೆಂದು ಕೇವಲ ಪಾತ್ರಗಳ ಪ್ರವೇಶಮಾತ್ರದಿಂದಲೇ ಸೂಚಿತವಾಗುತ್ತದೆ - ಪ್ರವೇಶಕ ವಿಷ್ಕಂಭ ಮೊದಲಾದುವು ಇಲ್ಲದೆ ಹೀಗಿರು ವಂಥದು ' ಅಂಕಾವತಾರ'ವಾಗುವುದು.

ಉದಾ:- [ಮಾಲ.ಮಿ : ಪ್ರಥಮಾಂಕದ ಕೊನೆಯಲ್ಲಿ - ಪು. ೨೧] : 'ವಿದೂ - ತೇಣ ಹಿಮುವೇವಿ ದೇವೀಏ ಪೇಕ್ಖಾಗೇಹಂ ಗದುಅ ಸಂಗೀದೋವಅರಣಂ ಅರಿಅ ತತ್ತಭವದೋ ದೂವಂ ವಿಸಜ್ಜೇಧ । ಅಥವಾ ಮುದಂಗಸದ್ದೋ ಜ್ಜೇವ ಣಂ ಉತ್ಥಾವಯಿಸ್ಸದಿ। [ಅದರಿಂದ ನೀವಿಬ್ಬರು ದೇವಿಯ ಪ್ರೇಕ್ಷಾಗೃಹಕ್ಕೆ ಹೋಗಿ ಅಲ್ಲಿ ಸಂಗೀತೋಪಕರಣಗಳನ್ನು ಅನುಗೊಳಿಸಿ ದೂತನನ್ನು ಕಳುಹಿಸಿ; ಅಥವಾ ಮೃದಂಗಶಬ್ದವೇ ಎಬ್ಬಿಸುತ್ತದೆ.]' - ಇದಾದಮೇಲೆ ಮೃದಂಗಶಬ್ದವನ್ನು ಕೇಳಿದ ಅನಂತರದಲ್ಲಿ ಮೊದಲ ಅಂಕದ ಪಾತ್ರಗಳೇ ಮುಂದುವರಿದು ಮುಂದಿನ ಅಂಕ ಆರಂಭವಾಗುತ್ತದೆ. ಮೊದಲ ಅಂಕದಲ್ಲಿ ವರ್ಣಿತವಾದ ಸಂಗತಿಯೇ ಅಲ್ಲಿ ತೋರುತ್ತದೆ. ಮೊದಲ ಅಂಕದ ಕಥೆ ಕಡಿಯದೆ ಎರಡನೆಯ ಅಂಕದಲ್ಲಿ ನೇರವಾಗಿ ಮುಂದುವರಿಯುತ್ತದೆ. ಇದು 'ಅಂಕಾವತಾರ'.

---

೧ ಪಾಠ : ಪಾತ್ರಾಂಕಸ್ಯಾ.

ಟಿಪ್ಪಣಿ : ವಸ್ತುವಿನ 'ಸೂಚ್ಯ' 'ದೃಶ್ಯ' ಎಂಬೆರಡು ವಿಧಗಳಲ್ಲಿ 'ಸೂಚ್ಯ'ದ ಐದು ಸಾಧನಗಳನ್ನು ವಿವರಿಸಿಯಾಯಿತು. 'ದೃಶ್ಯ'ವನ್ನು ರೂಪಕದ ಮುಖ್ಯ ವಿಭಾಗಗಳಾದ ಅಂಕಗಳಲ್ಲಿ ಪ್ರದರ್ಶಿಸತಕ್ಕದ್ದು ಎಂದು ಅಂತ್ಯದಲ್ಲಿ ನಿರ್ದೇಶಿಸಿದೆ. 'ಅಂಕಲಕ್ಷಣ'ಕ್ಕೆ ೩-೩೫, ೪೧ ಮತ್ತು ೪೨ ನೋಡಿ.

ಹೋಲಿಕೆ = ನಾ.ಶಾ. : ೨೧-೧೧೫ ; ಸಾ.ದ. : ೬-೫೮, ೫೯; ಪ್ರತಾಪ : ೩-೨೨, ೨೩.

# ಶ್ರಾವ್ಯಾಶ್ರಾವ್ಯಗಳು

## ೧೨೨. ಮತ್ತೊಂದು ಬಗೆಯ ವಸ್ತುವಿಭಾಗ :

**ನಾಟ್ಯಧರ್ಮಮಪೇಕ್ಷ್ಯೈತತ್ಪುನರ್ವಸ್ತು ತ್ರಿಧೇಷ್ಯತೇ ॥ ೬೩ ॥**

ಅನು : ನಾಟ್ಯಧರ್ಮಕ್ಕೆ ತಕ್ಕುದಾಗಿ ವಸ್ತುವು ಪುನಃ ಮೂರು ವಿಧವಾಗುತ್ತದೆ.

ಟಿಪ್ಪಣಿ : ನಟರು ಮತ್ತು ನಾಟ್ಯಕರ್ತರು ಇಟ್ಟುಕೊಂಡಿರುವ ಸಂಪ್ರದಾಯಗಳಿಗೆ 'ಧರ್ಮ' ಎಂಬ ಹೆಸರು. ಅದು, ನಾಟ್ಯಧರ್ಮಿ ಮತ್ತು ಲೋಕಧರ್ಮಿ ಎಂದು ಎರಡು ವಿಧ. ನಾಟ್ಯದಲ್ಲಿ ಬಳಸುವ ಯಾವುದೊಂದು ಅಂಥ ಸಂಪ್ರದಾಯವು ಲೋಕಸಹಜವಾಗಿದ್ದರೆ ಅದು 'ಲೋಕಧರ್ಮಿ' ಇಲ್ಲದಿದ್ದರೆ 'ನಾಟ್ಯಧರ್ಮಿ'. ಸಾಮಾನ್ಯ ಉದಾಹರಣೆ ಹೇಳುವುದಾದರೆ ದುಃಖ ಬಂದಾಗ, ನಿತ್ಯಲೋಕದಲ್ಲಿನಂತಯೇ, ಲೋಕಸಹಜವಾದ ಅಳುವನ್ನು ಅಭಿನಯಿಸುವುದು 'ಲೋಕಧರ್ಮಿ'; ಅದನ್ನೆ ನಾಟ್ಯ ಅಥವಾ ಸಂಗೀತದಿಂದ ತೋರಿಸುವುದು 'ನಾಟ್ಯಧರ್ಮಿ' – ಕಾರಣ, ದುಃಖ ಬಂದಾಗ ನರ್ತಿಸುವ ಅಥವಾ ಹಾಡುವ ಸಂದರ್ಭವನ್ನು ನಿತ್ಯಜೀವನದಲ್ಲಿ ಸುಲಭವಾಗಿ ಕಾಣಲಾರೆವು. ಒಟ್ಟಿನಲ್ಲಿ, ಲೌಕಿಕ ಕ್ರಿಯೆಯೊಂದರ ಪ್ರತಿಕೃತಿ 'ಲೋಕಧರ್ಮಿ'; ನಾಟ್ಯಪ್ರಕ್ರಿಯೆಯ ಮೂಲಕ ಲೌಕಿಕ ಕ್ರಿಯೆಯೊಂದನ್ನು ಸೂಚಿಸುವುದು 'ನಾಟ್ಯಧರ್ಮಿ'.

ಲೋಕಧರ್ಮ ನಾಟ್ಯಧರ್ಮಗಳಿಗೆ ನೋಡಿ : ನಾ.ಶಾ. : ೨೩-೧೯೩.

## ೧೨೩. ಆ ಮೂರು ವಿಭಾಗಗಳು :

**ಸರ್ವೇಷಾಂ ನಿಯತಸ್ಯೈವ ಶ್ರಾವ್ಯಮಶ್ರಾವ್ಯಮೇವ ಚ ।**

ಅನು : ಎಲ್ಲರಿಗೂ ಕೇಳುವಂಥದು, ಕೆಲವರಿಗೆ ಮಾತ್ರ [ಕೇಳುವಂಥದು] ಮತ್ತು ಕೇಳದೆಯೇ ಇರುವಂಥದು [-ಸರ್ವಶ್ರಾವ್ಯ, ನಿಯತಶ್ರಾವ್ಯ ಮತ್ತು ಅಶ್ರಾವ್ಯ – ಹೀಗೆ ಮೂರು ವಿಧಗಳು].

ಟಿಪ್ಪಣಿ : ಹ್ಯಾಸ್ ಹೀಗೆ ಅನುವಾದಿಸಿದ್ದಾರೆ : '....ಕೆಲವು ಎಲ್ಲರಿಗೂ ಕೇಳುವಂಥದು, ಕೆಲವು ಎಲ್ಲರಿಗೂ ಕೇಳದಿರುವಂಥದು'. [ಹ್ಯಾಸ್ : ೧-೧೨೩]

ಮುಂದಿನ ಖಂಡದಲ್ಲಿ ಶ್ರಾವ್ಯ ಹಾಗೂ ಅಶ್ರಾವ್ಯಗಳನ್ನು ಹೇಳಿ ಅನಂತರದ ಖಂಡಗಳಲ್ಲಿ ನಿಯತಶ್ರಾವ್ಯಗಳನ್ನು ಕುರಿತು ಹೇಳಿದೆ.

## ೧೨೪. ಪ್ರಕಾಶ ಸ್ವಗತಗಳ ಲಕ್ಷಣ :

**ಸರ್ವಶ್ರಾವ್ಯಂ ಪ್ರಕಾಶಂ ಸ್ಯಾದಶ್ರಾವ್ಯಂ ಸ್ವಗತಂ ಮತಮ್ ॥ ೬೪ ॥**

ಅನು : ಎಲ್ಲರಿಗೂ ಕೇಳುವಂಥದು [ಎಂದರೆ, ಸರ್ವಶ್ರಾವ್ಯವು] 'ಪ್ರಕಾಶ'; ಕೇಳದಂಥದು [ಎಂದರೆ, ಅಶ್ರಾವ್ಯವು] 'ಸ್ವಗತ' ಎಂದು ಅಭಿಪ್ರಾಯ.

ವ್ಯಾಖ್ಯೆ : ಸರ್ವಶ್ರಾವ್ಯವಾದ ವಸ್ತುವು 'ಪ್ರಕಾಶ'; ಸರ್ವರಿಗೂ ಅಶ್ರಾವ್ಯವಾದದ್ದು 'ಸ್ವಗತ'.

ಟಿಪ್ಪಣಿ : ಹೋಲಿಕೆ = ಸಾ.ದ. : ೬-೨೩೭, ೨೩೮.

## ೧೨೫. ನಿಯತಶ್ರಾವ್ಯಗಳು :

ದ್ವಿಧಾನ್ಯನ್ನಾಟ್ಯಧರ್ಮಾಖ್ಯಂ ಜನಾಂತಮಪವಾರಿತಮ್ ।

ಅನು : ನಾಟ್ಯಧರ್ಮಿಯಾದ ಮತ್ತೊಂದರಲ್ಲಿ, [ಎಂದರೆ, ನಿಯತಶ್ರಾವ್ಯದಲ್ಲಿ] ಜನಾಂತ ಅಪವಾರಿತ [ಎಂದು] ಎರಡು ವಿಧ.

ವ್ಯಾಖ್ಯೆ : ಮತ್ತೊಂದರಲ್ಲಿ ಎಂದರೆ 'ನಿಯತಶ್ರಾವ್ಯ'ದಲ್ಲಿ ಜನಾಂತಿಕ ಅಪವಾರಿತಗಳೆಂದು ಎರಡು ವಿಧ.

ಟಿಪ್ಪಣಿ : 'ಜನಾಂತ' 'ಜನಾಂತಿಕ'– ಎರಡೂ ಹೆಸರುಗಳು ಬಳಕೆಯಾಗುತ್ತವೆ.

## ೧೨೬. ಜನಾಂತಿಕಲಕ್ಷಣ :

ತ್ರಿಪತಾಕಾಕರೇಣಾನ್ಯಾನಪವಾರ್ಯಾಂತರಾ ಕಥಾಮ್ ॥ ೬೫ ॥
ಅನ್ಯೋನ್ಯಾಮಂತ್ರಣಂ ಯತ್ಸ್ಯಾಜ್ಜನಾಂತೇ ತಜ್ಜನಾಂತಿಕಮ್ ।

ಅನು : [ಅನ್ಯ] ಜನರ ಸಮೀಪದಲ್ಲಿ ತ್ರಿಪತಾಕಾಹಸ್ತದಿಂದ ಅನ್ಯರನ್ನು ಬೇರೆಯಾಗಿಸಿ ಬೇರೆ ಮಾತನ್ನು ಪರಸ್ಪರವಾಗಿ ಸಂಭಾಷಿಸುವುದು ಯಾವುದೊ ಅದು 'ಜನಾಂತಿಕ'.

ವ್ಯಾಖ್ಯೆ : ಹಲವರಿರುವಲ್ಲಿ, ಯಾರುಯಾರಿಗೆ ಕೇಳಬಾರದೊ ಅವರನ್ನು 'ತ್ರಿಪತಾಕಾ' ಹಸ್ತದಿಂದ ಅಪವಾರಿಸಿ, ಬೇಕಾದಾತನೊಡನೆ ಪರಸ್ಪರವಾಗಿ ಮಾತನಾಡುವುದು ಜನಾಂತಿಕ. ಅನಾಮಿಕಾ ಬೆರಳು ಮಡಿಸಿರುವ ಮತ್ತು ಉಳಿದ ಬೆರಳುಗಳು ನೇರವಾಗಿರುವ ಹಸ್ತ 'ತ್ರಿಪತಾಕಾ'.

ಟಿಪ್ಪಣಿ : 'ತ್ರಿಪತಾಕಾ' ಲಕ್ಷಣ ನಾ.ಶಾ. ೯–೨೬ರಿಂದ ೩೧ರಲ್ಲಿ ಬಂದಿದೆ. ಹೋಲಿಕೆ = ಸಾ.ದ. : ೬–೨೩೮, ೨೩೯.

## ೧೨೭. ಅಪವಾರಿತಲಕ್ಷಣ :

ರಹಸ್ಯಂ ಕಥ್ಯತೇಽನ್ಯಸ್ಯ ಪರಾವೃತ್ಯಾಪವಾರಿತಮ್ ॥ ೬೬ ॥

ಅನು : ಮತ್ತೊಬ್ಬನ ಕಡೆಗೆ ತಿರುಗಿ ಗುಟ್ಟು ಹೇಳುವುದು 'ಅಪವಾರಿತ'.

ಟಿಪ್ಪಣಿ : ಹೋಲಿಕೆ = ಸಾ.ದ. : ೬–೧೩೮.

## ೧೨೮. ಆಕಾಶಭಾಷಿತಲಕ್ಷಣ :

ಕಿಂ ಬ್ರವೀಷ್ಯೇವಮಿತ್ಯಾದಿ ವಿನಾ ಪಾತ್ರಂ ಬ್ರವೀತಿ ಯತ್ ।
ಶ್ರುತ್ವೇವಾನುಕ್ತಮಪ್ಯೇಕಸ್ತತ್ಸ್ಯಾದಾಕಾಶಭಾಷಿತಮ್ ॥ ೬೭ ॥

ಅನು : [ಬೇರೊಂದು] ಪಾತ್ರವಿಲ್ಲದೆ, [ಯಾವುದೊಂದು ಪಾತ್ರವು] 'ಹೀಗೆ ಹೇಳುವೆಯೇನು?' ಮುಂತಾಗಿ ಕೇಳುವುದು, ಅದು [ಎಂದರೆ, ಆ ಇಲ್ಲದ ಪಾತ್ರವು ನಿಜವಾಗಿ ಏನನ್ನೂ] ಹೇಳದಿದ್ದರೂ [ಏನೋ] ಕೇಳಿದಂತೆ [ನಟಿಸುವುದು] ಯಾವುದೊ ಅದು 'ಆಕಾಶಭಾಷಿತ'.

ವ್ಯಾಖ್ಯೆ : ನಾಟ್ಯಧರ್ಮಗಳನ್ನು ಕ್ರಮವಾಗಿ ಹೇಳುತ್ತ ಬಂದು ಅದರಲ್ಲಿನ ಶ್ರಾವ್ಯಾಶ್ರಾವ್ಯ ನಿಯತಶ್ರಾವ್ಯಗಳನ್ನು ಹೇಳಿ, ಪ್ರಸಂಗವಶದಿಂದ ಆಕಾಶಭಾಷಿತವನ್ನು ಇಲ್ಲಿ ಲಕ್ಷಿಸಿದೆ.

ಇವುಗಳಲ್ಲದೆ, 'ಪ್ರಥಮಕಲ್ಪ' ಮೊದಲಾಗಿ ಕೆಲವು ನಾಟ್ಯಧರ್ಮಗಳನ್ನು ಹೇಳುವುದುಂಟು. ಅವು ಕೇವಲ ಹೆಸರಿನಿಂದ ಮಾತ್ರ ಪ್ರಸಿದ್ಧವಾಗಿವೆಯಲ್ಲದೆ ಅವಕ್ಕೆ ಯಾವ ಲಕ್ಷಣವೂ ತಿಳಿಯದು; ಅವು ನಾಟ್ಯಧರ್ಮದ ಎಲ್ಲೆಯೊಳಕ್ಕೆ ಸೇರುವುದಿಲ್ಲ; ಭರತನ ಗ್ರಂಥದಲ್ಲಿ ಅವುಗಳ ಬಗ್ಗೆ ಹೇಳಿಲ್ಲ; ಆದ್ದರಿಂದ, ಕೇವಲ ದೇಶಭಾಷೆಗಳಲ್ಲಿ ಹೇಳಿರುವ ಅಂಥವುಗಳನ್ನು ಇಲ್ಲಿ ಲಕ್ಷಿಸಿಲ್ಲ.

ಟಿಪ್ಪಣಿ : ಆಕಾಶಭಾಷಿತವು 'ಭಾಣ' ಎಂಬ ರೂಪಕಪ್ರಕಾರದಲ್ಲಿ ವಿಶೇಷವಾಗಿ ಬಳಕೆಯಾಗುತ್ತದೆ. (ನೋಡಿ : ೩-೫೩).

ಇವುಗಳೇ ಅಲ್ಲದೆ ಇನ್ನೂ ಹಲವು ನಾಟ್ಯಧರ್ಮಗಳನ್ನು ಗುರುತಿಸಿದ್ದರೆಂಬುದು ವ್ಯಾಖ್ಯೆಯಿಂದ ಸ್ಪಷ್ಟವಾಗುತ್ತದೆ. ಅಂತಹವು ದೇಶಭಾಷಾಗ್ರಂಥಗಳಲ್ಲಿ ಮಾತ್ರ ಬಂದಿರುವುವೆಂದು ಧನಿಕ ಸೂಚಿಸಿದ್ದಾನೆ. ಅವು ಜಾನಪದ ನಾಟ್ಯಕಾರರ ಸಂಕೇತಗಳಾಗಿದ್ದಿರಲೂ ಸಾಕು. ಈ ಗ್ರಂಥ 'ಪ್ರಾಕೃತ ನಾಟ್ಯಕಲೆ'ಯಲ್ಲದೆ ಕೇವಲ 'ಸಂಸ್ಕೃತ ನಾಟ್ಯಕಲೆ'ಯನ್ನು ಕುರಿತದ್ದು ಎಂಬುದಕ್ಕೆ ಇದೊಂದು ಸಾಕ್ಷಿ. ಜೊತೆಗೆ ೧-೧೦, ೧೨ಗಳಲ್ಲಿನ ವ್ಯಾಖ್ಯೆಯ ಅಂಶಗಳನ್ನೂ ಈ ದೃಷ್ಟಿಯಿಂದ ಗಮನಿಸತಕ್ಕದ್ದು. 'ಡೊಂಬೀ ಶ್ರೀಗದಿತ....' ಮುಂತಾದವು ಜಾನಪದ ಕಲೆಗಳಿದ್ದಿರಬಹುದು ಎಂಬುದು ವಿದ್ವಾಂಸರ ಊಹೆ. ಆ ಪ್ರಕಾರಗಳನ್ನು ಈ ಗ್ರಂಥದ ಮೇರೆಯಿಂದ ಹೊರಗಿರಿಸಿಕೊಂಡಿದೆ.

ಹೋಲಿಕೆ = ಸಾ.ದ. : ೬-೧೪೦.

# ಪ್ರಥಮ ಪ್ರಕಾಶದ ಉಪಸಂಹಾರ

## ೧೨೯. ವಸ್ತುವಿಚಾರದ ಉಪಸಂಹಾರ :

**ಇತ್ಯಾದ್ಯಶೇಷಮಿಹ ವಸ್ತುವಿಭೇದ ಜಾತಂ**
**ರಾಮಾಯಣಾದಿ ಚ ವಿಭಾವ್ಯ ಬೃಹತ್ಕಥಾಂ ಚ।**
**ಆಸೂತ್ರಯೇತ್ತದನು ನೇತೃರಸಾನುಗುಣ್ಯಾ –**
**ಚ್ಚಿತ್ರಾಂ ಕಥಾಮುಚಿತಚಾರುವಚಃಪ್ರಪಂಚೈಃ ॥ ೬೮ ॥**

ಅನು : ಹೀಗೆ ಸಂಪೂರ್ಣವಾದ ವಸ್ತುವಿಭಜನೆಗಳನ್ನು ಮತ್ತು ರಾಮಾಯಣ ಇತ್ಯಾದಿ [ಪುರಾಣ]ಗಳನ್ನೂ ಬೃಹತ್ಕಥೆಯನ್ನೂ ಪರ್ಯಾಲೋಚಿಸಿ, ಯೋಗ್ಯವಾದ ಸುಂದರ [ಹಾಗೂ] ವಿಸ್ತರ ವಚನಗಳಿಂದ, ನಾಯಕ [ಮತ್ತು] ರಸಗಳಿಗೆ ಅನುರೂಪವಾಗಿ, ಚಮತ್ಕಾರವಾಗಿ ಕಥೆಯನ್ನು ಹೆಣೆಯತಕ್ಕದ್ದು.

ವ್ಯಾಖ್ಯೆ : ರಾಮಕಥೆಗಳಿರುವ ರೂಪಕಗಳಲ್ಲಿ ರಾಮಾಯಣದ ಪರ್ಯಾಲೋಚನೆಯನ್ನು ಕಾಣಬಹುದು; ಬೃಹತ್ಕಥೆಯನ್ನು ಮೂಲವಾಗಿಟ್ಟುಕೊಂಡಿರುವ ರೂಪಕಕ್ಕೆ ಉದಾ:- ಮುದ್ರಾರಾಕ್ಷಸ. [ಇದರ ಕರ್ತೃ: ವಿಶಾಖದತ್ತ; ಕಾಲ : ಸು. ಕ್ರಿ.ಶ. ೪೫೦] ಇಲ್ಲಿಗೆ ಶ್ರೀ ವಿಷ್ಣುವಿನ ಮಗನಾದ ಧನಿಕನಿಂದ ರಚಿತವಾದ 'ದಶರೂಪಾವಲೋಕ'ದಲ್ಲಿ ಪ್ರಥಮ ಪ್ರಕಾಶ ಮುಗಿಯಿತು.

ಟಿಪ್ಪಣಿ : ವ್ಯಾಖ್ಯೆಯಲ್ಲಿ ಮುದ್ರಾರಾಕ್ಷಸದ ಕಥೆಗೆ ಸಂಬಂಧಿಸಿದ, ಗುಣಾಢ್ಯನ ಬೃಹತ್ ಕಥಾಮಂಜರಿಯ [೨-೨೧೬] ಶ್ಲೋಕವೊಂದಿದೆ.೧ ಇದು ಪ್ರಕ್ಷಿಪ್ತವೆಂಬ ಹಲವರ ಊಹೆಯನ್ನು ಸಮರ್ಥಿಸಿ ಹ್ಯಾಸ್ ಈ ಭಾಗವನ್ನು ಕೈಬಿಟ್ಟಿದ್ದಾರೆ. [ನೋಡಿ : ಹ್ಯಾಸ್ : ಪೀಠಿಕೆ : ಪು. xxxiii]. ಮೇಲಾಗಿ, ಕೇವಲ ಒಂದು ಹಸ್ತಪ್ರತಿಯಲ್ಲಿ ಈ ಶ್ಲೋಕ ದೊರೆಯುತ್ತದೆಯಂತೆ. ಇದನ್ನು ರಚಿಸಿದ ಕ್ಷೇಮೇಂದ್ರನ ಕಾಲ ಕ್ರಿ.ಶ. ೧೦೨೫-೧೦೬೪ ಎಂದು ತಿಳಿಯುತ್ತದೆ. ದಶರೂಪಕದ ಕಾರಿಕಾರಚನೆ ಹಾಗೂ ವ್ಯಾಖ್ಯೆಯ ರಚನೆ ಸು. ಕ್ರಿ.ಶ. ೧೦ನೆಯ ಶತಮಾನದ ಕೊನೆ. ದಶರೂಪಕಕಾರ ಸೂಚಿಸಿದ 'ಬೃಹತ್ಕಥೆ' ಗುಣಾಢ್ಯನ ಪೈಶಾಚೀಭಾಷೆಯ ಮೂಲಕೃತಿ ಇರಬೇಕು. ಧನಿಕನೂ ಇಲ್ಲಿ, ಅದೇ ಗ್ರಂಥವನ್ನು ಅಥವಾ ಅದೇ ಗ್ರಂಥದ ಬೇರೆ ಯಾವುದೊಂದು ಸಂಸ್ಕೃತ ಪರಿವರ್ತನೆಯನ್ನು ಸೂಚಿಸಿರಬಹುದು. ಈ ಕಾರಣದಿಂದ ಇಲ್ಲಿ ಆ ಭಾಗವನ್ನು ಬಿಟ್ಟಿದೆ.

ಛಂದಸ್ಸು : ವಸಂತತಿಲಕ.

– ಮೊದಲನೆಯ ಪ್ರಕಾಶ ಮುಗಿಯಿತು –

---

೧ ಧನಿಕ ಉದ್ಧರಿಸಿರುವನೆಂದು ಮುದ್ರಿತವಾದ ಶ್ಲೋಕ :

'ಚಾಣಕ್ಯನಾಮ್ನಾ ತೇನಾಥ ಶಕಟಾಲಗೃಹೇ ರಹಃ ।
ಕೃತ್ಯಾಂ ವಿಧಾಯ ಸಹಸಾ ಸಪುತ್ರೋ ನಿಹತೋ ನೃಪಃ ॥
ಯೋಗಾನಂದಯಶಃ ಶೇಷೇ ಪೂರ್ವನಂದಸುತಸ್ತತಃ ।
ಚಂದ್ರಗುಪ್ತಃ ಕೃತೋ ರಾಜಾ ಚಾಣಕ್ಯೇನ ಮಹೌಜಸಾ ॥'

## ಎರಡನೆಯ ಪ್ರಕಾಶ : ನಾಯಕನಾಯಿಕೆಯರು

# ನಾಯಕಸಾಮಾನ್ಯ ಗುಣಗಳು

### ೧. ನಾಯಕಸಾಮಾನ್ಯಲಕ್ಷಣ:

ನೇತಾ ವಿನೀತೋ ಮಧುರಸ್ತ್ಯಾಗೀ ದಕ್ಷಃ ಪ್ರಿಯಂವದಃ ।
ರಕ್ತಲೋಕಃ ಶುಚಿರ್ವಾಗ್ಮೀ ರೂಢವಂಶಃ ಸ್ಥಿರೋ ಯುವಾ ॥ ೧ ॥

ಬುದ್ಧ್ಯುತ್ಸಾಹಸ್ಮೃತಿಪ್ರಜ್ಞಾಕಲಾಮಾನಸಮನ್ವಿತಃ ।
ಶೂರೋ ದೃಢಶ್ಚ ತೇಜಸ್ವೀ ಶಾಸ್ತ್ರಚಕ್ಷುಶ್ಚ ಧಾರ್ಮಿಕಃ ॥ ೨ ॥

ಅನು : ನಾಯಕನು ವಿನಯಶಾಲಿಯೂ, ಮಧುರ(ಇನಿಯ)ನೂ, ತ್ಯಾಗಿ (ಉದಾರಿ)ಯೂ, ದಕ್ಷನೂ, ಪ್ರಿಯವಾಗಿ ಮಾತನಾಡುವವನೂ, ಲೋಕಪ್ರಿಯನೂ, ಶುಚಿಯೂ, ಮಾತುಗಾರನೂ, ಕುಲೀನನೂ, ಅಚಲನೂ, ತರುಣನೂ, ಬುದ್ಧಿ ಉತ್ಸಾಹ ಸ್ಮೃತಿ ಪ್ರಜ್ಞೆ ಕಲೆ ಮರ್ಯಾದೆಗಳಿಂದ ಕೂಡಿದವನೂ, ಶೂರನೂ, ದೃಢನೂ, ಕಾಂತಿ ಯುಕ್ತನೂ, ಶಾಸ್ತ್ರವೇತ್ತನೂ, ಧಾರ್ಮಿಕನೂ [ಆಗಿರತಕ್ಕದ್ದು].

ವ್ಯಾಖ್ಯೆ : ನೇತಾ ಎಂದರೆ ನಾಯಕನು, ಮೇಲೆ ಹೇಳಿದ ವಿನಯಾದಿಗುಣಸಂಪನ್ನನಾಗಿರುತ್ತಾನೆ.

(೧) ವಿನೀತ ಉದಾ:- [ಮಹಾ : ೪-೨೧] :

'ಯದ್ಬ್ರಹ್ಮವಾದಿಭಿರುಪಾಸಿತವಂದ್ಯಪಾದೇ ವಿದ್ಯಾತಪೋವ್ರತನಿಧೌ ತಪತಾಂ ವರಿಷ್ಠೇ ।
ದೈವಾತ್ಕೃತಸ್ತ್ವಯಿ ಮಯಾ ವಿನಯಾಪಚಾರಸ್ತತ್ರ ಪ್ರಸೀದ ಭಗವನ್ನಯಮಂಜಲಿಸ್ತೇ ॥'

[ಯಾರ ಪಾದಗಳನ್ನು ಬ್ರಹ್ಮವಾದಿಗಳು ಕೂಡ ಸೇವಿಸಿ ನಮಸ್ಕರಿಸುವರೊ ಅಂತಹ, ವಿದ್ಯೆ ತಪಸ್ಸುಗಳ ನಿಧಿಸ್ವರೂಪರೂ ಮುನಿಶ್ರೇಷ್ಠರೂ ಆದ ತಮ್ಮಲ್ಲಿ ಆಕಸ್ಮಾತ್ತಾಗಿ ವಿನಯವಿರುದ್ಧವರ್ತನೆ ನನ್ನಿಂದ ನಡೆದು ಹೋಯಿತು. ಭಗವನ್, ಕೈಮುಗಿಯುತ್ತೇನೆ. ಪ್ರಸನ್ನರಾಗಿ.]

(೨) ಮಧುರ (ನೋಡಲು ಪ್ರಿಯನಾಗಿರುವಾತ)ಉದಾ:- [ಮಹಾ : ೨-೩೭] :

'ರಾಮ ರಾಮ ನಯನಾಭಿರಾಮತಾಮಾಶಯಸ್ಯ ಸದೃಶೀಂ ಸಮುದ್ವಹನ್।
ಅಪ್ರತರ್ಕ್ಯಗುಣರಾಮಣೀಯಕಃ ಸರ್ವಥೈವ ಹೃದಯಂಗಮೋಽಸಿ ಮೇ ॥'

[ಎಲೈ ಸುಂದರನಾದ ರಾಮನೇ, ನೀನು ನನ್ನ ಹೃದಯಕ್ಕೆ ಎಷ್ಟು ಆಹ್ಲಾದಕರನಾಗಿದ್ದೀಯೋ ಕಣ್ಣಿಗೂ ಹಾಗೆಯೇ ಇದ್ದೀಯೆ. ಊಹಾತೀತವಾದ ಗುಣಗಳಿಂದ ರಮಣೀಯನಾಗಿರುವ ನೀನು ಯಾವಾಗಲೂ ನನಗೆ ಹೃದಯಂಗಮನಾಗಿರುವೆ.]

(೩) ತ್ಯಾಗೀ (ಸರ್ವಸ್ವವನ್ನೂ ಕೊಡುವವ)ಉದಾ:- [ಆಕರ ತಿಳಿಯದು] :

'ತ್ವಚಂ ಕರ್ಣಃ ಶಿಬಿರ್ಮಾಂಸಂ ಜೀವಂ ಜೀಮೂತವಾಹನಃ ।
ದದೌ ದಧೀಚಿರಸ್ಥೀನಿ ನಾಸ್ತ್ಯದೇಯಂ ಮಹಾತ್ಮನಾಮ್ ॥'

[ಕರ್ಣನು ಕವಚವನ್ನು ಶಿಬಿಯು ಮಾಂಸವನ್ನು ಜೀಮೂತವಾಹನನು ಜೀವವನ್ನು ದಧೀಚಿಯು ಎಲುಬನ್ನು ಕೊಟ್ಟನು; ಮಹಾತ್ಮರು ಕೊಡದಿರುವುದೇ ಇಲ್ಲ.]

(೪) ದಕ್ಷ (ಕ್ಷಿಪ್ರವಾಗಿ ಕಾರ್ಯವನ್ನು ಮಾಡುವಾತ)ಉದಾ:– [ಮಹಾ : ೧–೫೩ : ೨–೧೬ರಲ್ಲೂ ಬಂದಿದೆ.]

'ಸ್ಫೂರ್ಜದ್ವಜ್ರಸಹಸ್ರನಿರ್ಮಿತಮಿವ ಪ್ರಾದುರ್ಭವತ್ಯಗ್ರತೋ

ರಾಮಸ್ಯ ತ್ರಿಪುರಾಂತಕೃದ್ದಿವಿಷದಾಂ ತೇಜೋಭಿರಿದ್ಧಂ ಧನುಃ ।

ಶುಂಡಾರಃ ಕಲಭೇನ ಯದ್ವದಚಲೇ ವತ್ಸೇನ ದೋರ್ದಂಡಕ–

ಸ್ತಸ್ಮಿನ್ನಾಹಿತ ಏವ ಗರ್ಜಿತಗುಣಂ ಕೃಷ್ಟಂ ಚ ಭಗ್ನಂ ಚ ತತ್ ॥'

[ಉಜ್ವಲವಾದ ವಜ್ರಸಹಸ್ರಗಳಿಂದ ನಿರ್ಮಿತವಾಗಿರುವಂತೆ ತೋರುವ, ಸಮಸ್ತ ದೇವತೆಗಳ ತೇಜಸ್ಸನ್ನು ಒಳಗೊಂಡಿರುವ, ತ್ರಿಪುರಾಸುರಸಂಹಾರಕಾರಿಯಾದ – ಧನುಸ್ಸು ರಾಮನ ಎದುರಿನಲ್ಲಿ ಹೊಳೆದು ಕಂಗೊಳಿಸುತ್ತಿರಲು, ಆತನು ಆ ಅಚಲವಾದ ಧನುಸ್ಸಿನಲ್ಲಿ–ಮರಿಯಾನೆ ಸೊಂಡಿಲನ್ನಿಡುವಂತೆ–ಬಾಹುಗಳನ್ನಿರಿಸಿ, ಸೆಳೆದ ಬಿಲ್ಲುಹಗ್ಗ ಝೇಂಕರಿಸುತ್ತಿರಲು, ಆ ಧನುವನ್ನು ಮುರಿದಿಕ್ಕಿದನು.]

(೫) ಪ್ರಿಯಂವದ (ಪ್ರಿಯಭಾಷಿ)ಉದಾ:– [ಮಹಾ : ೨–೩೬] :

'ಉತ್ಪತ್ತಿರ್ಜಮದಗ್ನಿತಃ ಸ ಭಗವಾನ್‌ದೇವಃ ಪಿನಾಕೀ ಗುರು –

ರ್ವೀರ್ಯಂ ಯತ್ತು ನ ತದ್ಗಿರಾಂ ಪಥಿ ನನು ವ್ಯಕ್ತಂ ಹಿ ತತ್ಕರ್ಮಭಿಃ ।

ತ್ಯಾಗಃ ಸಪ್ತಸಮುದ್ರಮುದ್ರಿತಮಹೀನಿರ್ವ್ಯಾಜದಾನಾವಧಿಃ

ಸತ್ಯಬ್ರಹ್ಮತಪೋನಿಧೇರ್ಭಗವತಃ ಕಿಂ ವಾ ನ ಲೋಕೋತ್ತರಮ್ ॥'

[ಹುಟ್ಟಿದುದು ಜಮದಗ್ನಿಯಿಂದ; ಪಿನಾಕಧಾರಿಯಾದ ಈಶ್ವರನೇ ಗುರು; ಕಾರ್ಯದಿಂದಲೇ ಪ್ರಕಟವಾಗತಕ್ಕ ತಮ್ಮ ಶೌರ್ಯ ಮಾತಿಗೆ ಮೀರಿದುದಾಗಿದೆ; ಸಪ್ತಸಮುದ್ರವೇ ಮೇರೆಯಾಗಿರುವ ಭೂಮಿಯನ್ನೆ ನಿರ್ವ್ಯಾಜವಾಗಿ ದಾನಮಾಡುವಂತಹ ತ್ಯಾಗ ತಮ್ಮದು. ಸತ್ಯ, ಬ್ರಹ್ಮ, ತಪಸ್ಸು – ಇವುಗಳ ನಿಧಿಯಾದ ಭಗವಾನರಲ್ಲಿ ಯಾವುದು ತಾನೆ ಲೋಕೋತ್ತರವಲ್ಲ?]

(೬) ರಕ್ತಲೋಕ (ಜನರಂಜಕ)ಉದಾ:– [ಮಹಾ : ೪–೪೪] :

'ತ್ರಯ್ಯಾಸ್ತ್ರಾತಾ ಯಸ್ತವಾಯಂ ತನೂಜಸ್ತೇನಾದ್ಯೈವ ಸ್ವಾಮಿನಸ್ತೇ ಪ್ರಸಾದಾತ್ ।

ರಾಜನ್ವಂತೋ ರಾಮಭದ್ರೇಣ ರಾಜ್ಞಾ ಲಬ್ಧಕ್ಷೇಮಾಃ ಪೂರ್ಣಕಾಮಾಶ್ಚರಾಮಃ ॥'

[ತಮ್ಮ ಕೃಪೆಯಿಂದ ವೇದತ್ರಯಗಳ ರಕ್ಷಕನಾಗಿರುವ ತಮ್ಮ ಪುತ್ರ ರಾಮಭದ್ರನನ್ನು ನಾವು ರಾಜನನ್ನಾಗಿ ಪಡೆದು ಸುಕ್ಷೇಮದಿಂದ ಸಂತುಷ್ಟರಾಗಿ ಸಂಚರಿಸುತ್ತಿದ್ದೇವೆ].

(೭) ಶುಚಿ (ಕಾಮಾದಿಗಳಿಲ್ಲದ ನಿರ್ಮಲ ಮನಸ್ಸಿನವ)ಉದಾ:– [ರಘು : ೧೬–೮]

'ಕಾ ತ್ವಂ ಶುಭೇ ಕಸ್ಯ ಪರಿಗ್ರಹೋ ವಾ ಕಿಂ ವಾ ಮದಭ್ಯಾಗಮಕಾರಣಂ ತೇ ।

ಆಚಕ್ಷ್ವ ಮತ್ವಾ ವಶಿನಾಂ ರಘೂಣಾಂ ಮನಃ ಪರಸ್ತ್ರೀವಿಮುಖಪ್ರವೃತ್ತಿ ॥'

[ಎಲೈ ಮಂಗಲೆ, ನೀನು ಯಾರು? ಯಾರಿಂದ ಪರಿಗೃಹೀತಳಾದವಳು? ಅಲ್ಲದೆ ನನ್ನ ಬಳಿ ಬಂದಿರುವ ಕಾರಣವೇನು? – ಜಿತೇಂದ್ರಿಯರಾದ ರಘುವಂಶಜರು ಪರಸ್ತ್ರೀವಿಮುಖರು ಎಂಬುದನ್ನು ಬಗೆದು ನನ್ನೊಡನೆ ಹೇಳು.]

(೮) ವಾಗ್ಮಿ ಉದಾ:– [ಹನು : ೨–೧೪] :

'ಬಾಹ್ವೋರ್ಬಲಂ ನ ವಿದಿತಂ ನ ಚ ಕಾರ್ಮುಕಸ್ಯ ತ್ರೈಯಂಬಕಸ್ಯ ತನಿಮಾ ತತ ಏಷ ದೋಷಃ ।

ತಚ್ಚಾಪಲಂ ಪರಶುರಾಮ ಮಮ ಕ್ಷಮಸ್ವ ಡಿಂಭಸ್ಯ ದುರ್ವಿಲಸಿತಾನಿ ಮುದೇ ಗುರೂಣಾಂ ॥'

[ನಿನ್ನ ಬಾಹುಗಳ ಬಲವನ್ನಾಗಲಿ ಶಿವಧನುವಿನ ದೌರ್ಬಲ್ಯವನ್ನಾಗಲಿ ಮೊದಲು ತಿಳಿದಿರಲಿಲ್ಲ. ಅದರಿಂದ ಈ ತಪ್ಪು ಸಂಭವಿಸಿತು. ಎಲೈ ಪರಶುರಾಮ, ಈ ನನ್ನ ಚಾಪಲ್ಯದೋಷವನ್ನು ಕ್ಷಮಿಸು. ಬಾಲಕರ ದುರ್ವಿಲಸಿತಗಳು ಹಿರಿಯರನ್ನು ಸಂತೋಷಗೊಳಿಸುತ್ತವೆಯಲ್ಲವೆ?]

(೯) ರೂಪವಂತ ಉದಾ:- [ಅನರ್ಘ : ೩-೨೧] :

'ಯೇ ಚತ್ವಾರೋ ದಿನಕರಕುಲಕ್ಷತ್ರಸಂತಾನಮಲ್ಲೀ-
ಮಾಲಾಮ್ಲಾನಸ್ತಬಕಮಧುಪಾ ಜಜ್ಞಿರೇ ರಾಜಪುತ್ರಾಃ।
ರಾಮಸ್ತೇಷಾಮಚರಮಭವಸ್ತಾಡಕಾಕಾಲರಾತ್ರಿ-
ಪ್ರತ್ಯೂಷೋಽಯಂ ಸುಚರಿತಕಥಾಕಂದಲೀಮೂಲಕಂದಃ ॥'

[ಸೂರ್ಯಕುಲದ ಕ್ಷತ್ರಿಯಸಂತಾನವೆಂಬ ಮಲ್ಲಿಕಾಮಾಲೆಯ ಕುಚ್ಚಿನಲ್ಲಿರುವ ದುಂಬಿಗಳಂತೆ ನಾಲ್ವರು ರಾಜಪುತ್ರರು ಹುಟ್ಟಿದರು. ಅವರಲ್ಲಿ ತಾಟಕೆಯೆಂಬ ಕಾಳರಾತ್ರಿಗೆ ಬೆಳಗಿನಂತಿರುವವನೂ ಸಚ್ಚಾರಿತ್ರ್ಯಕಥಾ ಕದಲೀವೃಕ್ಷದ ಮೂಲದ ಗಡ್ಡೆಯಂತಿರುವವನೂ ಆದ ರಾಮನು ಮೊದಲನೆಯವನು.]

(೧೦) ಸ್ಥಿರ (ಮನೋವಾಕ್ಕ್ರಿಯೆಗಳಲ್ಲಿ ಅಚಂಚಲನು) ಉದಾ:- [ಮಹಾ : ೩-೮; ಇದು ೨-೨೦ ಮತ್ತು ೪-೨೨ರಲ್ಲಿ ಕೂಡ ಬಂದಿದೆ] :

'ಪ್ರಾಯಶ್ಚಿತ್ತಂ ಚರಿಷ್ಯಾಮಿ ಪೂಜ್ಯಾನಾಂ ವೋ ವ್ಯತಿಕ್ರಮಾತ್ ।
ನ ತ್ವೇವ ದೂಷಯಿಷ್ಯಾಮಿ ಶಸ್ತ್ರಗ್ರಹಮಹಾವ್ರತಮ್ ॥'

[ಪೂಜ್ಯರನ್ನು ತಿರಸ್ಕರಿಸಿದ ದೋಷಕ್ಕಾಗಿ ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ಆದರಿಂದಾಗಿ ನನ್ನ ಶಸ್ತ್ರಗ್ರಹಣ ಮಹಾವ್ರತವನ್ನು ನಿಂದಿಸಿಕೊಳ್ಳುವುದಿಲ್ಲ.]

ಮತ್ತು - [ಭರ್ತೃ ನೀತಿ : ಶ್ಲೋ. ೨೬] :

'ಪ್ರಾರಭ್ಯತೇ ನ ಖಲು ವಿಘ್ನಭಯೇನ ನೀಚೈಃ ಪ್ರಾರಭ್ಯ ವಿಘ್ನವಿಹತಾ ವಿರಮಂತಿ ಮಧ್ಯಾಃ।
ವಿಘ್ನೈಃ ಪುನಃಪುನರಪಿಪ್ರತಿಹನ್ಯಮಾನಾಃ ಪ್ರಾರಬ್ಧಮುತ್ತಮಜನಾ ನ ಪರಿತ್ಯಜಂತಿ ॥'

[ವಿಘ್ನಭಯದಿಂದ ನೀಚರು ಯಾವೊಂದು ಕಾರ್ಯವನ್ನೂ ಆರಂಭಿಸುವುದೇ ಇಲ್ಲ; ಮಧ್ಯಮರು ಪ್ರಾರಂಭಿಸಿ ವಿಘ್ನ ಬಂದಿತೆಂದರೆ ಬಿಟ್ಟುಬಿಡುತ್ತಾರೆ; ಉತ್ತಮ ಜನರು ಮತ್ತೆ ಮತ್ತೆ ವಿಘ್ನಗಳು ಬಾಧಿಸುತ್ತಿದ್ದರೂ ಆರಂಭಿಸಿದುದನ್ನು ಬಿಡುವುದಿಲ್ಲ.]

'ಯುವಾ' ಪ್ರಸಿದ್ಧವಾಗಿದೆ. ಬುದ್ಧಿ ಎಂದರೆ ಜ್ಞಾನ. ಪ್ರಜ್ಞೆ ಎಂದರೆ ಜ್ಞಾನದಿಂದ ವಿಶೇಷ ವಿಷಯಗಳನ್ನು ಕಂಡುಹಿಡಿಯುವ ಶಕ್ತಿ. ಪ್ರಜ್ಞೆ : ಉದಾ:- [ಮಾಲ. ಮಿ : ೧-೫] :

'ಯದ್ಯತ್ಪ್ರಯೋಗವಿಷಯೇ ಭಾವಿಕಮುಪದಿಶ್ಯತೇ ಮಯಾ ತಸ್ಯೈ।
ತತ್ತದ್ವಿಶೇಷಕರಣಾತ್ಪ್ರತ್ಯುಪದಿಶತೀವ ಮೇ ಬಾಲಾ ॥'

[ಪ್ರಯೋಗವಿಷಯದಲ್ಲಿ ಯಾವಯಾವುದು ಭಾವಿಕವೆಂದು ನಾನು ಉಪದೇಶಿಸುತ್ತೇನೆಯೋ ಅವುಗಳನ್ನು ಆಯಾ ವಿಶೇಷ ಕರಣಗಳಿಂದ ನನಗೇ ಪ್ರತ್ಯುಪದೇಶ ಕೊಡುವಳೊ ಎನ್ನುವಂತೆ ಬಾಲೆಯು (ಅವುಗಳನ್ನು ಅಭಿನಯಿಸಿ ತೋರಿಸುತ್ತಾಳೆ).]' ಉಳಿದವು ಸ್ಪಷ್ಟವಾಗಿವೆ.

ಟಿಪ್ಪಣಿ : ವಸ್ತು ನಾಯಕ ರಸ - ಇವುಗಳೇ ರೂಪಕಭೇದಕ್ಕೆ ಕಾರಣಗಳೆಂದು ಹಿಂದೆ [೧-೧೬] ಹೇಳಿದೆ. ಅದರಂತೆ ವಸ್ತುವಿಚಾರವನ್ನು ಮೊದಲನೆಯ ಪ್ರಕಾಶದಲ್ಲಿ ಹೇಳಿಯಾಯಿತು. ಈ ಪ್ರಕಾಶದಲ್ಲಿ ನಾಯಕ ವಿಚಾರವನ್ನು ಹೇಳಿದೆ.

ಹೋಲಿಕೆ = ಸಾ.ದ. : ೩-೩೦; ಪ್ರತಾಪ : ೧-೧೧, ೨೨.

# ನಾಲ್ಕು ಪ್ರಕಾರದ ನಾಯಕರು

## ೨. ನಾಯಕರಲ್ಲಿ ನಾಲ್ಕು ಭೇದಗಳು :

**ಭೇದೈಶ್ಚತುರ್ಧಾ ಲಲಿತಶಾಂತೋದಾತ್ತೋದ್ಧತೈರಯಮ್ ।**

ಅನು : ಇವನು [ಎಂದರೆ, ನಾಯಕನು] ಲಲಿತ ಶಾಂತ ಉದಾತ್ತ ಉದ್ಧತ [ಎಂಬ ನಾಲ್ಕು ವಿಶೇಷ ಗುಣ] ಭೇದಗಳಿಂದ ನಾಲ್ಕು ವಿಧ.

ಟಿಪ್ಪಣಿ : ಮುಂದೆ ಒಂದೊಂದು ವಿಧದ ಲಕ್ಷಣವನ್ನೂ ಹೇಳುವಾಗ, ಈ ಗುಣಗಳೆಲ್ಲಕ್ಕೂ ಧೀರ ಎಂಬ ಸಾಮಾನ್ಯ ವಿಶೇಷಣವನ್ನು ಸೇರಿಸಿ-ಧೀರಲಲಿತ ಧೀರಶಾಂತ ಧೀರೋದಾತ್ತ ಧೀರೋದ್ಧತ-ಎಂದು ಹೇಳಲಾಗಿದೆ. 'ಧೀರಶಾಂತ'ನಿಗೆ 'ಧೀರಪ್ರಶಾಂತ' ಎಂಬ ಹೆಸರೂ ಉಂಟು. ನಾಯಕನ ಗುಣಸಾಮಾನ್ಯಗಳನ್ನು ಈ ಪ್ರಕಾಶದ ಮೊದಲಲ್ಲಿ ಹೇಳಿತಪ್ಪೆ. ಅದರಲ್ಲಿ ಕೆಲವು ಪ್ರಕಾರದ ನಾಯಕರಲ್ಲಿ ಕೆಲವು ಗುಣಗಳು ವಿಶೇಷವಾಗಿ ತೋರುತ್ತವೆ. ಆದರೆ, ಧೀರಗುಣ ಮಾತ್ರ ಎಲ್ಲ ಬಗೆಯ ನಾಯಕರಲ್ಲೂ ಇದ್ದೇ ತೀರಬೇಕು. ಅದು 'ಪುರುಷಗುಣ'.

'ಸಾಹಿತ್ಯಸಾರ'ದಲ್ಲಿ [೧೧-೨] ಮೊದಲ ಮೂರು ಪ್ರಕಾರಗಳನ್ನು ಮಾತ್ರ ಹೇಳಿದೆ. ಪ್ರಾಯಶಃ, ಔದ್ಧತ್ಯಗುಣ ಪ್ರತಿನಾಯಕನಿಗೆ ಮಾತ್ರ ತಕ್ಕುದೆಂಬ ಅಭಿಪ್ರಾಯವಿರಬೇಕು.

ಹೋಲಿಕೆ = ನಾ.ಶಾ. : ೩೪-೧೭, ೧೮; ಸಾ.ದ. : ೩-೩೧; ಪ್ರತಾಪ : ೧-೨೭

## ೩. ಧೀರಲಲಿತಲಕ್ಷಣ :

**ನಿಶ್ಚಿಂತೋ ಧೀರಲಲಿತಃ ಕಲಾಸಕ್ತಃ ಸುಖೀ ಮೃದುಃ ॥ ೩ ॥**

ಅನು : ನಿಶ್ಚಿಂತನೂ, ಕಲೆಗಳಲ್ಲಿ ಆಸಕ್ತಿಯಿರುವವನೂ, ಸುಖಿಯೂ, ಮೃದು ಸ್ವಭಾವ ದವನೂ [ಆಗಿರುವ ನಾಯಕನು] 'ಧೀರಲಲಿತ'.

ವ್ಯಾಖ್ಯೆ : ಅವನ ಯೋಗಕ್ಷೇಮಗಳನ್ನು ನೋಡಿಕೊಳ್ಳುವಂತಹ ಮಂತ್ರಿಗಳಿರುವ ಕಾರಣ ನಿಶ್ಚಿಂತ; ಗೀತಾದಿ ಕಲೆಗಳಲ್ಲಿ ಆಸಕ್ತಿಯಿದ್ದು ಭೋಗರತನಾಗಿ ಶೃಂಗಾರಪ್ರಾಧಾನ್ಯದಿಂದಾಗಿ ಸುಕುಮಾರನೂ ಸತ್ವವನ್ನೆ ಆಚರಿಸುವವನೂ ಕೋಮಲನೂ ಆಗಿರುವಾತ 'ಲಲಿತ'. ಉದಾ:- [ರತ್ನಾ : ೧-೯; ೪-೧೪ರಲ್ಲೂ ಈ ಉದಾ. ಬಂದಿದೆ] :

> 'ರಾಜ್ಯಂ ನಿರ್ಜಿತಶತ್ರು ಯೋಗ್ಯಸಚಿವೇ ನ್ಯಸ್ತಃ ಸಮಸ್ತೋ ಭರಃ
> ಸಮ್ಯಕ್ಪಾಲನಲಾಲಿತಾಃ ಪ್ರಶಮಿತಾಶೇಷೋಪಸರ್ಗಾಃ ಪ್ರಜಾಃ ।
> ಪ್ರದ್ಯೋತಸ್ಯ ಸುತಾ ವಸಂತಸಮಯಸ್ತ್ವಂ ಚೇತಿ ನಾಮ್ನಾ ಧೃತಿಂ
> ಕಾಮಃ ಕಾಮಮುಪೈತ್ವಯಂ ಮಮ ಪುನರ್ಮನ್ಯೇ ಮಹಾನುತ್ಸವಃ ॥'

[ರಾಜ್ಯದ ಶತ್ರುಗಳು ಸೋತಿದ್ದಾರೆ; ಎಲ್ಲ ಹೊರೆಯನ್ನೂ ಯೋಗ್ಯನಾದ ಸಚಿವನ ಕೈಯಲ್ಲಿರಿಸಿವ್ವಾಗಿದೆ. ಪ್ರಜೆಗಳ ಕಷ್ಟವೆಲ್ಲ ಪೂರ್ಣ ಶಾಂತವಾಗಿ ಅವರು ಸೌಖ್ಯದಿಂದ ಪಾಲಿತರಾಗುತ್ತಿದ್ದಾರೆ. ವಸಂತಸಮಯ, ಪ್ರದ್ಯೋತನ ಸುತೆಯಾದ ವಾಸವದತ್ತೆ ಮತ್ತು ನೀನು ಇದ್ದೀರಿ – ಇವರಿಂದ ಬಯಕೆ ಯಥೇಚ್ಛೆಯಾಗಿ ಬಲಗೊಳ್ಳಲಿ (ಅಥವಾ ಕಾಮದೇವನಿಗೆ ಬೇಕಾದಷ್ಟು ಬಲ ಬರಲಿ). ನಾನಾದರೋ ಇದನ್ನು ಮಹೋತ್ಸವವೆಂದು ಪರಿಗಣಿಸುತ್ತೇನೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೩೪-೧೮; ಸಾ.ದ. : ೩-೩೪; ಪ್ರತಾಪ : ೧-೩೨.

## ೪. ಧೀರಶಾಂತಲಕ್ಷಣ :

**ಸಾಮಾನ್ಯಗುಣಯುಕ್ತಸ್ತು ಧೀರಶಾಂತೋ ದ್ವಿಜಾದಿಕಃ ।**

ಅನು : [ನಾಯಕ]ಸಾಮಾನ್ಯವಾದ ಗುಣಗಳನ್ನುಳ್ಳ ದ್ವಿಜ ಮೊದಲಾದವನು 'ಧೀರಶಾಂತ'.

ವ್ಯಾಖ್ಯೆ : ವಿನಯಾದಿಯಾಗಿ ನಾಯಕಸಾಮಾನ್ಯ ಗುಣಗಳನ್ನುಳ್ಳ ವಿಪ್ರ, ವಣಿಕ್, ಸಚಿವ ಮೊದಲಾದ ಕುಲದವನು 'ಧೀರಶಾಂತ'ನೆಂಬ ಪ್ರಕರಣ (ದಶರೂಪಕಗಳಲ್ಲೊಂದು) ನಾಯಕನಾಗುತ್ತಾನೆ. ವಿಪ್ರಾದಿಗಳಲ್ಲಿರುವ ನಿಶ್ಚಿಂತೆ ಮುಂತಾದ ಗುಣಗಳು ಕೂಡ ಲಾಲಿತ್ಯವಾಗದೆ ಶಾಂತವಾಗುತ್ತವೆ. ಉದಾ:-[ಮಾ.ಮಾ. : ೨-೧೦] :

'ತತ ಉದಯಗಿರೇರಿವೈಕ ಏವ ಸ್ಫುರಿತಗುಣದ್ಯುತಿಸುಂದರಃ ಕಲಾವಾನ್ ।

ಇಹ ಜಗತಿ ಮಹೋತ್ಸವಸ್ಯ ಹೇತುರ್ನಯನವತಾಮುದಿಯಾಯ ಬಾಲಚಂದ್ರಃ ॥'

[ಜಗತ್ತಿನಲ್ಲಿ ನೋಡುವ ಕಣ್ಣಿಗೆ ಮಹದಾನಂದಕಾರಣನೂ, ಕಲಾಪೂರ್ಣನೂ, ಕಾಂತಿಗುಣಯುಕ್ತನೂ ಸುಂದರನೂ ಆಗಿ ಪ್ರಕಾಶಿಸುವ ಒಬ್ಬನೇ ಒಬ್ಬ ಬಾಲಚಂದ್ರನು ಉದಯಗಿರಿಯಿಂದ ಆವಿರ್ಭವಿಸುವಂತೆ (ಆ ಕುಲದಿಂದ ಮಾಧವನು) ಹುಟ್ಟಿಬಂದನು.]

ಮತ್ತು – [ಮೃಚ್ಛ : ೧೦-೧೨; ೧-೯ರಲ್ಲೂ ಉದ್ಧೃತವಾಗಿದೆ.] :

'ಮಖಶತಪರಿಪೂತಂ ಗೋತ್ರಮುದ್ಭಾಸಿತಂ ಯತ್ಸದಸಿ ನಿಬಿಡಚೈತ್ಯಬ್ರಹ್ಮಘೋಷೈಃ ಪುರಸ್ತಾತ್ ।

ಮಮ ನಿಧನದಶಾಯಾಂ ವರ್ತಮಾನಸ್ಯ ಪಾಪೈಸ್ತದಸದೃಶಮನುಷ್ಯೈರ್ಘುಷ್ಯತೇ ಘೋಷಣಾಯಾಮ್ ॥'

[ಹಿಂದೆ ಯಾವ ಕುಲವು ನೂರು ಯಾಗಗಳಿಂದ ಪರಿಶುದ್ಧವಾಗಿ ಸದಾಕಾಲದಲ್ಲೂ ಸಭೆಯ ಚೈತ್ಯ ಹಾಗೂ ಬ್ರಹ್ಮಘೋಷಗಳಿಂದ ಶೋಭಿಸುತ್ತಿತ್ತೊ ಅಂತಹದು ಈಗ, ಪಾಪಕರ್ಮಗಳಿಂದ ನನ್ನ ಮರಣಕಾಲದಲ್ಲಿ ಅಯೋಗ್ಯರಾದ ಕ್ಷುದ್ರಜನರಿಂದ ಘೋಷಿತವಾಗುತ್ತಿದೆ.]

ಟಿಪ್ಪಣಿ : ವ್ಯಾಖ್ಯೆಯಲ್ಲಿ 'ಧೀರಶಾಂತ'ನು ಪ್ರಕರಣನಾಯಕನೆಂದು ಸೂಚಿಸಿದೆಯಷ್ಟೆ. ದಶರೂಪಕಗಳಲ್ಲೊಂದಾದ 'ಪ್ರಕರಣ'ದ ಲಕ್ಷಣಕ್ಕೆ ೩-೪೪ ನೋಡಿ.

ಹೋಲಿಕೆ = ನಾ.ಶಾ. : ೩೪-೧೯; ಸಾ.ದ. : ೩-೩೪; ಪ್ರತಾಪ : ೧-೩೩.

## ೫. ಧೀರೋದಾತ್ತಲಕ್ಷಣ :

**ಮಹಾಸತ್ತ್ವೋಽತಿಗಂಭೀರಃ ಕ್ಷಮಾವಾನವಿಕತ್ಥನಃ ॥ ೪ ॥**

**ಸ್ಥಿರೋ ನಿಗೂಢಾಹಂಕಾರೋ ಧೀರೋದಾತ್ತೋ ದೃಢವ್ರತಃ ।**

ಅನು : ಮಹಾಸತ್ತ್ವನೂ, ತುಂಬ ಗಂಭೀರನೂ, ಕ್ಷಮೆಯುಳ್ಳವನೂ ಆತ್ಮಶ್ಲಾಘನೆಯಿಲ್ಲದವನೂ, ನಿಶ್ಚಲನೂ, ಅಹಂಕಾರವನ್ನು ಅಡಗಿಸಿಟ್ಟುಕೊಂಡವನೂ, ದೃಢವ್ರತನೂ [ಆದವನು] 'ಧೀರೋದಾತ್ತ'.

ವ್ಯಾಖ್ಯೆ : ಮಹಾಸತ್ತ್ವ ಎಂದರೆ ಕ್ರೋಧ ಶೋಕ ಮುಂತಾದವುಗಳಿಂದ ವ್ಯಾಪಿತವಾಗದ ಅಂತಃಕರಣವುಳ್ಳವನು; ಅವಿಕತ್ಥನ ಎಂದರೆ ಆತ್ಮಶ್ಲಾಘನೆಯಿಲ್ಲದವನು; ನಿಗೂಢಾಹಂಕಾರ ಎಂದರೆ ವಿನಯದ ಹೊದಿಕೆಯಿಂದ ಅಹಂಕಾರವನ್ನು ಅಡಗಿಸಿಟ್ಟಿರುವವನು; ದೃಢವ್ರತ ಎಂದರೆ ಕೈಕೊಂಡುದನ್ನು ನಿರ್ವಹಿಸುವವನು. ಉದಾ : – [ನಾಗಾ. : ೫-೧೬; ೨-೨೩ರಲ್ಲೂ ಈ ಉದಾ. ಬಂದಿದೆ] :

'ಶಿರಾಮುಖೈಃ ಸ್ಯಂದತ ಏವ ರಕ್ತಮದ್ಯಾಪಿ ದೇಹೇ ಮಮ ಮಾಂಸಮಸ್ತಿ ।

ತೃಪ್ತಿಂ ನ ಪಶ್ಯಾಮಿ ತವೈವ ತಾವತ್ಕಿಂ ಭಕ್ಷಣಾತ್ತ್ವಂ ವಿರತೋ ಗರುತ್ಮನ್ ॥'

[ರಕ್ತನಾಳಗಳ ತುದಿಯಲ್ಲಿ ನೆತ್ತರುಕ್ಕುತ್ತಿದೆ; ನನ್ನ ದೇಹದಲ್ಲಿ ಇನ್ನೂ ಮಾಂಸ ಉಳಿದಿದೆ; ನಿನಗೆ ಕೂಡ ತೃಪ್ತಿಯಾದಂತೆ ತೋರುವುದಿಲ್ಲ. ಹೇ ಗರುಡ, ಅದೇಕೆ ತಿನ್ನದೆ ಕುಳಿತುಬಿಟ್ಟದ್ದೀಯೆ?]

ಮತ್ತು-[ಹನು : ೩-೨೫; ೨-೧೯ರಲ್ಲೂ ಈ ಉದಾ. ಬಂದಿದೆ] :

'ಆಹೂತಸ್ಯಾಭಿಷೇಕಾಯ ವಿಸೃಷ್ಟಸ್ಯ ವನಾಯ ಚ ।

ನ ಮಯಾ ಲಕ್ಷಿತಸ್ತಸ್ಯ ಸ್ವಲ್ಪೋಽಪ್ಯಾಕಾರವಿಭ್ರಮಃ ॥

[ಅಭಿಷೇಕಕ್ಕೆಂದು ಕರೆದಾಗಾಗಲಿ ಅಥವಾ ವನವಾಸಕ್ಕೆ ಕಳಿಸಿದಾಗಾಗಲಿ ರಾಮನ ಆಕಾರದಲ್ಲಿ ನಾನು ಅಲ್ಪ ವಿಕಾರವನ್ನು ಕೂಡ ನೋಡಲಿಲ್ಲ.]

ಈ ಧೀರೋದಾತ್ತ ಲಕ್ಷಣದಲ್ಲಿ ಹೇಳಿದ ಸ್ಥೈರ್ಯ ಇತ್ಯಾದಿಗಳು ನಾಯಕಸಾಮಾನ್ಯವಾದ ಲಕ್ಷಣಗಳೇ ಅಲ್ಲವೆ? ಅದನ್ನು ಇಲ್ಲಿ ಪುನಃ ಏಕೆ ಹೇಳಿದೆ-ಎಂದರೆ, ನಾಯಕನಲ್ಲಿ ಸಾಮಾನ್ಯವಾಗಿ ಆ ಲಕ್ಷಣಗಳಿದ್ದರೂ, ಧೀರೋದಾತ್ತ ನಾಯಕನಲ್ಲಿ ಆ ವಿಶಿಷ್ಟ ಲಕ್ಷಣಗಳು ವಿಶೇಷವಾಗಿವ್ವಾವೆ ಎಂಬ ಕಾರಣದಿಂದ.

ಇಲ್ಲಿ ಒಂದು ಸಂದೇಹ ಬಂದೀತುಃ ನಾಗಾನಂದಾದಿಗಳಲ್ಲಿ ಜೀಮೂತವಾಹನಾದಿಗಳು ಉದಾತ್ತ ನಾಯಕರೆಂದು ಪರಿಗಣಿಸುವುದು ಹೇಗೆ? ಹೀಗೆ ಸಂದೇಹಿಸುವವರ ವಾದ ಇದುಃ ಸರ್ವೋತ್ಕರ್ಷವುಳ್ಳ [ಎಂದರೆ, ಎಲ್ಲವರಲ್ಲೂ ಅಥವಾ ಎಲ್ಲರಿಗಿಂತ ತುಂಬ ಹೆಚ್ಚಳವುಳ್ಳ] ಒಂದು ವೃತ್ತಿಗೆ 'ಔದಾತ್ಯ' ಎಂಬ ಹೆಸರು. ಇಂತಹ ಸರ್ವೋತ್ಕರ್ಷ ವೃತ್ತಿ ವಿಜಿಗೀಷು(ಜಯೇಚ್ಛೆಯುಳ್ಳವ)ವಿನಲ್ಲಿ ಮಾತ್ರವೇ ಇರುತ್ತದೆ. ಆದರೆ ಕವಿ, ಜೀಮೂತವಾಹನನನ್ನು ನಿರ್ಜಿಗೀಷುವೆಂಬಂತೆ, ಎಂದರೆ ಜಯೇಚ್ಛೆ ಇಲ್ಲದಿರುವವನಂತೆ, ವರ್ಣಿಸಿವ್ವಾನೆ. ಇದಕ್ಕೆ ಆಧಾರ : [ನಾಗಾ. : ೧-೭]

ತಿಷ್ಠನ್ಭಾತಿ ಪಿತುಃ ಪುರೋ ಭುವಿ ಯಥಾ ಸಿಂಹಾಸನೇ ಕಿಂ ತಥಾ

ಯತ್ಸಂವಾಹಯತಃ ಸುಖಂ ಹಿ ಚರಣೌ ತಾತಸ್ಯ ಕಿಂ ರಾಜ್ಯತಃ ।

ಕಿಂ ಭುಕ್ತೇ ಭುವನತ್ರಯೇ ಧೃತಿರಸೌ ಭುಕ್ತೋಜ್ಝಿತೇ ಯಾ ಗುರೋ-

ರಾಯಾಸಃ ಖಲು ರಾಜ್ಯಮುಜ್ಝಿತಗುರೋಸ್ತನ್ನಾಸ್ತಿ ಕಶ್ಚಿದ್ಗುಣಃ ॥'

[ತಂದೆಯ ಎದುರು ನೆಲದ ಮೇಲೆ ನಿಂತಾಗ ಬರುವ ಶೋಭೆ ಸಿಂಹಾಸನದಲ್ಲಿ ಕುಳಿತಾಗ ಬರುವುದೇನು? ತಂದೆಯ ಚರಣಗಳನ್ನು ಸೇವಿಸುವ ಸುಖ ರಾಜ್ಯಲಾಭದಿಂದ ಬಂದೀತೆ? ಗುರುವಾದ ತಂದೆಯ ಭೋಜನೋಚ್ಛಿಷ್ಟವನ್ನು ಸ್ವೀಕರಿಸುವುದರಿಂದ ಬರುವ ಧೃತಿ ಭುವನತ್ರಯಭೋಗದಿಂದಲಾದರೂ ಒದಗುವುದೇನು? ತಂದೆಯನ್ನುಳಿದರೆ ಈ ರಾಜ್ಯ ಕೂಡ ನನಗೆ ನಿಶ್ಚಯವಾಗಿ ಆಯಾಸ ಕಾರಣವಾಗುತ್ತದೆ; ಅದರಿಂದ ಯಾವ ಗುಣವೂ ಇಲ್ಲ.]

ಅಷ್ಟೇ ಅಲ್ಲದೆ, ಇನ್ನೊಂದು ಉದಾ : -[ನಾಗಾ. : ೧-೪] :

'ಪಿತ್ರೋರ್ವಿಧಾತುಂ ಶುಶ್ರೂಷಾಂ ತ್ಯಕ್ತ್ವೈಶ್ವರ್ಯಂ ಕ್ರಮಾಗತಮ್।

ವನಂ ಯಾಮ್ಯಹಮಪ್ಯೇಷ ಯಥಾ ಜೀಮೂತವಾಹನಃ ॥'

[ವಂಶಪಾರಂಪರ್ಯವಾಗಿ ಬಂದಿರುವ ಐಶ್ವರ್ಯವನ್ನುಳಿದು ಪಿತೃಗಳ ಶುಶ್ರೂಷೆಗಾಗಿ, ಜೀಮೂತವಾಹನನಂತೆ, ನಾನು ಕೂಡ ಕಾಡಿಗೆ ಹೋಗುತ್ತೇನೆ.]

ಈ ಆಧಾರದಿಂದ, ಆತನಲ್ಲಿ ಅತ್ಯಂತವಾದ ಶಮವೇ ಪ್ರಧಾನವಾಗಿದೆಯೆಂಬುದೂ ಆತ ಪರಮ ಕಾರುಣಿಕನೆಂಬುದೂ ಸ್ಪಷ್ಟವಾಗುತ್ತದೆ. ಆತ ರಾಗವಿರಹಿತನಂತಿವ್ವಾನೆ. ಆದಕಾರಣ ಆತನಲ್ಲಿ ವ್ಯಕ್ತವಾಗುವುದು 'ಔದಾತ್ಯ'ವಲ್ಲ, ಬದಲು 'ಶಾಂತತ್ವ'. ಹೀಗೆ ರಾಜ್ಯಸುಖಾದಿಗಳಲ್ಲಿ ನಿರಭಿಲಾಷೆಯುಳ್ಳ ನಾಯಕನನ್ನು ಚಿತ್ರಿಸಿ, ಅಲ್ಲಿಯೇ ಮಲಯವತಿಯ ಅನುರಾಗವರ್ಣನೆಯನ್ನೂ ಕವಿ ಮಾಡಿದ್ದಾನೆ. ಮಲಯವತಿಯ ಅನುರಾಗ ಚಿತ್ರಿತವಾಗಿರುವುದರಿಂದ, ಜೀಮೂತವಾಹನನ ಶಾಂತತ್ವ ಹೋಯಿತಲ್ಲವೆ ಎಂಬ ಪ್ರಶ್ನೆ ಬಂದೀತು. ಅಲ್ಲಿ ಜೀಮೂತವಾಹನನು ಶಾಂತನಾಯಕನೆಂದೂ, ಮಲಯವತಿಯ ಅನುರಾಗವರ್ಣನೆ ತಂದಿರುವುದು ಕವಿಯಿಂದ ಉಂಟಾದ ದೋಷವೆಂದೂ ಗ್ರಹಿಸಬೇಕು.

ಇನ್ನು, 'ಸಾಮಾನ್ಯ ಗುಣಗಳನ್ನುಳ್ಳ ದ್ವಿಜ ಮುಂತಾದ ಜಾತಿಯ ನಾಯಕನು ಧೀರಶಾಂತ ವರ್ಗದಲ್ಲಿ ಸೇರುತ್ತಾನೆ' ಎಂಬ ಲಕ್ಷಣವಿದೆಯಲ್ಲವೆ? ಆ ಲಕ್ಷಣ ಅವಾಸ್ತವಿಕವಾದದ್ದು. ಏಕೆಂದರೆ, ಶೌರ್ಯ ದಕ್ಷತೆ ಉತ್ಸಾಹ ಕಲಾಸಕ್ತಿ ಮೊದಲಾದ 'ಸಾಮಾನ್ಯಗುಣ'ಗಳು ಶಾಂತನಾದ ವ್ಯಕ್ತಿಯಲ್ಲಿ ಇರಲು ಸಾಧ್ಯವಿಲ್ಲ. ಆದಕಾರಣ ಆ ಲಕ್ಷಣ ಧೀರಶಾಂತನ ವಿಶೇಷವನ್ನು ತಪ್ಪಾಗಿ ಹೇಳಿದೆಯೆಂಬುದು ಸ್ಪಷ್ಟ. ಈ ಲಕ್ಷಣದ ಪ್ರಕಾರ ಉಳಿದ ನಾಯಕರಿಗೂ ಧೀರಶಾಂತನಿಗೂ ಇರುವ ಭೇದವನ್ನು ಗುರುತಿಸಲಾಗುವುದಿಲ್ಲ.

ವಸ್ತುಸ್ಥಿತಿಯಂತೆ ಹೇಳುವುದಾದರೆ, ಬುದ್ಧ ಯುಧಿಷ್ಠಿರ ಜೀಮೂತವಾಹನ ಮೊದಲಾದವರ ವ್ಯವಹಾರಗಳು ಶಾಂತತೆಯ ಆವಿರ್ಭಾವಕ್ಕೆ ಕಾರಣವಾಗುತ್ತವೆ.

[– ಜೀಮೂತವಾಹನನು ಉದಾತ್ತನಾಯಕನಲ್ಲ ಶಾಂತನಾಯಕ ಎನ್ನುವ ಹಾಗೂ ಮಲಯವತಿಯ ಅನುರಾಗವರ್ಣನೆ ಕವಿಯ ದೋಷ ಎನ್ನುವ ಮತ್ತು ಶಾಂತನಾಯಕನ ಲಕ್ಷಣ ಅವಾಸ್ತವ ಎನ್ನುವ ಜನರ ವಾದವನ್ನು ಧನಿಕ ಮೇಲೆ ಸಂಗ್ರಹಿಸಿ ಹೇಳಿದ್ದಾನೆ. ವ್ಯಾಖ್ಯೆಯ ಮುಂದಿನ ಭಾಗದಲ್ಲಿ, ಮೇಲಿನ ವಾದವನ್ನು ಖಂಡಿಸಿ ತನ್ನ ವಾದವನ್ನು ಮುಂದಿಟ್ಟು ಕಾರಿಕೆಯನ್ನು ಹಾಗೂ ಅದಕ್ಕೆ ಕೊಟ್ಟಿರುವ ಜೀಮೂತವಾಹನನ ಉದಾಹರಣೆಯನ್ನು ಸಮರ್ಥಿಸಿಕೊಳ್ಳುತ್ತಾನೆ.]

ಮೇಲಿನ ವಾದಕ್ಕೆ ಸಮಾಧಾನ : ಸರ್ವೋತ್ಕರ್ಷವೃತ್ತಿಯೇ 'ಔದಾತ್ಯ' ಎನ್ನುವ ಮಾತು ಸರಿಯಾದದ್ದು. ಆದರೆ, ಜೀಮೂತವಾಹನ ಮೊದಲಾದವರಲ್ಲಿ ಈ ಸರ್ವೋತ್ಕರ್ಷತೆ ಇಲ್ಲ ಎನ್ನುವುದು ತಪ್ಪು. ವಿಜಿಗೀಷುತ್ವವೆಂಬುದು ಏಕರೂಪವಾದದ್ದಲ್ಲ. ಅನ್ಯರಿಗೆ ಅಪಕಾರಮಾಡಿ ಐಶ್ವರ್ಯವನ್ನು ದೋಚುವುದು ಇತ್ಯಾದಿಗಳಲ್ಲಿ ಪ್ರವೃತ್ತನಾದವನು ವಿಜಿಗೀಷುವಲ್ಲ; ಬದಲು ಯಾವನು ಶೌರ್ಯ ತ್ಯಾಗ ದಯೆ ಮೊದಲಾದವುಗಳಲ್ಲಿ ಎಲ್ಲರನ್ನೂ ಮೀರಿಸುತ್ತಾನೆಯೋ ಅವನೇ ವಿಜಿಗೀಷು. ಪರಾಪಕಾರದಿಂದ ಐಶ್ವರ್ಯ ದೋಚುವವನೇ ವಿಜಿಗೀಷು ಎನ್ನುವುದಾದರೆ, ವಾರಿಗಳ್ಳರನ್ನು ಕೂಡ ವಿಜಿಗೀಷುಗಳೆನ್ನಬೇಕಾದೀತು. ರಾಮಾದಿಗಳನ್ನು ಉದಾತ್ತರೆನ್ನುತ್ತೇವೆ. ಜಗತ್ತನ್ನು ಪಾಲಿಸುವ ಸಲುವಾಗಿ ಅವರು ದುಷ್ಟನಿಗ್ರಹಾದಿ ಕಾರ್ಯಗಳನ್ನು ಕೈಕೊಂಡರು. ದುಷ್ಟನಿಗ್ರಹ ಮೊದಲಾದವುಗಳಿಂದ ಅವರಿಗೆ ಭೂಮಿಲಾಭವೂ ಆಯಿತು. ಆದರೆ ಅವರು ಕಾರ್ಯಪ್ರವೃತ್ತರಾದದ್ದು ಜಗತ್ಪಾಲನೆಗಾಗಿಯಲ್ಲದೆ ಭೂಲಾಭಕ್ಕಲ್ಲ. ಭೂಲಾಭ ಅನಿವಾರ್ಯವಾದ ಆನುಷಂಗಿಕ ಫಲ. ಜೀಮೂತವಾಹನ ಮೊದಲಾದವರು ಪರಾರ್ಥಕ್ಕಾಗಿ ಪ್ರಾಣವನ್ನು ಕೂಡ ಕಡೆಗಣಿಸಿ, ಆ ವೃತ್ತಿಯಲ್ಲಿ ಜಗತ್ತನ್ನೆ ಮೀರಿದವರು; ಆದ್ದರಿಂದ ಅವರನ್ನು 'ಉದಾತ್ತ'ರೆಂದು ಮಾತ್ರವಲ್ಲ, 'ಉದಾತ್ತತಮ'ರೆಂದು ಹೇಳಬೇಕು.

ಇನ್ನು, ಮೇಲಿನ ವಾದಕ್ಕೆ ಆಧಾರವಾಗಿ 'ತಿಷ್ಠನ್‌ಭಾತಿ...' ಇತ್ಯಾದಿ ಪದ್ಯವನ್ನು ಉದಾಹರಿಸುವರಲ್ಲವೆ? ನಾಯಕ ವಿಷಯಸುಖಗಳಿಂದ ಪರಾಙ್ಮುಖನಾಗಿರುವನೆಂಬುದನ್ನು ಅದು ಸೂಚಿಸುತ್ತದೆ, ನಿಶ್ಚಯ. ಆದರೆ, ವಿಷಯಸುಖಪರಾಙ್ಮುಖತೆ ವಿಜಿಗೀಷುವಿನಲ್ಲಿ ಇರುವುದಿಲ್ಲ ಎಂದು ಏಕೆ ಹೇಳಬೇಕು? ನಿಜವಾಗಿ ಹೇಳುವುದಾದರೆ, ವಿಜಿಗೀಷುಗಳು, ಕೃಪಣತೆಯನ್ನುಂಟುಮಾಡುವ ಸ್ವಸುಖತೃಷ್ಣೆಯಿಂದ ವಿಮುಖರೇ ಆಗಿರುತ್ತಾರೆ. ಅದಕ್ಕೆ ಉದಾ : – [ಶಾಕುಂ. : ೫–೭] :

> 'ಸ್ವಸುಖನಿರಭಿಲಾಷಃ ಖಿದ್ಯಸೇ ಲೋಕಹೇತೋಃ
> ಪ್ರತಿದಿನಮಥವಾ ತೇ ವೃತ್ತಿರೇವಂ ವಿಧೈವ।
> ಅನುಭವತಿ ಹಿ ಮೂರ್ಧ್ನಾ ಪಾದಪಸ್ತೀವ್ರಮುಷ್ಣಂ
> ಶಮಯತಿ ಪರಿತಾಪಂ ಛಾಯಯೋಪಾಶ್ರಿತಾನಾಮ್ ॥'

[ನಿನ್ನ ಸುಖದಲ್ಲಿ ಆಸಕ್ತಿಯಿಲ್ಲದೆ, ಲೋಕದ ಸೌಖ್ಯಕ್ಕಾಗಿ ನಿತ್ಯವೂ ಖೇದಗೊಳ್ಳುತ್ತೀಯೆ; ಅಥವಾ, ನಿನ್ನ ವೃತ್ತಿಯೇ ಆ ತೆರನಾದದ್ದು : ತೀವ್ರವಾದ ಶಾಖದಿಂದ ತನ್ನ ತಲೆ ಕಾಯುತ್ತಿದ್ದರೂ ವೃಕ್ಷ ಆಶ್ರಯಿಸಿದವರ ಸಂತಾಪವನ್ನು ತನ್ನ ನೆರಳಿನಿಂದ ತಣಿಸುವುದಿಲ್ಲವೇ – ಹಾಗೆ.]

ಇನ್ನು, ಮಲಯವತಿಯ ಅನುರಾಗವರ್ಣನೆ; ಅದು ಶಾಂತರಸಕ್ಕೆ ವಿರುದ್ಧವಾಗಿದ್ದು, ಪ್ರಸ್ತುತದಲ್ಲಿ ಜೀಮೂತವಾಹನನ ಶಾಂತತ್ವವನ್ನು ನಿಷೇಧಿಸುತ್ತದೆ.

ಅಹಂಕಾರರಾಹಿತ್ಯವೇ ಶಾಂತತೆ. ಅದು ವಿಪ್ರಾದಿಗಳಲ್ಲಿ ಹೊಂದಿಕೊಂಡು ಬಂದಿರುತ್ತದೆ. ಶಾಂತತೆ ಅವರಲ್ಲಿ ವಾಸ್ತವಿಕವಾಗಿಯೇ ಇರುತ್ತದೆಯಲ್ಲದೆ, ಅದು 'ಇವರು ಶಾಂತರು' ಎಂದು ಪಾರಿಭಾಷಿಕವಾದ ಹೆಸರನ್ನು ಹಚ್ಚಿ ಉಂಟಾಗುವಂಥದಲ್ಲ.

ಬುದ್ಧ ಜೀಮೂತವಾಹನರಿಬ್ಬರೂ ಕಾರುಣಿಕರು, ಸರಿ. ಆದರೆ ಅವರೊಳಗೆ ಕೂಡ ಭೇದ ಉಂಟು. ಒಂದು ನಿಷ್ಕಾಮಕರುಣೆ, ಮತ್ತೊಂದು ಸಕಾಮಕರುಣೆ. ಆದಕಾರಣ ಜೀಮೂತವಾಹನಾದಿಗಳಿಗೆ ಉದಾತ್ತತ್ವವೇ ಸರಿ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೩೪-೧೮; ಸಾ.ದ. : ೩-೩೨; ಪ್ರತಾಪ : ೧-೨೮.

## ೬. ಧೀರೋದ್ಧತಲಕ್ಷಣ :

**ದರ್ಪಮಾತ್ಸರ್ಯಭೂಯಿಷ್ಠೋ ಮಾಯಾಛದ್ಮಪರಾಯಣಃ ॥ ೫ ॥**
**ಧೀರೋದ್ಧತಸ್ತ್ವಹಂಕಾರೀ ಚಲಶ್ಚಂಡೋ ವಿಕತ್ಥನಃ ।**

ಅನು : ದರ್ಪಮಾತ್ಸರ್ಯಗಳು ತುಂಬಿರುವವನು, ಮಾಯೆ ಮೋಸಗಳಲ್ಲಿ ಕುಶಲನಾಗಿರುವವನು, ಅಹಂಕಾರವುಳ್ಳವನು, ಚಂಚಲತೆಯುಳ್ಳವನು, ಭಯಂಕರನಾಗಿರುವವನು, ಆತ್ಮಶ್ಲಾಘನೆಯುಳ್ಳವನು 'ಧೀರೋದ್ಧತ' [ನಾಯಕನಾಗುತ್ತಾನೆ.]

ವ್ಯಾಖ್ಯೆ : ದರ್ಪ=ಶೌರ್ಯಾದಿ ಮದ; ಮಾತ್ಸರ್ಯ = ಅಸಹನೆ; ಮಾಯೆ = ಮಂತ್ರಬಲದಿಂದ ಇಲ್ಲದಿರುವ ವಸ್ತುವನ್ನು ಇರುವಂತೆ ತೋರಿಸುವುದು, ಛದ್ಮ = ಕೇವಲ ವಂಚನೆ; ಚಲ = ಅಸ್ಥಿರ; ಚಂಡ = ರೌದ್ರ; ವಿಕತ್ಥನ = ಸ್ವಗುಣ ಪ್ರಶಂಸಕ.

ಉದಾ : - ವೀರಚರಿತೆಯಲ್ಲಿನ ಪರಶುರಾಮ [ಮಹಾ. : ೨-೧೬] : 'ಕೈಲಾಸೋದ್ಧಾರಸಾರ ತ್ರಿಭುವನವಿಜಯ....' ಇ., [ಕೈಲಾಸವನ್ನೆ ಎತ್ತಬಲ್ಲ ಹಾಗೂ ತ್ರಿಲೋಕವಿಜಯಿಯಾದ....]

ಮತ್ತು - ರಾವಣ [ಮಹಾವೀರಚರಿತೆ?] : 'ತ್ರೈಲೋಕ್ಯೈಶ್ವರ್ಯಲಕ್ಷ್ಮೀಹಠಹರಣಸಹಾ ಬಾಹವೋ ರಾವಣಸ್ಯ ।' [ರಾವಣನ ಬಾಹುಗಳು ಭುವನತ್ರಯಗಳ ಐಶ್ವರ್ಯಲಕ್ಷ್ಮಿಯನ್ನು ಹಠದಿಂದ ಅಪಹರಿಸಲು ಶಕ್ತವಾಗಿವೆ.]

- ಧೀರಲಲಿತ, ಧೀರಶಾಂತ, ಧೀರೋದಾತ್ತ, ಧೀರೋದ್ಧತ - ಈ ಒಂದೊಂದಕ್ಕೂ ಬೇರೆ ಬೇರೆ ಗುಣಗಳನ್ನು ಹಿಂದೆ ಹೇಳಲಾಗಿದೆಯಷ್ಟೆ. ಆಯಾ ಗುಣಗಳ ಸಮಾರೋಪದ ಅವಸ್ಥೆಯನ್ನೆ ಧೀರಲಲಿತ ಮುಂತಾದ ಪಾರಿಭಾಷಿಕ ಪದಗಳು ಸೂಚಿಸುತ್ತವೆ. ಕರು, ಹೋರಿ, ಗೂಳಿ - ಎಂದು ಹೇಳಿದರೆ ಆ ಒಂದೊಂದೂ ಒಂದೊಂದು ಅವಸ್ಥೆಯನ್ನು ಸೂಚಿಸುತ್ತದೆಯಲ್ಲವೆ? ಹಾಗೆಯೇ ಧೀರಲಲಿತಾದಿ ಶಬ್ದಗಳೂ ತಮಗೆ ನಿಯಮಿತವಾದ ಗುಣದ ಅವಸ್ಥೆಯನ್ನು ಸೂಚಿಸುತ್ತವೆ. ಹಾಗಲ್ಲದೆ, ಇವು ಒಂದೊಂದೂ (ಹುಲಿ ಕರಡಿ ನಾಯಿ ಇ.,ಗಳಂತೆ) ಒಂದೊಂದು ಜಾತಿ ಎಂದು ತಿಳಿಯಬಾರದು. ಮಹಾಕವಿಪ್ರಬಂಧಗಳಲ್ಲಿ ಒಬ್ಬ ನಾಯಕನನ್ನೆ ಒಂದಕ್ಕೊಂದು ವಿರುದ್ಧವಾದ ಅನೇಕ ಅವಸ್ಥೆಗಳಲ್ಲಿ ಚಿತ್ರಿಸಿರುವುದು ಕಾಣುತ್ತದೆ. ಧೀರಲಲಿತಾದಿಗಳು ಜಾತಿಸೂಚಕವೆಂದು ಭಾವಿಸಿದರೆ, ಮಹಾಕವಿಪ್ರಬಂಧಗಳಲ್ಲಿ ವಿರುದ್ಧಾವಸ್ಥೆಗಳ ಚಿತ್ರಣ ಬಂದಿರುವುದು ಅಸಂಗತ ಎನ್ನಬೇಕಾಗುತ್ತದೆ; ಏಕೆಂದರೆ, ಅವಸ್ಥೆ, ಬೇರೆಯಾದರೆ ಜಾತಿಯನ್ನತಿಕ್ರಮಿಸಿದಂತಾಗುತ್ತದೆ. ಅನೇಕ ಅವಸ್ಥೆಗಳ ಚಿತ್ರಣಕ್ಕೆ ಉದಾಹರಣೆಯಾಗಿ ಭವಭೂತಿ ಚಿತ್ರಿಸಿರುವ ಪರಶುರಾಮನನ್ನು ನೋಡಬಹುದು :

೧. [ಮಹಾ. : ೨-೧೦; ಈ ಉದಾ : ೪-೩೩ರಲ್ಲೂ ಬಂದಿದೆ] :

'ಬ್ರಾಹ್ಮಣಾತಿಕ್ರಮತ್ಯಾಗೋ ಭವತಾಮೇವ ಭೂತಯೇ ।
ಜಾಮದಗ್ನ್ಯಶ್ಚ ವೋ ಮಿತ್ರಮನ್ಯಥಾ ದುರ್ಮನಾಯತೇ ॥'

[ಬ್ರಾಹ್ಮಣರ ಮೇಲೆ ಅತಿಕ್ರಮಣಮಾಡುವುದನ್ನು ಬಿಟ್ಟರೆ ಅದರಿಂದ ನಿಮಗೇ ಕಲ್ಯಾಣ. ಹಾಗಿದ್ದರೆ ಜಮದಗ್ನಿಯು ನಿಮ್ಮ ಮಿತ್ರ; ಇಲ್ಲದಿದ್ದಲ್ಲಿ ಆತ ಕ್ರುದ್ಧನಾಗುತ್ತಾನೆ.] – ಇಲ್ಲಿ, ರಾವಣನ ಕೂಡ, ಆತ 'ಧೀರೋದಾತ್ತ'ನಾಗಿ ತೋರುತ್ತಾನೆ.

೨. [ಮಹಾ : ೨–೧೬ ; ಇದೇ ಖಂಡದ ವ್ಯಾಖ್ಯೆಯಲ್ಲಿ ಹಿಂದೆ ಬಂದಿವ್ವು] :

'ಕೈಲಾಸೋದ್ಧಾರಸಾರ.....' ಇ., [ಕೈಲಾಸವನ್ನೆ ಎತ್ತಬಲ್ಲ....] ಇಲ್ಲಿ, ರಾಮಾದಿಗಳ ಕೂಡ, ಮೊದಲು 'ಧೀರೋದ್ಧತ'ನಾಗಿ ತೋರುತ್ತಾನೆ.

೩. [ಮಹಾ : ೪–೨೨ ; ೨–೮ರಲ್ಲಿ ಕೂಡ ಈ ಉದಾ. ಬಂದಿದೆ] :

'ಪುಣ್ಯಾ ಬ್ರಾಹ್ಮಣಜಾತಿ......' ಇ., [ಬ್ರಾಹ್ಮಣಜಾತಿ ಪವಿತ್ರವಾದದ್ದು.......]–ಇಲ್ಲಿ, 'ಧೀರಶಾಂತ'ನಂಬಂತೆ ವರ್ಣಿತನಾಗಿದ್ದಾನೆ.

ಮೇಲಿನ ಉದಾಹರಣೆಯಲ್ಲಿ ಬರುವ ವಿವಿಧಾವಸ್ಥೆಗಳ ನಿರೂಪಣ ಅನುಚಿತವಲ್ಲ. ಮಹಾವೀರಚರಿತೆಯ ನಾಯಕ ರಾಮ; ಪರಶುರಾಮ ಅಲ್ಲಿ ಅಂಗಭೂತನಾಯಕ ಅಥವಾ ಪ್ರತಿನಾಯಕ. ಅಂಗಭೂತನಾಯಕನು ಕಥೆಯ ಪ್ರಧಾನನಾಯಕನನ್ನು ಅವಲಂಬಿಸಿರುವ ಕಾರಣ, ಪ್ರಧಾನ ನಾಯಕನಿಗೆ ಹೊಂದಿಕೊಂಡು ಈತನ ವರ್ತನೆ ಇರಬೇಕಾದ ಕಾರಣ – ಆತನಲ್ಲಿ ಮಹಾಸತ್ತ್ವಾದಿ ಗುಣಗಳು ವ್ಯವಸ್ಥಿತವಾಗಿ ಇರುವುದಿಲ್ಲ. ಆದ್ದರಿಂದ ಅಂಗಭೂತನಾಯಕನಲ್ಲಿ ಅನೇಕ ಅವಸ್ಥೆಗಳ ಚಿತ್ರಣ ಬಂದಿದ್ದರೆ ಅದು ಉಚಿತವೇ ಆಗಿರುತ್ತದೆ. ಆದರೆ ಪ್ರಧಾನನಾಯಕನಲ್ಲಿ ಮಾತ್ರ, ಪ್ರಬಂಧದ ಆರಂಭದಿಂದ ಅಂತ್ಯದವರೆಗೂ ಒಂದೇ ಅವಸ್ಥೆಯನ್ನುಳ್ಳ ಚಿತ್ರಣವಿರತಕ್ಕದ್ದು. ಪ್ರಧಾನ ನಾಯಕರಾದ ರಾಮಾದಿಗಳು ಪ್ರಬಂಧದ ಆರಂಭದಲ್ಲಿ ಯಾವ ಅವಸ್ಥೆಯಿಂದ ಚಿತ್ರಿತರಾಗಿರುತ್ತಾರೋ ಅದೇ ಅವಸ್ಥೆಯಲ್ಲೆ ಮುಂದುವರಿಯದೆ, ಬೇರೊಂದು ಅವಸ್ಥೆಗೆ ದಾಟಿದಂತೆ ಚಿತ್ರಿತರಾದರೆ ಅದು ತಪ್ಪು. ಉದಾಹರಣೆಗೆ, ಮೊದಲಿನಿಂದ ಉದಾತ್ತನಾಯಕನೆಂಬಂತೆ ಚಿತ್ರಿತವಾಗಿರುವ ರಾಮನು ಮೋಸದಿಂದ ವಾಲಿಯನ್ನು ವಧಿಸುವುದು ಸರಿಯಾಗದು. ಅಲ್ಲಿ ಆತ ತನ್ನ ಔದಾತ್ತ್ಯಾವಸ್ಥೆಯನ್ನು ಅತಿಕ್ರಮಿಸಿದಂತಾಗುತ್ತದೆ.

ಮುಂದೆ [ಎಂದರೆ, ಮುಂದಿನ ಖಂಡದಿಂದ ಮೊದಲಾಗಿ] ದಕ್ಷಿಣ ಶಠ ಧೃಷ್ಟ ಅನುಕೂಲ – ಈ ಬಗೆಯ ಶೃಂಗಾರನಾಯಕಾವಸ್ಥೆಗಳನ್ನು ಹೇಳಲಾಗುತ್ತದೆ. ಅಲ್ಲಿ ಒಂದೇ ನಾಯಕನಲ್ಲಿ – ಅವನು ಪ್ರಧಾನ ನಾಯಕನಾಗಿರಲಿ ಅಥವಾ ಅಂಗಭೂತನಾಯಕನಾಗಿರಲಿ – ಭಿನ್ನಭಿನ್ನವಾದ ಅವಸ್ಥೆಗಳು ಬರುವುದು ಅನುಚಿತವಲ್ಲ. 'ಒಬ್ಬ ಪ್ರೇಯಸಿ ಇರುವಾಗ ಮತ್ತೊಬ್ಬಳಿಂದ ಆಕರ್ಷಿತನಾದವನು' ಶೃಂಗಾರನಾಯಕ; ಆತನ ಅವಸ್ಥೆಗಳು ನಾಲ್ಕು. ಎಂದರೆ, ಈ ಅವಸ್ಥೆಗಳು ಸಿದ್ಧವಾಗುವುದು ಬೇರೊಂದು ಪಾತ್ರದ ನಿತ್ಯಸಾಪೇಕ್ಷತ್ವದಿಂದ; ಕೇವಲ ತನ್ನಿಂದಲೇ ಅಲ್ಲ. ಆದ ಕಾರಣ, ಅಲ್ಲಿ ಒಬ್ಬನೇ ನಾಯಕನಿಗೆ– ಆತ ಪ್ರಧಾನನಿರಲಿ, ಅಪ್ರಧಾನನಿರಲಿ–ಭಿನ್ನಭಿನ್ನವಾದ ಹಲವು ಅವಸ್ಥೆಗಳು ಬಂದಿದ್ದರೂ ಅದು ದೋಷವಾಗುವುದಿಲ್ಲ.

ಟಿಪ್ಪಣಿ : ಧನಿಕನ ವ್ಯಾಖ್ಯೆಯ ಸಾರ ಇಷ್ಟು : ಧೀರಲಲಿತಾದಿ ನಾಲ್ಕು ಅವಸ್ಥೆಗಳು ಆಯಾ ನಾಯಕನ ವಿಶೇಷ ಗುಣಗಳ ಸಮಸ್ತ ದೃಷ್ಟಿಯಿಂದ ಕಲ್ಪಿತವಾಗುತ್ತವೆ. ಒಬ್ಬನೇ ನಾಯಕನಲ್ಲಿ ಭಿನ್ನವಾದ ಹಲವು ಅವಸ್ಥೆಗಳನ್ನು ಕಾಣುವುದು ಸಾಧ್ಯ. ಆದರೆ, ಪ್ರಬಂಧದ ಐಕ್ಯತೆಯ ದೃಷ್ಟಿಯಿಂದ, ಪ್ರಧಾನನಾಯಕನಿಗೆ ಮೊದಲಿಂದ ಕೊನೆಯವರೆಗೂ ಒಂದೇ ಅವಸ್ಥೆ ಇರತಕ್ಕದ್ದು. ಅಂಗಭೂತನಾಯಕನಿಗೆ ಮಾತ್ರ ಭಿನ್ನವಾದ ಹಲವು ಅವಸ್ಥೆಗಳಿರಬಹುದು.

ಶೃಂಗಾರನಾಯಕನಿಗೆ – ಆತ ಪ್ರಧಾನನಾಯಕನಾಗಿದ್ದರೂ ಕೂಡ – ಭಿನ್ನಭಿನ್ನವಾದ ಹಲವು ಅವಸ್ಥೆಗಳಿರಬಹುದು. (ಈ ಕುರಿತು ೨–೧೧ರ ವ್ಯಾಖ್ಯೆ ಹಾಗೂ ಟಿಪ್ಪಣಿ ನೋಡಿ).

ಹೋಲಿಕೆ = ನಾ.ಶಾ. : ೩೪–೧೮; ಸಾ.ದ. ೩–೩೩; ಪ್ರತಾಪ : ೧–೩೦.

# ಶೃಂಗಾರನಾಯಕನ ಅವಸ್ಥೆಗಳು

## ೭. ಅವಸ್ಥಾಭೇದಗಳು (ಅನೇಕ ನಾಯಿಕೆಯರಿದ್ದವ) :

**ಸ ದಕ್ಷಿಣಃ ಶಠೋ ಧೃಷ್ಟಃ ಪೂರ್ವಾಂ ಪ್ರತ್ಯನ್ಯಯಾ ಹೃತಃ ॥ ೭॥**

ಅನು : [ತನ್ನ ಮೊದಲ ನಾಯಿಕೆಯಲ್ಲದೆ] ಬೇರೆಯವಳಿಂದ ಆಕರ್ಷಿತನಾದ ಅವನು [ಎಂದರೆ, ನಾಯಕನು], ಹಿಂದಿನವಳಿಗೆ 'ದಕ್ಷಿಣ ' [ಅಥವಾ] 'ಶಠ' [ಅಥವಾ ] 'ಧೃಷ್ಟ'[ನಾಗಿರುತ್ತಾನೆ.]

ವ್ಯಾಖ್ಯೆ : ನಾಯಕನಿಗೆ ಮೊದಲು ಒಬ್ಬ ನಾಯಿಕೆಯಿದ್ದು ಆಮೇಲೆ ಅವನು ಬೇರೊಬ್ಬಳಿಂದ ಆಕರ್ಷಿತನಾದಾಗ, ಆತ ತನ್ನ ಹಿಂದಿನ ನಾಯಿಕೆಯ ಕೂಡ ನಡೆದುಕೊಳ್ಳುವ ರೀತಿಯಿಂದಾಗಿ ಮೂರು ಬೇರೆ ಬೇರೆ ಅವಸ್ಥೆಗಳುಂಟಾಗುತ್ತವೆ. ಈ ಮೂರು ಅವಸ್ಥೆಗಳು ಮತ್ತು ಒಬ್ಬಳೇ ನಾಯಿಕೆಯುಳ್ಳ ನಾಯಕನ ಒಂದು ಅವಸ್ಥೆ – ಹೀಗೆ ಶೃಂಗಾರನಾಯಕನ ನಾಲ್ಕು ಅವಸ್ಥೆಗಳು. ಹಿಂದೆ ಹೇಳಿದ (೨-೨) ನಾಲ್ಕು ಭೇದ ಗಳೊಂದೊಂದರಲ್ಲೂ ಈ ನಾಲ್ಕು ಅವಸ್ಥೆಗಳಿರುವ ಕಾರಣ ಒಟ್ಟು ಭೇದಗಳು ಹದಿನಾರು.

ಟಿಪ್ಪಣಿ : ಶೃಂಗಾರದಲ್ಲಿ ಆಸಕ್ತನಾದ ನಾಯಕನಿಗೆ ಎಂದರೆ, ಪ್ರೇಮಿಯಾದ ನಾಯಕನಿಗೆ 'ಶೃಂಗಾರನಾಯಕ' ಎಂಬ ಹೆಸರು. ಒಬ್ಬಳೇ ನಾಯಿಕೆಯಿರುವ ಶೃಂಗಾರನಾಯಕ 'ಅನುಕೂಲ' ಎನ್ನಿಸಿಕೊಳ್ಳುತ್ತಾನೆ. [ನೋಡಿ : ೨-೧೧]. ಅನೇಕ ನಾಯಿಕೆಯರಿರುವ ನಾಯಕರಲ್ಲಿ ಮೇಲಿನ ಮೂರು ಭೇದಗಳು. (ಅನೇಕ ನಾಯಿಕೆಯರಿರುವಾತ ತನ್ನ ಹಿಂದಿನ ನಾಯಿಕೆಯ ಕೂಡ ಯಾವ ರೀತಿ ನಡೆದುಕೊಳ್ಳುತ್ತಾನೆ ಎಂಬುದನ್ನು ಅವಲಂಬಿಸಿ ಈ ಮೂರು ಭೇದಗಳು ಸಿದ್ಧವಾಗುತ್ತವೆ.) ಹೀಗೆ ಶೃಂಗಾರನಾಯಕನ ಭೇದಗಳು ಒಟ್ಟು ನಾಲ್ಕು. ಹಿಂದೆ [೨-೨] ಹೇಳಿದಂತೆ ನಾಯಕರಲ್ಲಿ ಧೀರಲಲಿತ, ಧೀರಶಾಂತ, ಧೀರೋದಾತ್ತ, ಧೀರೋದ್ಧತ – ಎಂಬ ನಾಲ್ಕು ಪ್ರಕಾರವಷ್ಟೆ. ಒಂದೊಂದು ಪ್ರಕಾರದಲ್ಲೂ ಮೇಲೆ ಹೇಳಿದ ನಾಲ್ಕು ಅವಸ್ಥೆಗಳು ಉಂಟಾಗುತ್ತವೆ. ಆದಕಾರಣ ಒಟ್ಟಿನಲ್ಲಿ ಶೃಂಗಾರನಾಯಕಭೇದಗಳು ಹದಿನಾರು. ಉತ್ತಮ ಮಧ್ಯಮ ಅಧಮ – ಎಂಬ ಭೇದಗಳಿಂದ ಈ ಹದಿನಾರು ಮತ್ತೆ ನಲವತ್ತೆಂಟು ಪ್ರಕಾರಗಳಾಗುತ್ತವೆ. [ನೋಡಿ : ೨-೧೧ರ ವ್ಯಾಖ್ಯೆ].

ನಾಯಕನು ಅನೇಕ ನಾಯಿಕೆಯರನ್ನುಳ್ಳವನಾಗಿದ್ದಾಗ, ಆತನ ಹಿಂದಿನ ಪ್ರಿಯೆಗೆ 'ಜ್ಯೇಷ್ಠಾ' (ಹಿರಿಯಳು) ಎಂದೂ, ಹೊಸಬಳಾದ ಪ್ರಿಯೆಗೆ 'ಕನಿಷ್ಠಾ' (ಕಿರಿಯಳು) ಎಂದೂ ಸಂಕೇತ. (ನೋಡಿ : ೨-೩೧).

ಹೋಲಿಕೆ = ಸಾ.ದ. : ೩-೩೫; ಪ್ರತಾಪ : ೧-೩೪.

## ೮. ದಕ್ಷಿಣಲಕ್ಷಣ :

**ದಕ್ಷಿಣೋಽಸ್ಯಾಂ ಸಹೃದಯಃ**

ಅನು : ಅವಳಲ್ಲಿ [ಎಂದರೆ, ಜ್ಯೇಷ್ಠೆಯಲ್ಲಿ] ಸಹೃದಯನಾಗಿರುವವನು 'ದಕ್ಷಿಣ'.

ವ್ಯಾಖ್ಯೆ : ಕನಿಷ್ಠೆಯಿಂದ ಆಕರ್ಷಿತನಾಗಿದ್ದರೂ ಜ್ಯೇಷ್ಠೆಯ ಸಂಗಡ ಹೃದಯಪೂರ್ವಕವಾಗಿ ವ್ಯವಹರಿಸು ವವನು 'ದಕ್ಷಿಣ'. ಉದಾ:- [ಧನಿಕನದೇ] :

'ಪ್ರಸೀದತ್ಯಾಲೋಕೇ ಕಿಮಪಿ ಕಿಮಪಿ ಪ್ರೇಮಗುರವೋ
 ರತಿಕ್ರೀಡಾಃ ಕೋಽಪಿ ಪ್ರತಿದಿನಮಪೂರ್ವೋಽಸ್ಯ ವಿನಯಃ।
ಸವಿಸ್ರಂಭಃ ಕಶ್ಚಿತ್ಕಥಯತಿ ಚ ಕಿಂಚಿತ್ಪರಿಜನೋ
 ನ ಚಾಹಂ ಪ್ರತ್ಯೇಮಿ ಪ್ರಿಯಸಖಿ ಕಿಮಪ್ಯಸ್ಯ ವಿಕೃತಿಮ್ ॥'

[ನೋಡಿದೊಡನೆಯೇ ಪ್ರಸನ್ನನಾಗುತ್ತಾನೆ; ಪ್ರೇಮ ತುಂಬಿದ ಯಾವಯಾವುದೊ ರತಿಕ್ರೀಡೆಗಳನ್ನು ಆಡುತ್ತಾನೆ; ಆತನ ವಿನಯವೂ ದಿನದಿನವೂ ಯಾವುದೋ ಹೊಸತು. ಆದರೆ ನನ್ನ ನಂಬಿಕೆಯ ಸೇವಕರು (ಆತನ ದುಶ್ಚೇಷ್ಟೆಗಳೆಂದು) ಆಗಾಗ ಏನೋ ಸ್ವಲ್ಪ ಹೇಳುತ್ತಾರೆ. ಎಲೈ ಸಖಿ, ನಾನು ಮಾತ್ರ ಆತನ ದುಶ್ಚೇಷ್ಟೆಗಳನ್ನು ಸ್ವಲ್ಪವೂ ನಂಬಲಾರೆ.]

ಮತ್ತು-[ಮಾಲ.ಮಿ. : ೩-೩] :

'ಉಚಿತಃ ಪ್ರಣಯೋ ವರಂ ವಿಹಂತುಂ ಬಹವಃ ಖಂಡನಹೇತವೋ ಹಿ ದೃಷ್ಟಾಃ ।
ಉಪಚಾರವಿಧಿರ್ಮನಸ್ವಿನೀನಾಂ ನನು ಪೂರ್ವಾಭ್ಯಧಿಕೋಽಪಿ ಭಾವಶೂನ್ಯಃ ॥'

[ಪ್ರಣಯಖಂಡನೆಗೆ ಕಾರಣವಾಗಿ ಅನೇಕ (ಕಾರ್ಯಗಳು) ಕಂಡುಬಂದಿರುವುದರಿಂದ ಅವರ (ಪ್ರಣಯದ) ನಿರಾಕರಣೆ ಉಚಿತವಾಗಿದೆ. ಈಗ (ನಾನು) ಮಾಡುವ ಉಪಚಾರವಿಧಿಯು ಮೊದಲಿಗಿಂತ ಮಿಗಿಲಾಗಿದ್ದರೂ ಮಾನಿನಿಯರಿಗೆ ನಿಜವಾಗಿ ಭಾವಶೂನ್ಯ(ವೆನಿಸುತ್ತದೆ).]

ಟಿಪ್ಪಣಿ : ಹೋಲಿಕೆ = ಸಾ.ದ. : ೩-೩೫; ಪ್ರತಾಪ : ೧-೩೬.

## ೯. ಶಠಲಕ್ಷಣ :

**ಗೂಢವಿಪ್ರಿಯಕೃಚ್ಛಠಃ ।**

ಅನು : [ಜ್ಯೇಷ್ಠೆಗೆ] ರಹಸ್ಯವಾಗಿ ಅಪ್ರಿಯವನ್ನೆಸಗುವವನು 'ಶಠ'.

ವ್ಯಾಖ್ಯೆ : ಬೇರೊಬ್ಬಳನ್ನು ಒಲಿಯುವ ಕಾರಣ ದಕ್ಷಿಣ ಶಠರಿಬ್ಬರೂ ಜ್ಯೇಷ್ಠೆಗೆ ಅಪ್ರಿಯವೆಸಗಿದಂತೆಯೇ ಸರಿ. ಆದರೆ ದಕ್ಷಿಣನು ಜ್ಯೇಷ್ಠೆಯಲ್ಲಿ ಹೃದಯಪೂರ್ವಕವಾಗಿ ವ್ಯವಹರಿಸುತ್ತಾನೆ, ಶಠನು ಒಳಗೆ ಅಪ್ರಿಯವನ್ನಿಟ್ಟು ಕೊಂಡು ಮೇಲೆ ಸರಿಯಾಗಿಯೇ ಇರುವಂತೆ ನಟಿಸುತ್ತಾನೆ. ಶಠನಿಗೆ ಉದಾ– [ಅಮರು : ಶ್ಲೋ. ೧೦೯] :

'ಶಠಾನ್ಯಸ್ಯಾಃ ಕಾಂಚೀಮಣಿರಣಿತಮಾಕರ್ಣ್ಯ ಸಹಸಾ
ಯದಾಶ್ಲಿಷ್ಯನ್ನೇವ ಪ್ರಶಿಥಿಲಭುಜಗ್ರಂಥಿರಭವಃ ।
ತದೇತತ್ಕ್ವಾಚಕ್ಷೇ ಘೃತಮಧುಮಯಂ ತ್ವದ್ಬಹುವಚೋ–
ವಿಷೇಣಾಘೂರ್ಣಂತೀ ಕಿಮಪಿ ನ ಸಖೀ ಮೇ ಗಣಯತಿ ॥'

[ಎಲೈ ಶಠ, ನನ್ನ ಸಖಿಯನ್ನು ಇನ್ನೇನು ಆಲಂಗಿಸಲಿದ್ದವನು, ಮತ್ತೊಬ್ಬಳ ಕಾಂಚೀಮಣಿ ಕಿಂಕಿಣಿಯನ್ನು ಕೇಳಿ, ಒಡನೆಯೇ ತೋಳುಗಳನ್ನು ಸಡಿಲಿಸಿಬಿಟ್ಟೆ, ನಾನೇನು ಹೇಳಲಿ? ತುಪ್ಪ ಜೇನುಗಳ ಬೆರಕೆಯಂತಿರುವ ನಿನ್ನ ಭಾರಿ ಭಾರಿ ಮಾತಿನ ಮದ ಏರಿ ತಲೆ ಸುತ್ತುತ್ತಿರಲು ನನ್ನ ಸಖಿ ಏನೊಂದನ್ನೂ ಪರಿಗಣಿಸಲಾರದಂತಾಗಿದ್ದಾಳೆ. (ತುಪ್ಪ ಜೇನುಗಳ ಬೆರಕೆಯನ್ನು ಅತಿಯಾಗಿ ಸೇವಿಸಿದರೆ ಅದರಿಂದ ಉನ್ಮತ್ತತೆಯುಂಟಾಗುತ್ತದೆ ಎಂದು ಪ್ರತೀತಿ.)]

ಟಿಪ್ಪಣಿ : ಹೋಲಿಕೆ = ಸಾ.ದ. : ೩-೩೭; ಪ್ರತಾಪ : ೧-೩೮.

## ೧೦. ಧೃಷ್ಟಲಕ್ಷಣ :

**ವ್ಯಕ್ತಾಂಗವೈಕೃತೋ ಧೃಷ್ಟೋ**

ಅನು : [ತಾನು ಬಾಯಿಬಿಟ್ಟು ಹೇಳದಿದ್ದರೂ, ಕನಿಷ್ಠೆಯ ಸಹವಾಸದಿಂದ ಉಂಟಾದ] ಅಂಗಗಳ ವಿಕಾರ ಎದುರು ಕಾಣುತ್ತಿರುವಂಥವನು 'ಧೃಷ್ಟ'.

ವ್ಯಾಖ್ಯೆ : ಉದಾ– [ಅಮರು : ಶ್ಲೋ. ೬೦] :

'ಲಾಕ್ಷಾ ಲಕ್ಷ್ಮ ಲಲಾಟಪಟ್ಟಮಭಿತಃ ಕೇಯೂರಮುದ್ರಾಗಲೇ
ವಕ್ತ್ರೇ ಕಜ್ಜಲಕಾಲಿಮಾ ನಯನಯೋಸ್ತಾಂಬೂಲರಾಗೋಽಪರಃ ।
ದೃಷ್ಟ್ವಾ ಕೋಪವಿಧಾಯಿ ಮಂಡನಮಿದಂ ಪ್ರಾತಶ್ಚಿರಂ ಪ್ರೇಯಸೋ
ಲೀಲಾತಾಮರಸೋದರೇ ಮೃಗದೃಶಃ ಶ್ವಾಸಾಃ ಸಮಾಪ್ತಿಂ ಗತಾಃ ॥'

[ಅಗಲವಾದ ಹಣೆಯ ಸುತ್ತ ಲಾಕ್ಷಾರಸದ ಗುರುತು, ಕಂಠದಲ್ಲಿ ಕೇಯೂರಹಾರದ ಮುದ್ರೆ, ಮುಖದಲ್ಲಿ ಕಾಡಿಗೆಯ ಕಪ್ಪು, ಕಣ್ಣುಗಳಲ್ಲಿ ಬೇರೆಯವಾದ ತಾಂಬೂಲರಾಗ –ಹೀಗೆ, ಬೆಳಗಿನ ವೇಳೆ, ಕೋಪವನ್ನು ಕೆರಳಿಸುವ ಅಲಂಕಾರಗಳನ್ನುಳ್ಳ ಪ್ರಿಯನನ್ನು ಬಹುಕಾಲ ವೀಕ್ಷಿಸಿದ ಮೃಗಾಕ್ಷಿಯ ನಿಟ್ಟುಸಿರು (ಕ್ರೈಯ) ಲೀಲಾಕಮಲದ ಒಡಲಲ್ಲಿ ಅಡಗಿಹೋಯಿತು.]

ಟಿಪ್ಪಣಿ : ಧೃಷ್ಟನ ದೇಹದಲ್ಲಿ ಕನಿಷ್ಠೆಯ ಜೊತೆಗಿನ ಪ್ರೇಮಚೇಷ್ಟೆಯಿಂದುಂಟಾದ ಕುಂಕುಮಕಾಡಿಗೆಗಳ, ನಖದಂತಕ್ಷತೆಗಳೇ ಮುಂತಾದ ಗುರುತುಗಳು ಎದ್ದು ಕಾಣುತ್ತಿರುತ್ತವೆ. ಹಾಗಿದ್ದರೂ ಆತ ಜ್ಯೇಷ್ಠೆಯ ಎದುರು ಬರಲು ನಾಚುವುದಿಲ್ಲ. ತನ್ನ ತಪ್ಪುಗಳನ್ನು ಒಪ್ಪಿಕೊಳ್ಳುವ ವಿನಯವೂ ಆತನಲ್ಲಿಲ್ಲ. [ನೋಡಿ : ೨-೪೦]

ಹೋಲಿಕೆ = ಸಾ.ದ. : ೩-೩೬; ಪ್ರತಾಪ : ೩-೩೮.

## ೧೧. ಅನುಕೂಲಲಕ್ಷಣ :

**ಅನುಕೂಲಸ್ತ್ವೇಕನಾಯಿಕಃ ॥ ೭ ॥**

ಅನು : [ಯಾವನೊಬ್ಬ ನಾಯಕನಿಗೆ] ಒಬ್ಬಳೇ ನಾಯಿಕೆಯಿರಲು [ಅವನು] 'ಅನುಕೂಲ'.

ವ್ಯಾಖ್ಯೆ : ಉದಾ:- [ಉತ್ತರ : ೧-೩೯] :

'ಅದ್ವೈತಂ ಸುಖದುಃಖಯೋರನುಗತಂ ಸರ್ವಾಸ್ವವಸ್ಥಾಸು ಯ-
ದ್ವಿಶ್ರಾಮೋ ಹೃದಯಸ್ಯ ಯತ್ರ ಜರಸಾ ಯಸ್ಮಿನ್ನಹಾರ್ಯೋ ರಸಃ ।
ಕಾಲೇನಾವರಣಾತ್ಯಯಾತ್ಪರಿಣತೇ ಯತ್ಸ್ನೇಹಸಾರೇ ಸ್ಥಿತಂ
ಭದ್ರಂ ತಸ್ಯ ಸುಮಾನುಷಸ್ಯ ಕಥಮಪ್ಯೇಕಂ ಹಿ ತತ್ಪ್ರಾಪ್ಯತೇ ॥'

[ಯಾವುದು ಸುಖದುಃಖಗಳೆರಡರಲ್ಲಿಯೂ ಎರಡು ಕಾಣದುದೋ, ಎಲ್ಲ ಅವಸ್ಥೆಗಳಲ್ಲೂ ಹೊಂದಿ ನಡೆಯುವಂಥದೋ, ಹೃದಯಕ್ಕೆ ವಿಶ್ರಾಂತಿ ಕೊಡುವಂಥದೊ, ಮುಪ್ಪಿನಲ್ಲಿ ಕೂಡ ಆನಂದ ಆರದಿರುವಂಥದೊ ಕಾಲ ಕಳೆದಂತೆ ಪರಿಣತವಾಗಿ ಸ್ನೇಹಸಾರವಾಗಿ ನಿಲ್ಲುವಂಥದೊ –ಅಂಥ ಮಂಗಲಕರವಾದ ಏಕೈಕಪ್ರೇಮವು ಹೇಗೋ, ಸುಮನಸ್ಕನಾದ ಪುರುಷನಿಗೆ ದೊರೆಯುತ್ತದೆ.]

ನಾಟಿಕಾನಾಯಕರಾದ ವತ್ಸರಾಜ ಮುಂತಾದವರು ಯಾವ ವಿಭಾಗಕ್ಕೆ ಸೇರುತ್ತಾರೆ. ಎಂಬ ಪ್ರಶ್ನೆ ಏಳಬಹುದು. ('ನಾಟಿಕಾ' ಎಂಬುದು 'ಉಪರೂಪಕ'ಗಳಲ್ಲೊಂದು; ಲಕ್ಷಣಗಳಿಗೆ ೩-೪೬ ನೋಡಿ. ಮೇಲಿನ ಪ್ರಶ್ನೆ ಏಳಲು ಕಾರಣ : ರತ್ನಾವಲೀ ನಾಟಿಕೆಯ ನಾಯಕನಾದ ವತ್ಸರಾಜ ಕಥೆಯ ಮೊದಲಲ್ಲಿ ಏಕನಾಯಿಕೆಯುಳ್ಳವ. ಅನಂತರ ರತ್ನಾವಲಿಯಲ್ಲಿ ಅನುರಕ್ತನಾಗುತ್ತಾನೆ. ಅದಕ್ಕಾಗಿ ಆತ ಯಾವ ವಿಭಾಗಕ್ಕೆ ಸೇರುವನು ಎಂಬ ಸಂದೇಹ.) ಅದಕ್ಕೆ ಉತ್ತರ : ಆತ ಬೇರೆಯವಳಾದ ರತ್ನಾವಲಿಯಲ್ಲಿ ಅನುರಕ್ತನಾಗುವ ಮೊದಲು 'ಅನುಕೂಲ'. ಆಮೇಲೆ 'ದಕ್ಷಿಣ'. ಇನ್ನೊಂದು ಪ್ರಶ್ನೆ ಹುಟ್ಟಬಹುದು : ಆತ ರತ್ನಾವಲಿಯಲ್ಲಿ ಅನುರಕ್ತನಾಗುವ ಕಾರಣ ವಾಸವದತ್ತೆಗೆ ಅಪ್ರಿಯವಾಗಿ ನಡೆದುಕೊಳ್ಳುವುದರಿಂದ ಮತ್ತು ಅದು ವ್ಯಕ್ತವೂ ಆದ್ದರಿಂದ ಆತನು 'ಶಠ' ಅಥವಾ 'ಧೃಷ್ಟ'ನಾಗಬಾರದೇಕೆ? ಅದಕ್ಕೆ ಉತ್ತರ : ಹಾಗಲ್ಲ. ಅವನು ಅಪ್ರಿಯಕಾರಿಯಾದರೂ, ಪ್ರಬಂಧದ ಉದ್ದಕ್ಕೂ ಜ್ಯೇಷ್ಠಳ ಬಗೆಗೆ ಸಹೃದಯತೆಯಿಂದಲೇ ವರ್ತಿಸುತ್ತಾನೆ. ಆದ್ದರಿಂದ ಅವನು 'ದಕ್ಷಿಣ'ನೇ ಸರಿ. ಇನ್ನು, ಜ್ಯೇಷ್ಠೆ ಕನಿಷ್ಠೆ ಇಬ್ಬರಲ್ಲೂ ಸಮಾನಸ್ನೇಹ ಹೇಗೆ ಸಾಧ್ಯ ಎಂದರೆ, ನಾವು ಸಾಧ್ಯ ಎಂದೇ ಹೇಳುತ್ತೇವೆ.

ಮಹಾಕವಿಪ್ರಬಂಧಗಳಲ್ಲಿ ಅಂತಹ ಚಿತ್ರಣವಿದೆ. ಅನೇಕರಿರುವಾಗ, ಎಲ್ಲ ನಾಯಿಕೆಯರಲ್ಲೂ ಪಕ್ಷಪಾತರಹಿತವಾಗಿ ನಡೆದುಕೊಳ್ಳುವಂತಹ ಒಂದು ಉದಾಹರಣೆ ಇಲ್ಲಿದೆ : [ಪದ್ಯದ ಆಕರ ತಿಳಿಯದು; ಇದನ್ನು ಸಾ.ದ.ದಲ್ಲೂ (೩-೩೫) ಉದ್ಧರಿಸಲಾಗಿದೆ.]:

'ಸ್ನಾತಾ ತಿಷ್ಠತಿ ಕುಂತಲೇಶ್ವರಸುತಾ ವಾರೋಽಙ್ಗರಾಜಸ್ವಸು-
ರ್ದ್ಯೂತೇ ರಾತ್ರಿರಿಯಂ ಜಿತಾ ಕಮಲಯಾ ದೇವೀ ಪ್ರಸಾದ್ಯಾದ್ಯ ಚ ।
ಇತ್ಯಂತಃಪುರಸುಂದರೀಃ ಪ್ರತಿ ಮಯಾ ವಿಜ್ಞಾಯ ವಿಜ್ಞಾಪಿತೇ
ದೇವೇನಾಪ್ರತಿಪತ್ತಿಮೂಢಮನಸಾ ದ್ವಿತ್ರಾಃ ಸ್ಥಿತಂ ನಾಡಿಕಾಃ ॥'

[ಕುಂತಲೇಶ್ವರಪುತ್ರಿಯು ಋತುಸ್ನಾನ ಮಾಡಿ ನಿಂತಿದ್ದಾಳೆ; ಅಲ್ಲದೆ, ಇಂದು ಅಂಗರಾಜಸಹೋದರಿಯ ಬಾರಿ; ಮತ್ತು ಈ ರಾತ್ರಿ ದ್ಯೂತದಲ್ಲಿ ಕಮಲೆ ಗೆದ್ದದ್ದರಿಂದ ದೇವಿಯನ್ನೂ ಒಲಿಸಬೇಕಾಗಿದೆ – ಹೀಗೆ ಅಂತಃಪುರಸುಂದರಿಯರೊಬ್ಬೊಬ್ಬರನ್ನು ಕುರಿತು ನಾನು ರಾಜನಲ್ಲಿ ಅರಿಕೆಮಾಡಿಕೊಳ್ಳಲು ಆತನು (ಯಾವ ಚೆಲುವೆಯ ಬಳಿಗೆ ಹೋಗುವುದೆಂದು ತಿಳಿಯದೆ) ಕಿಂಕರ್ತವ್ಯಮೂಢನಾಗಿ ಎರಡು ಮೂರು ಕ್ಷಣ ಸುಮ್ಮನೆ ಕುಳಿತುಬಿಟ್ಟನು.]

ಮತ್ತು – ಭರತಮುನಿ [ನಾ.ಶಾ. : ೨೫-೫೭] ಹೀಗೆ ಹೇಳಿದ್ದಾನೆ :

'ಮಧುರಸ್ತ್ಯಾಗೀ ರಾಗಂ ನ ಯಾತಿ ಮದನಸ್ಯ ನಾಪಿ ವಶಮೇತಿ ।
ಅವಮಾನಿತಶ್ಚ ನಾರ್ಯಾ ವಿರಜ್ಯತೇ ಸ ತು ಭವೇಜ್ಜ್ಯೇಷ್ಠಃ ॥'

[ಮಧುರನೂ ತ್ಯಾಗಿಯೂ ಆಗಿರುವ ಜ್ಯೇಷ್ಠ (ದಕ್ಷಿಣ) ನಾಯಕನು ಕಾಮರಾಗಗಳಿಗೆ ವಶನಾಗುವುದಿಲ್ಲ. ಅವನು ನಾರಿಯಿಂದ ಅವಮಾನಿತನಾದಾಗ ವೈರಾಗ್ಯ ಹೊಂದುವನು.] – ಇಲ್ಲಿ, 'ಕಾಮರಾಗಗಳಿಗೆ ವಶನಾಗುವುದಿಲ್ಲ' ಎಂದರೆ, ಅಸಾಧಾರಣವಾದ ಒಬ್ಬಳೇ ಒಬ್ಬಳ ಸ್ನೇಹಕ್ಕೆ ದಕ್ಷಿಣನಾಯಕನು ವಶನಾಗುವುದಿಲ್ಲ ಎಂದು ಅರ್ಥ. ಆದ್ದರಿಂದ ಒಬ್ಬಳ ಸ್ನೇಹವು 'ದಕ್ಷಿಣ'ನಿಗೆ ನಿಷಿದ್ಧವಾಗಿದೆ. ಹೀಗಿರುವ ಕಾರಣ ವತ್ಸರಾಜ ಮುಂತಾದವರು ಪ್ರಬಂಧಸಮಾಪ್ತಿಯವರೆಗೂ 'ದಕ್ಷಿಣ'ರೇ ಸರಿ.

–ಹೀಗೆ, ನಾಲ್ಕು ಪ್ರಕಾರದ ನಾಯಕರಲ್ಲಿ ಒಂದೊಂದು ಪ್ರಕಾರಕ್ಕೂ ನಾಲ್ಕು ಅವಸ್ಥೆಗಳುಂಟಾಗುವುದರಿಂದ, ಹದಿನಾರು ಭೇದಗಳು; ಅವುಗಳೊಂದೊಂದಕ್ಕೂ ಪುನಃ ಉತ್ತಮ ಮಧ್ಯಮ ಅಧಮ ಎಂಬ ಮೂರು ಭೇದಗಳಿರುವುದರಿಂದ ಒಟ್ಟು ನಲವತ್ತೆಂಟು ಪ್ರಕಾರಗಳುಂಟಾಗುತ್ತವೆ.

ಟಿಪ್ಪಣಿ : ಮೇಲಿನ ಧನಿಕನ ವ್ಯಾಖ್ಯೆಯ ತಾತ್ಪರ್ಯ ಇಷ್ಟು : ರೂಪಕದ ಒಂದೊಂದು ಭಾಗದಲ್ಲಿ ಒಂದೊಂದು ಬಗೆಯಾಗಿ ಭಾಸವಾಗುವ ಕಾರಣ, ಕೆಲವು ನಾಯಕರ ಅವಸ್ಥೆಯನ್ನು ಗುರುತಿಸುವುದು ಕಷ್ಟವಾದೀತು. ಆಗ, ಸಮಗ್ರ ಪ್ರಬಂಧವನ್ನೆ ಗಮನದಲ್ಲಿಟ್ಟುಕೊಂಡು ನಿರ್ಧರಿಸತಕ್ಕದ್ದು. ಕೆಲವು ವೇಳೆ ಒಬ್ಬನೇ ನಾಯಕ ಒಂದೇ ರೂಪಕದಲ್ಲಿ ಒಂದಕ್ಕಿಂತ ಹೆಚ್ಚು ಅವಸ್ಥೆಗಳಲ್ಲಿರುವುದು ಸಾಧ್ಯ; ವತ್ಸರಾಜನು ಮೊದಲು 'ಅನುಕೂಲ'ನಾಗಿದ್ದು ಅನಂತರ 'ದಕ್ಷಿಣ'ನಾಗುವಂತೆ. ಆದರೆ, ಹಾಗೆಯೇ ರೂಪಕದ ಒಂದೊಂದು ಪ್ರಸಂಗಕ್ಕೂ, ಖಂಡಖಂಡವಾಗಿ, ಒಂದೊಂದು ಅವಸ್ಥೆಯನ್ನು ಹಚ್ಚುತ್ತ ಹೋಗಬಾರದು.

ಹೋಲಿಕೆ = ಸಾ.ದ. : ೩-೩೭ ; ಪ್ರತಾಪ : ೧-೩೫.

## ನಾಯಕನ ಸಹಾಯಕರು

### ೧೨. ಪೀಠಮರ್ದಲಕ್ಷಣ :

**ಪತಾಕಾನಾಯಕಸ್ತ್ವನ್ಯಃ ಪೀಠಮರ್ದೋ ವಿಚಕ್ಷಣಃ ।**
**ತಸ್ಯೈವಾನುಚರೋ ಭಕ್ತಃ ಕಿಂಚಿದೂನಶ್ಚ ತದ್ಗುಣೈಃ ॥ ೮ ॥**

ಅನು : [ಪ್ರಧಾನನಾಯಕನಲ್ಲದೆ] ಮತ್ತೊಬ್ಬನಾದ ಪತಾಕಾನಾಯಕನು 'ಪೀಠ ಮರ್ದ'. [ಆ ಪೀಠಮರ್ದನು] ಕುಶಲಿಯಾಗಿರುತ್ತಾನೆ; ಅವನಿಗೇ [ಎಂದರೆ, ಪ್ರಧಾನ ನಾಯಕನಿಗೆ] ಜೊತೆಗಾರನೂ ಭಕ್ತನೂ ಅವನ ಗುಣಗಳಿಗೆ ಸ್ವಲ್ಪ ಮಾತ್ರ ಕಡಿಮೆಯಾದ [ಗುಣಗಳುಳ್ಳ]ವನೂ [ಆಗಿರುತ್ತಾನೆ].

ವ್ಯಾಖ್ಯೆ : ಹಿಂದೆ ಹೇಳಲಾಗಿರುವ, ಪ್ರಾಸಂಗಿಕ ಇತಿವೃತ್ತದ ಒಂದು ಪ್ರಕಾರವಾಗಿರುವ 'ಪತಾಕಾ'ದ (ನೋಡಿ : ೧-೨೧) ನಾಯಕನು 'ಪೀಠಮರ್ದ'. ಆತನು ಪ್ರಧಾನ ಇತಿವೃತ್ತದ ನಾಯಕನ ಸಹಾಯಕ ನಾಗಿರುತ್ತಾನೆ. ಉದಾ:- ಮಾ.ಮಾ.ದಲ್ಲಿನ 'ಮಕರಂದ' ಮತ್ತು ರಾಮಾಯಣವಲ್ಲಿ 'ಸುಗ್ರೀವ'.

ಟಿಪ್ಪಣಿ : ಹೋಲಿಕೆ = ಸಾ.ದ. : ೩-೩೯; ಪ್ರತಾಪ : ೧-೪೦.

## ೧೩. ವಿಟವಿದೂಷಕಲಕ್ಷಣ :

**ಏಕವಿದ್ಯೋ ವಿಟಶ್ಚಾನ್ಯೋ ಹಾಸ್ಯಕೃಚ್ಚ ವಿದೂಷಕಃ ।**

ಅನು : [ಪೀಠಮರ್ದನಲ್ಲದೆ ನಾಯಕಸಹಾಯಕರು ಇನ್ನಿಬ್ಬರು. ಅವರಲ್ಲಿ] ಒಂದು ವಿದ್ಯೆಯನ್ನು ಬಲ್ಲಾತ 'ವಿಟ' ಮತ್ತು ಹಾಸ್ಯಗಾರನಾದ ಮತ್ತೊಬ್ಬನು 'ವಿದೂಷಕ'.

ವ್ಯಾಖ್ಯೆ : ನಾಯಕಸಹಾಯಕರಾದ ಇನ್ನಿಬ್ಬರು ವಿಟ ವಿದೂಷಕರು. ನಾಯಕನಿಗೆ ಉಪಯೋಗವಾಗುವ ಗೀತಾದಿವಿದ್ಯೆಯೊಂದನ್ನೆ ಬಲ್ಲಾತ 'ವಿಟ'. ಹಾಸ್ಯಗಾರನು 'ವಿದೂಷಕ'. ಹಾಸ್ಯಗಾರನಾದ್ದರಿಂದಲೇ ಆತನ ದೇಹ ಹಾಗೂ ವೇಷ ಇತ್ಯಾದಿಗಳು ವಿಕಾರವಾಗಿರುತ್ತವೆ. ಉದಾಃ – ನಾಗಾ.ದಲ್ಲಿ ಬರುವ ಶೇಖರಕ 'ವಿಟ'; ವಿದೂಷಕನ ಉದಾಹರಣೆ ಪ್ರಸಿದ್ಧವಾದದ್ದು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೩೫-೫೫, ೫೭. ಸಾ.ದ. : ೩-೪೦; ಪ್ರತಾಪ : ೧-೪೦.

# ಪ್ರತಿನಾಯಕ

## ೧೪. ಪ್ರತಿನಾಯಕಲಕ್ಷಣ :

**ಲುಬ್ಧೋ ಧೀರೋದ್ಧತಃ ಸ್ತಬ್ಧಃ ಪಾಪಕೃದ್ವ್ಯಸನೀ ರಿಪುಃ ॥ ೯ ॥**

ಅನು : [ನಾಯಕನ] ಶತ್ರುವು [ಎಂದರೆ, ಪ್ರತಿನಾಯಕನು] ಲೋಭಿಯೂ, ಧೀರೋದ್ಧತನೂ, ಅಚಲನೂ, ಪಾಪಕೃತ್ಯಗಳನ್ನೆಸಗುವವನೂ, ವ್ಯಸನಿಯೂ [ಆಗಿರುತ್ತಾನೆ.]

ವ್ಯಾಖ್ಯೆ : ಮೇಲೆ ಹೇಳಿದಂತಹವನು ನಾಯಕನಿಗೆ ಪ್ರತಿಪಕ್ಷದ ನಾಯಕನಾಗುತ್ತಾನೆ. ಉದಾ : – ರಾಮ ಯುಧಿಷ್ಠಿರರಿಗೆ ರಾವಣ ದುರ್ಯೋಧನರಿರುವಂತೆ.

ಟಿಪ್ಪಣಿ : 'ವ್ಯಸನಿ' = ದುರಾಚಾರದಲ್ಲಿ ಆಸಕ್ತನಾಗಿರುವಾತ. ವ್ಯಸನಗಳು ಹದಿನೆಂಟು ಬಗೆ ಎಂದು ಮನು ಹೇಳಿದ್ದಾನೆ. ಹೇ. ಕಾವ್ಯಾ ದಲ್ಲಿ [೭-ಪು. ೩೦೮]. 'ಪ್ರತಿನಾಯಿಕಾ' ಲಕ್ಷಣವನ್ನೂ ಹೇಳಿದೆ.

ಹೋಲಿಕೆ = ಸಾ.ದ. : ೩-೧೩೧.

## ನಾಯಕನ ಗುಣಗಳು

### ೧೫. ಸಾತ್ತ್ವಿಕಗುಣಗಳು :

**ಶೋಭಾ ವಿಲಾಸೋ ಮಾಧುರ್ಯಂ ಗಾಂಭೀರ್ಯಂ ೧ಸ್ಥೈರ್ಯ೧ತೇಜಸೀ ।**

**ಲಲಿತೌದಾರ್ಯಮಿತ್ಯಷ್ಟೌ ೨ಸತ್ತ್ವಜಾ೨ ಪೌರುಷಾ ಗುಣಾಃ ॥ ೧೦ ॥**

ಅನು : ಶೋಭಾ, ವಿಲಾಸ, ಮಾಧುರ್ಯ, ಗಾಂಭೀರ್ಯ, ಸ್ಥೈರ್ಯ, ತೇಜ, ಲಲಿತ, ಔದಾರ್ಯ – ಈ ಎಂಟು ಸತ್ತ್ವಜವಾದ ಪುರುಷಗುಣಗಳು.

ಟಿಪ್ಪಣಿ : ನಾಯಿಕೆಯ ಗುಣಗಳನ್ನು ಹೇಳುವಾಗ ಕೂಡ ಶೋಭಾ (೨-೫೩), ವಿಲಾಸ (೨-೬೧), ಮಾಧುರ್ಯ (೨-೫೫), ಲಲಿತ (೨-೬೮), ಔದಾರ್ಯ (೨-೫೮) - ಇವು ಬಂದಿವೆ. ಆದರೆ ಅವು ಸ್ತ್ರೀಗುಣವಿಶೇಷಗಳು; ಇಲ್ಲಿ ಪುರುಷಗುಣವಿಶೇಷಗಳಾಗಿ ಅವುಗಳನ್ನು ಲಕ್ಷಿಸಿದೆ. ಅಂತೆಯೇ ಹೆಸರು ಒಂದೇ ಆಗಿದ್ದರೂ ಲಕ್ಷಣ ಬೇರೆಯಾಗುತ್ತದೆ.

ಹೋಲಿಕೆ = ನಾ.ಶಾ. : ೨೪-೩೧; ಸಾ.ದ. : ೩-೫೦.

### ೧೬. ಶೋಭಾಲಕ್ಷಣ :

**ನೀಚೇ ಘೃಣಾಧಿಕೇ ಸ್ಪರ್ಧಾ ಶೋಭಾಯಾಂ ಶೌರ್ಯದಕ್ಷತೇ ।**

ಅನು : [ತನಗಿಂತ] ಕೀಳಾದವರಲ್ಲಿ ಕರುಣೆ, [ತನಗಿಂತ] ಹೆಚ್ಚಿನವನಲ್ಲಿ ಸ್ಪರ್ಧೆ, ಶೌರ್ಯ, ದಕ್ಷತೆ [ಇವುಗಳು] 'ಶೋಭಾ' [ಗುಣ]ದಲ್ಲಿ [ತೋರುತ್ತವೆ].

ವ್ಯಾಖ್ಯೆ : ನೀಚನಲ್ಲಿ ಘೃಣೆಗೆ ಉದಾ:- [ಮಹಾ : ೧-೩೭] :

'ಉತ್ತಾಲತಾಡಕೋತ್ಪಾತದರ್ಶನೇಽಪ್ಯಪ್ರಕಂಪಿತಃ ।
ನಿಯುಕ್ತಸ್ತತ್ಪ್ರಮಾಥಾಯ ಸ್ತ್ರೈಣೇನ ವಿಚಿಕಿತ್ಸತಿ ॥'

[ಎತ್ತರವಾದ ತಾಳೆಯ ಮರದಂತಿದ್ದ ತಾಟಕಿಯ ಉತ್ಪಾತವನ್ನು ನೋಡಿದರೂ ಕೂಡ ಆತ ಕಂಪಿಸಲಿಲ್ಲ; ಆದರೆ ಆಕೆಯನ್ನು ಕೊಲ್ಲಲು ನಿಯುಕ್ತನಾದಾಗ, ಸ್ತ್ರೀ ಎಂಬ ಕಾರಣದಿಂದ, ತುಸು ಯೋಚಿಸಹತ್ತಿದ್ದಾನೆ.]

ಅಧಿಕನಲ್ಲಿ ಸ್ಪರ್ಧೆಗೆ ಉದಾ:- [ಆಕರ ತಿಳಿಯದ ಪದ್ಯ] :

'ಏತಾಂ ಪಶ್ಯ ಪುರಸ್ಥಲೀಮಿಹ ಕಿಲ ಕ್ರೀಡಾಕಿರಾತೋ ಹರಃ
ಕೋದಂಡೇನ ಕಿರೀಟಿನಾ ಸರಭಸಂ ಚೂಡಾಂತರೇ ತಾಡಿತಃ ।
ಇತ್ಯಾಕರ್ಣ್ಯ ಕಥಾದ್ಭುತಂ ಹಿಮನಿಧಾವದ್ರೌ ಸುಭದ್ರಾಪತೇ –
ರ್ಮಂದಂ ಮಂದಮಕಾರಿ ಯೇನ ನಿಜಯೋರ್ದೋರ್ದಂಡಯೋರ್ಮಂಡಲಮ್ ॥'

['ಎದುರಿನ ಈ ಸ್ಥಳವನ್ನು ನೋಡು. ಇಲ್ಲಿಯೇ, ವಿನೋದಕ್ಕಾಗಿ ಕಿರಾತವೇಷ ಧರಿಸಿ ಬಂದ ಹರನನ್ನು ಕಿರೀಟಿಯು ತನ್ನ ಕೋದಂಡದಿಂದ ಒಂದೇ ಏಟಿಗೆ ನೆತ್ತಿಯ ಮೇಲೆ ಬಡಿದನು' – ಹಿಮಾಲಯಪರ್ವತದಲ್ಲಿ, ಸುಭದ್ರಾಪತಿಯ ಈ ಅದ್ಭುತಕಥೆಯನ್ನು ಕೇಳಿದ ಶಿವನು ತನ್ನ ಬಾಹುದಂಡಗಳನ್ನು ಮೆಲ್ಲಮೆಲ್ಲನೆ ನೀಡಿ ತಿರುವತೊಡಗಿದನು.]

---

೧ ಪಾಠ : ಧೈರ್ಯ. [ಲಕ್ಷಣ ಹೇಳುವಾಗ (೨-೨೦) ಸ್ಥೈರ್ಯ ಎಂದೇ ಬಂದಿದೆ. ನಾ.ಶಾ.ದಲ್ಲಿ 'ಸ್ಥೈರ್ಯ' ಎಂದೂ, ಸಾ.ದ.ದಲ್ಲಿ 'ಧೈರ್ಯ' ಎಂದೂ ಬಂದಿದೆ.]
೨ ಪಾಠ : ಸಾತ್ತ್ವಿಕಾಃ [ಸಾ.ದ.ದಲ್ಲಿ 'ಸತ್ತ್ವಜಾಃ' ಎಂದಿದೆ.]

ಶೌರ್ಯ ಶೋಭೆಗೆ ಉದಾ:- [ಧನಿಕನದೇ ಪದ್ಯ] :

'ಅಂತ್ರೈಃ ಸ್ವೈರಪಿ ಸಂಯತಾಗ್ರಚರಣೋ ಮೂರ್ಛಾವಿರಾಮಕ್ಷಣೇ
ಸ್ವಾಧೀನವ್ರಣಿತಾಂಗಶಸ್ತ್ರನಿಚಿತೋ ರೋಮೋದ್ಗಮಂ ವರ್ಮಯನ್ ।
ಭಗ್ನಾನುದ್ವಲಯನ್ನಿಜಾನ್ಪರಭಟಾನ್ಸಂತರ್ಜಯನ್ನಿಷ್ಠುರಂ
ಧನ್ಯೋ ಧಾಮ ಜಯಶ್ರಿಯಃ ಪೃಥುರಣಸ್ತಂಭೇ ಪತಾಕಾಯತೇ ॥'

[(ಯುದ್ಧರಂಗದಲ್ಲಿ ಬಿದ್ದಿರುವ ಯಾವನೋ ಒಬ್ಬ ವೀರ) ಮೂರ್ಛೆ ತಿಳಿವ ಕ್ಷಣವಲ್ಲಿಯೇ, ತನ್ನ ಕರುಳು ಹರಿದು ಕಾಲು ತುದಿಗೆ ಸಿಲುಕಿಕೊಂಡಿದ್ದರೂ, ಶಸ್ತ್ರಗಳು ಚುಚ್ಚಿಕೊಂಡಿರುವ ವ್ರಣಮಯವಾದ ತನ್ನ ಶರೀರದ ಮೇಲೆ ರೋಮಾಂಚದ ಕವಚ ಧರಿಸಿ, ಭಗ್ನರಾದ ತನ್ನ ಸೈನಿಕರನ್ನು ಹುರಿಮುಂಬಿಸುತ್ತ ಶತ್ರುಭಟರನ್ನು ನಿಷ್ಠುರವಾಗಿ ಹೀಯಾಳಿಸುತ್ತಿದ್ದಾನೆ. ಜಯಲಕ್ಷ್ಮಿಯ ನಿವಾಸದಂತಿರುವ, ರಣಾಂಗಣಸ್ತಂಭದ ಧ್ವಜದಂತೆ ಶೋಭಿಸುವ ಆತನೇ ಧನ್ಯ !]

ದಕ್ಷಶೋಭೆಗೆ ಉದಾ:- [ಮಹಾ : ೧-೫೪; ೨-೧೮ರಲ್ಲೂ ಈ ಉದಾ. ಬಂದಿದೆ] :

'ಸ್ಫೂರ್ಜದ್ವಜ್ರಸಹಸ್ರನಿರ್ಮಿತಮಿವ ಪ್ರಾದುರ್ಭವತ್ಯಗ್ರತೋ
.ರಾಮಸ್ಯ ತ್ರಿಪುರಾಂತಕೃದ್ದಿವಿಷದಾಂ ತೇಜೋಭಿರಿದ್ಧಂ ಧನುಃ ।
ಶುಂಡಾರಃ ಕಲಭೇನ ಯದ್ವದಚಲೇ ವತ್ಸೇನ ದೋರ್ದಂಡಕ -
ಸ್ತಸ್ಮಿನ್ನಾಹಿತ ಏವ ಗರ್ಜಿತಗುಣಂ ಕೃಷ್ಟಂ ಚ ಭಗ್ನಂ ಚ.ತತ್ ॥'

[ಉಜ್ವಲವಾದ ವಜ್ರಸಹಸ್ರಗಳಿಂದ ನಿರ್ಮಿತವಾಗಿರುವಂತೆ ತೋರುವ, ಸಮಸ್ತ ದೇವತೆಗಳ ತೇಜಸ್ಸನ್ನು ಒಳಗೊಂಡಿರುವ, ತ್ರಿಪುರಾಸುರಸಂಹಾರಕಾರಿಯಾದ - ಧನುಸ್ಸು ರಾಮನ ಎದುರಿನಲ್ಲಿ ಹೊಳೆದು ಕಂಗೊಳಿಸುತ್ತಿರಲು, ಆತನು ಆ ಅಚಲವಾದ ಧನುಸ್ಸಿನಲ್ಲಿ - ಮರಿಯಾನೆ ಸೊಂಡಿಲನ್ನಿಡುವಂತೆ - ಬಾಹುಗಳನ್ನಿರಿಸಿ, ಸೆಳೆದ ಬಿಲ್ಲುಹಗ್ಗ ಝೇಂಕರಿಸುತ್ತಿರಲು, ಆ ಧನುವನ್ನು ಮುರಿದಿಕ್ಕಿದನು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೩೨; ಸಾ.ದ. : ೩-೫೧.

## ೧೭. ವಿಲಾಸಲಕ್ಷಣ :

**ಗತಿಃ ಸಧೈರ್ಯಾ ದೃಷ್ಟಿಶ್ಚ ವಿಲಾಸೇ ಸಸ್ಮಿತಂ ವಚಃ ॥ ೧೧ ॥**

ಅನು : 'ವಿಲಾಸ'ದಲ್ಲಿ ಧೀರವಾದ ನಡಿಗೆ ಮತ್ತು ನೋಟ [ಹಾಗೂ] ಮೆಲುನಗೆಯ ಮಾತು [ಇರುತ್ತದೆ.]'

ವ್ಯಾಖ್ಯೆ : ಉದಾ:- [ಉತ್ತರ : ೬-೧೯] :

'ದೃಷ್ಟಿಸ್ತೃಣೀಕೃತಜಗತ್ತ್ರಯಸತ್ತ್ವಸಾರಾ ಧೀರೋದ್ಧತಾ ನಮಯತೀವ ಗತಿರ್ಧರಿತ್ರೀಮ್ ।
ಕೌಮಾರಕೇಽಪಿ ಗಿರಿವದ್ಗುರುತಾಂ ದಧಾನೋ ವೀರೋ ರಸಃ ಕಿಮಯಮೇತ್ಯುತ ದರ್ಪ ಏವ ॥'

[ಮೂರು ಲೋಕಗಳ ಸತ್ತ್ವಸಾರವನ್ನೂ ಹುಲ್ಲಿನಂತೆಣಿಸುವ ನೋಟ, ಭೂಮಿಯೆ ಕುಸಿಯುವಂಥ ಧೀರೋದ್ಧತವೆನಿಸುವ ನಡೆ, ಕೌಮಾರ್ಯದಲ್ಲಿದ್ದರೂ ಕೂಡ ಪರ್ವತಸಮಾನವಾದ ಗುರುತ್ವಧಾರಣೆ - ಇದೇನು ವೀರರಸವೇ ಮೂರ್ತಿಗೊಂಡು ಬಂದಿತೋ ಅಥವಾ ದರ್ಪವೇ ಸಾಗಿಬರುತ್ತಿದೆಯೋ?]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೩೩; ಸಾ.ದ. : ೩-೫೨.

## ೧೮. ಮಾಧುರ್ಯಲಕ್ಷಣ :

**ಶ್ಲಕ್ಷ್ಣೋ ವಿಕಾರೋ ಮಾಧುರ್ಯಂ ಸಂಕ್ಷೋಭೇ ಸುಮಹತ್ಯಪಿ ।**

ಅನು : ಮಹತ್ತಾದ ತಲ್ಲಣದಲ್ಲಿ ಕೂಡ, ಮಧುರವಾದ ವಿಕಾರವು [ಮಾತ್ರ ತೋರುವುದಾದರೆ ಅದು] 'ಮಾಧುರ್ಯ'.

ವ್ಯಾಖ್ಯೆ : ಯಾವುದೊಂದು ಕಾರಣದಿಂದ ತುಂಬ ಹೆಚ್ಚಿನ ವಿಕಾರವುಂಟಾಗತಕ್ಕದ್ದು ಸಾಮಾನ್ಯವೋ, ಅಂತಹ ವೇಳೆಯಲ್ಲಿ ಕೂಡ ಸ್ವಲ್ಪಮಾತ್ರವಾದ ಮಧುರ ವಿಕಾರವುಂಟಾಗುವುದು 'ಮಾಧುರ್ಯ'. ಉದಾ:- [ಹನು : ೧-೧೯] :

'ಕಪೋಲೇ ಜಾನಕ್ಯಾಃ ಕರಿಕಲಭದಂತದ್ಯುತಿಮುಷಿ
ಸ್ಮರಸ್ಮೇರಂ ಗಂಡೋದ್ದುಮುರಪುಲಕಂ ವಕ್ತ್ರಕಮಲಮ್ ।
ಮುಹುಃ ಪಶ್ಯಂಚ್ಛೃಣ್ವನ್ರಜನಿಚರಸೇನಾಕಲಕಲಂ
ಜಟಾಜೂಟಗ್ರಂಥಿಂ ದ್ರಢಯತಿ ರಘೂಣಾಂ ಪರಿವೃಢಃ ॥'

[(ಖರದೂಷಣರ ಕೂಡ ಯುದ್ಧ ಆರಂಭವಾಗಲಿರುವಾಗ ಮರಿಯಾನೆಯ ದಂತಕಾಂತಿಯನ್ನು ಹಳಿಯುವ ಜಾನಕಿಯ ಕಪೋಲದಲ್ಲಿ, ಕಾಮಸ್ಮಿತ ಪುಲಕಿತಗಂಡಸ್ಥಲಗಳಿರುವ ತನ್ನ ಮುಖಕಮಲವನ್ನು ಪುನಃ ಪುನಃ ನೋಡಿಕೊಳ್ಳುತ್ತ, (ಜತೆಯಲ್ಲಿಯೇ) ರಾಕ್ಷಸಸೇನೆಯ ಕಲಕಲಧ್ವನಿಯನ್ನು ಕೇಳುತ್ತ - ರಘುಪತಿಯು ತನ್ನ ಮುಡಿಗಂಟನ್ನು ಬಿಗಿಗೊಳಿಸಿಕೊಳ್ಳುತ್ತಿದ್ದಾನೆ]

ಟಿಪ್ಪಣಿ : ಸಾಮಾನ್ಯವಾಗಿ, ಹೆಚ್ಚಿನ ಕ್ಷೋಭೆಯಿಂದ ತುಂಬ ವಿಕಾರವುಂಟಾಗುತ್ತದೆ. ಮಾಧುರ್ಯ ಗುಣವಿರುವಾತನಲ್ಲಿ ಆ ವಿಕಾರ ಅತಿಯಾಗಿರದೆ ಸೂಕ್ಷ್ಮವಾಗಿರುತ್ತದೆ; ವಿಕಾರ ಕೂಡ ಮಧುರವಾಗಿರುತ್ತದೆ.

ಹೋಲಿಕೆ = ನಾ.ಶಾ. : ೨೪-೩೪; ಸಾ.ದ. : ೩-೫೨.

## ೧೯. ಗಾಂಭೀರ್ಯಲಕ್ಷಣ :

**ಗಾಂಭೀರ್ಯಂ ಯತ್ಪ್ರಭಾವೇನ ವಿಕಾರೋ ನೋಪಲಕ್ಷ್ಯತೇ ॥ ೧೨ ॥**

ಅನು : ಯಾವುದರ ಪ್ರಭಾವದಿಂದ [ಚಿತ್ತಸಂಕ್ಷೋಭೆಯಿಂದುಂಟಾದ] ವಿಕಾರವು ಕಾಣಿಸುವುದಿಲ್ಲವೋ [ಅದು] 'ಗಾಂಭೀರ್ಯ'.

ವ್ಯಾಖ್ಯೆ : 'ಮಾಧುರ್ಯ'ದಲ್ಲಿ ಮಧುರವಾದ ವಿಕಾರವಾದರೂ ತೋರಿದರೆ, ಗಾಂಭೀರ್ಯದಲ್ಲಿ ವಿಕಾರವೇ ತೋರುವುದಿಲ್ಲ. ಅದೇ ಮಾಧುರ್ಯಗಾಂಭೀರ್ಯಗಳಲ್ಲಿನ ಭೇದ.

ಉದಾ:- [ಹನು : ೩-೨೫; ಇದು ೨-೫ರಲ್ಲಿ ಕೂಡ ಬಂದಿದೆ] :

'ಆಹೂತಸ್ಯಾಭಿಷೇಕಾಯ ವಿಸೃಷ್ಟಸ್ಯ ವನಾಯ ಚ ।
ನ ಮಯಾ ಲಕ್ಷಿತಸ್ತಸ್ಯ ಸ್ವಲ್ಪೋಽಪ್ಯಾಕಾರವಿಭ್ರಮಃ ॥

[ಅಭಿಷೇಕಕ್ಕೆಂದು ಕರೆವಾಗಲಾಗಲಿ ಅಥವಾ ವನವಾಸಕ್ಕೆ ಕಳುಹಿದಾಗಾಗಲಿ ರಾಮನ ಆಕಾರದಲ್ಲಿ ಅಲ್ಪ ವಿಕಾರವನ್ನು ಕೂಡ ನಾನು ನೋಡಲಿಲ್ಲ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೩೬; ಸಾ.ದ. : ೩-೫೩.

## ೨೦. ಸ್ಥೈರ್ಯಲಕ್ಷಣ :

**ವ್ಯವಸಾಯಾದಚಲನಂ ಸ್ಥೈರ್ಯಂ ವಿಘ್ನಕುಲಾದಪಿ ।**

ಅನು : ಆತಂಕಗಳು ಗುಂಪುಕಟ್ಟಿಬಂದರೂ ಕೂಡ [ತಾನು ತೊಡಗಿದ] ಕಾರ್ಯದಿಂದ ಅಲುಗದಿರುವುದು 'ಸ್ಥೈರ್ಯ'.

ವ್ಯಾಖ್ಯೆ : ಉದಾ:- [ಮಹಾ : ೩-೮; ಇದು ೨-೧೮ರಲ್ಲಿ ಮತ್ತು ೪-೨೨ರಲ್ಲಿ ಕೂಡ ಬಂದಿದೆ] :

'ಪ್ರಾಯಶ್ಚಿತ್ತಂ ಚರಿಷ್ಯಾಮಿ ಪೂಜ್ಯಾನಾಂ ವೋ ವ್ಯತಿಕ್ರಮಾತ್ ।
ನ ತ್ವೇವಂ ದೂಷಯಿಷ್ಯಾಮಿ ಶಸ್ತ್ರಗ್ರಹಮಹಾವ್ರತಮ್ ॥'

[ಪೂಜ್ಯರನ್ನು ತಿರಸ್ಕರಿಸಿದ ದೋಷಕ್ಕಾಗಿ ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ಆದರೆ ಅದಕ್ಕಾಗಿ, ನನ್ನ ಶಸ್ತ್ರಗ್ರಹಣಮಹಾವ್ರತವನ್ನು ನಿಂದಿಸಿಕೊಳ್ಳುವುದಿಲ್ಲ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೩೫; ಸಾ.ದ. : ೩-೫೩.

## ೨೧. ತೇಜಲಕ್ಷಣ :

**ಅಧಿಕ್ಷೇಪಾದ್ಯಸಹನಂ ತೇಜಃ ಪ್ರಾಣಾತ್ಯಯೇಷ್ವಪಿ ॥ ೧೩ ॥**

ಅನು : ಪ್ರಾಣ ಹೋಗುವುದಾದರೂ ಸರಿ, ತಿರಸ್ಕಾರ ಮುಂತಾದುವುಗಳನ್ನು ಸಹಿಸದಿರುವುದು 'ತೇಜ'.

ವ್ಯಾಖ್ಯೆ : ಉದಾ :- [ ಶಾರ್ಙ್ಗ : ೫೬೨ ] :

'ಬ್ರೂತ ನೂತನಕೂಷ್ಮಾಂಡಫಲಾನಾಂ ಕೇ ಭವಂತ್ಯಮೀ ।
ಅಂಗುಲೀದರ್ಶನಾದ್ಯೇನ ನ ಜೀವಂತಿ ಮನಸ್ವಿನಃ ॥'

[ಹೊಸ ಕುಂಬಳಕಾಯಿಯಂತೆ - ಬೆರಳು ತೋರಿಸುವುದು ಮುಂತಾದುವುಗಳಿಂದ ಮುದುಡಿಹೋಗುವವರು ಮಾನವಂತರಲ್ಲಿ ಯಾರಿದ್ದಾರೆ, ಹೇಳಿ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೩೯; ಸಾ.ದ. : ೩-೫೪.

## ೨೨. ಲಲಿತಲಕ್ಷಣ :

**ಶೃಂಗಾರಾಕಾರಚೇಷ್ಟಾತ್ವಂ ಸಹಜಂ ಲಲಿತಂ ಮೃದು ।**

ಅನು : ಶೃಂಗಾರವನ್ನುಂಟುಮಾಡುವಂತಹ ಸ್ವಾಭಾವಿಕವೂ ಮೃದುವೂ ಆದ ಚೇಷ್ಟೆಯು 'ಲಲಿತ'.

ವ್ಯಾಖ್ಯೆ : ಸ್ವಾಭಾವಿಕವಾಗಿಯೇ ಶೃಂಗಾರವು ಮೃದು. ಆ ಬಗೆಯ ಶೃಂಗಾರ ಚೇಷ್ಟೆ 'ಲಲಿತ'.

ಉದಾ:- [ಧನಿಕನದೇ] :

'ಲಾವಣ್ಯಮನ್ಮಥವಿಲಾಸವಿಜೃಂಭಿತೇನ ಸ್ವಾಭಾವಿಕೇನ ಸುಕುಮಾರಮನೋಹರೇಣ ।
ಕಿಂವಾ ಮಮೇವ ಸಖಿ ಯೋಽಪಿ ಮಮೋಪದೇಷ್ಟಾ ತಸ್ಯೈವ ಕಿಂ ನ ವಿಷಮಂ
ವಿದಧೀತತಾಪಮ್ ॥'

[ಎಲೈ ಸಖಿ, ಲಾವಣ್ಯಪೂರ್ಣವಾಗಿ ಮನ್ಮಥವಿಲಾಸದಿಂದ ವಿಜೃಂಭಿಸುವ ಮತ್ತು ಸ್ವಾಭಾವಿಕವೂ ಸುಕುಮಾರವೂ ಮನೋಹರವೂ ಆಗಿರುವ ಆತನು ನನ್ನಲ್ಲಿ ಮಾತ್ರವೇಕೆ, ನನಗೆ ಉಪದೇಶಮಾಡುವವರಲ್ಲಿ ಕೂಡ ತಡೆಯಲಾರದ ತಾಪವನ್ನು ಹುಟ್ಟಿಸುವುದಿಲ್ಲವೆ?]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೩೬; ಸಾ.ದ. : ೩-೫೫.

## ೨೩. ಔದಾರ್ಯಲಕ್ಷಣ :

**ಪ್ರಿಯೋಕ್ತ್ಯಾಽಽಜೀವಿತಾದ್ದಾನಮೌದಾರ್ಯಂ ಸದುಪಗ್ರಹಃ ॥ ೧೪ ॥**

ಅನು : ಪ್ರಿಯವಾದ ಮಾತುಗಳಿಂದ ಪ್ರಾಣಪರ್ಯಂತ [ಎಂದರೆ, ಜೀವವನ್ನು ಕೂಡ ಕೊಡುವಲ್ಲಿಯವರೆಗೆ] ದಾನಮಾಡುವುದು [ಮತ್ತು] ಒಳ್ಳೆಯದಕ್ಕೆ ಪ್ರೋತ್ಸಾಹ ಕೊಡುವುದು 'ಔದಾರ್ಯ'.

ಉದಾ:- [ನಾಗಾ. : ೫-೧೬; ೨-೫ರಲ್ಲೂ ಬಂದಿದೆ] :

ಶಿರಾಮುಖೈಃ ಸ್ಯಂದತ ಏವ ರಕ್ತಮದ್ಯಾಪಿ ದೇಹೇ ಮಮ ಮಾಂಸಮಸ್ತಿ।
ತೃಪ್ತಿಂ ನ ಪಶ್ಯಾಮಿ ತವೈವ ತಾಪತ್ಕಿಂ ಭಕ್ಷಣಾತ್ತ್ವಂ ವಿರತೋ ಗರುತ್ಮನ್ ॥'

[ರಕ್ತನಾಳಗಳ ತುದಿಯಲ್ಲಿ ಸೆತ್ತರುಕ್ಕುತ್ತಿದೆ; ನನ್ನ ದೇಹದಲ್ಲಿ ಇನ್ನೂ ಮಾಂಸ ಉಳಿದಿದೆ; ನಿನಗೆ ಕೂಡ ತೃಪ್ತಿಯಾದಂತೆ ತೋರುವುದಿಲ್ಲ. ಹೇ ಗರುಡ, ಆದೇಕೆ ತಿನ್ನದೆ ಕುಳಿತುಬಿಟ್ಟಿದ್ದೀಯೆ?]

ಸದುಪಗ್ರಹಕ್ಕೆ ಉದಾ:- [ಕು.ಸಂ: ೬-೬೩]:

'ಏತೇ ವಯಮಮೀ ದಾರಾಃ ಕನ್ಯೇಯಂ ಕುಲಜೀವಿತಮ್।
ಬ್ರೂತ ಯೇನಾತ್ರವಃ ಕಾರ್ಯಮನಾಸ್ಥಾ ಬಾಹ್ಯವಸ್ತುಷು ॥'

[ಇದೊ, ನಾವು-ಈಕೆ ನನ್ನ ಪತ್ನಿ, ನಮ್ಮ ಕುಲಕ್ಕೆ ಪ್ರಾಣದಂತಿರುವ ಕನ್ಯೆ ಈಕೆ; ನಾವು ಬಾಹ್ಯವಸ್ತುಗಳಲ್ಲಿ ಆಸಕ್ತಿಯಿಲ್ಲದವರು. ನಮ್ಮಿಂದ ಆಗಬೇಕಾದ ಕಾರ್ಯವೇನೆಂದು ತಿಳಿಸಬೇಕು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೩೮; ಸಾ.ದ. : ೩-೫೫.

# ನಾಯಿಕಾಭೇದಗಳು

## ೨೪. ಮೂರು ಬಗೆಯ ನಾಯಿಕೆಯರು :

**ಸ್ವಾನ್ಯಾ ಸಾಧಾರಣ ಸ್ತ್ರೀತಿ ತದ್ಗುಣಾ ನಾಯಿಕಾ ತ್ರಿಧಾ।**

ಅನು : [ಹಿಂದೆ, ನಾಯಕಸಾಮಾನ್ಯಗುಣಗಳನ್ನು ಹೇಳಿದೆಯಷ್ಟೆ.] ಅದೇ ಗುಣಗಳನ್ನುಳ್ಳ ನಾಯಿಕೆಯು 'ಸ್ವ' (ತನ್ನವಳು), 'ಅನ್ಯಾ' (ಬೇರೆಯವಳು), 'ಸಾಧಾರಣಸ್ತ್ರೀ' – ಹೀಗೆ ಮೂರು ವಿಧ.

ವ್ಯಾಖ್ಯೆ : 'ಅದೇ ಗುಣಗಳನ್ನುಳ್ಳ' ಎಂದರೆ, ಹಿಂದೆ ಹೇಳಿದ ನಾಯಕಸಾಮಾನ್ಯ ಗುಣಗಳನ್ನುಳ್ಳ ಎಂದು ಅರ್ಥ. ನಾಯಿಕೆ ಆ ಗುಣಗಳನ್ನು ಹೊಂದಿರುತ್ತಾಳೆ. ಸ್ವಸ್ತ್ರೀ (ಅಥವಾ ಸ್ವೀಯೆ), ಪರಸ್ತ್ರೀ, ಸಾಧಾರಣಸ್ತ್ರೀ – ಎಂದು ನಾಯಿಕೆಯರಲ್ಲಿ ಮೂರು ವಿಧ.

ಟಿಪ್ಪಣಿ : ನಾಯಕಸಾಮಾನ್ಯಗುಣಗಳಿಗೆ ೨-೧ ನೋಡಿ.

ನಾ.ಶಾ.ದ ಪ್ರಕಾರ ನಾಯಿಕಾ ವಿಭಾಗ ನಾಲ್ಕು; ಅವು : ದಿವ್ಯಾ, ನೃಪಪತ್ನೀ, ಕುಲಸ್ತ್ರೀ, ಗಣಿಕಾ. [ನೋಡಿ : ಬ.ನಾ.ಶಾ. : ಭಾಗ : ೩ : ೨೪-೨೩].

ಪ್ರತಾಪ.ದಲ್ಲಿ ಈ ಭೇದಗಳನ್ನು ಹೇಳಿಲ್ಲ; ಮುಗ್ಧಾದಿ ಭೇದಗಳನ್ನು (ಮುಂದಿನ ಖಂಡ ನೋಡಿ) ಮಾತ್ರ ಹೇಳಿದೆ.

ಹೋಲಿಕೆ = ಸಾ.ದ. : ೩-೫೬.

# ಸ್ವೀಯಾಭೇದಗಳು

## ೨೫. ಸ್ವೀಯಾಲಕ್ಷಣ, ಭೇದ :

ಮುಗ್ಧಾ ಮಧ್ಯಾ ಪ್ರಗಲ್ಭೇತಿ ೧ಸ್ವೀಯಾಗ ಶೀಲಾರ್ಜವಾದಿಯುಕ್ ॥ ೧೫ ॥

ಅನು : ಶೀಲ ಸರಳತೆಗಳಿಂದ ಕೂಡಿದ ಸ್ವೀಯೆಯಲ್ಲಿ, ಮುಗ್ಧಾ ಮಧ್ಯಾ ಪ್ರಗಲ್ಭಾ - ಎಂದು [ಮೂರು ವಿಧ].

ವ್ಯಾಖ್ಯೆ : ಶೀಲ ಎಂದರೆ ಒಳ್ಳೆಯ ನಡತೆ. ಪತಿವ್ರತೆಯೂ, ಅಕುಟಿಲಳೂ, ಲಜ್ಜೆಯುಳ್ಳವಳೂ, ಪತಿಯನ್ನು ಉಪಚರಿಸುವುದರಲ್ಲಿ ನಿಪುಣಳೂ ಆದ ನಾಯಿಕೆಯು 'ಸ್ವೀಯಾ'. ಶೀಲವತಿಗೆ ಉದಾ:- [ಹಾಲ] :

'ಕುಲಬಾಲಿಆಏ ಪೇಚ್ಛಹ ಜೋವ್ವಣಲಾಅಣ್ಣವಿಬ್ಭಮವಿಲಾಸಾ।
ಪಸವಂತಿ ವ್ವ ಪವಸಿ ಏಂತಿ ವ್ವ ಪಿಯೇ ಘರಂ ಏತ್ತೇ ॥'

[ಕುಲೀನೆಯಾದ ಬಾಲಿಕೆಯ ಯೌವನ ಲಾವಣ್ಯ ವಿಭ್ರಮವಿಲಾಸಗಳು, ಪತಿಯ ಪ್ರವಾಸಕಾಲದಲ್ಲಿ ತಾವೂ ಪ್ರವಾಸಹೋಗುವಂತೆ ಮತ್ತೆ ಆತ ಮನೆಗೆ ಬರಲು ಅವೂ ಹಿಂದಿರುಗುವಂತೆ ತೋರುತ್ತವೆ.]

ಸರಳತೆಯುಳ್ಳವಳಿಗೆ ಉದಾ:- [ಹಾಲ.] :

'ಹಸಿಅಮವಿಆರಮುದ್ಧಂ ಭಮಿಅಂ ವಿರಹಿಅವಿಲಾಸಸುಚ್ಛಾಅಂ।
ಭಣಿಅಂ ಸಹಾವಸರಲಂ ಧಣ್ಣಾಣ ಘರೇ ಕಲತ್ತಾಣಂ ॥'

[ವಿಚಾರವಿಲ್ಲದ ಮುಗ್ಧಹಸಿತ, ವಿಲಾಸದ ನೆರಳೂ ಇಲ್ಲದ ನಡತೆ, ಸ್ವಭಾವಸರಳವಾದ ಮಾತು - ಧನ್ಯರ ಮನೆಯಲ್ಲಿ ಹೀಗಿರುತ್ತಾರೆ ಹೆಂಡಿರು.]

ಲಜ್ಜಾವತಿಗೆ ಉದಾ:- [ಹಾಲ.] :

'ಲಜ್ಜಾಪಜ್ಜತ್ತಪಸಾಹಣಾಇಂ ಪರತಿತ್ತಿಣಿಪ್ಪಿವಾಸಾಇಂ।
ಅವಿಣಅದುಮ್ಮೇಹಾಇಂ ಧಣ್ಣಾಣ ಘರೇ ಕಲತ್ತಾಇಂ ॥'

[ಲಜ್ಜೆಯಿಂದ ಆವೃತವಾದ ಪ್ರಸಾಧನ ಉಳ್ಳವರಾಗಿ ಅನ್ಯರ ತೃಪ್ತಿಯನ್ನು ಎಂದೂ ಆಶಿಸದೆ ಅವಿನಯದ ಸುಳಿವೂ ಇಲ್ಲದೆ ಇರುತ್ತಾರೆ ಧನ್ಯಮಾನವನ ಮನೆಯ ಹೆಂಡಿರು.]

- ಈ ಬಗೆಯ ಸ್ವೀಯಾನಾಯಿಕೆಯರಲ್ಲಿ ಮುಗ್ಧಾ ಮಧ್ಯಾ ಪ್ರಗಲ್ಭಾ ಎಂದು ಮೂರು ವಿಧ.

ಟಿಪ್ಪಣಿ : 'ಸ್ವೀಯೆ'ಗೆ, 'ಸ್ವಾ', 'ಸ್ವಕೀಯೆ' ಎಂದು ಮುಂತಾಗಿಯೂ ಹೇಳುತ್ತಾರೆ.

ಹೋಲಿಕೆ = ಸಾ.ದ. : ೩-೫೭; ಪ್ರತಾಪ. : ೧-೫೬.

## ೨೬. ಮುಗ್ಧಾಲಕ್ಷಣ :

ಮುಗ್ಧಾ ನವವಯಃಕಾಮಾ ರತೌ ವಾಮಾ ಮೃದುಃ ಕ್ರುಧಿ।

ಅನು : ಹೊಸ ಹರೆಯದ ಕಾಮವುಳ್ಳವಳು, ರತಿಯಲ್ಲಿ ವಾಮಶೀಲಳಾದವಳು [ಹಾಗೂ] ಮೃದುವಾದ ಕೋಪವುಳ್ಳವಳು 'ಮುಗ್ಧಾ'.

ವ್ಯಾಖ್ಯೆ : ಹೊಸವಾಗಿ ಮೆಯ್ದುಂಬಿದ ಹರೆಯದ ಕಾಮವುಳ್ಳವಳು, ಗಂಡನಲ್ಲಿ ಸರಳವಾಗಿ ವರ್ತಿಸಿ ಸುಖವೀಯುವವಳು-'ಮುಗ್ಧಾ' ನಾಯಿಕೆ.

ಉದಾ:- ವಯೋಮುಗ್ಧಾ-[ಆಕರ ತಿಳಿಯದು] :

---

೧ ಪಾಠ : ಸ್ವಾಪಿ.

'ವಿಸ್ತಾರೀ ಸ್ತನಭಾರ ಏಷ ಗಮಿತೋ ನ ಸ್ವೋಚಿತಾಮುನ್ನತಿಂ
ರೇಖೋದ್ಭಾಸಿಕೃತಂ ವಲಿತ್ರಯಮಿದಂ ನ ಸ್ಪಷ್ಟನಿಮ್ನೋನ್ನತಮ್ ।
ಮಧ್ಯೇಽಸ್ಯಾ ಋಜುರಾಯತಾರ್ಧಕಪಿಶಾ ರೋಮಾವಲೀ ನಿರ್ಮಿತಾ
ರಮ್ಯಂ ಯೌವನಶೈಶವವ್ಯತಿಕರೋನ್ಮಿಶ್ರಂ ವಯೋ ವರ್ತತೇ ॥'

[ಅವಳ ವರ್ಧಿಸುತ್ತಿರುವ ಸ್ತನಭಾರ ಇನ್ನೂ ತನಗೆ ತಕ್ಕುದಾದ ಉನ್ನತಿಯನ್ನು ಪಡೆದಿಲ್ಲ; ರೇಖೆಯಿಂದ ಮಾತ್ರವೇ ಪ್ರಕಾಶಿಸುತ್ತಿರುವ ತ್ರಿವಳಿಯು ಇನ್ನೂ ಸ್ಪಷ್ಟವಾಗಿ ಏರುತಗ್ಗಾಗದೆ ಉಳಿದಿವೆ; ನಡುವಿನಲ್ಲಿ ವಿಸ್ತಾರವಾಗಿ ಕೋಮಲವಾದ ಅರೆಕಂದುಬಣ್ಣದ ರೋಮಗಳಿವೆ – ಬಾಲ್ಯ ಯೌವನಗಳು ಮಿಲನಗೊಂಡ ಈ ಮಿಶ್ರಕಾಲ ಎಷ್ಟು ರಮ್ಯ!]

ಮತ್ತು – [ಧನಿಕನವೇ ಪದ್ಯ] :

'ಉಚ್ಛ್ವಸನ್ಮಂಡಲಪ್ರಾಂತರೇಖಮಾಬದ್ಧಕುಡ್ಮಲಮ್ ।
ಅಪರ್ಯಾಪ್ತಮುರೋವೃದ್ಧೇಃ ಶಂಸತ್ಯಸ್ಯಾಃ ಸ್ತನದ್ವಯಮ್ ॥'

[ಅರಳುತ್ತಿರುವ ದುಂಡಾದ ಪ್ರಾಂತರೇಖೆಯಿಂದ ಕೂಡಿ ಬಿಗಿದಿಟ್ಟ ಮೊಗ್ಗಿನಂತೆ ವಿಜೃಂಭಿಸುತ್ತಿರುವ ಆಕೆಯ ಅರೆಬೆಳೆದ ಸ್ತನಗಳು, ಎದೆ ಹಿಗ್ಗುವುದನ್ನು ಸೂಚಿಸುತ್ತಿವೆ.]

ಕಾಮಮುಗ್ಧೆ : ಉದಾ:– [ಆಕರ ತಿಳಿಯದು; ೨–೫೦ರಲ್ಲೂ ಬಂದಿದೆ] :

'ದೃಷ್ಟಿಃ ಸಾಲಸತಾಂ ಬಿಭರ್ತಿ ನ ಶಿಶುಕ್ರೀಡಾಸು ಬದ್ಧಾದರಾ
ಶ್ರೋತ್ರೇ ಪ್ರೇಷಯತಿ ಪ್ರವರ್ತಿತಸಖೀಸಂಭೋಗವಾರ್ತಾಸ್ವಪಿ ।
ಪುಂಸಾಮಂಕಮಪೇತಶಂಕಮಧುನಾ ನಾರೋಹತಿ ಪ್ರಾಗ್ಯಥಾ
ಬಾಲಾ ನೂತನಯೌವನವ್ಯತಿಕರಾವಷ್ಟಭ್ಯಮಾನಾ ಶನೈಃ ॥'

[ದೃಷ್ಟಿ ಅಲಸತೆಯನ್ನು ತಾಳಿದೆ, (ಹಿಂದಿನಂತೆ ಚಂಚಲತೆಯಿಲ್ಲ). ಶೈಶವದ ಕ್ರೀಡೆಗಳಲ್ಲಿ ಆದರದ ಆಸಕ್ತಿಯಿಲ್ಲ. ಸಖಿಯ ಸಂಭೋಗ ವಾರ್ತೆಗಳನ್ನಾದರೂ ಕೇಳಲು ಕಿವಿಗೊಡುತ್ತಾಳೆ; ಹಿಂದೆ ಹೇಗೋ ಹಾಗೆ ನಿಶ್ಶಂಕೆಯಿಂದ ಈಗ ಗಂಡಸರ ತೊಡೆಯನ್ನೇರುವುದಿಲ್ಲ – ಈ ಬಾಲಕಿ ಮೆಲ್ಲಮೆಲ್ಲನೆ ಹೊಸ ಹರೆಯದ ಹೊಳಹನ್ನು ಹೊಂದುತ್ತಿದ್ದಾಳೆ.]

ರತಿವಾಮಾ : ಉದಾ:– [ಕುಮಾರ : ೮–೨; ೪–೬೧ರಲ್ಲೂ ಬಂದಿದೆ] :

'ವ್ಯಾಹೃತಾ ಪ್ರತಿವಚೋ ನ ಸಂದಧೇ ಗಂತುಮೈಚ್ಛದವಲಂಬಿತಾಂಶುಕಾ ।
ಸೇವತೇ ಸ್ಮ ಶಯನಂ ಪರಾಙ್ಮುಖೀ ಸಾ ತಥಾಪಿ ರತಯೇ ಪಿನಾಕಿನಃ ॥'

[ಪಾರ್ವತಿಯು ಮಾತನಾಡಿದರೆ ಉತ್ತರ ಕೊಡಳು; ಸೀರೆಯನ್ನು ಹಿಡಿದರೆ ಸರಿಯಲಿಚ್ಛಿಸುವಳು; ಆತನ ಹಾಸಿಗೆಯಲ್ಲಿ ಮಲಗಿದರೂ ಮುಖ ತಿರುಗಿಸಿರುವಳು – ಆದರೂ ಹೀಗೆ ಅವಳು ಪಿನಾಕಿಗೆ ರತಿಯಲ್ಲಿ ಸುಖವೀಯುವಳು.]

ಕ್ರೋಧದಲ್ಲಿ ಮೃದು : ಉದಾ:– [ಸುಭಾಷಿತಾವಲಿ] :

'ಪ್ರಥಮಜನಿತೇ ಬಾಲಾ ಮನ್ಯೌ ವಿಕಾರಮಜಾನತೀ
ಕಿತವಚರಿತೇನಾಸಜ್ಯಾಂಕೇ ವಿನಮ್ರಭುಜೈವ ಸಾ ।
ಚಿಬುಕಮಲಿಕಂ ಚೋನ್ನಮ್ಯೋಚ್ಚೈರಕೃತ್ರಿಮವಿಭ್ರಮಾ
ನಯನಸಲಿಲಸ್ಯಂದಿನ್ಯೋಷ್ಠೇ ರುದಂತ್ಯಪಿ ಚುಂಬಿತಾ ॥'

[ಪ್ರಪ್ರಥಮವಾಗಿ ಪ್ರಿಯನ ಮೇಲೆ ಕೋಪಗೊಂಡ ಬಾಲೆ ಅದನ್ನು ಅಂಗವಿಕಾರದಿಂದ ಹೇಗೆ ಪ್ರಕಟಿಸ ಬೇಕೆಂಬುದನ್ನು ಅರಿಯಳು. ಧೂರ್ತನಾದ ಪ್ರಿಯನು ಆಕೆಯನ್ನು ತೊಡೆಯ ಮೇಲೆ ಏರಿಸಿಕೊಂಡು ಅವಳ

ಭುಜ ಬಾಗಿರಲು – ಕಪಟವರಿಯದ ಬೆಡಗುಳ್ಳ ಆಕೆಯ ಗಲ್ಲ ಹಣೆಗಳನ್ನು ಮೇಲಕ್ಕೆತ್ತಿ ಕಣ್ಣೀರಿನಿಂದ ಒದ್ದೆಯಾದ ಕೆಳಮುಟಿಯನ್ನು – ಆಕೆ ಅಳುತ್ತಿದ್ದರೂ – ಚುಂಬಿಸುತ್ತಾನೆ.]

ಇವರಂತೆಯೇ, ಲಜ್ಜಾಪೂರ್ಣ ಅನುರಾಗದಿಂದ ಕೂಡಿದ ಮುಗ್ಧಾವ್ಯವಹಾರಗಳು ಚಿತ್ರಿತವಾಗತಕ್ಕದ್ದು. ಉದಾ:– [ಆಕರ ತಿಳಿಯದು] :

'ನ ಮಧ್ಯೇ ಸಂಸ್ಕಾರಂ ಕುಸುಮಮಪಿ ಬಾಲಾ ವಿಷಹತೇ
ನ ನಿಶ್ವಾಸೈಃ ಸುಭ್ರೂರ್ಜನಯತಿ ತರಂಗವ್ಯತಿಕರಮ್ ।
ನವೋಢಾ ಪಶ್ಯಂತೀ ಲಿಖಿತಮಿವ ಭರ್ತುಃ ಪ್ರತಿಮುಖಂ
ಪ್ರರೋಹದ್ರೋಮಾಂಚಾ ನ ಪಿಬತಿ ನ ಪಾತ್ರಂ ಚಲಯತಿ ॥'

[(ಹೊಸದಾಗಿ ಮದುವೆಯಾದ ಮುಗ್ಧೆಯೊಬ್ಬಳು ಪ್ರಿಯನ ಎದುರಲ್ಲಿ ತಲೆತಗ್ಗಿಸಿ ಕುಳಿತಿದ್ದಾಳೆ. ಆಕೆಯ ಎದುರು ಪಾನ ತುಂಬಿದ ಪಾತ್ರೆಯೊಂದಿದೆ. ಆ ಪಾನಪಾತ್ರೆಯಲ್ಲಿ ಪ್ರಿಯನ ಮುಖ ಪ್ರತಿಬಿಂಬಿತವಾಗಿದೆ. ಹೀಗಿರುವಲ್ಲಿ) ಆ ಬಾಲೆ ನಡುವೆ ಯಾವ ಪ್ರಸಾಧನಸಂಸ್ಕಾರವನ್ನೂ, ಕೊನೆಗೆ ಒಂದು ಹೂವನ್ನೂ ಕೂಡ ಸಹಿಸಲಾರದಾಗಿದ್ದಾಳೆ. ಚಂದ ಹುಬ್ಬಿನ ಆ ಚೆಲುವೆ ನಿಟ್ಟುಸಿರುಬಿಟ್ಟು ಪಾನಪಾತ್ರೆಯಲ್ಲಿ ಅಲೆಯೇಳಿಸುವುದಿಲ್ಲ. ಬರೆದಿಟ್ಟಂತೆ ತೋರುವ ಪ್ರಿಯನ ಪ್ರತಿಬಿಂಬವನ್ನು ನೋಡುತ್ತ ಕುಳಿತಿರುವ ಆ ನವೋಢೆ, ಮೆಯ್ ರೋಮಾಂಚಗೊಳ್ಳುತ್ತಿರಲು, ಎದುರಿರುವ ಪಾನೀಯವನ್ನು ಕುಡಿಯುವುದೂ ಇಲ್ಲ, ಆ ಪಾನಪಾತ್ರೆಯನ್ನು ಅಲುಗಿಸುವುದೂ ಇಲ್ಲ.]

ಟಿಪ್ಪಣಿ : ಕೆಲವು ಗ್ರಂಥಗಳು (ರಸಮಂಜರಿ ರಸರತ್ನಹಾರ ಇ.,) ಮುಗ್ಧಾನಾಯಿಕೆಯಲ್ಲಿ ಪುನಃ ಎರಡು ಒಳಭೇದಗಳನ್ನು ಹೇಳಿವೆ. ಈ ಗ್ರಂಥದ ೨–೩೧ರ ವ್ಯಾಖ್ಯೆಯಲ್ಲಿ ಅಂತಹ ಭೇದಗಳನ್ನು ವಿರೋಧಿಸಲಾಗಿದೆ.

ಹೋಲಿಕೆ = ಸಾ.ದ. : ೩–೫೮; ಪ್ರತಾಪ. : ೧–೫೬

## ೨೭. ಮಧ್ಯಾಲಕ್ಷಣ :

**ಮಧ್ಯೋದ್ಯದ್ಯೌವನಾನಂಗಾ ಮೋಹಾಂತಸುರತಕ್ಷಮಾ ॥ ೧೬ ॥**

ಅನು : ಉಕ್ಕುವ ಯೌವನ ಕಾಮಗಳನ್ನುಳ್ಳವಳು, ಎಚ್ಚರುದಪ್ಪುವವರೆಗೂ ರತಿಯನ್ನು ಸಹಿಸುವವಳು 'ಮಧ್ಯಾ'.

ವ್ಯಾಖ್ಯೆ : ವಿಶೇಷವಾದ ತಾರುಣ್ಯ ಕಾಮಗಳು ಒದಗಿರುವ ಹಾಗೂ ಮೋಹಾಂತವಾಗಿ ಸುರತಕ್ಕೆ ಯೋಗ್ಯಳಾಗಿರುವ ನಾಯಿಕೆ 'ಮಧ್ಯಾ'.

ಯೌವನವತಿಗೆ ಉದಾ:– [ಆಕರ ತಿಳಿಯದು] :

'ಆಲಾಪಾನ್ಭ್ರೂವಿಲಾಸೋ ವಿರಲಯತಿ ಲಸದ್ಬಾಹುವಿಕ್ಷಿಪ್ತಿಯಾತಂ
ನೀವೀಗ್ರಂಥಿಂ ಪ್ರಥಿಮ್ನಾ ಪ್ರತನಯತಿ ಮನಾಙ್ಮಧ್ಯನಿಮ್ನೋ ನಿತಂಬಃ ।
ಉತ್ಪುಷ್ಪತ್ಪಾರ್ಶ್ವಮೂರ್ಛತ್ಕುಚಶಿಖರಮುರೋ ನೂನಮಂತಃ ಸ್ಮರೇಣ
ಸ್ಪೃಷ್ಟಾ ಕೋದಂಡಕೋಟ್ಯಾ ಹರಿಣಶಿಶುದೃಶೋ ದೃಶ್ಯತೇ ಯೌವನಶ್ರೀಃ ॥'

[ಹುಬ್ಬಿನ ಕುಣಿತ ಮಾತುಗಳನ್ನು ವಿರಲಗೊಳಿಸಿದೆ. ನಡೆಯುವಾಗ ಬಾಹುವಿನ್ಯಾಸ ಶೋಭಿಸುತ್ತದೆ. ತೆಳುವಾದ ನಡುವಿನ ಕೆಳಗಿರುವ ಘನ ನಿತಂಬವು ನೀವೀಗ್ರಂಥಿಯನ್ನು ಸಡಿಲಗೊಳಿಸುತ್ತಿದೆ. ಆಕೆಯ ಎದೆಯ ಎರಡು ಪಾರ್ಶ್ವಗಳಲ್ಲೂ ಕಂಪಿಸುವ ಕುಚಶಿಖರಗಳು ಅರಳುತ್ತಿವೆ. ನಿಶ್ಚಯವಾಗಿಯೂ ಮನ್ಮಥನ ಕೋದಂಡಾಗ್ರದಿಂದ ಒಳಗೆ ಚುಚ್ಚಲ್ಪಡುತ್ತಿರುವಂತೆ ತೋರುತ್ತಿದೆ, ಈ ಮೃಗಶಿಶುನಯನೆಯ ಯೌವನಶೋಭೆ.]

ಕಾಮವತಿಗೆ ಉದಾ:– [ಅಮರು : ಶ್ಲೋ. ೧೦೪] :

'ಸ್ಮರನವನದೀಪೂರೇಣೋಢಾಃ ಪುನರ್ಗುರುಸೇತುಭಿ –

ರ್ಯದಪಿ ವಿಧೃತಾಸ್ತಿಷ್ಠನ್ತ್ಯಾರಾದಪೂರ್ಣಮನೋರಥಾಃ ।

ತದಪಿ ಲಿಖಿತಪ್ರಖ್ಯೈರಂಗೈಃ ಪರಸ್ಪರಮುನ್ಮುಖಾ

ನಯನನಲಿನೀನಾಲಾಕೃಷ್ಟಂ ಪಿಬಂತಿ ರಸಂ ಪ್ರಿಯಾಃ ॥'

[ನೂತನ ಕಾಮಪ್ರವಾಹವಲ್ಲಿ ಮುಳುಗಿದವರು (ಲಜ್ಜಾದಿ) ಬಂಧನಗಳಿಂದ ತಡೆಯಲ್ಪಟ್ಟು ಅಪೂರ್ಣ ಮನೋರಥರಾಗಿ ಉಳಿಯುವರಾದರೂ ಒಬ್ಬರೊಬ್ಬರ ಎದುರು ಚಿತ್ರಗತರಂತೆ ನಿಂತು ನಯನನಲಿನೀ ನಾಲಗಳಿಂದ ರಸವನ್ನು ಹೀರುತ್ತಾರೆ.]

ಸಂಭೋಗದಲ್ಲಿ ಮಧ್ಯಾ : ಉದಾ:– [ಹಾಲ.] :

'ತಾವ ಚ್ಚಿಅ ರಇಸಮಏ ಮಹಿಲಾಣಂ ವಿಬ್ಭಮಾ ವಿರಾಅಂತಿ ।

ಜಾವ ಣ ಕುವಲಯದಲಸಚ್ಛಹಾಇ ಮಉಲೇಂತಿ ಣಅಣಾಇಂ ॥'

[ರತಿಸಮಯದಲ್ಲಿ, ಎಲ್ಲಿಯವರೆಗೆ ಕುವಲಯದಲದಂತೆ ಸ್ವಚ್ಛ ಕಾಂತಿಯನ್ನು ಮೆರೆಯುವ ಕಣ್ಣು ಮುಚ್ಚಿಕೊಳ್ಳುವುದಿಲ್ಲವೊ ಅಲ್ಲಿಯವರೆಗೆ ಸ್ತ್ರೀಯರ ವಿಭ್ರಮವು ರಾರಾಜಿಸುತ್ತದೆ.]

ಟಿಪ್ಪಣ : ಇಲ್ಲಿ 'ಮಧ್ಯಾ' ಎಂದರೆ, 'ಮುಗ್ಧಾ' ಮತ್ತು 'ಪ್ರಗಲ್ಭಾ' – ಇವರಿಬ್ಬರ ನಡುವಿನವಳು. 'ಧೀರಾ', 'ಅಧೀರಾ' – ಇವರಿಬ್ಬರ ನಡುವಿನ ಅವಸ್ಥೆಯುಳ್ಳವಳಿಗೂ 'ಮಧ್ಯಾ' ಎಂಬ ಸಂಜ್ಞೆಯಿದೆ. (ನೋಡಿ : ೨–೩೦ರ ಟಿಪ್ಪಣಿ).

ಹೋಲಿಕೆ = ಸಾ.ದ. : ೩–೫೯; ಪ್ರತಾಪ. : ೧–೫೬.

## ೨೮. ಮಧ್ಯೆಯ ಮನೋವೃತ್ತಿಭೇದ :

**ಧೀರಾ ಸೋತ್ಪ್ರಾಸವಕ್ರೋಕ್ತ್ಯಾ ಮಧ್ಯಾ ಸಾಶ್ರು ಕೃತಾಗಸಮ್ ।**
**ಖೇದಯೇದ್ದಯಿತಂ ಕೋಪಾದಧೀರಾ ಪರುಷಾಕ್ಷರಮ್ ॥ ೧೬ ॥**

ಅನು : [ಮಧ್ಯಾನಾಯಿಕೆಯರಲ್ಲಿ] ಕೋಪವುಂಟಾದಾಗ – ಧೀರೆಯು ಹೀಯಾಳಿಸುವ ಕೊಂಕುಮಾತುಗಳಿಂದಲೂ, ಮಧ್ಯೆಯು [ಎಂದರೆ, ಧೀರಳೂ ಅಲ್ಲದೆ ಅಧೀರಳೂ ಅಲ್ಲದೆ ಅವರೆಡು ಸ್ಥಿತಿಗಳಿಗೆ ನಡುವೆ ಇರುವವಳು] ಕಣ್ಣೀರು [ಹಾಗೂ ಹೀಯಾಳಿಸುವ ಕೊಂಕು ಮಾತು]ಗಳಿಂದ ಕೂಡಿಯೂ, ಅಧೀರೆಯು ಕಣ್ಣೀರು ಮತ್ತು ಕಠಿನ ವಾಕ್ಯಗಳಿಂದಲೂ ಅಪರಾಧಿಯಾದ ಗಂಡನನ್ನು ವ್ಯಸನಪಡಿಸುತ್ತಾಳೆ.

ವ್ಯಾಖ್ಯೆ : ಮಧ್ಯಾನಾಯಿಕೆಯರಲ್ಲಿ, ಅಪರಾಧಿಯಾದ ಪ್ರಿಯನ ಬಗೆಗೆ ಕೋಪವುಂಟಾದಾಗ ಆತನನ್ನು ಹೀಯಾಳಿಕೆಯ ಕೊಂಕುಮಾತುಗಳಿಂದ ನೋಯಿಸುವಂಥವಳು 'ಧೀರೆ'.

ಉದಾ:– [ಮಾಘ : ೬–೧೯] :

'ನ ಖಲು ವಯಮಮುಷ್ಯ ದಾನಯೋಗ್ಯಾಃ ಪಿಬತಿ ಚ ಪಾತಿ ಚ ಯಾಸಕೌ ರಹಸ್ತ್ವಾಮ್ ।

ವ್ರಜ ವಿಟಪಮಮುಂ ದದಸ್ವ ತಸ್ಯೈ ಭವತು ಯತಃ ಸದೃಶೋಶ್ಚಿರಾಯ ಯೋಗಃ ॥'

[ಚಿಗುರನ್ನು ಕೊಳ್ಳಲು ನಿಶ್ಚಯವಾಗಿಯೂ ನಾವು ಯೋಗ್ಯರಾದವರಲ್ಲ. ಯಾವಳು ಏಕಾಂತದಲ್ಲಿ ನಿನ್ನನ್ನು ಕುಡಿಯುವಳೋ (ಚುಂಬಿಸುವಳೊ) ಹಾಗೂ (ಪ್ರೇಮಭರಿತಳಾಗಿ) ರಕ್ಷಿಸುವಳೋ ಅವಳಿಗೆ ಇದನ್ನು ಕೊಡು ಹೋಗು. ಸದೃಶವಾದ ಈ ವಿಟಪಗಳು (ಚಿಗುರು) ಚಿರಕಾಲ ಕೂಡಲಿ. (ಇಲ್ಲಿ 'ವಿಟಪ' ಎಂಬ ಪದವನ್ನು ಶ್ಲೇಷಾರ್ಥದಲ್ಲಿ ಬಳಸಿದೆ; ವಿಟಪ ಎಂದರೆ ಚಿಗುರು ಎಂದೂ, ವಿಟನನ್ನು ಪಾಲಿಸುವಂಥವ ಎಂದೂ

ಅರ್ಥವಾಗುತ್ತದೆ. ಈ ವಿಟನನ್ನು ಪಾಲಿಸುವ ವಿಟಪ ಆಕೆ; ಅಂತೆಯೇ ವಿಟಪವನ್ನು ಸದೃಶನಾಮದ ಆ ವಿಟಪ ಕೂಡಿಕೊಂಡಿರಲಿ – ಎಂದು ಮುನಿದ ಪ್ರೇಯಸಿ ಹೇಳುತ್ತಾಳೆ).]

ಮಧ್ಯಾನಾಯಿಕೆಯಲ್ಲಿ, ಕುಪಿತಳಾದಾಗ ಗಂಡನನ್ನು ಕಣ್ಣೀರಿನ ಕೂಡ ಹೀಯಾಳಿಕೆ ಕೊಂಕು ಮಾತುಗಳಿಂದ ನೋಯಿಸುವವಳು 'ಧೀರಾಧೀರ' (ಮಧ್ಯೆ). ಉದಾ:– [ಅಮರು : ಶ್ಲೋ. ೫೭] :

'ಬಾಲೇ ನಾಥ ವಿಮುಂಚ ಮಾನಿನಿ ರುಷಂ ರೋಷಾನ್ಮಯಾ ಕಿಂ ಕೃತಂ
ಖೇದೋಽಸ್ಮಾಸು ನ ಮೇಽಪರಾಧ್ಯತಿ ಭವಾನ್ಸರ್ವೇಽಪರಾಧಾ ಮಯಿ।
ತತ್ಕಿಂ ರೋದಿಷಿ ಗದ್ಗದೇನ ವಚಸಾ ಕಸ್ಯಾಗ್ರತೋ ರುದ್ಯತೇ
ನನ್ವೇತನ್ಮಮಕಾ ತವಾಸ್ಮಿ ದಯಿತಾ ನಾಸ್ಮೀತ್ಯತೋ ರುದ್ಯತೇ ॥'

['ಬಾಲೆ!' 'ನಾಥ!' 'ಕೋಪವನ್ನು ಬಿಡು ಮಾನಿನಿ'. 'ಕೋಪದಿಂದ ನಾನೇನು ಮಾಡಿದೆ?' 'ನಮಗೆ ದುಃಖವಾಗಿದೆ'. 'ನೀನು ನನಗೆ ಅಪರಾಧ ಮಾಡಲಿಲ್ಲ, ತಪ್ಪೆಲ್ಲ ನನ್ನದು'. 'ಮತ್ತೇಕೆ ಅಳುತ್ತ ಗದ್ಗದದಿಂದ ಮಾತನಾಡುವೆ?' 'ಯಾರ ಮುಂದೆ ಅಳುತ್ತಿದ್ದೇನೆ?' 'ನನ್ನ ಮುಂದೆ ಅಳುತ್ತಿರುವೆಯಲ್ಲವೆ?' 'ನಾನು ನಿನಗೆ ಏನಾಗಬೇಕು?' 'ನೀನು ನನ್ನ ಪ್ರಿಯೆ'. 'ಹಾಗಿಲ್ಲವೆಂದೇ ಅಳುತ್ತಿದ್ದೇನೆ!']

ಮಧ್ಯಾನಾಯಿಕೆಯಲ್ಲಿ, ಕುಪಿತಳಾದಾಗ ಪತಿಯನ್ನು ಅಶ್ರುಸಮೇತವಾದ ಪರುಷಾಕ್ಷರಗಳಿಂದ ನೋಯಿಸುವಾಕೆ 'ಅಧೀರೆ'. ಉದಾ:– [ಸುಭಾಷಿತಾವಲಿ] :

'ಯಾತು ಯಾತು ಕಿಮನೇನ ತಿಷ್ಠತಾ ಮುಂಚ ಮುಂಚ ಸಖಿಮಾದರಂ ಕೃಥಾಃ।
ಖಂಡಿತಾಧರಕಲಂಕಿತಂ ಪ್ರಿಯಂ ಶಕ್ನುಮೋ ನ ನಯನೈರ್ನಿರೀಕ್ಷಿತುಮ್ ॥'

[ಹೋಗಲಿ, ಹೋಗಲಿ. ಸಖಿ, ಏಕೆ ಆತನನ್ನು ನಿಲ್ಲಿಸುವೆ? ಅವನನ್ನು ಆದರಿಸುವುದು ಬೇಡ, ಬಿಡು. ಯಾವಳೋ ಖಂಡಿತೆಯಿಂದ ಅಧರಕಲಂಕಗೊಳಿಸಿಕೊಂಡಿರುವ ಪ್ರಿಯನನ್ನು ನಾನು ಈ ಕಣ್ಣುಗಳಿಂದ ನೋಡಲಾರೆ.]

ಮಧ್ಯಾ ನಾಯಿಕೆಯು ಮುಗ್ಧೆಯಂತೆ ಲಜ್ಜಾಪೂರ್ಣಳಾಗಿರುವುದಿಲ್ಲ. ಆದರೂ ಆಕೆ ತಾನೇ ಮೇಲೆಬಿದ್ದು ಶೃಂಗಾರದಲ್ಲಿ ಪ್ರವೃತ್ತಳಾಗುವುದಿಲ್ಲ. ಈ ಬಗೆಯ ವ್ಯವಹಾರಕ್ಕೆ ಉದಾ:– [ಸುಭಾಷಿತಾವಲಿ] :

'ಸ್ವೇದಾಂಭಃಕಣಿಕಾಂಚಿತೇಽಪಿ ವದನೇ ಜಾತೇಽಪಿ ರೋಮೋದ್ಗಮೇ
ವಿಶ್ರಂಭೇಽಪಿ ಗುರೌ ಪಯೋಧರಭರೋತ್ಕಂಪೇಽಪಿ ವೃದ್ಧಿಂ ಗತೇ।
ದುರ್ವಾರಸ್ಮರನಿರ್ಭರೇಽಪಿ ಹೃದಯೇ ನೈವಾಭಿಯುಕ್ತಃ ಪ್ರಿಯ –
ಸ್ತನ್ವಂಗ್ಯಾ ಹಠಕೇಶಕರ್ಷಣಘನಾಶ್ಲೇಷಾಮೃತೇ ಲುಬ್ಧಯಾ ॥'

[ಮುಖದಲ್ಲಿ ಬೆವರು ಹನಿಗಳು ಶೋಭಿಸುತ್ತಿದ್ದರೂ, ಮೆಯ್ ರೋಮಾಂಚಗೊಳ್ಳುತ್ತಿದ್ದರೂ, ಸ್ತಂಭಗೊಂಡಿದ್ದರೂ, ಘನ ಸ್ತನಗಳು ಕಂಪಿಸಿ ಕಂಪಿಸಿ ದೊಡ್ಡದಾಗುತ್ತಿದ್ದರೂ, ಹೃದಯದಲ್ಲಿ ಕಾಮ ಅಸಹನೀಯವಾಗಿ ಕಡಲ್ಲರಿಯುತ್ತಿದ್ದರೂ ಆ ತನ್ವಂಗಿ ಪ್ರಿಯನನ್ನು ಕೂಡಲಿಲ್ಲ; ಪ್ರಿಯನೇ ಹಠದಿಂದ ಕೇಶಾಕರ್ಷಣಮಾಡಿದಾಗ ಆ ಆಲಿಂಗನದ ಅಮೃತದಲ್ಲಿ ಮಾತ್ರ ಲುಬ್ಧೆ ಪ್ರಿಯನನ್ನು ಕೂಡಿದಳು.]

ಟಿಪ್ಪಣಿ : ಹೋಲಿಕೆ = ಸಾ.ದ. : ೩–೬೧, ೬೨.

## ೨೯. ಪ್ರಗಲ್ಭಾಲಕ್ಷಣ :

**ಯೌವನಾಂಧಾ ಸ್ಮರೋನ್ಮತ್ತಾ ಪ್ರಗಲ್ಭಾ ದಯಿತಾಂಗಕೇ।**
**ವಿಲೀಯಮಾನೇವಾನಂದಾದ್ರತಾರಂಭೇಽಪ್ಯಚೇತನಾ ॥ ೧೮ ॥**

ಅನು : ಯೌವನದಿಂದ ಕುರುಡಳಾದವಳು, ಕಾಮದಿಂದ ಹುಚ್ಚಳಾದವಳು, ರತಿಯ ಆರಂಭದಲ್ಲಿಯೇ ಆನಂದದಿಂದ ಪತಿಯ ಅಂಗದಲ್ಲಿ ಕರಗಿಹೋದವಳಂತೆ ನಿಶ್ಚೇತನಳಾಗುವವಳು 'ಪ್ರಗಲ್ಭಾ'.

ವ್ಯಾಖ್ಯೆ : ಗಾಢವಾದ ಯೌವನಕ್ಕೆ ಉದಾ:- [ಧನಿಕನವೇ ಪದ್ಯ] :

'ಅಭ್ಯುನ್ನತಸ್ತನಮುರೋ ನಯನೇ ಚ ದೀರ್ಘೇ ವಕ್ರೇ ಭ್ರುವಾವತಿತರಾಂ ವಚನಂ ತತೋಽಪಿ ।
ಮಧ್ಯೋಽಧಿಕಂ ತನುರತೀವ ಗುರುರ್ನಿತಂಬೋ ಮಂದಾಗತಿಃ ಕಿಮಪಿ
ಚಾದ್ಭುತಯೌವನಾಯಾಃ ॥'

[ಎದೆಯಲ್ಲಿ ಅತ್ಯುನ್ನತವಾದ ಸ್ತನಗಳು; ದೀರ್ಘವಾದ ನಯನಗಳು; ಕೊಂಕಿದ ಹುಬ್ಬು, ಅದಕ್ಕಿಂತ ಕೊಂಕಿದ ಮಾತು; ತುಂಬ ತೆಳುವಾದ ನಡು; ಅತ್ಯಂತ ಘನವಾದ ನಿತಂಬ, ಹೇಗೋ ಮಂದವಾದ ನಡಿಗೆ – ಹೀಗಿದೆ, ಈ ಅದ್ಭುತ ಯೌವನೆಯ ಸ್ಥಿತಿ.]

ಮತ್ತು-[ಆಕರ ತಿಳಿಯದು] :

'ಸ್ತನತಟಮಿದಮುತ್ತುಂಗಂ ನಿಮ್ನೋ ಮಧ್ಯಃ ಸಮುನ್ನತಃ ಜಘನಮ್ ।
ವಿಷಮೇ ಮೃಗಶಾವಾಕ್ಷ್ಯಾ ವಪುಷಿ ನವೇ ಕ ಇವ ನ ಸ್ಖಲತಿ ॥'

[ಎತ್ತರವಾದ ಸ್ತನತಟ, ತಗ್ಗಾದ ನಡು, ಪುನಃ ತುಂಬಿ ಏರಿದ ನಿತಂಬ – ಹೀಗೆ ಈ ಹರಿಣ ನೇತ್ರೆಯ ನೂತನ ಶರೀರ ವಿಷಮವಾಗಿದೆ. ಏರು ತಗ್ಗುಗಳಿಂದ ವಿಷಮವಾಗಿರುವಲ್ಲಿ ಯಾರುತಾನೆ ಜಾರದಿರುತ್ತಾರೆ?]

ಭಾವಪ್ರಗಲ್ಭೆಗೆ ಉದಾ:- [ಅಮರು : ಶ್ಲೋ. ೬೪] :

'ನ ಜಾನೇ ಸಂಮುಖಾಯಾತೇ ಪ್ರಿಯಾಣಿ ವದತಿ ಪ್ರಿಯೇ ।
ಸರ್ವಾಣ್ಯಂಗಾನಿ ಕಿಂ ಯಾಂತಿ ನೇತ್ರತಾಮುತ ಕರ್ಣತಾಮ್ ॥'

[ಪ್ರಿಯನು ನಲ್ನುಡಿಗಳನ್ನಾಡುತ್ತ ಎದುರು ಬರಲು ನನ್ನ ಸರ್ವಾಂಗಗಳೂ ಕಣ್ಣಾಗುವುವೊ ಕಿವಿಯಾಗುವುವೊ – ತಿಳಿಯದು.]

ರತಪ್ರಗಲ್ಭೆಗೆ ಉದಾ:- [ಅಮರು : ೧೦೧] :

'ಕಾಂತೇ ತಲ್ಪಮುಪಾಗತೇ ವಿಗಲಿತಾ ನೀವೀ ಸ್ವಯಂ ಬಂಧನಾ –
ದ್ವಾಸಃ ಪ್ರಶ್ಲಥಮೇಖಲಾಗುಣಧೃತಂ ಕಿಂಚಿನ್ನಿತಂಬೇ ಸ್ಥಿತಮ್ ।
ಏತಾವತ್ಸಖಿ ವೇದ್ಮಿ ಕೇವಲಮಹಂ ತಸ್ಯಾಂಗಸಂಗೇ ಪುನಃ
ಕೋಽಸೌ ಕಾಸ್ಮಿ ರತಂ ನು ಕಿಂ ಕಥಮಿತಿ ಸ್ವಲ್ಪಾಪಿ ಮೇ ನ ಸ್ಮೃತಿಃ ॥'

[ಎಲೇ ಸಖಿ, ಕಾಂತನು ಹಾಸಿಗೆಯ ಹತ್ತಿರ ಬರಲು ನೀವಿ ತಾನಾಗಿಯೇ ಸಡಿಲಿ ಜಾರಿತು. ಮೇಖಲೆಯಿಂದ ಕಳಚಿದ ಸೀರೆ ನಿತಂಬದೆಡೆಯಲ್ಲಿ ಸ್ವಲ್ಪಮಾತ್ರ ಉಳಿಯಿತು. ಈಗ ನನಗೆ ತಿಳಿದಿರುವುದು ಇಷ್ಟೆ : ಪ್ರಿಯನ ಅಂಗಸಂಗವಾದೊಡನೆ, ಮತ್ತೆ ಅವನಾರು ನಾನಾರು ರತಿ ಎಂಥದು – ಸ್ವಲ್ಪವೂ ಸ್ಮೃತಿಯಿಲ್ಲವಾಯಿತು.]

– ಇದರಂತೆಯೇ, ಲಜ್ಜಾವಿರಹಿತವಾದ ಇತರ ಕುಶಲವ್ಯವಹಾರಗಳಿಂದಲೂ 'ಪ್ರಗಲ್ಭಾ' ನಾಯಿಕೆಯನ್ನು ಗುರುತಿಸತಕ್ಕದ್ದು. ಉದಾ:- [ಅಮರು : ಶ್ಲೋ. ೧೦೭.] :

'ಕ್ವಚಿತ್ತಾಂಬೂಲಾಕ್ತಃ ಕ್ವಚಿದಗರುಪಂಕಾಂಕಮಲಿನಃ
ಕ್ವಚಿಚ್ಚೂರ್ಣೋದ್ಗಾರೀ ಕ್ವಚಿದಪಿ ಚ ಸಾಲಕ್ತಕಪದಃ ।
ವಲೀಭಂಗಾಭೋಗೈರಲಕಪತಿತೈಃ ಶೀರ್ಣಕುಸುಮೈಃ
ಸ್ತ್ರಿಯಾಃ ಸರ್ವಾವಸ್ಥಂ ಕಥಯತಿ ರತಂ ಪ್ರಚ್ಛದಪಟಃ ॥'

[ಹಾಸುಹೊದಿಕೆಯ ಮೇಲೆ – ಒಂದೆಡೆ ತಾಂಬೂಲದ ಗುರುತಿದೆ; ಒಂದೆಡೆ (ಸ್ತನಗಳಿಗೆ ಲೇಪಿಸಿದ) ಅಗರುಚಂದನದ ಕಲೆಯಿದೆ; ಒಂದೆಡೆ ಕುಂಕುಮ ಉದುರಿದೆ; ಒಂದೆಡೆ ಪಾದಗಳ ಅಲತಿಗೆಯ ಮುದ್ರೆಯಿದೆ; ತ್ರಿವಲಿಗಳ ಅಚ್ಚೊತ್ತಿದೆ, ಮುಡಿಯಿಂದ ಉದುರಿದ ಶೀರ್ಣಕುಸುಮಗಳಿವೆ – ಹೀಗಿರುವ ಹಾಸುಹೊದಿಕೆಯೇ ಆ ಸ್ತ್ರೀಯಳ ರತಿಯ ಎಲ್ಲ ಅವಸ್ಥೆಗಳನ್ನೂ ಬಿಚ್ಚಿ ಹೇಳುತ್ತದೆ.]

ಟಿಪ್ಪಣಿ : 'ಪ್ರಗಲ್ಭಾ' ಎಂಬುದಕ್ಕೆ 'ಪ್ರೌಢಾ' ಎಂದೂ (ಪ್ರತಾಪ., ಕಾವ್ಯಾನು., ಇ.,) 'ಆಢ್ಯಾ' ಎಂದೂ (ಸಾ.ಸಾರ., ಇ.,) ಹೇಳುವುದುಂಟು.

ಹೋಲಿಕೆ = ಸಾ.ದ. : ೩–೬೦; ಪ್ರತಾಪ : ೧–೫೬

## ೩೦. ಪ್ರಗಲ್ಭಾಮನೋವೃತ್ತಿಭೇದ :

ಸಾವಹಿತ್ಥಾದರೋದಾಸ್ತೇ ರತೌ ಧೀರೇತರಾ ಕ್ರುಧಾ ।
ಸಂತರ್ಜ್ಯ ತಾಡಯೇ೧ನ್ಮಧ್ಯಾ೧ ಮಧ್ಯಾಧೀರೇವ ತಂ ವದೇತ್ ॥ ೧೯ ॥

ಅನು : [ಕುಪಿತಳಾದಾಗ ಪ್ರಗಲ್ಭಾನಾಯಿಕೆಯರಲ್ಲಿ ಧೀರೆಯು] ನಟನೆಯ ಆದರ [ಹಾಗೂ] ಕೋಪದಿಂದ ರತಿಯಲ್ಲಿ ಔದಾಸೀನ್ಯ [ತೋರುತ್ತಾಳೆ]; ಧೀರೇತರೆ [ಎಂದರೆ, ಅಧೀರೆಯು ಪತಿಯನ್ನು] ಜರೆಯುತ್ತಾಳೆ, ಹೊಡೆಯುತ್ತಾಳೆ; ಮಧ್ಯೆಯು [ಎಂದರೆ, ಧೀರಾಧೀರ ಪ್ರಗಲ್ಭೆಯು], ಮಧ್ಯಾನಾಯಿಕೆಯರಲ್ಲಿನ ಧೀರೆಯಂತೆ, ಆತನಿಗೆ [ಎಂದರೆ, ಪತಿಗೆ ಹೀಯಾಳಿಕೆಯ ಕೊಂಕುಮಾತುಗಳನ್ನು] ಹೇಳುತ್ತಾಳೆ.

ವ್ಯಾಖ್ಯೆ : ನಟನೆಯಿಂದ ಸಹಜವಾದ ಆಕಾರವನ್ನು ಮುಚ್ಚಿ ಪತಿಯನ್ನು ವಿಶೇಷವಾಗಿ ಉಪಚರಿಸುವವಳು ಮತ್ತು ಕೋಪದಿಂದ ರತಿಯಲ್ಲಿ ಔದಾಸೀನ್ಯ ತೋರುವವಳು 'ಪ್ರಗಲ್ಭೆಯಲ್ಲಿ ಧೀರಳು'. ನಟನೆಯ ಆದರಕ್ಕೆ ಉದಾ:– [ಅಮರು : ಶ್ಲೋ. ೧೮] :

'ಏಕತ್ರಾಸನಸಂಸ್ಥಿತಿಃ ಪರಿಹೃತಾ ಪ್ರತ್ಯುದ್ಗಮಾದ್ದೂರತ –
ಸ್ತಾಂಬೂಲಾಹರಣಚ್ಛಲೇನ ರಭಸಾಶ್ಲೇಷೋಽಪಿ ಸಂವಿಘ್ನಿತಃ ।
ಆಲಾಪೋಽಪಿ ನ ಮಿಶ್ರಿತಃ ಪರಿಜನಂ ವ್ಯಾಪಾರಯಂತ್ಯಾಂತಿಕೇ
ಕಾಂತಂ ಪ್ರತ್ಯುಪಚಾರತಶ್ಚತುರಯಾ ಕೋಪಃ ಕೃತಾರ್ಥೀಕೃತಃ ॥'

[ಕಾಂತನು ಬರುತ್ತಿರುವುದನ್ನು ದೂರದಿಂದಲೇ ಕಂಡು ಗೌರವಕ್ಕೋಸ್ಕರ ಮೇಲೆದ್ದ ಕಾರಣ ಒಂದೇ ಆಸನದಲ್ಲಿ ಕುಳಿತುಕೊಳ್ಳುವುದು ತಪ್ಪಿತು. ತಾನೇ ಆತನಿಗೆ ತಾಂಬೂಲ ತಂದುಕೊಡುವ ನೆಪದಲ್ಲಿ ಆಲಿಂಗನವನ್ನು ನಿವಾರಿಸಿದಳು. ಆತನಿಗೆ ಉಪಚರಿಸುವಂತೆ ಪರಿಜನರನ್ನು ನೇಮಿಸುವ ನೆಪದಲ್ಲಿ ಆತನೊಡನೆ ಮಾತಿಗೆ ಸಿಗಲಿಲ್ಲ – ಹೀಗೆ ಆ ಚತುರೆಯು ಪ್ರಿಯನನ್ನು ಉಪಚರಿಸುವಂತೆಯೇ ತನ್ನ ಕೋಪವನ್ನು ಸಾರ್ಥಕಪಡಿಸಿಕೊಂಡಳು.]

ರತಿಯಲ್ಲಿ ಔದಾಸೀನ್ಯಕ್ಕೆ ಉದಾ:– [ಅಮರು : ಶ್ಲೋ. ೧೦೬] :

'ಆಯಸ್ತಾ ಕಲಹಂ ಪುರೇವ ಕುರುತೇ ನ ಸ್ರಂಸನೇ ವಾಸಸೋ
ಭಗ್ನಭ್ರೂಗತಿಖಂಡ್ಯಮಾನಮಧರಂ ಧತ್ತೇ ನ ಕೇಶಗ್ರಹೇ ।
ಅಂಗಾನ್ಯರ್ಪಯತಿ ಸ್ವಯಂ ಭವತಿ ನೋ ವಾಮಾ ಹಠಾಲಿಂಗನೇ
ತನ್ವಾ ಶಿಕ್ಷಿತ ಏಷ ಸಂಪ್ರತಿ ಕುತಃ ಕೋಪಪ್ರಕಾರೋಽಪರಃ ॥'

---

೧ ಪಾಠ : ಕಾಂತಮ್.

[ನಾಯಕನು ವಸ್ತ್ರವನ್ನು ಸೆಳೆವಾಗ ಹಿಂದಿನಂತೆ ಆತನೊಡನೆ ಕಲಹವಾಡಲಿಲ್ಲ. ಆತ ಕೂದಲನ್ನು ಹಿಡಿದಾಗ ಹುಬ್ಬುಗಂಟಿಕ್ಕಿ ಆತನ ಅಧರಕ್ಷತಮಾಡಲಿಲ್ಲ. ಹಿಂದೆ ಅವನು ಹಟದಿಂದ ಆಲಂಗಿಸಿಕೊಳ್ಳುತ್ತಿದ್ದರೆ, ಈಗ ಆಕೆ ತಾನೇ ತನ್ನನ್ನು ಅರ್ಪಿಸಿಕೊಂಡುಬಿಟ್ಟಳು. ಇಂತಹ ಕೋಪದ ರೀತಿಯನ್ನು ಈಕೆ ಎಲ್ಲಿ ಕಲಿತಳೋ!]

ಇತರಳು ಎಂದರೆ, ಅಧೀರಳಾದ ಪ್ರಗಲ್ಭೆಯು ಕುಪಿತಳಾಗಲು ಪತಿಯನ್ನು ಜರೆಯುತ್ತಾಳೆ, ಹೊಡೆಯುತ್ತಾಳೆ. ಉದಾ:– [ಅಮರು : ಶ್ಲೋ. ೯] :

'ಕೋಪಾತ್ಕೋಮಲಲೋಲಬಾಹುಲತಿಕಾಪಾಶೇನ ಬದ್ಧ್ವಾ ದೃಢಂ
ನೀತ್ವಾ ಕೇಲಿನಿಕೇತನಂ ದಯಿತಯಾ ಸಾಯಂ ಸಖೀನಾಂ ಪುರಃ।
ಭೂಯೋಽಪ್ಯೇವಮಿತಿ ಸ್ಖಲತ್ಕಲಗಿರಾ ಸಂಸೂಚ್ಯ ದುಶ್ಚೇಷ್ಟಿತಂ
ಧನ್ಯೋ ಹನ್ಯತ ಏವ ನಿಹ್ನುತಿಪರ ಪ್ರೇಯಾನ್ ರುದಂತ್ಯಾ ಹಸನ್ ॥'

[ಕೋಪಗೊಂಡ ಪ್ರಿಯೆಯು ತನ್ನ ಕೆಡುನಡೆಯ ಪತಿಯನ್ನು, ಮೃದುವಾಗಿ ಬಳ್ಳಿಯಂತೆ ಬಾಗುವ ಕೈಗಳಿಂದ ಭದ್ರವಾಗಿ ಹಿಡಿದು ಕ್ರೀಡಾಗೃಹಕ್ಕೆ ಕೊಂಡೊಯ್ಯುತ್ತಾಳೆ; ಸಂಜೆ ಸಖಿಯರ ಮುಂದೆ, 'ಮತ್ತೆ ಮತ್ತೆ ಹೀಗೆಯೇ ಅಲ್ಲವೆ?' ಎಂದು ಆತನ ಕೀಳ್ನಡೆಯನ್ನು ಸೂಚಿಸುತ್ತ ಪ್ರಹರಿಸುತ್ತಾಳೆ. ಅಳುತ್ತಿರುವ ಆಕೆಯಿಂದ, ಹೀಗೆ ಕೋಪಕ್ಕೀಡಾಗಿ ನಗುನಗುತ್ತ ಹೊಡೆಯಿಸಿಕೊಳ್ಳುವವನೇ ಧನ್ಯ.]

ಪ್ರಗಲ್ಭೆಯಲ್ಲಿ 'ಧೀರಾಧೀರೆ'ಯು ಮಧ್ಯಾನಾಯಿಕೆಯಲ್ಲಿನ ಧೀರೆಯಂತೆ ಪತಿಯನ್ನು ಹೀಯಾಳಿಸಿ ಕೊಂಕುಮಾತುಗಳಿಂದ ವ್ಯಸನಪಡಿಸುತ್ತಾಳೆ. ಉದಾ:– [ಅಮರು : ಶ್ಲೋ. ೩೮] :

'ಕೋಪೋ ಯತ್ರ ಭ್ರುಕುಟಿರಚನಾ ನಿಗ್ರಹೋ ಯತ್ರ ಮೌನಂ
ಯತ್ರಾನ್ಯೋನ್ಯಸ್ಮಿತಮನುನಯೋ ದೃಷ್ಟಿಪಾತಃ ಪ್ರಸಾದಃ।
ತಸ್ಯ ಪ್ರೇಮ್ಣಸ್ತದಿದಮಧುನಾ ವೈಶಸಂ ಪಶ್ಯ ಜಾತಂ
ತ್ವಂ ಪಾದಾಂತೇ ಲುಠಸಿ ನ ಚ ಮೇ ಮನ್ಯುಮೋಕ್ಷಃ ಖಲಾಯಾಃ ॥'

[ಹುಬ್ಬು ಗಂಟಿಕ್ಕುವುದೇ ಕೋಪ, ಮೌನವೇ ಶಿಕ್ಷೆ, ಪರಸ್ಪರ ಮಂದಹಾಸವೇ ಅನುನಯ, ನೋಟವೇ ಪ್ರಸಾದ – ಹೀಗಿದ್ದ ನಮ್ಮ ಅನುರಾಗಕ್ಕೆ ಇಂತಹ ದುರ್ಗತಿಯೊದಗಿತು. ನೋಡು, ನೀನೀಗ ನನ್ನ ಪಾದಗಳ ಬಳಿಯಲ್ಲಿ ಉರುಳುತ್ತಿದ್ದರು ಕಠಿನಹೃದಯಳಾದ ನನಗೆ ಕೋಪವೇ ತಣಿಯದು.]

ಟಿಪ್ಪಣಿ : ಮೇಲಿನ ಕಾರಿಕೆಗಳಲ್ಲಿ, ಸರಳಳಾದ ಮುಗ್ಧೆ ಮತ್ತು ಮಧ್ಯೆಪ್ರಗಲ್ಭೆಯರಲ್ಲಿನ 'ಧೀರೆ ಅಧೀರೆ ಧೀರಾಧೀರೆ' ಎಂಬ ಭೇದಗಳು – ಇವನ್ನು ಲಕ್ಷಿಸಲಾಯಿತು. ಈ ಕೆಲವು ಕಾರಿಕೆಗಳಲ್ಲಿ ಬರುವ 'ಮಧ್ಯಾ' ಎಂಬ ಪದ ತೊಡಕನ್ನುಂಟುಮಾಡಬಹುದು. ೨೭ರಲ್ಲಿ ಮತ್ತು ಮುಂದೆ ೩೧ರಲ್ಲಿ ಬರುವ 'ಮಧ್ಯಾ' ಎಂಬುದು ಸ್ವೀಯಾನಾಯಿಕೆಯರಲ್ಲಿನ ಒಂದು ಮುಖ್ಯ ಭೇದ; ಅಲ್ಲಿ ಮುಗ್ಧಾ ಪ್ರಗಲ್ಭಾ – ಈ ಎರಡು ಸ್ಥಿತಿಗೆ ನಡುವಿನ ಸ್ಥಿತಿಯುಳ್ಳ ನಾಯಿಕೆ 'ಮಧ್ಯಾ'. ಅನಂತರ, ೨೮ ಮತ್ತು ೩೦ರಲ್ಲಿ ಪುನಃ 'ಮಧ್ಯಾ' ಎಂಬ ಪದ ಬಂದಿದೆ. ಆದರೆ, ಈ 'ಮಧ್ಯಾ' ಎಂಬುದು ಕ್ರಮವಾಗಿ ಅತ್ತ ಧೀರೆಯೂ ಅಲ್ಲದ ಇತ್ತ ಅಧೀರೆಯೂ ಅಲ್ಲದ ಮಧ್ಯಾ ಹಾಗೂ ಪ್ರಗಲ್ಭಾ ನಾಯಿಕೆಯರನ್ನು ಸೂಚಿಸುತ್ತದೆ. ಈ ತೊಡಕನ್ನು ನಿವಾರಿಸುವ ಸಲುವಾಗಿ ವೃತ್ತಿಕಾರನು ಅದಕ್ಕೆ – ಮಧ್ಯಾ ಎಂಬುದಕ್ಕೆ ಬದಲಾಗಿ – 'ಧೀರಾಧೀರಾ' ಎಂಬ ಬೇರೆ ಹೆಸರನ್ನು ಬಳಸಿದ್ದಾನೆ.

ಈ ಕಾರಿಕೆಯಲ್ಲಿ ಬರುವ 'ಮಧ್ಯಾಧೀರಾ' ಎಂಬ ಪದವನ್ನು ಹ್ಯಾಸ್ ಅವರು 'ಮಧ್ಯಾ+ಅಧೀರಾ' ಎಂದು ಬಿಡಿಸಿ ಅನುವಾದಿಸಿದ್ದಾರೆ. ಮೂಲದಲ್ಲಿ ಅವಗ್ರಹ ಚಿಹ್ನೆ ಇಲ್ಲ ಮತ್ತು ವ್ಯಾಖ್ಯೆಯಲ್ಲಿ ವಿಷಯ ಸ್ಪಷ್ಟವಾಗಿದೆ; ಆ ಕಾರಣ ಇಲ್ಲಿ 'ಮಧ್ಯಾ+ಧೀರಾ' ಎಂದೇ ಅರ್ಥಯಿಸಲಾಗಿದೆ. [ನೋಡಿ : ಹ್ಯಾಸ್ : ೨–೩೦].

ಹೋಲಿಕೆ = ಸಾ.ದ. : ೩–೬೩, ೬೪.

## ೩೧. ಜ್ಯೇಷ್ಠಾಕನಿಷ್ಠಾಭೇದ :

**ದ್ವೇಧಾ ಜ್ಯೇಷ್ಠಾ ಕನಿಷ್ಠಾ ಚೇತ್ಯಮುಗ್ಧಾ ದ್ವಾದಶೋದಿತಾಃ ।**

ಅನು : ಮುಗ್ಧೆಯನ್ನುಳಿದು, [ಮಧ್ಯಾ ಮತ್ತು ಪ್ರಗಲ್ಭಾ – ಈ ಎರಡು ನಾಯಿಕೆಯರಲ್ಲಿ] 'ಜ್ಯೇಷ್ಠಾ' ಮತ್ತು 'ಕನಿಷ್ಠಾ' ಎಂಬ ಎರಡು ಭೇದಗಳಿಂದ ಹನ್ನೆರಡು [ಪ್ರಕಾರಗಳು].

ವ್ಯಾಖ್ಯೆ : ಮುಗ್ಧಾನಾಯಿಕೆಯಲ್ಲಿ ಒಂದೇ ಪ್ರಕಾರ. ಅದನ್ನು ಬಿಟ್ಟರೆ, ಉಳಿದ ಮಧ್ಯಾ ಹಾಗೂ ಪ್ರಗಲ್ಭಾನಾಯಿಕೆಯರಲ್ಲಿ 'ಜ್ಯೇಷ್ಠಾ' ಹಾಗೂ 'ಕನಿಷ್ಠಾ' ಎಂಬ ಭೇದದಿಂದ ಹನ್ನೆರಡು ಪ್ರಕಾರಗಳು. ಜ್ಯೇಷ್ಠಾ ಕನಿಷ್ಠಾ ನಾಯಿಕೆಯರಿಗೆ ಉದಾ:– [ಅಮರು : ಶ್ಲೋ. ೧೯; ಇದು ೨–೮೨ರಲ್ಲೂ ಬಂದಿದೆ] :

'ದೃಷ್ಟ್ವೈಕಾಸನಸಂಸ್ಥಿತೇ ಪ್ರಿಯತಮೇ ಪಶ್ಚಾದುಪೇತ್ಯಾದರಾ –
ದೇಕಸ್ಯಾ ನಯನೇ ನಿಮೀಲ್ಯ ವಿಹಿತಕ್ರೀಡಾನುಬಂಧಚ್ಛಲಃ ।
ಈಷದ್ವಕ್ರಿತಕಂಧರಃ ಸಪುಲಕಃ ಪ್ರೇಮೋಲ್ಲಸನ್ಮಾನಸಾ –
ಮಂತರ್ಹಾಸಲಸತ್ಕಪೋಲಫಲಕಾಂ ಧೂರ್ತೋಽಪರಾಂ ಚುಂಬತಿ ॥'

[ಒಂದೇ ಪೀಠದಲ್ಲಿ ಕುಳಿತಿದ್ದ ಪ್ರಿಯತಮೆಯರೀರ್ವರನ್ನು ನೋಡಿ, ಹಿಂದುಗಡೆಯಿಂದ ಬಂದು, ಆ ಕಾಲಕ್ಕೆ ತಕ್ಕುದಾದ ಕ್ರೀಡೆಯ ನೆಪದಿಂದ ಸಾದರನಾಗಿ ಒಬ್ಬಳ ಕಣ್ಣುಗಳನ್ನು ಮುಚ್ಚಿದನು; ಅನಂತರ ಆ ಧೂರ್ತ, ಕೊರಳನ್ನು ತುಸು ಬಾಗಿಸಿ, ಪ್ರೇಮದಿಂದ ಮನಸ್ಸು ಉಲ್ಲಸಿತವಾಗಿ ಒಳನಗೆ ಮಿರುಗುವ ಕಪೋಲವುಳ್ಳ ಮತ್ತೊಬ್ಬಳನ್ನು – ರೋಮಾಂಚಗೊಂಡು – ಚುಂಬಿಸಿದನು.]

ನಾಯಕನಿಗೆ ಕನಿಷ್ಠೆಯಲ್ಲಿಯೇ ಪ್ರೇಮ, ಜ್ಯೇಷ್ಠೆಯಲ್ಲಿ ದಾಕ್ಷಿಣ್ಯ ಮಾತ್ರ ಎಂದು ತಿಳಿಯಬಾರದು. ಜ್ಯೇಷ್ಠೆಯಲ್ಲಿ ಕೂಡ ಪ್ರೇಮವೇ ಇರಬಹುದು. ದಕ್ಷಿಣಲಕ್ಷಣವನ್ನು ಹೇಳುವಲ್ಲಿ (೨–೧೧ ವ್ಯಾಖ್ಯೆ) ಈ ವಿಷಯವನ್ನು ಸ್ಪಷ್ಟಗೊಳಿಸಿದೆ.

ಧೀರಮಧ್ಯಾ, ಅಧೀರಮಧ್ಯಾ, ಧೀರಾಧೀರಮಧ್ಯಾ, ಧೀರಪ್ರಗಲ್ಭಾ, ಅಧೀರಪ್ರಗಲ್ಭಾ, ಧೀರಾಧೀರಪ್ರಗಲ್ಭಾ – ಈ ಆರು ಬಗೆಗಳೊಂದೊಂದಕ್ಕೂ ಜ್ಯೇಷ್ಠಾ ಕನಿಷ್ಠಾ ಭೇದಗಳು ಹತ್ತುವುದರಿಂದ ಒಟ್ಟು ಪ್ರಕಾರಗಳು ಹನ್ನೆರಡಾಗುತ್ತವೆ.

ಉದಾ:– ರತ್ನಾ.ಲ್ಲಿ ಬರುವ ವಾಸವದತ್ತೆ ಜ್ಯೇಷ್ಠಾ; ರತ್ನಾವಲಿ 'ಕನಿಷ್ಠಾ'. ಉಳಿದ ಭೇದಗಳನ್ನು ಮಹಾಕವಿಪ್ರಬಂಧಗಳಿಂದ ಅರಿಯಬಹುದು.

ಟಿಪ್ಪಣಿ : ಒಬ್ಬ ನಾಯಕನು ಮೊದಲು ಒಬ್ಬಳನ್ನು ಪ್ರೇಮಿಸಿದ್ದು ಆಮೇಲೆ ಇನ್ನೊಬ್ಬಳನ್ನು ಪ್ರೇಮಿಸಿದರೆ, ಅದರಲ್ಲಿ ಮೊದಲನೆಯವಳಿಗೆ 'ಜ್ಯೇಷ್ಠಾ' (ಹಿರಿಯಳು) ಎಂದೂ ಎರಡನೆಯವಳಿಗೆ 'ಕನಿಷ್ಠಾ' (ಕಿರಿಯಳು) ಎಂದೂ ಸಂಜ್ಞೆ. (ನೋಡಿ : ೨–೭೮ ಟಿಪ್ಪಣಿ).

'ಮುಗ್ಧಾ'ನಾಯಿಕೆಯು ಸ್ವಭಾವತಃ ಹೊಸದಾಗಿ ಹರೆಯ ತುಂಬಿರುವವಳು; ಹೊಸದಾಗಿ ಕಾಮದ ರುಚಿ ಕಂಡವಳು. ಆದಕಾರಣ ಆಕೆ 'ಜ್ಯೇಷ್ಠೆ'ಯಾಗುವ ಸಂಭವವೇ ಇಲ್ಲ. ಅಂತೆಯೇ ಆಕೆಯಲ್ಲಿ ಜ್ಯೇಷ್ಠಾ ಕನಿಷ್ಠಾ ಭೇದವಿಲ್ಲ. ಇನ್ನುಳಿದ ಮಧ್ಯಾ ಪ್ರಗಲ್ಭಾ ನಾಯಿಕೆಯರಲ್ಲಿನ ಮೂರು ಮೂರು (ಒಟ್ಟು ಆರು) ಭೇದಗಳಿಗೆ 'ಜ್ಯೇಷ್ಠಾ' 'ಕನಿಷ್ಠಾ' ಭೇದವನ್ನು ಹೊಂದಿಸಿದರೆ ಒಟ್ಟು ಪ್ರಕಾರಗಳು ಹನ್ನೆರಡಾಗುತ್ತವೆ.

ಒಬ್ಬ ನಾಯಕ 'ಕನಿಷ್ಠೆ'ಯನ್ನು ಪ್ರೇಮಿಸುವಾಗ 'ಜ್ಯೇಷ್ಠೆ'ಯನ್ನು ಕಡೆಗಣಿಸಿರಬೇಕಲ್ಲವೆ, ಅವಳನ್ನೂ ಹೇಗೆ ಮನಸಾ ಪ್ರೀತಿಸಬಲ್ಲನು? ಹಾಗೆ ನಾಯಕನ ಪ್ರೇಮವೇ ಇಲ್ಲದಿರುವ 'ಜ್ಯೇಷ್ಠೆ'ಗೆ, ಪ್ರೇಮದಲ್ಲಿನ ಕೋಪ ಚೇಷ್ಟೆಗಳಿಂದಲೇ ನಿರ್ಧರವಾಗುವ, ಧೀರಾ ಅಧೀರಾ ಧೀರಾಧೀರಾ ಅವಸ್ಥೆಗಳು ಎಲ್ಲಿ ಬಂತು? – ಈ ಸಂದೇಹವನ್ನು ನಿವಾರಿಸುವ ಕಾರಣ ಧನಿಕ ವ್ಯಾಖ್ಯೆಯನ್ನು ಬೆಳೆಸಿದ್ದಾನೆ. ದಕ್ಷಿಣನು ಜ್ಯೇಷ್ಠೆ ಕನಿಷ್ಠೆಯರಿಬ್ಬರನ್ನೂ

ವ್ಯಾಖ್ಯೆ : ಛನ್ನಕಾಮರು = ಗುಪ್ತವಾಗಿ ಕಾಮಿಸುವ ಶ್ರೋತ್ರಿಯ (ಬ್ರಾಹ್ಮಣ) ವಣಿಕ್ ಲಿಂಗಿಗಳು (ಸಂನ್ಯಾಸಿ ಇ.,) ಮುಂತಾದವರು; ಸುಖಾರ್ಥರು = ಪ್ರಯಾಸವಿಲ್ಲದೆ ಹಣ ಪಡೆಯುವವರು ಅಥವಾ ಸುಖವೇ ಪ್ರಯೋಜನವಾಗಿ ಉಳ್ಳವರು; ಅಜ್ಞರು = ಮೂರ್ಖರು; ಸ್ವತಂತ್ರರು = ನಿರಂಕುಶರು; ಅಹಂಯುಗಳು = ಅಹಂಕಾರಿಗಳು; ಪಂಡಕರು = ವಾತಪಂಡ ಮುಂತಾದ ರೋಗಗಳಿಂದ ನಪುಂಸಕರಾದವರು. ಐಶ್ವರ್ಯವಂತರಾದ ಇಂಥವರನ್ನು ಗಣಿಕೆಯು ಪ್ರೇಮಿಸಿದಂತೆ ತೋರಿಸಿ ಹಣವನ್ನು ಸುಲಿಯುತ್ತಾಳೆ. ಅದು ಆಕೆಯ ಪ್ರಧಾನವೃತ್ತಿ. ಹಣ ಸುಲಿದ ಅನಂತರ ಅವರನ್ನು ಕುಟ್ಟನಿ(ತಾಯಿ)ಯ ಮೂಲಕ ಹೊರಹಾಕುವಳು. ಇದು ಅವಳ ಸಾಮಾನ್ಯಲಕ್ಷಣ.

ಟಿಪ್ಪಣಿ : ಸುಖಾರ್ಥರು ಎಂಬುದಕ್ಕೆ ಆಗಬಹುದಾದ ಎರಡು ಅರ್ಥಗಳನ್ನೂ ಧನಿಕ ಸೂಚಿಸಿದ್ದಾನೆ. ಗ್ರಂಥಾಂತರಗಳನ್ನವಲಂಬಿಸಿ ಮೇಲಿನ ಅನುವಾದದಲ್ಲಿ 'ಸುಲಭವಾಗಿ ಹಣ ಪಡೆಯುವವರು' ಎಂಬುದನ್ನೆ ಇಟ್ಟುಕೊಂಡಿದೆ.

ಹೋಲಿಕೆ = ಸಾ.ದ. : ೩–೬೭ರಿಂದ ಮುಂದೆ.

## ೩೫. ರೂಪಕಗಳಲ್ಲಿ ಸಾಧಾರಣೆ :

**೧ರಕ್ತೈವ ತ್ವಪ್ರಹಸನೇ ನೈಷಾ ದಿವ್ಯನೃಪಾಶ್ರಯೇ ।೧**

ಅನು : ಪ್ರಹಸನವನ್ನುಳಿದು [ಇತರ ರೂಪಕಗಳಲ್ಲಿ] ಅನುರಕ್ತಳೆಂಬಂತೆ [ಆಕೆಯನ್ನು ಚಿತ್ರಿಸತಕ್ಕದ್ದು]; ದಿವ್ಯನಾದ ರಾಜನಿಗೆ ಸಂಬಂಧಿಸಿದ [ಕಥಾನಕಗಳ]ಲ್ಲಿ ಆಕೆಯನ್ನು [ತರಲೇ]ಕೂಡದು.

ವ್ಯಾಖ್ಯೆ : ಪ್ರಹಸನವನ್ನುಳಿದು ಇತರ ಪ್ರಕರಣಾದಿಗಳಲ್ಲಿ ಆಕೆಯು ನಾಯಕನಲ್ಲಿ ಅನುರಕ್ತಳೆಂಬಂತೆ ಚಿತ್ರಿಸತಕ್ಕದ್ದು. ಉದಾ:– [ಮೃಚ್ಛ] : ವಸಂತಸೇನಾ ಚಾರುದತ್ತರ ಅನುರಾಗ. ಪ್ರಹಸನಗಳಲ್ಲಿ, ಹಾಸ್ಯಕ್ಕಾಗಿ, ಅನುರಕ್ತಳಲ್ಲದ ಗಣಿಕೆ ಇರಬಹುದು. ದಿವ್ಯನೃಪನು ನಾಯಕನಾಗಿರುವ ನಾಟಕಾದಿ ದಶರೂಪಕಗಳಲ್ಲಿ ಆಕೆಯ ಪಾತ್ರ ಬರಕೂಡದು.

ಟಿಪ್ಪಣಿ : ದಶರೂಪಕಗಳ ವಿವರಣೆಗೆ ೩ನೆಯ ಪ್ರಕಾಶ ನೋಡಿ.

# ನಾಯಕಸಂಬಂಧಿಯಾದ ನಾಯಿಕಾಭೇದಗಳು

## ೩೬. ಎಂಟು ಭೇದಗಳು :

**ಆಸಾಮಷ್ಟಾವವಸ್ಥಾಃ ಸ್ಯುಃ ಸ್ವಾಧೀನಪತಿಕಾದಿಕಾಃ ॥ ೨೩ ॥**

ಅನು : ಇವರುಗಳಿಗೆ [ಎಂದರೆ, ಎಲ್ಲಾ ಬಗೆಯ ಸಮಸ್ತ ನಾಯಿಕೆಯರಿಗೆ] ಸ್ವಾಧೀನ ಪತಿಕಾ ಮುಂತಾಗಿ [ನಾಯಕಸಂಬಂಧಿಯಾದ] ಕೇವಲ ಎಂಟು ಅವಸ್ಥೆಗಳಿರುತ್ತವೆ.

ವ್ಯಾಖ್ಯೆ : ಸ್ವಾಧೀನಪತಿಕಾ, ವಾಸಕಸಜ್ಜಾ, ವಿರಹೋತ್ಕಂಠಿತಾ, ಖಂಡಿತಾ, ಕಲಹಾಂತರಿತಾ, ವಿಪ್ರಲಬ್ಧಾ, ಪ್ರೋಷಿತಪ್ರಿಯಾ, ಅಭಿಸಾರಿಕಾ – ಇವು ನಾಯಿಕೆಯರ ಎಂಟು ಭೇದಗಳು. ಹಿಂದೆ ಹೇಳಿದ ಮುಗ್ಧಾ ಮಧ್ಯಾ ಪ್ರಗಲ್ಭಾ ಈ ಅವಸ್ಥೆಗಳಿಗೂ ಇಲ್ಲಿ ಹೇಳುವ ಸ್ವಾಧೀನಪತಿಕಾ ಇತ್ಯಾದಿ ಎಂಟು ಅವಸ್ಥೆಗಳಿಗೂ ಇರುವ ಸಂಬಂಧ

---

೧ ಪಾಠ : ರೂಪಕೇಷ್ವನುರಕ್ತೈವ ಕಾರ್ಯಾ ಪ್ರಹಸನೇತರೇ. [ಅನು : ಪ್ರಹಸನವನ್ನುಳಿದು ಇತರ ರೂಪಕಗಳಲ್ಲಿ ಅನುರಕ್ತೆಯೆಂಬಂತೆ ಆಕೆಯನ್ನು ತರತಕ್ಕದ್ದು.]

ಇದು : ಮುಗ್ಧಾ ಇ.,ಗಳು ಧರ್ಮಿ; ಸ್ವಾಧೀನಪತಿಕಾ ಇ.,ಗಳು ಧರ್ಮ (ಮೊದಲನೆಯದು ಗುಣೀ ಎರಡನೆಯದು ಗುಣ; ಮೊದಲನೆಯದು ವಿಶೇಷ್ಯ ಎರಡನೆಯದು ವಿಶೇಷಣ.)

ಟಿಪ್ಪಣಿ : ಈ ಎಂಟು ವಿಭಾಗಗಳು ಹೇಗೆ ನಿಷ್ಪನ್ನವಾದುವೆಂಬುದನ್ನು ಧನಿಕ ವ್ಯಾಖ್ಯೆಯಲ್ಲಿ ಪ್ರತಿಪಾದಿಸಿದ್ದಾನೆ. ಅರ್ಥಸೌಲಭ್ಯಕ್ಕಾಗಿ ಆ ಭಾಗವನ್ನು ಈ ಎಂಟು ಅವಸ್ಥೆಗಳ ಲಕ್ಷಣವನ್ನು ಹೇಳಿದನಂತರ, ತುದಿಯಲ್ಲಿ ಕೊಟ್ಟಿವೆ. ನೋಡಿ : ೨-೪೪ರ ವ್ಯಾಖ್ಯೆ .

ಹೋಲಿಕೆ = ನಾ.ಶಾ. : ೨೪-೨೦೩, ೨೦೪; ಸಾ.ದ. : ೩-೭೨, ೭೩; ಪ್ರತಾಪ : ೧-೪೧, ೪೨.

## ೩೭. ಸ್ವಾಧೀನಭರ್ತೃಕಾಲಕ್ಷಣ :

**ಆಸನ್ನಾಯತ್ತರಮಣಾ ಹೃಷ್ಟಾ ಸ್ವಾಧೀನಭರ್ತೃಕಾ ।**

ಅನು : [ತನಗೆ] ಅಧೀನನಾಗಿರುವ ಪತಿಯು ಬಳಿಯಲ್ಲೇ ಇರುತ್ತಿರಲು [ಅದರಿಂದ] ಸಂತೋಷಗೊಂಡಿರುವವಳು 'ಸ್ವಾಧೀನಭರ್ತೃಕೆ'.

ವ್ಯಾಖ್ಯೆ : ಉದಾ:- [ಅಮರು.] :

'ಮಾ ಗರ್ವಮುದ್ವಹ ಕಪೋಲತಲೇ ಚಕಾಸ್ತಿ ಕಾಂತಸ್ವಹಸ್ತಲಿಖಿತಾ ಮಮ ಮಂಜರೀತಿ ।

ಅನ್ಯಾಪಿ ಕಿಂ ನ ಸಖಿ ಭಾಜನಮೀದೃಶಾನಾಂ ವೈರೀ ನ ಚೇದ್ಭವತಿ ವೇಪಥುರಂತರಾಯಃ ॥'

['ನನ್ನ ಕಪೋಲತಲದಲ್ಲಿ ಹೊಳೆಯುವ ಪತ್ರಲೇಖೆ ನನ್ನ ಪ್ರಿಯನೇ ಸ್ವತಃ ತನ್ನ ಹಸ್ತದಿಂದ ರಚಿಸಿದ್ದು'- ಎಂದು ಗರ್ವಪಡಬೇಡ. ಎಲೈ ಸಖಿ, ನಡುವೆ ರೋಮಾಂಚಕಂಪನವುಂಟಾಗಿ ವಿಘ್ನ ಬಾರದಿದ್ದರೆ, ಮತ್ತೊಬ್ಬಳು ಕೂಡ ನಿನ್ನ ಹಾಗೆಯೇ ಪ್ರಿಯಹಸ್ತದ ಪತ್ರಲೇಖೆಯನ್ನು ಮೆರೆಯಿಸುತ್ತಿರಲಿಲ್ಲವೇನು?]

ಟಿಪ್ಪಣಿ : 'ಸ್ವಾಧೀನಭರ್ತೃಕಾ'ಗೆ 'ಸ್ವಾಧೀನಪತಿಕಾ' ಎಂಬ ಹೆಸರೂ ಇದೆ. (ನೋಡಿ : ೨-೩೬).

ಹೋಲಿಕೆ = ನಾ.ಶಾ. : ೨೪-೨೦೭; ಸಾ.ದ. : ೩-೭೪; ಪ್ರತಾಪ : ೧-೪೩.

## ೩೮. ವಾಸಕಸಜ್ಜಾಲಕ್ಷಣ :

**ಮುದಾ ವಾಸಕಸಜ್ಜಾ ಸ್ವಂ ಮಂಡಯತ್ಯೇಷ್ಯತಿ ಪ್ರಿಯೇ ॥ ೨೪ ॥**

ಅನು : ಪ್ರಿಯನು ಬರುವ ಸಮಯದಲ್ಲಿ ಸಂತೋಷದಿಂದ ತನ್ನನ್ನು ಅಲಂಕರಿಸಿ ಕೊಳ್ಳುವವಳು 'ವಾಸಕಸಜ್ಜಾ'.

ವ್ಯಾಖ್ಯೆ : ಪ್ರಿಯನು ಆಗಮಿಸುವಾಗ ತನ್ನನ್ನು ಮತ್ತು ತನ್ನ ಮನೆಯನ್ನು ಹರ್ಷದಿಂದ ಸಿಂಗರಿಸುವಾಕೆ 'ವಾಸಕಸಜ್ಜಾ'. ಉದಾ:- [ಮಾಘ. : ೯-೫೨] :

'ನಿಜಪಾಣಿಪಲ್ಲವತಟಸ್ಖಲನಾದಭಿನಾಸಿಕಾವಿವರಮುತ್ಪತಿತೈಃ ।

ಅಪರಾ ಪರೀಕ್ಷ್ಯ ಶನಕೈರ್ಮುಮುದೇ ಮುಖವಾಸಮಾಸ್ಯಕಮಲಶ್ವಸನೈಃ ॥'

[ಚಿಗುರಿನಂತಿರುವ ತನ್ನ ಕರತಲದ ಮೂಲಕ ಹಾಮು ಬಂದ ಮುಖಕಮಲ ನಿಶ್ವಾಸದ ಸುವಾಸನೆಯನ್ನು ಮೂಗಿನ ಹೊಳ್ಳೆಗಳಿಂದ ಮೆಲ್ಲಮೆಲ್ಲನೆ ಪರೀಕ್ಷಿಸುತ್ತ ಅವಳು ನೆಮ್ಮದಿಯಾಗಿದ್ದಾಳೆ.]

ಟಿಪ್ಪಣಿ : ಇದಕ್ಕೆ 'ವಾಸಕಸಜ್ಜಿಕಾ', 'ವಾಸಕಸಜ್ಜಿತಾ' ಎಂಬ ಹೆಸರುಗಳೂ ಉಂಟು.

ಹೋಲಿಕೆ = ನಾ.ಶಾ. : ೨೪-೨೦೫; ಸಾ.ದ. : ೩-೮೫; ಪ್ರತಾಪ : ೧-೪೪.

ಪ್ರೇಮಿಸಬಲ್ಲ ಎಂಬುದು ಅವನ ವಾದ. ಒಬ್ಬನೇ ಹಲವರನ್ನು ನಿಜವಾಗಿ ಪ್ರೇಮಿಸಬಲ್ಲನೆಂದು ಆತ ೨-೧೧ರ ವ್ಯಾಖ್ಯೆಯಲ್ಲಿ ಉದಾಹರಣಪೂರ್ವಕ ಹೇಳಿದ್ದಾನೆ

ಹೋಲಿಕೆ = ಸಾ.ದ. : ೩-೬೪.

# ಅನ್ಯಾಭೇದಗಳು

## ೩೨. ಅನ್ಯಸ್ತ್ರೀಯ ಎರಡು ಭೇದ :

**ಅನ್ಯಸ್ತ್ರೀ ಕನ್ಯಕೋಢಾ ಚ ನಾನ್ಯೋಢಾಂಽಗಿರಸೇ ಕ್ವಚಿತ್ ॥ ೨೦ ॥**
**ಕನ್ಯಾನುರಾಗಮಿಚ್ಛಾತಃ ಕುರ್ಯಾದಂಗಾಂಗಿಸಂಶ್ರಯಮ್ ।**

ಅನು : ಅನ್ಯಸ್ತ್ರೀಯು - ಕನ್ಯೆ ಅಥವಾ ಊಢೆ [ಎಂದರೆ, ಅವಿವಾಹಿತಳು ಇಲ್ಲವೆ ವಿವಾಹಿತಳು ಆಗಿರುತ್ತಾಳೆ]. ವಿವಾಹಿತಳಾದ ಅನ್ಯಸ್ತ್ರೀಯಳ [ಪ್ರೇಮವ]ನ್ನು ಅಂಗಿರಸದಲ್ಲಿ [ಎಂದರೆ, ಪ್ರಧಾನವಾದ ರಸದಲ್ಲಿ] ಒಮ್ಮೆಯೂ ತರಕೂಡದು. ಕನ್ಯೆಯ ಪ್ರೇಮವನ್ನು ಅಂಗ ಅಂಗಿರಸಗಳಲ್ಲಿ [ಎಂದರೆ, ಪ್ರಧಾನ ಹಾಗೂ ಸಹಾಯಕ ರಸಗಳೆರಡರಲ್ಲೂ] ಇಚ್ಛೆಬಂದಂತೆ [ತರಬಹುದು].

ವ್ಯಾಖ್ಯೆ : ಮದುವೆಯಾಗಿದ್ದೂ ಪತಿಯಲ್ಲದೆ ಬೇರೊಬ್ಬನಲ್ಲಿ ಪ್ರೇಮಸಂಬಂಧ ಹೊಂದಿದವಳ ಉದಾ:- [ವಿಜ್ಜುಕಾ ಎಂಬಾಕೆಯದು] :

'ದೃಷ್ಟಿಂ ಹೇ ಪ್ರತಿವೇಶಿನಿ ಕ್ಷಣಮಿಹಾಪ್ಯಸ್ಮಿನ್ಗೃಹೇ ದಾಸ್ಯಸಿ
ಪ್ರಾಯೇಣಾಸ್ಯ ಶಿಶೋಃ ಪಿತಾ ನ ವಿರಸಾಃ ಕೌಪೀರಪಃ ಪಾಸ್ಯತಿ ।
ಏಕಾಕಿನ್ಯಪಿ ಯಾಮಿ ತದ್ವರಮಿತಃ ಸ್ರೋತಸ್ತಮಾಲಾಕುಲಂ
ನೀರಂಧ್ರಾಸ್ತನುಮಾಲಿಖಂತು ಜರಠಚ್ಛೇದಾನಲಗ್ರಂಥಯಃ ॥'

[(ತನ್ನ ಪತಿಯಲ್ಲದೆ ಬೇರೊಬ್ಬನನ್ನು ಒಲಿದು ಅವನಲ್ಲಿ ಹೋಗುವಾಗ ಹೇಳುವ ಮಾತು ಇದು. ನೀರು ತರುವ ನೆಪ ಹೇಳಿ, ಮುಂದೆ ಬರಬಹುದಾದ ಸಂಶಯಗಳನ್ನು ಮೊದಲೇ ಚಾತುರ್ಯದಿಂದ ನಿವಾರಿಸುತ್ತಾಳೆ ಈ ಕುಶಲೆ.) ಎಲೈ ನೆರೆಮನೆಯವಳೆ, ಸ್ವಲ್ಪಕಾಲ ನಮ್ಮ ಮನೆಯ ಕಡೆಗೂ ದೃಷ್ಟಿ ಇಟ್ಟಿರು. ಪ್ರಾಯಃ, ಈ ಮಗುವಿನ ತಂದೆ ಇಲ್ಲಿನ ಬಾವಿಯ ಉಪ್ಪುನೀರನ್ನು ಕುಡಿಯುವುದಿಲ್ಲ. ತಮಾಲವೃಕ್ಷಗಳ ಅಡಿಯಲ್ಲಿ ಹರಿಯುವ ಝರಿಯ ನೀರು ಉತ್ತಮವಾಗಿದೆ. ಒಬ್ಬಳೇ ಆದರೂ ಅಲ್ಲಿಗೆ ಹೋಗುತ್ತೇನೆ. ಅಲ್ಲಿ ದಟ್ಟವಾಗಿ ಬೆಳೆದಿರುವ ಮುಳ್ಳುಕಂಟಿಗಳು ಮೈಯ್ಯನ್ನು ಪರಚಿದರೂ ಪರಚಲಿ.]

ಮೇಲ್ಕಂಡ ಬಗೆಯವಳನ್ನು ಎಂದರೆ, ವಿವಾಹಿತಳಾಗಿಯೂ ಬೇರೊಬ್ಬನಲ್ಲಿ ಅನುರಾಗವಿಡುವವಳನ್ನು, ಕ್ವಚಿತ್ತಾಗಿ ಕೂಡ ಪ್ರಧಾನರಸದಲ್ಲಿ ತರಬಾರದು. ಎಂದರೆ, ಪ್ರಧಾನ ಕಥೆಯಲ್ಲಿ ಆಕೆಯ ವಿಷಯವನ್ನು ಬಿತ್ತರಿಸಬಾರದು. ಕನ್ಯೆಯು ಮದುವೆಯಾಗಿಲ್ಲದಿದ್ದರೂ, ತಂದೆತಾಯಿಗಳ ವಶದಲ್ಲಿರುವ ಕಾರಣ 'ಅನ್ಯ'ಳೆನ್ನಿಸಿಕೊಳ್ಳುತ್ತಾಳೆ. ತಂದೆತಾಯಿಗಳಿಂದ ಆಕೆ ಕೊಡಲ್ಪಟ್ಟವಳಾಗಿರದಿದ್ದರೂ, ಅವಳು ನಾಯಕನಿಗೆ ಸುಲಭಳೇ ಆಗಿರುತ್ತಾಳೆ. ಆಕೆ ಸುಲಭವಾಗಿದ್ದರೂ, ಅವಳ ತಂದೆತಾಯಿಗಳ ಅಥವಾ ಬೇರೆ ಆತಂಕಗಳಿಂದ, ಇಲ್ಲವೆ ತನ್ನ ಜ್ಯೇಷ್ಠಾನಾಯಿಕೆಯ ಭಯದಿಂದ ನಾಯಕನು ಅವಳೊಡನೆ ರಹಸ್ಯವಾಗಿಯೇ ವ್ಯವಹರಿಸುತ್ತಾನೆ. ಉದಾ:- [ಮಾಮಾ.] : ಮಾಧವನುಮಾಲತಿಯಲ್ಲಿ ಮತ್ತು [ರತ್ನಾ.] : ವತ್ಸರಾಜನು ಸಾಗರಿಕೆಯಲ್ಲಿ ಮಾಡುವ ಪ್ರೇಮವ್ಯವಹಾರ. ಇಂತಹ, ಕನ್ಯೆಯ ಅನುರಾಗವನ್ನು ಇಚ್ಛೆಬಂದಂತೆ ಪ್ರಧಾನ ಅಪ್ರಧಾನ ರಸಗಳ

---

೧ ಪಾಠ : ಅನ್ವಿಚ್ಛನ್.

ಸಂಬಂಧವಲ್ಲಿ ಬಳಸಬಹುದಾಗಿದೆ. ಪ್ರಧಾನರಸದಲ್ಲಿ ಕನ್ಯಾನುರಾಗಕ್ಕೆ ಉದಾ:- [ರತ್ನಾ] : ವತ್ಸರಾಜ ಸಾಗರಿಕೆಯರ ಪ್ರೇಮವ್ಯವಹಾರ. ಅಪ್ರಧಾನರಸದಲ್ಲಿ ಕನ್ಯಾನುರಾಗಕ್ಕೆ ಉದಾ:- [ನಾಗಾ.] : ಜೀಮೂತ ವಾಹನನು ಮಲಯವತಿಯನ್ನು ಪ್ರೇಮಿಸುವುದು.

ಟಿಪ್ಪಣಿ : ಅಂಗಗಳನ್ನುಳ್ಳದ್ದು, ಎಂದರೆ ಪ್ರಧಾನವಾದದ್ದು 'ಅಂಗಿ'. ಆ 'ಅಂಗಿ'ಯ ಭಾಗ ಮಾತ್ರವಾದದ್ದು 'ಅಂಗ'. ಒಂದು ರೂಪಕದ ಪ್ರಧಾನ ರಸವು ಅಲ್ಲಿನ ಪ್ರಧಾನ ಘಟನೆ ಮತ್ತು ಪ್ರಧಾನನಾಯಕನನ್ನು ಅನುಸರಿಸಿರುತ್ತವೆ. ಆದ್ದರಿಂದ, ರೂಪಕದಲ್ಲಿ ಒಬ್ಬಳು ವಿವಾಹಿತಳಾಗಿಯೂ ಬೇರೊಬ್ಬನನ್ನು ಪ್ರೇಮಿಸುವ ಘಟನೆ ಬರಬಾರದು ಅಥವಾ ರೂಪಕದ ಪ್ರಧಾನ ನಾಯಕನು ವಿವಾಹಿತಳಾದ ಅನ್ಯಾನಾಯಿಕೆಯನ್ನು ಹೊಂದಿರಬಾರದು. – ಎಂಬುದು ತಾತ್ಪರ್ಯ. ಇದಕ್ಕೆ ಸಮಾಜದ ನೀತಿವೃತ್ತಿಯೇ ಕಾರಣ ಎಂಬುದು ಸ್ಪಷ್ಟ

ರತ್ನಾವಲಿಯಲ್ಲಿ ಪ್ರಧಾನ (ಅಂಗ)ರಸ : ಶೃಂಗಾರ; ನಾಗಾನಂದದಲ್ಲಿ ಪ್ರಧಾನರಸ 'ವೀರ'. (ಹಲವರು ನಾಗಾ.ಲ್ಲಿ ಶಾಂತವೇ ಪ್ರಧಾನರಸ ಎನ್ನುತ್ತಾರೆ. ಈ ಗ್ರಂಥದ ಕರ್ತೃ ಹಾಗೂ ವ್ಯಾಖ್ಯಾಕಾರರಿಬ್ಬರೂ ನಾಟ್ಯದಲ್ಲಿ ಶಾಂತರಸ ಇಲ್ಲವೆನ್ನುತ್ತಾರೆ.)

'ಅನ್ಯಾ' ನಾಯಿಕೆಗೆ 'ಪರಕೀಯಾ', 'ಅನ್ಯದೀಯಾ' ಎಂದೂ ಹೇಳುತ್ತಾರೆ.

ಪ್ರಧಾನ ಹಾಗೂ ಅಂಗಭೂತರಸಗಳ ವಿವರಗಳಿಗೆ ೩-೩೮, ೪-೧, ೫೨ ನೋಡಿ.

ಹೋಲಿಕೆ = ಸಾ.ದ. : ೩-೬೭

# ಸಾಧಾರಣಾನಾಯಿಕೆ

## ೩೩. ಸಾಧಾರಣಳಲಕ್ಷಣ :

**ಸಾಧಾರಣಸ್ತ್ರೀ ಗಣಿಕಾ ಕಲಾಪ್ರಾಗಲ್ಭ್ಯಧೌರ್ತ್ಯಯುಕ್ ॥ ೨೧ ॥**

ಅನು : ಕಲೆಗಳಲ್ಲಿ ಚಾತುರ್ಯವಿರುವ ಧೂರ್ತತೆಯಿಂದ ಕೂಡಿದ ಗಣಿಕೆಯು 'ಸಾಧಾರಣಸ್ತ್ರೀ' [ಎನ್ನಿಸಿಕೊಳ್ಳುತ್ತಾಳೆ].

ವ್ಯಾಖ್ಯ : ವೇಶ್ಯಾವ್ಯವಹಾರಗಳನ್ನು ಬೇರೆ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಿದೆ. ಇಲ್ಲಿ (ಮುಂದಿನ ಖಂಡದಲ್ಲಿ) ಆ ವ್ಯವಹಾರಗಳ ದಿಗ್ದರ್ಶನವನ್ನು ಮಾತ್ರ ಮಾಡಿಕೊಟ್ಟಿದೆ.

ಟಿಪ್ಪಣಿ : ನಾಯಿಕೆಯರಲ್ಲಿನ ಮುಖ್ಯಪ್ರಕಾರಗಳು : ಸ್ವೀಯಾ, ಅನ್ಯಾ, ಸಾಧಾರಣಾ. ಇವುಗಳಲ್ಲಿ ಮೊದಲೆರಡನ್ನು ಈತನಕ ಲಕ್ಷಿಸಿಯಾಯಿತು. ಈಗ ಸಾಧಾರಣನಾಯಿಕೆಯನ್ನು ಕುರಿತು ಹೇಳಲಾಗುತ್ತದೆ. ಹೋಲಿಕೆಗೆ ಮುಂದಿನ ಖಂಡದ ಟಿಪ್ಪಣಿ ನೋಡಿ.

## ೩೪. ಸಾಧಾರಣಾವ್ಯವಹಾರ :

**ಛನ್ನಕಾಮಸುಖಾರ್ಥಾಜ್ಞಸ್ವತಂತ್ರಾಹಂಯುಪಂಡಕಾನ್ ।**
**ರಕ್ತೇವ ರಂಜಯೇದಾಢ್ಯಾನ್ನಿಃಸ್ವಾನ್ಮಾತ್ರಾ ವಿವಾಸಯೇತ್ ॥ ೨೨ ॥**

ಅನು : [ಗಣಿಕೆಯು] ರಹಸ್ಯಕಾಮಿಗಳನ್ನು, ಸುಲಭವಾಗಿ ಹಣ ಪಡೆಯುವವರನ್ನು, ತಿಳಿಯದವರನ್ನು, ಸ್ವತಂತ್ರರನ್ನು, ಅಹಂಕಾರಿಗಳನ್ನು, ನಪುಂಸಕರನ್ನು – [ಐಶ್ವರ್ಯದಲ್ಲಿ] ಗಟ್ಟಿಯಾಗಿರುವವರೆಗೆ, [ತಾನು ಅವರಲ್ಲಿ ಪೂರ್ಣ] ಅನುರಕ್ತಳಾಗಿ ಬಿಟ್ಟಿರುವಳೊ ಎಂಬಂತೆ ರಂಜಿಸಿ [ಆಮೇಲೆ ಅವರು] ಸ್ವಧನಹೀನರಾದಾಗ ತಾಯಿಯ ಮೂಲಕ ಮನೆಯಿಂದ ಹೊರಡಿಸುತ್ತಾಳೆ.

ವ್ಯಾಖ್ಯೆ : ಉದಾ– [ಅಮರು. : ಶ್ಲೋ. ೭೬] :

'ಆದೃಷ್ಟಿಪ್ರಸರಾತ್ಪ್ರಿಯಸ್ಯ ಪದವೀಮುದ್ವೀಕ್ಷ್ಯ ನಿರ್ವಿಣ್ಣಯಾ।
ವಿಶ್ರಾಂತೇಷು ಪಥಿಷ್ವಹಃಪರಿಣತೌ ಧ್ವಾಂತೇ ಸಮುತ್ಸರ್ಪತಿ।
ದತ್ತ್ವೈಕಂ ಸಶುಚಾ ಗೃಹಂ ಪ್ರತಿ ಪದಂ ಪಾಂಥಸ್ತ್ರಿಯಾಸ್ಮಿನ್ ಕ್ಷಣೇ
ಮಾ ಭೂದಾಗತ ಇತ್ಯಮಂದವಲಿತಗ್ರೀವಂ ಪುನರ್ವೀಕ್ಷಿತಮ್ ॥'

[ಮನೆಬಿಟ್ಟು ಹೋಗಿರುವನೊಬ್ಬನ ಪತ್ನಿಯು, ಪ್ರಿಯನು ಬರುವ ಹಾದಿಯಲ್ಲಿ ದೃಷ್ಟಿಹರಿಯುವತನಕ ನೋಡಿ ನೋಡಿ ಖೇದಗೊಂಡಳು; ದಿನ ಮುಗಿದು ಕತ್ತಲು ಹಬ್ಬಿ ಜನಸಂಚಾರ ನಿಂತು ಮಾರ್ಗ ಬರಿದಾಗಲು ಮನೆಯ ಕಡೆಗೊಂದು ಹೆಜ್ಜೆಯಿಡುತ್ತ, ಮತ್ತೆ, ಆ ಕ್ಷಣದಲ್ಲಿ ತನ್ನ ಪತಿ ಬರುತ್ತಿರಬಾರದೇಕೆ – ಎಂದು ಯೋಚಿಸಿ ಪುನಃ ಮಾರ್ಗದತ್ತ ತತ್‌ಕ್ಷಣ ಕತ್ತು ತಿರುಗಿಸಿ ನೋಡುವಳು.]

ಟಿಪ್ಪಣಿ : ನಾಮಾಂತರಗಳು : ಪ್ರೋಷಿತಭರ್ತೃಕಾ, ಪ್ರೋಷಿತಪ್ರೇಯಸೀ, ಪ್ರೋಷಿತನಾಥಾ.

ರಸಮಂಜರೀ ರಸರತ್ನಹಾರ ಭಾವಾಭೂಷಣಗಳಲ್ಲಿ 'ಪ್ರೋಷ್ಯತ್ಪತಿಕಾ' ಅಥವಾ 'ಪ್ರವತ್ಸ್ಯತ್ಪತಿಕಾ' ಎಂಬ ಮತ್ತೊಂದು ಅವಸ್ಥೆ ಹೇಳಿದೆ : ಯಾವಳ ಪ್ರಿಯನು ಪ್ರಯಾಣಸನ್ನದ್ಧನಾಗಿರುವನೋ ಅವಳು 'ಪ್ರೋಷ್ಯತ್ಪತಿಕಾ'.

ಹೋಲಿಕೆ = ನಾ.ಶಾ. : ೨೪–೨೧೧; ಸಾ.ದ. : ೩–೮೪; ಪ್ರತಾಪ : ೧–೫೩.

## ೪೪. ಅಭಿಸಾರಿಕಾಲಕ್ಷಣ :

**ಕಾಮಾರ್ತಾಽಭಿಸರೇತ್ ಕಾಂತಂ ಸಾರಯೇದ್ವಾಽಭಿಸಾರಿಕಾ ॥ ೨೭ ॥**

ಅನು : ಕಾಮದಿಂದ ಪೀಡಿತಳಾಗಿ, ಪ್ರಿಯನನ್ನು ಅರಸಿಹೋಗುವವಳು ಅಥವಾ [ಪ್ರಿಯನು ತನ್ನನ್ನು] ಅರಸಿ ಬರುವಂತೆ ಮಾಡುವವಳು 'ಅಭಿಸಾರಿಕಾ'.

ವ್ಯಾಖ್ಯೆ : ಉದಾ– [ಅಮರು. : ಶ್ಲೋ. ೩೧]

'ಉರಸಿ ನಿಹಿತಸ್ತಾರೋ ಹಾರಃ ಕೃತಾ ಜಘನೇ ಘನೇ
ಕಲಕಲವತೀ ಕಾಂಚೀ ಪಾದೌ ರಣನ್ಮಣಿನೂಪುರೌ।
ಪ್ರಿಯಮಭಿಸರಸ್ಯೇವಂ ಮುಗ್ಧೇ ತ್ವಮಾಹತಡಿಂಡಿಮಾ
ಯದಿ ಕಿಮಧಿಕತ್ರಾಸೋತ್ಕಂಪಂ ದಿಶಃ ಸಮುದೀಕ್ಷಸೇ ॥'

[ಮಧುರವಾಗಿ ಶಬ್ದಮಾಡುವ ಹಾರವನ್ನು ಎದೆಯಲ್ಲಿ ಧರಿಸಿ, ಘನಜಘನದಲ್ಲಿ ಕಲಗುಡುವ ಕಾಂಚೀ ದಾಮವನ್ನು ತೊಟ್ಟು, ಕಾಲುಗಳಲ್ಲಿ ಝುಣಗುಡುವ ಮಣಿನೂಪುರಗಳನ್ನಿಟ್ಟುಕೊಂಡು ಅವೆಲ್ಲ ಡಂಗುರ ಹೊಡೆಯುತ್ತಿರಲು ಪ್ರಿಯನನ್ನು ಅರಸಹೊರಟಿರುವೆ; ಎಲೈ ಮುಗ್ಧೆ, ಹೀಗಿದ್ದರೂ ತುಂಬ ಕಾತರದಿಂದ ನಡುಗುತ್ತ ದಿಕ್ಕುದಿಕ್ಕುಗಳನ್ನೂ ನೋಡುತ್ತಿರುವೆಯೇಕೆ?]

ಮತ್ತು–[ಮಾಘ. : ೯–೫೬] :

'ನ ಚ ಮೇಽವಗಚ್ಛತಿ ಯಥಾ ಲಘುತಾಂ ಕರುಣಾಂ ಯಥಾ ಚ ಕುರುತೇ ಸ ಮಯಿ।
ನಿಪುಣಂ ತಥೈನಮುಪಗಮ್ಯ ವದೇರಭಿದೂತಿ ಕಾಚಿದಿತಿ ಸಂದಿದಿಶೇ ॥'

['ಎಲೈ ಸಖಿ, ನಾನು ಅಲ್ಪಳೆಂಬ ಭಾವನೆ ಆತನಿಗೆ ಬರದಂತೆ ಮತ್ತು ನನ್ನಲ್ಲಿ ಅವನಿಗೆ ಕರುಣೆ ಮೂಡುವಂತೆ ಚಾತುರ್ಯದಿಂದ ನೀನು ಆತನ ಬಳಿ ಹೋಗಿ ಮಾತನಾಡಬೇಕು' – ಹೀಗೆ ಒಬ್ಬಳು ನಾಯಿಕೆ ತನ್ನ ದೂತಿಗೆ ಸಂದೇಶ ಕೊಟ್ಟಳು.]

[ಸೂಚನೆ : ನಾಯಕಸಂಬಂಧಿಯಾದ ನಾಯಿಕೆಯರ ಎಂಟು ಅವಸ್ಥೆಗಳನ್ನು ಮೇಲೆ ಲಕ್ಷಿಸಿಯಾಯಿತು. ಹಿಂದೆ, ೨–೩೬ರ ಟಿಪ್ಪಣಿಯಲ್ಲಿ ಸೂಚಿತವಾದಂತೆ, ಈ ಎಂಟು ಅವಸ್ಥೆಗಳಲ್ಲಿ ಹೆಚ್ಚು

ಕಡಿಮೆಯಾಗುವಂತಿಲ್ಲವೆಂದು ಧನಿಕ ವಾದಿಸಿದ್ದಾನೆ. ಆ ಖಂಡದ ಧನಿಕನ ವ್ಯಾಖ್ಯೆಯ ಭಾಗವನ್ನು ಅರ್ಥಸೌಲಭ್ಯಕ್ಕಾಗಿ ಇಲ್ಲಿ ಕೊಡಲಾಗಿದೆ :]

ನಾಯಕಸಂಬಂಧಿಯಾದ ನಾಯಿಕೆಯರ ಅವಸ್ಥೆಗಳು ಎಂಟು ಮಾತ್ರ, ಇವರಲ್ಲಿ ಹೆಚ್ಚು ಕಡಿಮೆ ಇಲ್ಲ. ಈ ಎಂಟರಲ್ಲಿ ಯಾವುದೊಂದೂ ಇನ್ನೊಂದರೊಳಗೆ ಅಂತರ್ಭಾವವಾಗುವುದಿಲ್ಲ. 'ಸ್ವಾಧೀನಪತಿಕಾ' ಎಂಬ ಅವಸ್ಥೆಯು 'ವಾಸಕಸಜ್ಜಾ'ದಿ ಅವಸ್ಥೆಗಳಲ್ಲಿ ಅಂತರ್ಗತವಾಗದು. ಏಕೆಂದರೆ, 'ಸ್ವಾಧೀನಪತಿಕಾ' ಪ್ರಿಯನನ್ನು ಬಳಿಯಲ್ಲೆ ಉಳ್ಳವಳು; ಆದರೆ, 'ವಾಸಕಸಜ್ಜಾ'ಳಲ್ಲಿ ಪ್ರಿಯನು ಸಮೀಪಸ್ಥನಾಗಿರುವುದಿಲ್ಲ; ಬದಲು, ಆಕೆ ಪ್ರಿಯನ ಪ್ರತೀಕ್ಷೆಯಲ್ಲಿರುತ್ತಾಳೆ. ಪ್ರಿಯನು ಬರುತ್ತಿದ್ದಾನೆ ಎನ್ನುವ ಸ್ಥಿತಿಯಲ್ಲಿರುವ 'ವಾಸಕಸಜ್ಜಾ'ಳನ್ನು 'ಸ್ವಾಧೀನಪತಿಕಾ' ವರ್ಗದಲ್ಲೆ ಸೇರಿಸುವುದೆಂದಾದರೆ, 'ಪ್ರೋಷಿತಪ್ರಿಯಾ'ಳನ್ನೂ 'ಸ್ವಾಧೀನಪತಿಕಾ' ವರ್ಗದಲ್ಲೆ ಕೂಡಿಸ ಬಹುದಲ್ಲವೆ? ಇನ್ನು – 'ವಾಸಕಸಜ್ಜಾ'ಳಿಗೂ ಆಕೆಯ ಪ್ರಿಯನಿಗೂ ನಡುವೆ ಇರುವ ಕಾಲದೇಶಗಳ ಅಂತರ ಕಡಿಮೆ. 'ಪ್ರೋಷಿತಪ್ರಿಯಾ'ಳಿಗೂ ಆಕೆಯ ಪ್ರಿಯನಿಗೂ ನಡುವೆ ಇರುವ ಅಂತರ ಹೆಚ್ಚು ಎಂದು ಹೇಳಬಹುದು. ಆದರೆ ಈ ಅಂತರವನ್ನು ಹೇಗೆ ನಿಶ್ಚಿತವಾಗಿ ನಿರ್ಧರಿಸಲು ಸಾಧ್ಯ? ಯಾವುದೋ ಒಂದು ಕಾಲದೇಶಮಾನ ವನ್ನಿಟ್ಟುಕೊಂಡು ಇಷ್ಟು ಹತ್ತಿರ ಇದ್ದರೆ ಸ್ವಾಧೀನಪತಿಕಾಳೂ, ವಾಸಕಸಜ್ಜಾಳೂ ಆಗುತ್ತಾಳೆ ಅದಕ್ಕಿಂತ ದೂರ ಇದ್ದರೆ 'ಪ್ರೋಷಿತಪ್ರಿಯಾ' ಆಗುತ್ತಾಳೆ ಎಂದು ನಿಯಂತ್ರಿಸಲು ಸಾಧ್ಯವೆ? ಇಲ್ಲ. ಆದಕಾರಣ, 'ವಾಸಕಸಜ್ಜಾ'ಳ ಕೂಡ 'ಪ್ರೋಷಿತಪ್ರಿಯಾ'ಳನ್ನು ಕೂಡಿಸುವಂತಿಲ್ಲ. ಹಾಗೆಯೇ 'ವಾಸಕಸಜ್ಜಾ'ಳನ್ನು 'ಸ್ವಾಧೀನಪತಿಕಾ'ದಲ್ಲಿ ಸೇರಿಸಲಾಗುವುದಿಲ್ಲ. ಅಂತೆಯೇ ಇವೆಲ್ಲ ಬೇರೆಬೇರೆಯಾಗಿಯೇ ಇರತಕ್ಕದ್ದು. ಪ್ರಿಯನ ದೋಷಗಳನ್ನು ತಿಳಿಯದಿರುವವಳಿಗೆ (ಯಾವಳ ಪ್ರಿಯನಲ್ಲಿ ದೋಷವಿಲ್ಲವೋ ಅವಳಿಗೆ) 'ಖಂಡಿತಾ'ತ್ವ ಬರುವುದಿಲ್ಲ. ನಾಯಕನೊಡನೆ ರತಿಭೋಗವನ್ನು ಹೊಂದುತ್ತಿರುವವಳು ಅಥವಾ ರತಿಭೋಗದ ಇಚ್ಛೆಯುಳ್ಳವಳು 'ಪ್ರೋಷಿತ ಪ್ರಿಯಾ' ಆಗಲಾರಳು. ಅಂತೆಯೇ ತಾನಾಗಿ ನಾಯಕನ ಬಳಿ ಹೋಗಲಾರದವಳು ಹಾಗೂ ನಾಯಕನಿಂದ ಪ್ರಯೋಜನ ಪಡೆಯಲಾರದವಳು 'ಅಭಿಸಾರಿಕಾ' ಎನ್ನಿಸಿಕೊಳ್ಳಲಾರಳು. ಹೀಗೆಯೇ, 'ಉತ್ಕಂಠಿತಾ' ಅವಸ್ಥೆಯೂ ಉಳಿದವುಗಳಿಂದ ಬೇರೆಯಾದದ್ದಾಗಿದೆ. ಯಾವಳ ಪ್ರಿಯನು ಬರಬೇಕಾಗಿದ್ದ ಸಮಯದಲ್ಲಿ ಬಂದಿಲ್ಲವೋ ಅವಳು 'ಉತ್ಕಂಠಿತಾ'. ಆದ್ದರಿಂದ ಈ ಅವಸ್ಥೆ ವಾಸಕಸಜ್ಜಾದಿ ಇತರ ಅವಸ್ಥೆಗಳಿಂದ ಭಿನ್ನವಾಗಿದೆ. ಯಾವ ಪ್ರಿಯನು ತಾನು ಹೇಳಿರುವ ಸಮಯದಲ್ಲಿ ಬಾರದೆಹೋಗುವನೊ ಅಂತಹವನನ್ನುಳ್ಳವಳು 'ವಿಪ್ರಲಬ್ಧಾ'; ಹೀಗೆ 'ವಿಪ್ರಲಬ್ಧಾ' ಅವಸ್ಥೆಯಲ್ಲಿ ಪ್ರತಾರಣದ (ವಂಚನೆಯ) ಆಧಿಕ್ಯವಿದೆ. ಆ ಕಾರಣ 'ವಿಪ್ರಲಬ್ಧಾ' 'ವಾಸಕಸಜ್ಜಾದಿ'ಗಳಿಂದ ಬೇರೆಯಾದ ಅವಸ್ಥೆ 'ಕಲಹಾಂತರಿತಾ'ಳು 'ಖಂಡಿತಾ'ಳಂತೆಯೇ ಪ್ರಿಯನ ಅಪರಾಧಗಳನ್ನು ಅರಿತವಳಾಗಿದ್ದರೂ ಆಕೆಯಿಂದ ಬೇರೆಯಾಗಿದ್ದಾಳೆ. ಕಾರಣ – 'ಕಲಹಾಂತರಿತಾ'ಳು ಪ್ರಿಯನ ಅನುನಯಗಳನ್ನು ಸ್ವೀಕರಿಸದೆ ತಿರಸ್ಕರಿಸುತ್ತಾಳೆ, ಮತ್ತು ಆತ ಹೊರಟು ಹೋದಮೇಲೆ ತನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪಪಡುತ್ತಾಳೆ. 'ಖಂಡಿತಾ' ಕೇವಲ ಈರ್ಷೆಯಿಂದ ಕಲುಷಿತಮನಸ್ಕಳಾಗಿರುತ್ತಾಳೆ.

– ಹೀಗೆ ನಾಯಿಕೆಯರ ಅವಸ್ಥೆಗಳು ಕೇವಲ ಎಂಟು ಮಾತ್ರ, ಇವರಲ್ಲಿ ಹೆಚ್ಚುಕಡಿಮೆ ಇಲ್ಲ.

ಟಿಪ್ಪಣಿ : ೨–೩೬ರ ಟಿಪ್ಪಣಿ ನೋಡಿ.

ಹೋಲಿಕೆ = ನಾ.ಶಾ. : ೨೪–೨೧೨; ಸಾ.ದ. : ೩–೭೬; ಪ್ರತಾಪ : ೧–೫೪.

## ೪೫. ಅಷ್ಟಾವಸ್ಥೆಗಳ ಸ್ಥಿತಿ :

**ಚಿಂತಾನಿಃಶ್ವಾಸಖೇದಾಶ್ರುವೈವರ್ಣ್ಯಗ್ಲಾನ್ಯಭೂಷಣೈಃ ।**
**ಯುಕ್ತಾಃ ಷಡಂತ್ಯಾ ದ್ವೇ ಚಾದ್ಯೇ ಕ್ರೀಡೌಜ್ಜ್ವಲ್ಯಪ್ರಹರ್ಷಿತೈಃ ॥ ೨೮ ॥**

ಅನು : ಕೊನೆಯ ಆರು [ಎಂದರೆ, ವಿರಹೋತ್ಕಂಠಿತಾ ಖಂಡಿತಾ ಕಲಹಾಂತರಿತಾ ವಿಪ್ರಲಬ್ಧಾ ಪ್ರೋಷಿತಪ್ರಿಯಾ ಅಭಿಸಾರಿಕಾ – ಈ ಅವಸ್ಥೆಯ ನಾಯಿಕೆಯರು] ಚಿಂತೆ, ನಿಃಶ್ವಾಸ, ವ್ಯಸನ, ಕಣ್ಣೀರು, ಬಣ್ಣ ಬಿಳಿಚಿಕೊಳ್ಳುವುದು, ಆಯಾಸ, ಅಲಂಕಾರವಿಹೀನತೆ –

## ೩೯. ವಿರಹೋತ್ಕಂಠಿತಾಲಕ್ಷಣ :

**ಚಿರಯತ್ಯವ್ಯಲೀಕೇ ತು ೧ವಿರಹೋತ್ಕಂಠಿತೋನ್ಮನಾಃ೧ ।**

ಅನು : [ಪತಿಯು] ನಿರ್ದೋಷಿಯಾಗಿದ್ದರೂ [ತನ್ನ ಬಳಿ ಬರಲು] ತಡ ಮಾಡಿದರೆ [ಸಂಶಯದಿಂದ] ಮನಕುದಿಯುವವಳು 'ವಿರಹೋತ್ಕಂಠಿತಾ'.

ವ್ಯಾಖ್ಯೆ : ಉದಾ– [ಅಕರ ತಿಳಿಯದು] :

'ಸಖಿ ಸ ವಿಜಿತೋ ವೀಣಾವಾದ್ಯೈಃ ಕಯಾಪ್ಯಪರಸ್ತ್ರಿಯಾ
ಪಣಿತಮಭವತ್ತಾಭ್ಯಾಂ ತತ್ರ ಕ್ಷಪಾಲಲಿತಂ ಧ್ರುವಮ್ ।
ಕಥಮಿತರಥಾ ಶೇಫಾಲೀಷು ಸ್ಖಲತ್ಕುಸುಮಾಸ್ವಪಿ
ಪ್ರಸರತಿ ನಭೋಮಧ್ಯೇಽಪೀಂದೌ ಪ್ರಿಯೇಣ ವಿಲಂಬ್ಯತೇ ॥'

[ಎಲೈ ಸಖಿ, ಯಾವುದೊ ಬೇರೊಬ್ಬ ಹೆಣ್ಣು ಅವನನ್ನು ವೀಣಾವಾದ್ಯದಿಂದ ಸೋಲಿಸಿಬಿಟ್ಟಿದ್ದಾಳೆ; ಇಬ್ಬರೂ ಅಲ್ಲಿಯೇ ಮಧುರವಾದ ರಾತ್ರಿಯನ್ನು ಕಳೆಯತಕ್ಕುದೆಂದು ಸ್ಥಿರವಾಗಿ ಪಣತೊಟ್ಟಿದ್ದಾರೆ – ಹಾಗಲ್ಲದಿದ್ದರೆ, ಶೇಫಾಲೀಕುಸುಮಗಳು ಉದುರಿದವು, ಚಂದ್ರನು ಆಗಸದ ನೆತ್ತಿಯನ್ನೇರಿದನು; ಆದರೂ ಕೂಡಾ ನನ್ನ ಪ್ರಿಯನು ಬರದೆ ತಡವಾಗುವುದಕ್ಕೆ ಏನು ಕಾರಣ?]

ಟಿಪ್ಪಣಿ : ನಾಮಾಂತರಗಳು : ಉತ್ಕಾ, ಉತ್ಕಂಠಿತಾ.

ಹೋಲಿಕೆ = ನಾ.ಶಾ. : ೨೪–೨೦೬; ಸಾ.ದ. : ೩–೮೬; ಪ್ರತಾಪ : ೧–೪೬.

## ೪೦. ಖಂಡಿತಾಲಕ್ಷಣ :

**ಜ್ಞಾತೇಽನ್ಯಾಸಂಗವಿಕೃತೇ ಖಂಡಿತೇರ್ಷ್ಯಾಕಷಾಯಿತಾ ॥ ೨೫ ॥**

ಅನು : [ತನ್ನ ಪ್ರಿಯನು] ಬೇರೊಬ್ಬಳ ಸಹವಾಸದಿಂದ [ಅಂಗ]ವಿಕಾರ ಹೊಂದಿರುವುದನ್ನು ತಿಳಿದು ಅಸೂಯೆಯಿಂದ ಕಲುಷಿತ[ಮನಸ್ಕ]ಳಾದವಳು 'ಖಂಡಿತಾ'.

ವ್ಯಾಖ್ಯೆ : ಉದಾ– [ಮಾಘ. : ೧೧–೩೪; ಇದು ೪–೬೭ರಲ್ಲೂ ಬಂದಿದೆ] :

'ನವನಖಪದಮಂಗಂ ಗೋಪಯಸ್ಯಂಶುಕೇನ ಸ್ಥಗಯತಿ ಪುನರೋಷ್ಠಂ ಪಾಣಿನಾ ದಂತದಷ್ಟಮ್ ।
ಪ್ರತಿದಿಶಮಪರಸ್ತ್ರೀಸಂಗಶಂಸೀ ವಿಸರ್ಪನ್ನವಪರಿಮಲಗಂಧಃ ಕೇನ ಶಕ್ಯೋ ವರೀತುಮ್ ॥'

[ನೂತನ ನಖಕ್ಷತವಿರುವ ಶರೀರಭಾಗವನ್ನು ಉತ್ತರೀಯದಿಂದ ಅಡಗಿಸಿಕೊಳ್ಳುತ್ತಿದ್ದೀಯೆ ಮತ್ತು ದಂತಕ್ಷತ ಹೊಂದಿದ ಮೇಲ್ತುಟಿಯನ್ನು ಕೈಯಿಂದ ಮುಚ್ಚಿಕೊಳ್ಳುತ್ತಿದ್ದೀಯೆ. ಆದರೆ, ಅನ್ಯಸ್ತ್ರೀಸಂಗವನ್ನು ಸೂಚಿಸಿ ದಿಕ್ಕುಗಳಲ್ಲಿ ಹರಡುತ್ತಿರುವ ಪರಿಮಲಗಂಧವನ್ನು ಯಾವುದರಿಂದ ಮುಚ್ಚಿಕೊಳ್ಳಲು ಸಾಧ್ಯ?]

ಟಿಪ್ಪಣಿ : ಅನ್ಯಳ ಸಂಗದಿಂದ ಉಂಟಾದ ಅಂಗವಿಕಾರಗಳು : ಕುಂಕುಮ ಕಾಡಿಗೆಗಳ ಗುರುತು, ನಖದಂತಕ್ಷತ ಚಿಹ್ನ ಇ., (ನೋಡಿ : ೨–೧೦ ಟಿಪ್ಪಣಿ). ಅಂಗವಿಕಾರಗಳು ಸ್ಪಷ್ಟವಾಗಿ ತೋರುತ್ತಿರುವ ನಾಯಕ 'ಧೃಷ್ಟ'. (ನೋಡಿ : ೨–೧೦).

ಹೋಲಿಕೆ = ನಾ.ಶಾ. : ೨೪–೨೦೯; ಸಾ.ದ. : ೩–೭೫; ಪ್ರತಾಪ : ೧–೪೯.

---

೧ ಪಾಠ : ವಿರಹೋತ್ಕಂಠಿತಾ ಮತಾ.

## ೪೧. ಕಲಹಾಂತರಿತಾಲಕ್ಷಣ :

**ಕಲಹಾಂತರಿತಾಮರ್ಷಾ೧ದ್ವಿಧೂತೇಽ೧ನುಶಯಾರ್ತಿಯುಕ್ ।**

ಅನು : [ಅಪರಾಧಿಯಾದ ಪ್ರಿಯನನ್ನು ಮೊದಲು] ಕ್ರೋಧದಿಂದ ತಿರಸ್ಕರಿಸಿ [ಅನಂತರ, ತನ್ನ ಕೃತ್ಯಕ್ಕಾಗಿ] ಪಶ್ಚಾತ್ತಾಪದಿಂದ ಖೇದಪಡುತ್ತಿರುವವಳು 'ಕಲಹಾಂತರಿತಾ'.

ವ್ಯಾಖ್ಯೆ : ಉದಾ:- [ಅಮರು. : ಶ್ಲೋ. ೯೨] :

'ನಿಃಶ್ವಾಸಾ ವದನಂ ದಹಂತಿ ಹೃದಯಂ ನಿರ್ಮೂಲಮುನ್ಮಥ್ಯತೇ
ನಿದ್ರಾ ನ್ಯೈತಿ ನ ದೃಶ್ಯತೇ ಪ್ರಿಯಮುಖಂ ನಕ್ತಂದಿವಂ ರುದ್ಯತೇ ।
ಅಂಗಂ ಶೋಷಮುಪೈತಿ ಪಾದಪತಿತಂ ಪ್ರೇಯಾಂಸ್ತಥೋಪೇಕ್ಷಿತಃ
ಸಖ್ಯಃ ಕಂ ಗುಣಮಾಕಲಯ್ಯ ದಯಿತೇ ಮಾನಂ ವಯಂ ಕಾರಿತಾಃ ॥'

[ಸಖಿಯರೆ, ನಿಟ್ಟುಸಿರು ಮೊಗವನ್ನು ಉರಿಸುತ್ತಿದೆ; ಕಾರಣವಿಲ್ಲದೆ ಎದೆ ಕುದಿಯುತ್ತಿದೆ; ನಿದ್ರೆಯಿಲ್ಲದೆ ಪ್ರಿಯನ ಮುಖ ಕಾಣದೆ ದಿವಾರಾತ್ರಿ ಅಳುತ್ತಿದ್ದೇನೆ; ದೇಹ ಕ್ಷೀಣಿಸುತ್ತಿದೆ. ಪ್ರಿಯನು ಕಾಲಿಗೆ ಬಿದ್ದಾಗ, ಆಗ ಉಪೇಕ್ಷೆ ಮಾಡಿದೆವಲ್ಲ, ಯಾವ ಒಳಿತಿನ ಸಲುವಾಗಿ ನಾವು ಪ್ರಿಯನಲ್ಲಿ ಕೋಪಗೊಂಡುದು?]

ಟಿಪ್ಪಣಿ : ನಾಮಾಂತರಗಳು : ಅಭಿಸಂಧಿತಾ, ಕುಪಿತಾ.

ಹೋಲಿಕೆ = ನಾ.ಶಾ. : ೨೪-೨೦೮; ಸಾ.ದ. : ೩-೮೨; ಪ್ರತಾಪ : ೧-೫೧.

## ೪೨. ವಿಪ್ರಲಬ್ಧಾಲಕ್ಷಣ :

**ವಿಪ್ರಲಬ್ಧೋಕ್ತಸಮಯಮಪ್ರಾಪ್ತೇಽತಿವಿಮಾನಿತಾ ॥ ೨೬ ॥**

ಅನು : [ಬರುವೆನೆಂದು] ಹೇಳಿದ ಸಮಯದಲ್ಲಿ [ಪ್ರಿಯನು] ಬರದಿರಲು [ಅದರಿಂದ] ತುಂಬ ಅವಮಾನಿತಳಾಗಿರುವವಳು 'ವಿಪ್ರಲಬ್ಧಾ'.

ವ್ಯಾಖ್ಯೆ : ಉದಾ:- [ಸುಭಾಷಿತಾವಲಿ] :

'ಉತ್ತಿಷ್ಠ ದೂತಿ ಯಾಮೋ ಯಾಮೋ ಯಾತಸ್ತಥಾಪಿ ನಾಯಾತಃ ।
ಯಾತಃ ಪರಮಪಿ ಜೀವೇಜ್ಜೀವಿತನಾಥೋ ಭವೇತ್ತಸ್ಯಾಃ ॥'

[ದೂತಿ, ಏಳು ಹೋಗೋಣ. ಯಾಮ ಕಳೆದರೂ ಆತ ಬರಲಿಲ್ಲ. ಯಾವಳು ಅವನಿಲ್ಲದೆ ಕೂಡ ಬದುಕಿರಬಲ್ಲಳೋ ಆಕೆಗೆ ಅವನು ಜೀವಿತನಾಥನಾಗುತ್ತಾನೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೨೧೦; ಸಾ.ದ. : ೩-೮೩; ಪ್ರತಾಪ : ೧-೪೬

## ೪೩. ಪ್ರೋಷಿತಪ್ರಿಯಾಲಕ್ಷಣ :

**ದೂರದೇಶಾಂತರಸ್ಥೇ ತು ಕಾರ್ಯತಃ ಪ್ರೋಷಿತಪ್ರಿಯಾ ।**

ಅನು : [ಪ್ರಿಯನು] ಕಾರ್ಯವಶದಿಂದ ದೂರ ದೇಶದಲ್ಲಿರುತ್ತಿರಲು [ಅಂತಹ ನಾಯಿಕೆ] 'ಪ್ರೋಷಿತಪ್ರಿಯಾ'.

---

೧ ಪಾಠ : ವಿಧುತೇ.

ಮಾಡಿದರೂ ನಾನು ಇಲ್ಲಿ ಯಾರನ್ನು ಸಂತೋಷಪಡಿಸಿ ಸಾಧಿಸಿಕೊಳ್ಳಲಿ? – ಎಲೈ ಸುಂದರ, ಹಳ್ಳಿ ದೂರವಾಗಿದೆ; ಇಲ್ಲಿ ನಾನು ಏಕಾಕಿನಿಯಾಗಿದ್ದೇನೆ.]

ಹೀಗೆಯೇ ಉಳಿದವನ್ನು ಊಹಿಸಿಕೊಳ್ಳತಕ್ಕದ್ದು.

ಟಿಪ್ಪಣಿ : ಲಕ್ಷಣಕಾರ್ಯಗಳಲ್ಲಿ, ಈ ದೂತಿಯರು ನಾಯಕಸಹಾಯಕರನ್ನೆ ಹೋಲುತ್ತಾರೆ. ನಾಯಕ ಸಹಾಯಕರಾದ ಪೀಠಮರ್ದ ಇ., ಲಕ್ಷಣಗಳಿಗೆ ೨–೧೨, ೧೩ ನೋಡಿ.

ಹೋಲಿಕೆ = ಸಾ.ದ. : ೩–೧೨೮, ೧೨೯; ಪ್ರತಾಪ : ೧–೫೫.

# ಸ್ತ್ರೀಯರ ಸತ್ತ್ವಜವಾದ ಅಲಂಕಾರಗಳು

## ೪೭. ಸತ್ತ್ವಜಾಲಂಕಾರಗಳು :

**ಯೌವನೇ ಸತ್ತ್ವಜಾಃ ಸ್ತ್ರೀಣಾಮಲಂಕಾರಾಸ್ತು ವಿಂಶತಿಃ ।**

ಅನು : ಸ್ತ್ರೀಯರಿಗೆ ತಾರುಣ್ಯದಲ್ಲಿ ಇಪ್ಪತ್ತು ಸತ್ತ್ವಜವಾದ ಅಲಂಕಾರಗಳು ಇರುವುವು.

ವ್ಯಾಖ್ಯೆ : ಸ್ತ್ರೀಯರಿಗೆ ಯೌವನದಲ್ಲಿ ಸತ್ತ್ವದಿಂದ ಹುಟ್ಟಿದ ಇಪ್ಪತ್ತು ಅಲಂಕಾರಗಳಿರುತ್ತವೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪–೪; ಸಾ.ದ. : ೩–೮೯.

## ೪೮. ಶರೀರಜ ಅಯತ್ನಗಳು :

**ಭಾವೋ ಹಾವಶ್ಚ ಹೇಲಾ ಚ ತ್ರಯಸ್ತತ್ರ ಶರೀರಜಾಃ ॥ ೩೦ ॥**

**ಶೋಭಾ ಕಾಂತಿಶ್ಚ ದೀಪ್ತಿಶ್ಚ ಮಾಧುರ್ಯಂ ಚ ಪ್ರಗಲ್ಭತಾ ।**
**ಔದಾರ್ಯಂ ಧೈರ್ಯಮಿತ್ಯೇತೇ ಸಪ್ತ ಭಾವಾ ಅಯತ್ನಜಾಃ ॥ ೩೧ ॥**

ಅನು : [ನಾಯಿಕೆಯರ ಸತ್ತ್ವಜವಾದ ಅಲಂಕಾರಗಳು ಇಪ್ಪತ್ತು ಎಂದು ಹೇಳಿತಷ್ಟೆ.] ಅಲ್ಲಿ, ಭಾವ ಹಾವ ಹೇಲಾ – ಈ ಮೂರು ಶರೀರ [ಧರ್ಮ] ದಿಂದ ಹುಟ್ಟಿದವು; ಶೋಭಾ ಕಾಂತಿ ದೀಪ್ತಿ ಮಾಧುರ್ಯ ಪ್ರಗಲ್ಭತಾ ಔದಾರ್ಯ ಧೈರ್ಯ – ಈ ಏಳು ಭಾವಗಳು ಅಯತ್ನಜಗಳು.

ವ್ಯಾಖ್ಯೆ : ಅಲ್ಲಿ ಭಾವ ಹಾವ ಹೇಲಾ – ಈ ಮೂರು ಅಂಗಜಗಳು; ಶೋಭಾ ಮೊದಲಾದ ಏಳು ಪ್ರಯತ್ನವಿಲ್ಲದೆ ಸ್ವಾಭಾವಿಕವಾಗಿ ಬರುವಂಥವು.

ಟಿಪ್ಪಣಿ : ಇಪ್ಪತ್ತು ಸತ್ತ್ವಜಾಲಂಕಾರಗಳಲ್ಲಿ ಮೂರು ಶರೀರಜಗಳು, ಏಳು ಅಯತ್ನಜಗಳು; ಅವನ್ನು ಇಲ್ಲಿ ಹೇಳಿದೆ. ಇನ್ನು ಹತ್ತು ಸ್ವಭಾವಜಗಳು : ಅದನ್ನು ಮುಂದಿನ ಖಂಡದಲ್ಲಿ ಹೇಳಿದೆ.

ಶೋಭಾ ಮಾಧುರ್ಯ ಔದಾರ್ಯ – ಈ ಮೂರು ನಾಯಕಗುಣಗಳ ಪಟ್ಟಿಯಲ್ಲೂ ಬಂದಿವೆ. (೨–೧೫). ಆದರೆ ಸ್ತ್ರೀಪುರುಷ ಭೇದದಿಂದ ಆ ಗುಣಗಳ ಲಕ್ಷಣವೂ ಬದಲಾಗುತ್ತವೆ.

ಪ್ರತಾಪ.ದಲ್ಲಿ ಶೋಭಾ ಕಾಂತಿ ದೀಪ್ತಿ ಪ್ರಾಗಲ್ಭ್ಯ ಔದಾರ್ಯ – ಇವುಗಳನ್ನು ಬಿಡಲಾಗಿದೆ; ಕುತೂಹಲ ಚಕಿತ ಹಸಿತ – ಈ ಬೇರೆ ಮೂರು ಅಲ್ಲಿ [೪–೬೫, ೬೬, ೬೮] ಬಂದಿವೆ. ಅಲ್ಲಿನ ಒಟ್ಟು ಸಂಖ್ಯೆ ಇಪ್ಪತ್ತಲ್ಲ, ಹದಿನೆಂಟು. ಬೇರೆಬೇರೆ ಗ್ರಂಥಗಳಲ್ಲಿ ಈ ಪಟ್ಟಿ ಬೇರೆಬೇರೆಯಾಗಿರುವುದನ್ನು ಕಾಣಬಹುದು. ಅಲಂ.ಶೇ.ದಲ್ಲಿ

ಇವುಗಳನ್ನು 'ಅನುಭಾವ'ಗಳೆಂದು ಹೇಳಲಾಗಿದೆ. (ಅನುಭಾವಲಕ್ಷಣಕ್ಕೆ ಈ ಗ್ರಂಥದ ೪-೩ ನೋಡಿ.) ಇವುಗಳೊಂದೊಂದರ ಲಕ್ಷಣಗಳೂ ಮುಂದೆ [೫೦ರಿಂದ ೫೯] ಬಂದಿದೆ.

ಹೋಲಿಕೆ = ನಾ.ಶಾ. : ೨೪-೬, ೨೪; ಸಾ.ದ. : ೩-೮೯, ೯೦; ಪ್ರತಾಪ : ೪-೫೩.

## ೪೯. ಸ್ವಭಾವಜಗಳು :

**ಲೀಲಾ ವಿಲಾಸೋ ವಿಚ್ಛಿತ್ತಿರ್ವಿಭ್ರಮಃ ಕಿಲಕಿಂಚಿತಮ್ ।**

**ಮೋಟ್ಟಾಯಿತಂ ಕುಟ್ಟಮಿತಂ ಬಿಬ್ಬೋಕೋ ಲಲಿತಂ ತಥಾ ॥ ೩೨ ॥**

**ವಿಹೃತಂ ಚೇತಿ ವಿಜ್ಞೇಯಾ ದಶ ಭಾವಾಃ ಸ್ವಭಾವಜಾಃ ।**

ಅನು : ಲೀಲಾ, ವಿಲಾಸ, ವಿಚ್ಛಿತ್ತಿ, ವಿಭ್ರಮ, ಕಿಲಕಿಂಚಿತ, ಮೋಟ್ಟಾಯಿತ, ಕುಟ್ಟಮಿತ, ಬಿಬ್ಬೋಕ, ಲಲಿತ, ವಿಹೃತ – ಹೀಗೆ, [ಸತ್ತ್ವಜಾಲಂಕಾರಗಳಲ್ಲಿ] ಸ್ವಭಾವದಿಂದಲೇ ಹುಟ್ಟಿದ ಭಾವಗಳು, ಹತ್ತು ಎಂದು ತಿಳಿಯತಕ್ಕದ್ದು.

ಟಿಪ್ಪಣಿ : ವಿಲಾಸ ಲಲಿತಗಳು ನಾಯಕಗುಣಗಳಲ್ಲೂ (೨-೧೫) ಬಂದಿವೆ. ಆದರೆ ಅವಕ್ಕಿವಕ್ಕಿರುವ ಲಕ್ಷಣಭೇದಗಳನ್ನು ಗಮನಿಸಬೇಕು. ಈ ಸ್ವಭಾವಜಗಳೊಂದೊಂದರ ಲಕ್ಷಣವನ್ನೂ ಮುಂದೆ [೬೦ರಿಂದ ೬೯] ಹೇಳಿದೆ.

ಸಾ.ದ.ದಲ್ಲಿ [೩-೯೨] ಈ ಹತ್ತರ ಜೊತೆಯಲ್ಲಿ ಇನ್ನೂ ಎಂಟನ್ನು ಕೂಡಿಸಿ ಹೇಳಿದೆ. ಅವು : ಮದ, ತಪನ, ಮೌಗ್ಧ್ಯ, ವಿಕ್ಷೇಪ, ಕುತೂಹಲ, ಹಸಿತ, ಚಕಿತ, ಕೇಲಿ. ಆದ್ದರಿಂದ ಅಲ್ಲಿನ ಅಲಂಕಾರಗಳ ಸಂಖ್ಯೆ ಒಟ್ಟು ಇಪ್ಪತ್ತೆಂಟು. ಮತ್ತು ಅಲ್ಲಿ – ಶರೀರಜಗಳಾದ ಮೂರು ಮತ್ತು ಅಯತ್ನಜಗಳಾದ ಏಳು (ಹಿಂದಿನ ಖಂಡ ನೋಡಿ) ಒಟ್ಟು ಈ ಹತ್ತು ನಾಯಿಕೆಯರಲ್ಲಿ ಮಾತ್ರವಲ್ಲದೆ ನಾಯಕರಲ್ಲೂ ಇರುತ್ತವೆ ಎಂದು ಹೇಳಿದೆ.

ಹೋಲಿಕೆ = ನಾ.ಶಾ. : ೨೪-೧೨, ೧೩; ಸಾ.ದ. : ೩-೯೦, ೯೧, ೯೨; ಪ್ರತಾಪ : ೪-೫೩.

## ೫೦. ಭಾವಲಕ್ಷಣ :

**ನಿರ್ವಿಕಾರಾತ್ಮಕಾತ್ಸತ್ತ್ವಾದ್ಭಾವಸ್ತತ್ರಾದ್ಯವಿಕ್ರಿಯಾ ॥ ೩೩ ॥**

ಅನು : ವಿಕಾರರಹಿತವಾದ ಸತ್ತ್ವದಿಂದ [ಉಂಟಾಗುವ] ಮೊತ್ತಮೊದಲನೆಯ ವಿಕ್ರಿಯೆಯು (ವಿಸ್ಫುರಣವು) 'ಭಾವ'.

ವ್ಯಾಖ್ಯೆ : ವಿಕಾರಕ್ಕೆ ಕಾರಣವಿದ್ದರೂ ನಿರ್ವಿಕಾರವಾಗಿರುವಂಥದು 'ಸತ್ತ್ವ'. ಸತ್ತ್ವಕ್ಕೆ ಉದಾಃ– [ಕು.ಸಂ. : ೩-೪೦] :

> 'ಶ್ರುತಾಪ್ಸರೋಗೀತಿರಪಿ ಕ್ಷಣೇಽಸ್ಮಿನ್ ಹರಃ ಪ್ರಸಂಖ್ಯಾನಪರೋ ಬಭೂವ ।
> ಆತ್ಮೇಶ್ವರಾಣಾಂ ನ ಹಿ ಜಾತು ವಿಘ್ನಾಃ ಸಮಾಧಿಭೇದಪ್ರಭವೋ ಭವಂತಿ ॥'

[ಆ ವೇಳೆಯಲ್ಲಿ, ಅಪ್ಸರೆಯರ ಗೀತವನ್ನು ಕೇಳುತ್ತಿರುವಾಗಲೇ ಹರನು ಆತ್ಮಾನುಸಂಧಾನವಲ್ಲಿ ನಿಮಗ್ನನಾದನು. ಎಂತಹ ವಿಘ್ನಗಳು ಬಂದರೂ ಅವು ಆತ್ಮನಿಯಂತೃಗಳ ಸಮಾಧಿಯನ್ನು ಭೇದಿಸಲಾರವಲ್ಲವೆ?]

ಇಂತಹ ನಿರ್ವಿಕಾರಾತ್ಮಕವಾದ ಸತ್ತ್ವದಿಂದ ಉತ್ಪನ್ನವಾಗುವ ಮೊತ್ತಮೊದಲ ವಿಕಾರವು 'ಭಾವ'. ಅದು ಒಳಗೇ ಪರಿಣಾಮವನ್ನುಂಟುಮಾಡಿ 'ಬೀಜ'ವನ್ನು ಉಬ್ಬಿಸುತ್ತದೆ. ಭಾವಕ್ಕೆ ಉದಾಃ– [ಆಕರ ತಿಳಿಯದು; ೨-೨೭ರಲ್ಲೂ ಬಂದಿದೆ] :

ಇವುಗಳಿಂದ [ಕೂಡಿರುತ್ತಾರೆ] ಮತ್ತು ಮೊದಲ ಈರ್ವರು [ಎಂದರೆ, ಸ್ವಾಧೀನಭರ್ತೃಕಾ ಹಾಗೂ ವಾಸಕಸಜ್ಜಾ – ಈ ಅವಸ್ಥೆಯ ನಾಯಿಕೆಯರು] ಉಜ್ವಲವಾಗಿದ್ದು ಕ್ರೀಡೆಯಿಂದಲೂ ಹರ್ಷದಿಂದಲೂ ಕೂಡಿರುತ್ತಾರೆ.

ವ್ಯಾಖ್ಯೆ : ಸ್ವೀಯಾ ನಾಯಿಕೆಯರಲ್ಲಿನ ಎಂಟು ಬಗೆಗಳನ್ನು ಗಮನಿಸಲಾಯಿತು. ಇನ್ನು, ಅನ್ಯಸ್ತ್ರೀಯರಲ್ಲಿನ ಭೇದಗಳು : ಅನ್ಯಳು ಕನ್ಯಾ ಆಗಿದ್ದಿರಬಹುದು ಇಲ್ಲವೆ ಊಢಾ ಆಗಿದ್ದಿರಬಹುದು. ಅವರಲ್ಲಿ, ಪ್ರಿಯನ ಸಮಾಗಮ ಸಂಕೇತಕ್ಕೆ ಮೊದಲು ಅವರು 'ವಿರಹೋತ್ಕಂಠಿತೆ'ಯರಾಗಿರುತ್ತಾರೆ. ಅನಂತರ ವಿದೂಷಕ ಸಖಿ ಮುಂತಾದವರ ಜೊತೆಯಲ್ಲಿ ಪ್ರಿಯನನ್ನು ಅರಸಿ ಹೋಗುವಾಗ 'ಅಭಿಸಾರಿಕೆ'ಯರಾಗುತ್ತಾರೆ. ಅನಂತರ, ಹೇಗೋ ಸಂಕೇತಸ್ಥಾನವಲ್ಲಿ ಪ್ರಿಯನು ಬಾರದಿರಲು, ಆತನನ್ನು ಹೊಂದದಿರುವವರು 'ವಿಪ್ರಲಬ್ಧೆ'ಯರು. ಹೀಗೆ ಅನ್ಯಾನಾಯಿಕೆಯರ ಅವಸ್ಥೆಗಳು ಕೇವಲ ಮೂರು. ಅನ್ಯಾನಾಯಿಕೆಯು ಪ್ರಿಯನನ್ನು ತನ್ನ ಅಧೀನವಲ್ಲಿ ಹೊಂದಿರುವುದಿಲ್ಲವಾದ ಕಾರಣ ಆಕೆಗೆ ಮೇಲಿನ ಮೂರು ಅವಸ್ಥೆಗಳಲ್ಲದೆ ಬೇರೆ ಅವಸ್ಥೆಗಳಿರುವುದಿಲ್ಲ.

ಮಾಲವಿಕಾಗ್ನಿಮಿತ್ರವಲ್ಲಿ [೪–೧೪; ಪು. ೭೮] ಮಾಲವಿಕೆ 'ನಿನ್ನ ಧೈರ್ಯವನ್ನು ದೇವಿಯ ಎದುರಿನಲ್ಲಿ ಚೆನ್ನಾಗಿ ನೋಡಿದ್ದೇನೆ' ಎಂದು ಹೇಳುವಾಗ ರಾಜ ಹೀಗೆ ಹೇಳುತ್ತಾನೆ :

'ದಾಕ್ಷಿಣ್ಯಂ ನಾಮ ಬಿಂಬೋಷ್ಠಿ ನಾಯಕಾನಾಮ್ ಕುಲವ್ರತಮ್ ।
ತನ್ಮೇ ದೀರ್ಘಾಕ್ಷಿ ಯೇ ಪ್ರಾಣಾಸ್ತೇ ತ್ವದಾಶಾನಿಬಂಧನಾಃ ॥'

[ಎಲೈ ಬಿಂಬೋಷ್ಠಿ, ದಾಕ್ಷಿಣ್ಯವೆನ್ನುವುದು ನಾಯಕರ ಕುಲವ್ರತವಾಗಿದೆ. ದೀರ್ಘಾಕ್ಷಿ, ನನ್ನ ಪ್ರಾಣಗಳು ನಿನ್ನ ಆಸೆಯಿಂದ ಮಾತ್ರವೇ ನಿಬದ್ಧವಾಗಿವೆ] – ಈ ಸಂದರ್ಭದಲ್ಲಿ ಮಾಲವಿಕೆ 'ಖಂಡಿತೆ'ಯಾಗಿರುವಳೆಂದು ತಿಳಿಯಬಾರದು. ಅದು ಕವಿಯ ಅಭಿಪ್ರಾಯವಲ್ಲ. ಬದಲು ಇಲ್ಲಿ, 'ದೇವಿಯ ಅಧೀನದಲ್ಲಿರುವೆನೆಂಬ ಕಾರಣ ನನ್ನನ್ನು ನೀನು ಕೊಳ್ಳದೆ ನಿರಾಶೆಯುಂಟುಮಾಡಬಾರದು' ಎಂದು ಮಾತ್ರ ಮಾಲವಿಕೆ ಸೂಚಿಸುತ್ತಾಳೆ.

ಇನ್ನು, ಅನ್ಯಾಳ ಪ್ರಿಯನು ದೂರದೇಶಸ್ಥನಾಗಿದ್ದಾಗ ಆಕೆಗೆ 'ಉತ್ಕಂಠಿತಾ'ವಸ್ಥೆಯೇ ಇರುತ್ತವೆಯಲ್ಲದೆ 'ಪ್ರೋಷಿತಪ್ರಿಯಾ'ವಸ್ಥೆ ಇರುವುದಿಲ್ಲ. ಪ್ರಿಯನು ಆಕೆಯನ್ನು ವಿವಾಹವಾಗಿ ಆಕೆಯ ಅಧೀನನಾಗಿಲ್ಲದಿರುವ ಕಾರಣ ಆಕೆಗೆ 'ಪ್ರೋಷಿತಪ್ರಿಯಾ'ವಸ್ಥೆ ಉಂಟಾಗುವುದಿಲ್ಲ.

– ಈ ಕಾರಣಗಳಿಂದ ಅನ್ಯಾನಾಯಿಕೆಯ ಅವಸ್ಥೆಗಳು ಈ ಮೂರೇ ಸರಿ : ಉತ್ಕಂಠಿತಾ ಅಭಿಸಾರಿಕಾ ಹಾಗೂ ವಿಪ್ರಲಬ್ಧಾ.

ಟಿಪ್ಪಣಿ : 'ಸರಸ್ವತೀ ಕಂಠಾಭರಣ'ವೇ ಮೊದಲಾಗಿ ಹಲವು ಗ್ರಂಥಗಳಲ್ಲಿ, ನಾಯಿಕೆಯರ ಈ ಒಂದೊಂದು ಅವಸ್ಥೆಗೂ ಉತ್ತಮಮಧ್ಯಮಾಧಮ ಭೇದಗಳನ್ನು ಹಚ್ಚಿ ಒಟ್ಟು ಭೇದಗಳ ಸಂಖ್ಯೆಯನ್ನು ಮುನ್ನೂರ ಎಂಬತ್ತನಾಲ್ಕು ಎಂದು ಪರಿಗಣಿಸಲಾಗಿದೆ; 'ರಸಮಂಜರೀ' ಗ್ರಂಥವಲ್ಲಿ ಅವುಗಳಿಗೆ ಪುನಃ ದಿವ್ಯಮರ್ತ್ಯ ದಿವ್ಯಾದಿವ್ಯ ಭೇದಗಳನ್ನು ಹಚ್ಚಿ ಸಂಖ್ಯೆಯನ್ನು ಸಾವಿರದ ನೂರ ಐವತ್ತೆರಡಕ್ಕೆ ಏರಿಸಲಾಗಿದೆ. ಈ ಗ್ರಂಥದ ಪ್ರಕಾರ ನಾಯಿಕೆಯರ ಅವಸ್ಥಾಭೇದಗಳು ನೂರ ಹದಿನೆಂಟು ಆಗುತ್ತವೆ. ಉತ್ತಮಾದಿಭೇದವನ್ನು ಇಲ್ಲಿ ಎಲ್ಲಾ ಪಾತ್ರಗಳಿಗೂ ಸಾಮಾನ್ಯವಾಗಿ ಮಾತ್ರ ಹೇಳಿದೆ. (ನೋಡಿ : ೨–೭೫).

# ನಾಯಿಕೆಯ ಸಹಾಯಕರು

## ೪೬. ನಾಯಿಕೆಯ ಸಹಾಯಕರು :

**ದೂತ್ಯೋ ದಾಸೀ ಸಖೀ ಕಾರೂರ್ಧಾತ್ರೇಯೀ ಪ್ರತಿವೇಶಿಕಾ ।**
**ಲಿಂಗಿನೀ ಶಿಲ್ಪಿನೀ ಸ್ವಂ ಚ ನೇತೃಮಿತ್ರಗುಣಾನ್ವಿತಾಃ ॥ ೨೯ ॥**

ಅನು : ದಾಸೀ, ಸಖೀ, ಕಾರೂ, ಧಾತ್ರೇಯಿ, ಪ್ರತಿವೇಶಿಕಾ, ಲಿಂಗಿನೀ, ಶಿಲ್ಪಿನೀ ಮತ್ತು ಸ್ವಂ (ತಾನೇ ತನ್ನ ದೂತಿಯಾಗಿ ಕಾರ್ಯಸಾಧಿಸುವುದು) [ಹೀಗೆ] ನಾಯಕನ ಸ್ನೇಹಿತರ [ಗುಣಗಳಿಗೆ ಹೋಲುವ] ಗುಣಗಳನ್ನು ಹೊಂದಿರುವ ದೂತಿಯರು [ನಾಯಿಕೆಯ ಸಹಾಯಕರಾಗಿರುತ್ತಾರೆ].

ವ್ಯಾಖ್ಯೆ : ದಾಸೀ = ಪರಿಚಾರಿಕೆ; ಸಖೀ = ಸ್ನೇಹಿತೆ; ಕಾರೂ = ಕೀಳಾದ ರಜಕ ಜಾತಿಯವಳು; ಧಾತ್ರೇಯಿ = ಮಲತಾಯಿಯ ಮಗಳು; ಪ್ರತಿವೇಶಿಕಾ = ನೆರೆಮನೆಯವಳು; ಲಿಂಗಿನೀ = ಭಿಕ್ಷುಕಿ ಸಂನ್ಯಾಸಿನಿ ಇ.; ಶಿಲ್ಪಿನೀ = ಚಿತ್ರಕಾರ್ತಿ ಮುಂತಾಗಿ ಕುಶಲ ಕೆಲಸದವಳು; ಸ್ವಂ = ತನಗೆ ತಾನೇ ದೂತಿಯಾಗಿ ವರ್ತಿಸುವ ಒಂದು ವಿಶೇಷ ಸಂದರ್ಭ. ಇವರು ಪೀಠಮರ್ದ ಮೊದಲಾದ ನಾಯಕಸಹಾಯಕರ ಗುಣಗಳನ್ನೆ ಹೊಂದಿರುತ್ತಾರೆ.

ಉದಾ:- (ಲಿಂಗಿನೀ) : [ಮಾಮಾ. : ೩-೧೧] :

'ಶಾಸ್ತ್ರೇಷು ನಿಷ್ಠಾ ಸಹಜಶ್ಚ ಬೋಧಃ ಪ್ರಾಗಲ್ಭ್ಯಮಭ್ಯಸ್ತಗುಣಾ ಚ ವಾಣೀ ।
ಕಾಲಾನುರೋಧಃ ಪ್ರತಿಭಾನವತ್ತ್ವಮೇತೇ ಗುಣಾಃ ಕಾಮದುಘಾಃ ಕ್ರಿಯಾಸು ॥'

[ಶಾಸ್ತ್ರಗಳಲ್ಲಿ ನಿಷ್ಠೆ, ಸಹಜವಾದ ಜ್ಞಾನ, ಪಾಂಡಿತ್ಯ, ಅಭ್ಯಾಸಪೂರ್ಣವಾದ ವಾಣಿ, ಕಾಲಕ್ಕೆ ಸಮನಾಗಿ ಹೊಂದಿಕೊಳ್ಳುವುದು, ನೂತನ ಪ್ರತಿಭೆ – ಈ ಗುಣಗಳು ಕ್ರಿಯೆಗಳಲ್ಲಿ ಆಸೆಗೆ ತಕ್ಕ ಫಲಕೊಡುತ್ತವೆ.] (ಹೀಗೆ ಕಾಮಂದಕಿಯು ಮಾಧವನ ಗುಣಗಳನ್ನು ವರ್ಣಿಸುತ್ತಾಳೆ.)

ಸಖಿಗೆ ಉದಾ:- [ಆಕರ ತಿಳಿಯದು] :

'ಮೃಗಶಿಶುದೃಶಸ್ತಸ್ಯಾಸ್ತಾಪಂ ಕಥಂ ಕಥಯಾಮಿ ತೇ
ದಹನಪತಿತಾ ದೃಷ್ಟಾ ಮೂರ್ತಿರ್ಮಯಾ ನ ಹಿ ವೈಧವೀ ।
ಇತಿ ತು ವಿದಿತಂ ನಾರೀರೂಪಃ ಸ ಲೋಕದೃಶಾಂ ಸುಧಾ
ತವ ಶಠತಯಾ ಶಿಲ್ಪೋತ್ಕರ್ಷೋ ವಿಧೇರ್ವಿಘಟಿಷ್ಯತೇ ॥'

[ಮರಿಜಿಂಕೆಗಣ್ಣುಗಳಿರುವ ಆಕೆಯ ತಾಪವನ್ನು ಹೇಗೆ ವರ್ಣಿಸಲಿ? ಚಂದ್ರನ ಮೂರ್ತಿ ಅಗ್ನಿಯಲ್ಲಿ ಬೀಳುವುದನ್ನು ನಾನು ಕಂಡಿಲ್ಲ. (ಹಾಗೆ ಕಂಡಿದ್ದಿದ್ದರೆ ಅದನ್ನೆ ಉಪಮಾನವಾಗಿ ಹೇಳಿ ಆಕೆಯ ಸ್ಥಿತಿಯನ್ನು ವರ್ಣಿಸಬಹುದಿತ್ತು.) ಇಷ್ಟು ಮಾತ್ರ ತಿಳಿಯಬಲ್ಲೆ – ಲೋಕದ ಕಣ್ಣುಗಳಿಗೆ ಅಮೃತವಂತಿರುವ ಆ ನಾರೀ ರೂಪವು, ಬ್ರಹ್ಮನ ಆ ಅಮೋಘಶಿಲ್ಪವು ನಿನ್ನ ಮೂರ್ಖತನದಿಂದ ಹಾಳಾಗಿ ಹೋಗುತ್ತಿದೆ.]

ಮತ್ತು-[ಗಾಥಾ.] :

'ಸಚ್ಚಂ ಜಾಣಾಇ ದಟ್ಠುಂ ಸರಿಸಮ್ಮಿ ಜಣಮ್ಮಿ ಜುಜ್ಜಏ ರಾಓ ।
ಮರಉ ಣ ತುಮಂ ಭಣಿಸ್ಸಂ ಮರಣಂ ಪಿ ಸಲಾಹಣಿಜ್ಜಂ ಸೇ ॥'

[(ಪ್ರಿಯೆಯನ್ನು ಕಡೆಗಣಿಸಿರುವ ನಾಯಕನೊಬ್ಬನ ಬಳಿಗೆ ಹೋಗಿ ಆಕೆಯ ಸಖಿ ಹೇಳುವ ಮಾತು :) ಯೋಚಿಸಿ ನೋಡಿದರೆ ಈ ಮಾತು ಸತ್ಯ : ತನಗೆ ಸಮಾನರಾದವರಲ್ಲಿ ಪ್ರೇಮವನ್ನಿಡುವುದು ಉಚಿತ. ಆಕೆ ಮರಣ ಹೊಂದುವುದಾದರೆ ನಾನೂ ಏನೂ ಹೇಳುವುದಿಲ್ಲ, ಕಾರಣ ಆಕೆಗೆ ಸಾವು ಒದಗುವುದೇ ಲೇಸು.]

ಸ್ವಯಂದೂತಿಗೆ (ತನಗೆ ತಾನೇ ದೂತಿಯಾಗುವುದಕ್ಕೆ) ಉದಾ:- [ಹಾಲ.] :

'ಮಹು ಏಹಿ ಕಿಂ ಣಿವಾಲಅ ಹರಸಿ ಣಿಅಂ ವಾಉ ಜಇ ವಿ ಮೇ ಸಿಚಅಂ ।
ಸಾಹೇಮಿ ಕಸ್ಸ ಸುಂದರ ದೂರೇ ಗಾಮೋ ಅಹಂ ಏಕ್ಕಾ ॥'

[(ಏಕಾಕಿನಿಯೊಬ್ಬಳು ಅನ್ಯೋಕ್ತಿಯ ಮೂಲಕ ಪಾಂಥನೊಬ್ಬನನ್ನು ತನ್ನೆಡೆಗೆ ಆಹ್ವಾನಿಸುವ ಸಂದರ್ಭ ಇದು:) ಎಲೈ ನಿವಾರಕನಾದ ವಾಯು, ಮೇಲೆಮೇಲೆ ಬಂದು ನನ್ನ ಸೆರಗನ್ನು ಹಾರಿಸುತ್ತಿರುವೆಯೇಕೆ? ನೀನು ಹಾಗೆ

[ಯಾರೂ ಸೇವಿಸದಿರುವ ಹೂವು, ಉಗುರು ತಾಗದಿರುವ ಚಿಗುರು, ಕೊರೆಯದ ರತ್ನ, ಇನ್ನೂ ರಸಹೀರದಿರುವ ಹೊಸ ಜೇನು – ಅಖಂಡಪುಣ್ಯದ ಫಲವೋ ಎಂಬಂತೆ ಹೀಗಿರುವ ಈಕೆಯ ಅಕಲಂಕರೂಪವನ್ನು ಭೋಗಿಸಲು ವಿಧಿ ಯಾರನ್ನು ನಿಯಮಿಸುತ್ತಾನೊ ತಿಳಿಯದು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪–೨೫; ಸಾ.ದ. : ೩–೯೫, ೯೬

## ೫೪. ಕಾಂತಿಲಕ್ಷಣ :

**೧ಮನ್ಮಥಾಮಾಪಿತಚ್ಛಾಯಾ ಸೈವ ಕಾಂತಿರಿತಿ ಸ್ಮೃತಾ ॥ ೩೫ ॥**

ಅನು : ಕಾಮದ ಛಾಯೆಯಿಂದ ಆವೃತವಾಗಿರುವ ಅದೇ [ಎಂದರೆ, 'ಶೋಭೆ'ಯೇ] 'ಕಾಂತಿ' ಎಂದು ತಿಳಿಯಲಾಗಿದೆ.

ವ್ಯಾಖ್ಯೆ : ರಾಗ ಮೂಡಿ ಅದರಿಂದ ಘನವಾಗಿರುವ 'ಶೋಭಾ'ವೇ 'ಕಾಂತಿ'. ಉದಾ:– [ಆಕರ ತಿಳಿಯದು] :

'ಉನ್ಮೀಲದ್ವದನೇಂದುದೀಪ್ತಿವಿಸರೈರ್ದೂರೇ ಸಮುತ್ಸಾರಿತಂ
ಭಿನ್ನಂ ಪೀನಕುಚಸ್ಥಲಸ್ಯ ಚ ರುಚಾ ಹಸ್ತಪ್ರಭಾಭಿರ್ಹತಮ್ ।
ಏತಸ್ಯಾಃ ಕಲವಿಂಕಕಂಠಕದಲೀಕಲ್ಪಂ ಮಿಲತ್ಕೌತುಕಾ –
ದಪ್ರಾಪ್ತಾಂಗಸುಖಂ ರುಷೇವ ಸಹಸಾ ಕೇಶೇಷು ಲಗ್ನಂ ತಮಃ ॥'

[ಎವೆದೆರೆಯುತ್ತಿರುವ ಮುಖಚಂದ್ರನ ದೀಪ್ತಿಪ್ರಸಾರದಿಂದ ಕತ್ತಲೆ ದೂರ ಸಾರಿತು; ಉನ್ನತವಾದ ಕುಚಸ್ಥಲದ ಕಾಂತಿಯಿಂದ ಛಿದ್ರವಾಯಿತು; ಹಸ್ತಪ್ರಭೆಯಿಂದ ನಾಶಗೊಂಡಿತು; ಹೀಗೆ ಆಕೆಯ ಅಂಗಸುಖ ದೊರಕದೆ, ಕಲವಿಂಕಪಕ್ಷಿಯ ಕಂಠವಂತೆ (ಅಥವಾ) ಕದಲಿಯಂತೆ (ಕಪ್ಪಾದ) ಆ ಕತ್ತಲೆಯು ಕೂಟದ ಆಸೆ ಹೊಂದಿ ಕೋಪದಿಂದೆಂಬಂತ ಒಮ್ಮೆಲೇ ಹೋಗಿ ಆಕೆಯ ಕೂದಲುಗಳಲ್ಲಿ ಬೆರತುಬಿಟ್ಟಿತು.]

ಮತ್ತು–[ಕಾದಂ.] ಭಟ್ಟಬಾಣನ 'ಮಹಾಶ್ವೇತೆಯ ವರ್ಣನೆ'.

ಟಿಪ್ಪಣಿ : ಕಾಮದ ನೆರಳು ಸೋಂಕಿರುವ 'ಶೋಭೆ' 'ಕಾಂತಿ'; 'ಕಾಂತಿ'ಯ ಹೆಚ್ಚಳವೇ 'ದೀಪ್ತಿ'. (ನೋಡಿ : ೨–೫೬).

ಹೋಲಿಕೆ = ನಾ.ಶಾ. : ೨೪–೨೬; ಸಾ.ದ. : ೩–೯೬.

## ೫೫. ಮಾಧುರ್ಯಲಕ್ಷಣ :

**ಅನುಲ್ಬಣತ್ವಂ ಮಾಧುರ್ಯಂ**

ಅನು : ತೀವ್ರತೆಯಿಲ್ಲದಿರುವುದು [ಎಂದರೆ, ಶಾಂತ ರಮಣೀಯತೆ] 'ಮಾಧುರ್ಯ'.

ವ್ಯಾಖ್ಯೆ : ಉದಾ:– [ಶಾಕುಂ. : ೧–೧೭] :

'ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ ಮಲಿನಮಪಿ ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂ ತನೋತಿ।
ಇಯಮಧಿಕಮನೋಜ್ಞಾ ವಲ್ಕಲೇನಾಪಿ ತನ್ವೀ ಕಿಮಿವ ಹಿ ಮಧುರಾಣಾಂ ಮಂಡನಂನಾಕೃತೀನಾಮ್ ॥'

---

೧ ಪಾಠ : ಮನ್ಮಥಾಧ್ಯಾಸಿತ.

[ಪಾಚಿ ಸುತ್ತಿಕೊಂಡಿದ್ದರೂ ಕಮಲ ರಮಣೀಯವಾಗಿರುತ್ತದೆ; ಮಲಿನವಾಗಿದ್ದರೂ ಚಂದ್ರನಲ್ಲಿರುವ ಕಲೆ ಕಾಂತಿಯನ್ನು ಹೆಚ್ಚಿಸುತ್ತದೆ; ನಾರುಡೆಯಿಂದಲೂ ಈ ತನ್ವಿ ಅತಿಮನೋಹರಳಾಗಿದ್ದಾಳೆ. ಆಕೃತಿ ಮಧುರ ವಾಗಿದ್ದರೆ ಯಾವುದು ತಾನೇ ಅದಕ್ಕೆ ಭೂಷಣವಾಗುವುದಿಲ್ಲ?]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪–೨೭; ಸಾ.ದ. : ೩–೯೭; ಪ್ರತಾಪ : ೪–೫೫.

## ೫೬. ದೀಪ್ತಿಲಕ್ಷಣ :

ದೀಪ್ತಿಃ ಕಾಂತೇಸ್ತು ವಿಸ್ತರಃ ।

ಅನು : 'ಕಾಂತಿ'ಯ ಹರಹು 'ದೀಪ್ತಿ'.

ವ್ಯಾಖ್ಯೆ : ಉದಾಃ– [ಆಕರ ತಿಳಿಯದು; ಧ್ವನ್ಯಾ.ದ ೧–೪೮ರ ವ್ಯಾಖ್ಯೆಯಲ್ಲಿಯೂ ಬಂದಿದೆ] :

'ದೇಆ ಪಸಿಅ ಣಿಅಂತಸುಮುಹಸಸಿಜೋಣ್ಹಾವಿಲುತ್ತತಮಣಿವಹೇ ।
ಅಹಿಸಾರಿಆಣ ವಿಗ್ಘಂ ಕರೇಸಿ ಅಣ್ಣಾಣ ವಿಹಆಸೇ ॥'

[ಮುಖಚಂದ್ರಮನ ಬೆಳಕಿನಿಂದ ಕತ್ತಲೆಯನ್ನು ನಾಶಮಾಡುವ ಎಲೈ ರಮಣಿ, ಪ್ರಸನ್ನಳಾಗು. ಹತಾಶೆ, ನಿನ್ನಂತೆಯೇ ಅಭಿಸಾರಕ್ಕಾಗಿ ಹೊರಟವರಿಗೆ ಏಕೆ ವಿಘ್ನವನ್ನುಂಟುಮಾಡುತ್ತೀಯೆ? ಹಿಂದಿರುಗು.]

ಟಿಪ್ಪಣಿ : 'ಕಾಂತಿ'ಗೆ ೨–೫೪ ನೋಡಿ.

ಹೋಲಿಕೆ = ನಾ.ಶಾ. : ೨೪–೨೬; ಸಾ.ದ. : ೩–೯೬.

## ೫೭. ಪ್ರಗಲ್ಭತಾಲಕ್ಷಣ :

ನಿಃಸಾಧ್ವಸತ್ವಂ ಪ್ರಾಗಲ್ಭ್ಯಂ

ಅನು : ಮನಸ್ಸಿನ ಕ್ಷೋಭೆ ಇಲ್ಲದಿರುವುದು 'ಪ್ರಾಗಲ್ಭ್ಯ' (ಪ್ರಗಲ್ಭತಾ).

ವ್ಯಾಖ್ಯೆ : ಮನಸ್ಸಿನ ತಳಮಳದಿಂದ ಉಂಟಾಗುವ ಅಂಗಗಳ ಸೊರಗುವಿಕೆ ಸಾಧ್ವಸ; ಅದಿಲ್ಲದಿರುವುದು 'ಪ್ರಾಗಲ್ಭ್ಯ'. ಉದಾಃ– [ಧನಿಕನದೇ] :

'ತಥಾ ವ್ರೀಡಾವಿಧೇಯಾಪಿ ತಥಾ ಮುಗ್ಧಾಪಿ ಸುಂದರೀ ।
ಕಲಾಪ್ರಯೋಗಚಾತುರ್ಯೇ ಸಭಾಸ್ವಾಚಾರ್ಯಕಂ ಗತಾ ॥'

[ಹೀಗೆ ಲಜ್ಜೆಯಿಂದ ನಮ್ರಳಾಗಿದ್ದರೂ, ಹೀಗೆ ಮುಗ್ಧಳಾಗಿದ್ದರೂ ಈ ಚೆಲುವೆ, ತನ್ನ ಕಲಾಪ್ರಯೋಗ ಚಾತುರ್ಯದಿಂದ ಸಭೆಗಳಲ್ಲಿ ಆಚಾರ್ಯಳಾಗಿಬಿಟ್ಟಿದ್ದಾಳೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪–೨೯; ಸಾ.ದ. : ೩–೯೭.

## ೫೮. ಔದಾರ್ಯಲಕ್ಷಣ :

ಔದಾರ್ಯಂ ಪ್ರಶ್ರಯಃ ಸದಾ ॥ ೩೬ ॥

ಅನು : ಯಾವಾಗಲೂ ಆದರದಿಂದ ಕೂಡಿರುವುದು 'ಔದಾರ್ಯ'.

ವ್ಯಾಖ್ಯೆ : ಉದಾಃ– [ಗಾಥಾ. : ೩–೨೬] :

'ದಿಅಹಂ ಖು ದುಕ್ಖಿಆಏ ಸಅಲಂ ಕಾಊಣ ಗೇಹವಾವಾರಂ ।
ಗರುಏವಿ ಮಣ್ಣುದುಕ್ಖೇ ಭರಿಮೋ ಪಾಅಂತಸುತ್ತಸ್ಸ ॥'

'ದೃಷ್ಟಿಃ ಸಾಲಸತಾಂ ಬಿಭರ್ತಿ ನ ಶಿಶುಕ್ರೀಡಾಸು ಬದ್ಧಾದರಾ
ಶ್ರೋತ್ರೇ ಪ್ರೇಷಯತಿ ಪ್ರವರ್ತಿತಸಖೀಸಂಭೋಗವಾರ್ತಾಸ್ವಪಿ ।
ಪುಂಸಾಮಂಕಮಪೇತಶಂಕಮಧುನಾ ನಾರೋಹತಿ ಪ್ರಾಗ್ಯಥಾ
ಬಾಲಾ ನೂತನಯೌವನವ್ಯತಿಕರಾವಷ್ಟಭ್ಯಮಾನಾ ಶನೈಃ ॥'

[ದೃಷ್ಟಿ ಅಲಸತೆಯನ್ನು ತಾಳಿದೆ (ಹಿಂದಿನಂತೆ ಚಂಚಲತೆಯಿಲ್ಲ) ಶೈಶವದ ಕ್ರೀಡೆಗಳಲ್ಲಿ ಆದರದ ಆಸಕ್ತಿಯಿಲ್ಲ. ಸಖಿಯ ಸಂಭೋಗದ ವಾರ್ತೆಗಳನ್ನಾದರೂ ಕೇಳಲು ಕಿವಿಗೊಡುತ್ತಾಳೆ. ಹಿಂದೆ ಹೇಗೋ ಹಾಗೆ ನಿಶ್ಶಂಕೆಯಿಂದ ಈಗ ಗಂಡಸರ ತೊಡೆಯನ್ನೇರುವುದಿಲ್ಲ – ಈ ಬಾಲಕಿ ಮೆಲ್ಲಮೆಲ್ಲನೆ ಹೊಸ ಹರೆಯದ ಹೊಳಹಿನಿಂದ ತುಂಬಿಕೊಳ್ಳುತ್ತಿದ್ದಾಳೆ.]

ಮತ್ತು–[ಕು.ಸಂ. : ೩–೬೭] :

'ಹರಸ್ತು ಕಿಂಚಿತ್ಪರಿಲುಪ್ತಧೈರ್ಯಶ್ಚಂದ್ರೋದಯಾರಂಭ ಇವಾಂಬುರಾಶಿಃ ।
ಉಮಾಮುಖೇ ಬಿಂಬಫಲಾಧರೋಷ್ಠೇ ವ್ಯಾಪಾರಯಾಮಾಸ ವಿಲೋಚನಾನಿ ॥'

[ಚಂದ್ರ ಉದಯಿಸಿದಾಗಿನ ಸಮುದ್ರದಂತೆ ಕಿಂಚಿತ್ ಅಸ್ಥಿರನಾದ ಹರನು ಉಮೆಯ ಮುಖದ ತೊಂಡೆಹಣ್ಣಿನ ತುಟಿಗಳಲ್ಲಿ ದೃಷ್ಟಿಯನ್ನಿಟ್ಟನು.]

ಮತ್ತು–[ಧನಿಕನದೇ] :

'ತಂ ಚ್ಚಿಅ ವಅಣಂ ತೇ ಚ್ಚೇಅ ಲೋಅಣೇ ಜೋವ್ವಣಂ ಪಿ ತಂ ಚ್ಚೇಅ ।
ಅಣ್ಣಾ ಅಣಂಗಲಚ್ಛೀ ಅಣ್ಣಂ ಚ್ಚಿಅ ಕಿಂ ಪಿ ಸಾಹೇಇ ॥'

[ಅದೇ ಮಾತು, ಅವೇ ಕಣ್ಣುಗಳು, ಅದೇ ಯೌವನ – ಆದರೆ ಬೇರೆಯಾಗಿ ಬಂದಿರುವ ಕಾಮಶ್ರೀ ಮಾತ್ರ ಏನೋ ಬೇರೆಯದನ್ನೆ ಸಾಧಿಸುತ್ತದೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪–೮; ಸಾ.ದ. : ೩–೯೩; ಪ್ರತಾಪ : ೪–೫೩.

## ೫೧. ಹಾವಲಕ್ಷಣ :

**೧ಹೇವಾಕಸಸ್ತು೧ ಶೃಂಗಾರೋ ಹಾವೋಽಕ್ಷಿಭ್ರೂವಿಕಾರಕೃತ್ ।**

ಅನು : ಉತ್ಕಟವಾದ ಶೃಂಗಾರವು, ಕಣ್ಣುಹುಬ್ಬುಗಳ ವಿಕಾರವನ್ನುಂಟುಮಾಡುವುದಾಗಿ 'ಹಾವ'ವಾಗುತ್ತದೆ.

ವ್ಯಾಖ್ಯೆ : ನಿಶ್ಚಿತ ಅಂಗಗಳಲ್ಲಿ ವಿಕಾರವನ್ನುಂಟುಮಾಡುವ ಶೃಂಗಾರದ ವಿಶಿಷ್ಟ ಸ್ವಭಾವವು 'ಹಾವ'. ಉದಾ–[ಧನಿಕನದೇ] :

'ಜಂ ಕಿಂ ಪಿ ಪೇಚ್ಛಮಾಣಂ ಭಣಮಾಣಂ ರೇ ಜಹಾ ತಹ ಚ್ಚೇಅ ।
ಣಿಜ್ಝಾಅ ಣೇಹಮುದ್ಧಂ ವಅಸ್ಸ ಮುದ್ಧಂ ಣಿಅಚ್ಛೇಹಿ ॥'

[ಮಿತ್ರ, ಏನನ್ನೋ ನೋಡುತ್ತಿರುವ ಹೇಗೆ ಹೇಗೊ ಮಾತನಾಡುತ್ತಿರುವ ಸ್ನೇಹಮುಗ್ಧೆಯನ್ನು ಮುಗ್ಧೆಯನ್ನು ಕಣ್ಣಿಟ್ಟು ನೋಡು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪–೯, ಸಾ.ದ. : ೩–೯೪; ಪ್ರತಾಪ : ೪–೫೪.

---

೧ ಪಾಠ : ಸ್ವಲ್ಪಾಲಾಪಃ ಸ.

## ೫೨. ಹೇಲಾಲಕ್ಷಣ :

**ಸ ಏವ ಹೇಲಾ ಸುವ್ಯಕ್ತಶೃಂಗಾರರಸಸೂಚಿಕಾ ॥ ೩೪ ॥**

ಅನು : ಸುಸ್ಪಷ್ಟವಾದ ಶೃಂಗಾರರಸವನ್ನು ಸೂಚಿಸುವ ಅದೇ [ಎಂದರೆ, ಹಾವವೇ] 'ಹೇಲಾ'.

ವ್ಯಾಖ್ಯೆ : ಸ್ಪಷ್ಟವಾದ ಹೆಚ್ಚಿನ ವಿಕಾರಗಳಿಂದ ಸುವ್ಯಕ್ತ ಶೃಂಗಾರವನ್ನು ಸೂಚಿಸುವ 'ಹಾವ'ವೇ 'ಹೇಲಾ'. ಉದಾ:– [ಧನಿಕನದೇ ಪದ್ಯ].

'ತಹ ಝುತ್ತಿ ಸೇ ಪಅತ್ತಾ ಸವ್ವಂಗಂ ವಿಬ್ಭಮಾ ಥಣುಬ್ಭೇವಿ ।
ಸಂಸಇಅಬಾಲಭಾವಾ ಹೋಇ ಚಿರಂ ಜಹ ಸಹೀಣಂ ಪಿ ॥'

[ಮೊಲೆಗಳು ಅರಳುತ್ತಿರುವಂತೆ ಆಕೆಯ ಸರ್ವಾಂಗಗಳಲ್ಲಿಯೂ ವಿಭ್ರಮವುಂಟಾಗುತ್ತಿರುವುದನ್ನು ನೋಡಿ ಆಕೆಯ ಸಖಿಯರಿಗೆ ಕೂಡ ಅವಳ ಬಾಲಭಾವದ ಬಗೆಗೆ (ಆಕೆ ಹಿಂದೊಮ್ಮೆ ಕೇವಲ ಬಾಲಕಿಯಾಗಿದ್ದುದು ನಿಜವೆ ಎಂದು) ಸಂಶಯವುಂಟಾಗಿದೆ.]

ಟಿಪ್ಪಣಿ : ಇಲ್ಲಿಗೆ ಶರೀರಜವಾದ (೨–೪೮) ಭಾವ ಹಾವ ಹೇಲಾಗಳನ್ನು ಹೇಳಿಯಾಯಿತು. ಇನ್ನು ಮುಂದೆ ಅಯತ್ನಜಗಳಾದ ಏಳು ಅಲಂಕಾರಗಳನ್ನು ಲಕ್ಷಿಸಲಾಗುತ್ತದೆ.

ಹೋಲಿಕೆ = ನಾ.ಶಾ. : ೨೪–೧೧; ಸಾ.ದ. : ೩–೯೫; ಪ್ರತಾಪ : ೪–೫೪.

## ೫೩. ಶೋಭಾಲಕ್ಷಣ :

**ರೂಪೋಪಭೋಗತಾರುಣ್ಯೈಃ ಶೋಭಾಂಗಾನಾಂ ವಿಭೂಷಣಮ್ ।**

ಅನು : ರೂಪ ಭೋಗವಿಲಾಸ ತಾರುಣ್ಯಗಳಿಂದ [ಉಂಟಾಗುವ] ಅಂಗಗಳ ವಿಶೇಷವಾದ ಅಲಂಕಾರವು 'ಶೋಭಾ'.

ವ್ಯಾಖ್ಯೆ : ಈ ಕಾರಿಕೆಯಿಂದ ಅಯತ್ನಜ ಅಲಂಕಾರಗಳನ್ನು ಹೇಳಲಾಗುತ್ತದೆ. ಅಲ್ಲಿ, 'ಶೋಭಾ'ಕ್ಕೆ ಉದಾ:– [ಕು.ಸಂ. : ೭–೧೩] :

'ತಾಂ ಪ್ರಾಙ್ಮುಖೀಂ ತತ್ರ ನಿವೇಶ್ಯ ಬಾಲಾಂ ಕ್ಷಣಂ ವ್ಯಲಂಬಂತ ಪುರೋ ನಿಷಣ್ಣಾಃ ।
ಭೂತಾರ್ಥಶೋಭಾಹ್ರಿಯಮಾಣನೇತ್ರಾಃ ಪ್ರಸಾಧನೇ ಸಂನಿಹಿತೇಽಪಿ ನಾರ್ಯಃ ॥'

[ಪಾರ್ವತಿಯನ್ನು ಪೂರ್ವಕ್ಕೆ ಮುಖಮಾಡಿ ಕುಳ್ಳಿರಿಸಿ ಎದುರು ನಿಂತ ಸ್ತ್ರೀಯರು ಹುಟ್ಟು ಚೆಲುವೆಯಾದ ಆಕೆಯನ್ನು ಲಜ್ಜಿತವಾದ ದೃಷ್ಟಿಯಿಂದ ನೋಡುತ್ತ ಪ್ರಸಾಧನ ಸಾಮಗ್ರಿಗಳು ಬಳಿಯಲ್ಲೆ ಇದ್ದರೂ ಸಿಂಗರಿಸಲು ಆರಂಭಿಸದೆ ಒಂದು ಕ್ಷಣ ಸುಮ್ಮನೆ ನಿಂತುಬಿಟ್ಟರು. (ಸಹಜ ಸುಂದರಿಯಾದ ಪಾರ್ವತಿಯನ್ನು ಭೂಷಣಗಳಿಂದ ಸಿಂಗರಿಸಲು ತಾವು ಬಂದಿರುವುದಕ್ಕಾಗಿ ಅವರಿಗೆ ನಾಚಿಕೆಯಾಗಿದೆ)].

ಮತ್ತು–[ಶಾಕುಂ. : ೨–೧೦]

'ಅನಾಘ್ರಾತಂ ಪುಷ್ಪಂ ಕಿಸಲಯಮಲೂನಂ ಕರರುಹೈ –
ರನಾವಿದ್ಧಂ ರತ್ನಂ ಮಧು ನವಮನಾಸ್ವಾದಿತರಸಮ್ ।
ಅಖಂಡಂ ಪುಣ್ಯಾನಾಂ ಫಲಮಿವ ಚ ತದ್ರೂಪಮನಘಂ
ನ ಜಾನೇ ಭೋಕ್ತಾರಂ ಕಮಿಹ ಸಮುಪಸ್ಥಾಸ್ಯತಿ ವಿಧಿಃ ॥'

[ಮನೆಯ ಕೆಲಸಕಾರ್ಯಗಳೆಲ್ಲವನ್ನೂ ಮಾಡಿ ದಿನವೆಲ್ಲ ದುಃಖಿತಳಾಗಿದ್ದರೂ, ಬಹುವಾದ ಈ ದುಃಖಕೋಪಗಳು ಪ್ರಿಯನು ಬಂದು ಕಾಲಿಗೆ ಬಿದ್ದೊಡನೆಯೇ ಶಾಂತವಾಗಿಹೋಯಿತು.]

ಮತ್ತು-[ರತ್ನಾ. : ೨-೨೧] :

'ಭ್ರೂಭಂಗೇ ಸಹಸೋದ್ಗತಾ.........' ಇತ್ಯಾದಿ.

[ಆಕೆ ಒಮ್ಮೆಲೆ ಕೋಪಗೊಂಡು ಹುಬ್ಬು ಮುರಿದಳಾದರೂ, ಕೂಡಲೇ ನಮ್ರಳಾಗಿ ಮುಖವನ್ನು ತಗ್ಗಿಸಿದಳು...ಇ.,]

ಟಿಪ್ಪಣಿ : ಸಾ.ದ.ದಲ್ಲಿ 'ಪ್ರಶ್ರಯ' ಎಂಬ ಪದಕ್ಕೆ ಬದಲಾಗಿ 'ವಿನಯ' ಎಂಬ ಪದವಿದೆ.

ಹೋಲಿಕೆ = ನಾ.ಶಾ. : ೨೪-೨೯; ಸಾ.ದ. : ೩-೯೭.

## ೫೯. ಧೈರ್ಯಲಕ್ಷಣ :

**ಚಾಪಲಾವಿಹತಾ ಧೈರ್ಯಂ ಚಿದ್ವೃತ್ತಿರವಿಕತ್ಥನಾ ।**

ಅನು : ಚಂಚಲತೆಯನ್ನು ಬಿಟ್ಟಿರುವ [ಮತ್ತು] ಸ್ವಪ್ರಶಂಸೆಯಿಲ್ಲದ ಮನೋವೃತ್ತಿ 'ಧೈರ್ಯ'.

ವ್ಯಾಖ್ಯೆ : ಚಾಪಲ್ಯದಿಂದ ಕೂಡಿರದ, ಸ್ವಗುಣಕಥನವಿಲ್ಲದ ಮನೋವೃತ್ತಿ 'ಧೈರ್ಯ'.

ಉದಾ:- [ಮಾ.ಮಾ. : ೨-೨] :

'ಜ್ವಲತು ಗಗನೇ ರಾತ್ರೌ ರಾತ್ರಾವಖಂಡಕಲಃ ಶಶೀ
ದಹತು ಮದನಃ ಕಿಂ ವಾ ಮೃತ್ಯೋಃ ಪರೇಣ ವಿಧಾಸ್ಯತಿ ।
ಮಮ ತು ದಯಿತಃ ಶ್ಲಾಘ್ಯಸ್ತಾತೋ ಜನನ್ಯಮಲಾನ್ವಯಾ
ಕುಲಮಮಲಿನಂ ನ ತ್ವೇವಾಯಂ ಜನೋ ನ ಚ ಜೀವಿತಮ್ ॥'

[ರಾತ್ರಿ ರಾತ್ರಿಗಳಲ್ಲಿಯೂ ಅಖಂಡಕಲೆಯುಳ್ಳ ಚಂದ್ರಮ ಆಕಾಶದಲ್ಲಿ ಉರಿಯುತ್ತಿರಲಿ. ಮನ್ಮಥ ನನ್ನನ್ನು ಸುಡಲಿ-ಸಾವಿಗಿಂತ ಮಿಗಿಲು ಇನ್ನೇನು ಮಾಡಿಯಾನು ಆತ? ನನಗೋ ನನ್ನ ಪ್ರಿಯತಮ, ನನ್ನ ತಂದೆ, ಪವಿತ್ರವಂಶಜೆಯಾದ ನನ್ನ ಜನನಿ, ಹಾಗೂ ನನ್ನ ನಿರ್ಮಲ ಕುಲ-ಇವೇ ಹೆಚ್ಚಿನವು; ಈ ಜನ ಈ ಜೀವಿತ ಇವಾವುವೂ ಬೇಕಿಲ್ಲ.]

ಟಿಪ್ಪಣಿ : ಅಯತ್ನಜಗಳಾದ ಏಳನ್ನು ಹೇಳಿಯಾಯಿತು; ಇನ್ನು ಮುಂದೆ ಸ್ವಭಾವಜಗಳಾದ ಹತ್ತನ್ನು ಹೇಳಲಾಗುತ್ತದೆ.

ಹೋಲಿಕೆ = ನಾ.ಶ. : ೨೪-೨೮; ಸಾ.ದ. : ೩-೯೮; ಪ್ರತಾಪ : ೪-೫೬

## ೬೦. ಲೀಲಾಲಕ್ಷಣ :

**ಪ್ರಿಯಾನುಕರಣಂ ಲೀಲಾ ಮಧುರಾಂಗವಿಚೇಷ್ಟಿತೈಃ ॥ ೩೭ ॥**

ಅನು : ಮಧುರವಾದ ಅಂಗಗಳ ವಿಶೇಷವಾದ ಚೇಷ್ಟೆಗಳಿಂದ ಪ್ರಿಯನ [ವಾಕ್ ವೇಷ ಚೇಷ್ಟೆ ಮೊದಲಾದವ]ನ್ನು [ವಿನೋದ ಶೃಂಗಾರಕ್ಕಾಗಿ] ಅನುಕರಿಸುವುದು 'ಲೀಲಾ'.

ವ್ಯಾಖ್ಯೆ : ಇಲ್ಲಿಂದ ಸ್ವಭಾವಜಗಳನ್ನು ಹೇಳಲಾರಂಭಿಸಿದೆ. ಪ್ರಿಯಕೃತವಾದ ವಾಕ್ ವೇಷ ಚೇಷ್ಟೆಗಳನ್ನು ಶೃಂಗಾರವಾದ ಅಂಗಗಳಿಂದ ಅನುಕರಿಸುವುದು 'ಲೀಲಾ'. ಉದಾ:- [ಧನಿಕನದೇ] :

'ತಹ ದಿಟ್ಠಂ ತಹ ಭಣಿಅಂ ತಾಏ ಣಿಅದಂ ತಹಾ ತಹಾಸೀಣಂ ।
ಅವಲೋಇಅಂ ಸಅಣ್ಹಂ ಸವಿಬ್ಭಮಂ ಜಹ ಸವತ್ತೀಹಿಂ ॥'

[ಈಕೆಯ ನೋಟ, ಮಾತು, ನಿಯಂತ್ರಣ, ಕೂರುವಿಕೆ-ಎಲ್ಲವೂ ಆಕೆಯ ಸವತಿಯರು ಹೇಗೆ ಆಸೆ ವಿಭ್ರಮಗಳಿಂದ ನೋಡುತ್ತಾರೊ, ಹಾಗೆಯೇ ಇದೆ.]

ಮತ್ತು-[ಆಕರವಾಗಲಿ ಪೂರ್ಣ ಪಾಠವಾಗಲಿ ತಿಳಿಯದ ಪದ್ಯವೊಂದರ ಮೊದಲ ಸಾಲು]:

'ತೇನೋದಿತಂ ವದತಿ ಯಾತಿ ತಥಾ ಯಥಾಸೌ......' ಇತ್ಯಾದಿ.

[ಅವನು ಆಡಿದಂತೆಯೇ ಆಡುತ್ತಾಳೆ, ಆತ ನಡೆದಂತೆಯೇ ನಡೆಯುತ್ತಾಳೆ......ಇ,]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೧೪; ಸಾ.ದ. : ೩-೯೮, ೯೯; ಪ್ರತಾಪ : ೪-೫೭.

## ೬೧. ವಿಲಾಸಲಕ್ಷಣ :

**ತಾತ್ಕಾಲಿಕೋ ವಿಶೇಷಸ್ತು ವಿಲಾಸೋಽಂಗಕ್ರಿಯಾದಿಷು ।[1]**

ಅನು: [ಹೆಚ್ಚಿನ ಸಂತೋಷದಿಂದ] ಅಂಗ ಕ್ರಿಯೆ ಮುಂತಾದವುಗಳಲ್ಲಿ ಒಡನೆಯೇ [ಉಂಟಾಗುವ] ಹೆಚ್ಚಳವು 'ವಿಲಾಸ'.

ವ್ಯಾಖ್ಯೆ: ಪತಿಯನ್ನು ನೋಡುವ ಕಾಲದಲ್ಲಿ ಮುಂತಾಗಿ, ನಾಯಕಿಯ ಅಂಗಗಳಲ್ಲಿ ಕ್ರಿಯೆಗಳಲ್ಲಿ ಮಾತಿನಲ್ಲಿ ಹೆಚ್ಚಳವುಂಟಾಗುವುದು 'ವಿಲಾಸ'. ಉದಾ:- [ಮಾ.ಮಾ. : ೧-೨೯] :

'ಅತ್ರಾಂತರೇ ಕಿಮಪಿ ವಾಗ್ವಿಭವಾತಿವೃತ್ತವೈಚಿತ್ರ್ಯಮುಲ್ಲಸಿತವಿಭ್ರಮಮಾಯತಾಕ್ಷ್ಯಾಃ ।
ತದ್ಭೂರಿಸಾತ್ತ್ವಿಕವಿಕಾರವಿಶೇಷರಮ್ಯಮಾಚಾರ್ಯಕಂ ವಿಜಯಿ ಮಾನ್ಮಥಮಾವಿರಾಸೀತ್ ॥'

[ಅಷ್ಟರಲ್ಲಿ, ಆ ಅಗಲಗಣ್ಣಿನವಳ ವಾಗ್ವೈಭವದ ಯಾವುದೊ ವೈಚಿತ್ರ್ಯ, ಉಲ್ಲಸಿತಗೊಂಡ ವಿಭ್ರಮ, ರಮ್ಯವಾದ ಅಪರೂಪವಾದ ಆ ಸಾತ್ತ್ವಿಕವಿಕಾರವಿಶೇಷ – ಇವುಗಳಿಂದುಂಟಾದ ಸರ್ವಂ ಜಯವಾದ ಮನ್ಮಥಪ್ರಕಾಶವು ಪ್ರಕಟವಾಯಿತು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೧೫; ಸಾ.ದ. : ೩-೯೯, ೧೦೦; ಪ್ರತಾಪ : ೪-೫೯.

## ೬೨. ವಿಚ್ಛಿತ್ತಿಲಕ್ಷಣ :

**ಆಕಲ್ಪರಚನಾಽಲ್ಪಾಪಿ ವಿಚ್ಛಿತ್ತಿಃ ಕಾಂತಿಪೋಷಕೃತ್ ॥ ೩೮ ॥**

ಅನು : ಅಲ್ಪವಾಗಿದ್ದರೂ ಕೂಡ, ಕಾಂತಿಯನ್ನು ಹೆಚ್ಚಿಸುವಂತಹ [ವೇಷಭೂಷಣ ಇತ್ಯಾದಿ] ಅಲಂಕಾರರಚನೆಯು 'ವಿಚ್ಛಿತ್ತಿ'.

ವ್ಯಾಖ್ಯೆ : ವೇಷವು ಅಲ್ಪವಾಗಿದ್ದರೂ ಬಹುರೀತಿಯ ಚೆಲುವನ್ನು ಕೊಡುವಂತಿರುವುದು 'ವಿಚ್ಛಿತ್ತಿ'. ಉದಾ:- [ಕು.ಸಂ. : ೭-೧೭] :

'ಕರ್ಣಾರ್ಪಿತೋ ಲೋಧ್ರಕಷಾಯರೂಕ್ಷೇ ಗೋರೋಚನಾಭೇದನಿತಾಂತಗೌರೇ ।
ತಸ್ಯಾಃ ಕಪೋಲೇ ಪರಭಾಗಲಾಭಾದ್ಬಬಂಧ ಚಕ್ಷೂಂಷಿ ಯವಪ್ರರೋಹಃ ॥'

[ಲೋಧ್ರಲೇಪನದಿಂದ ಒರಟಾದ ಹಾಗೂ ಗೋರೋಚನದ ವಿನ್ಯಾಸದಿಂದ ಕೆಂಪೆಸೆಯುವ ಆಕೆಯ ಕಪೋಲದೆಡೆಯಲ್ಲಿ, ಕಿವಿಗೆ ತೊಟ್ಟ ಯವದ ಮೊಳಕೆ, ಬಣ್ಣದ ಹೆಚ್ಚಳದಿಂದ ಕಣ್ಣುಗಳನ್ನು ಸೆರೆಹಿಡಿಯುತ್ತಿದ್ದಿತು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೧೬; ಸಾ.ದ. : ೩-೧೦೦; ಪ್ರತಾಪ : ೪-೫೮.

---

೧ ಪಾಠ : ಕ್ರಿಯೋಕ್ತಿಷು.

## ೬೩. ವಿಭ್ರಮಲಕ್ಷಣ :

**ವಿಭ್ರಮಸ್ತ್ವರಯಾ ಕಾಲೇ ಭೂಷಾಸ್ಥಾನವಿಪರ್ಯಯಃ ।**

ಅನು : ಆತುರದ ವೇಳೆಯಲ್ಲಿ, [ಧರಿಸಿರುವ] ತೊಡಿಗೆಗಳು ಸ್ಥಾನಪಲ್ಲಟವಾಗಿರಲು [ಅದು] 'ವಿಭ್ರಮ'.

ವ್ಯಾಖ್ಯೆ : ಉದಾ– [ಆಕರ ತಿಳಿಯದ ಶ್ಲೋಕ] :

'ಅಭ್ಯುದ್ಗತೇ ಶಶಿನಿ ಪೇಶಲಕಾಂತದೂತೀಸಂಲಾಪಸಂವಲಿತಲೋಚನಮಾನಸಾಭಿಃ ।
ಅಗ್ರಾಹಿ ಮಂಡನವಿಧಿರ್ವಿಪರೀತಭೂಷಾವಿನ್ಯಾಸಹಾಸಿತಸಖೀಜನಮಂಗನಾಭಿಃ ॥'

[ಚಂದ್ರನು ಮೇಲೆದ್ದುಬಂದಾಗ, ಸುಂದರನಾದ ಪ್ರಿಯನ ದೂತಿ ಮಾತನಾಡುವುದನ್ನು ಕೇಳಿ ಕಣ್‌ಮನಗಳೆರಡೂ ಉಲ್ಲಸಿತವಾಗುತ್ತಿರಲು, ಪ್ರೇಯಸಿಯರು ತಮ್ಮ ಅಲಂಕಾರಕ್ಕೆ ತೊಡಗಿದರು. ಆತುರದಲ್ಲಿ ಆಭರಣ ತೊಡುವುದು ಹಿಂದುಮುಂದಾಗುತ್ತಿರಲು ಸಖೀಜನರು ನಗಲಾರಂಭಿಸಿದರು.]

ಮತ್ತು–[ಧನಿಕನವೇ] :

'ಶ್ರುತ್ವಾಯಾತಂ ಬಹಿಃ ಕಾಂತಮಸಮಾಪ್ತವಿಭೂಷಯಾ ।
ಭಾಲೇಂಽಜನಂ ದೃಶೋರ್ಲಾಕ್ಷಾ ಕಪೋಲೇ ತಿಲಕಃ ಕೃತಃ ॥'

[ಇನ್ನೂ ಅಲಂಕಾರ ಮುಗಿಯದಿರುವಾಗ, ಹೊರಗೆ ಪ್ರಿಯನು ಬಂದನೆಂದು ಕೇಳಿದ ಒಬ್ಬಳು (ಆತುರದಿಂದ) ಹಣೆಯಲ್ಲಿ ಅಂಜನವನ್ನೂ, ಕಣ್ಣುಗಳಲ್ಲಿ ಲಾಕ್ಷಾರಸವನ್ನೂ, ಕಪೋಲದಲ್ಲಿ ತಿಲಕವನ್ನೂ ಇಟ್ಟುಕೊಂಡಳು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪–೧೭; ಸಾ.ದ. : ೩–೧೦೪; ಪ್ರತಾಪ : ೪–೫೯.

## ೬೪. ಕಿಲಕಿಂಚಿತಲಕ್ಷಣ :

**ಕ್ರೋಧಾಶ್ರುಹರ್ಷಭೀತ್ಯಾದೇಃ ಸಂಕರಃ ಕಿಲಕಿಂಚಿತಮ್ ॥ ೩೯ ॥**

ಅನು : ಕ್ರೋಧ ಕಣ್ಣೀರು ಸಂತೋಷ ಹೆದರಿಕೆ ಇವುಗಳೆಲ್ಲದರ ಬೆರಕೆ 'ಕಿಲಕಿಂಚಿತ'.

ವ್ಯಾಖ್ಯೆ : ಉದಾ– [ಧನಿಕನವೇ] :

'ರತಿಕ್ರೀಡಾದ್ಯೂತೇ ಕಥಮಪಿ ಸಮಾಸಾದ್ಯ ಸಮಯಂ
ಮಯಾ ಲಬ್ಧೇ ತಸ್ಯಾಃ ಕ್ವಣಿತಕಲಕಂಠಾರ್ಧಮಧರೇ ।
ಕೃತಭ್ರೂಭಂಗಾಸೌ ಪ್ರಕಟಿತವಿಲಕ್ಷಾರ್ಧರುದಿತ –
ಸ್ಮಿತಕ್ರೋಧೋದ್ಭ್ರಾಂತಂ ಪುನರಪಿ ವಿದಧ್ಯಾನ್ಮಯಿ ಮುಖಮ್ ॥'

[ರತಿಕ್ರೀಡೆಯ ದ್ಯೂತದಲ್ಲಿ ಹೇಗೋ ಆಕೆಯ ಕೆಳದುಟಿಯನ್ನು ನಾನು ಕೊಂಡಾಗ, ಆಕೆ ತನ್ನ ಮಧುರಕಂಠದಿಂದ ಅಸ್ಫುಟವಾಗಿ ಶಬ್ದ ಮಾಡುತ್ತ, ಹುಬ್ಬು ಮುರಿದು, ನಾಚಿಕೆ ಅಳು ನಗು ಸಿಟ್ಟುಗಳಿಂದ ಕೂಡಿ ಭ್ರಾಂತವಾದ ಮುಖವನ್ನು ಪುನಃ ನನ್ನತ್ತ ತಿರುಗಿಸಿದಳು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೮–೧೮; ಸಾ.ದ. : ೩–೧೦೧; ಪ್ರತಾಪ : ೪–೬೦.

## ೬೫. ಮೋಟ್ಟಾಯಿತಲಕ್ಷಣ :

**ಮೋಟ್ಟಾಯಿತಂ ತು ತದ್ಭಾವಭಾವನೇಷ್ಟಕಥಾದಿಷು ।**

ಅನು : ಪ್ರಿಯಕಥನ ಮುಂತಾದವುಗಳಲ್ಲಿ [ಕೇಳಿದ] ಭಾವಗಳನ್ನು [ಮನಸ್ಸಿನಲ್ಲಿ ಹೊಸದಾಗಿ] ಭಾವಿಸಿಕೊಳ್ಳುವುದು 'ಮೋಟ್ಟಾಯಿತ'ವಾಗಿದೆ.

ವ್ಯಾಖ್ಯೆ: ಪ್ರಿಯತಮನ ಕಥೆಯ ಶ್ರವಣ ಮನನ ಮುಂತಾದುವುಗಳಿಂದ, ಆತನ ಬಗೆಗಿರುವ ಅನುರಾಗ ಕಾರಣವಾಗಿ, ಆ ಮನನಮಾಡಿದ ವಿಷಯವನ್ನು ಭಾವಿಸಿಕೊಳ್ಳುವ ಮನಃಸ್ಥಿತಿಯು 'ಮೋಟ್ಟಾಯಿತ'. ಉದಾ:- [ಪದ್ಮಗುಪ್ತನ ಶ್ಲೋಕ]೧.

'ಚಿತ್ರವರ್ತಿನ್ಯಪಿ ನೃಪೇ ತತ್ತ್ವಾವೇಶೇನ ಚೇತಸಿ ।
ವ್ರೀಡಾರ್ಧವಲಿತಂ ಚಕ್ರೇ ಮುಖೇಂದುಮಪಶ್ಯೈವ ಸಾ ॥'

[ರಾಜನ ಚಿತ್ರವನ್ನು ನೋಡಿ ಆತನಲ್ಲಿ ಉಂಟಾದ ಪ್ರೇಮದ ಆವೇಶದಿಂದ ಪರವಶಳಾದ ಆಕೆ ಲಜ್ಜಿತಳಾಗಿ ತನ್ನ ಶಶಿಮುಖವನ್ನು ಅರೆ ತಿರುಗಿಸಿದಳು.]

ಮತ್ತು-[ಆಕರ ತಿಳಿಯದು] :

'ಮಾತಃ ಕಿಂ ಹೃದಯೇ ನಿಧಾಯ ಸುಚಿರಂ ರೋಮಾಂಚಿತಾಂಗೀ ಮುಹು-
ರ್ಜೃಂಭಾಮಂಥರತಾರಕಾಂ ಸುಲಲಿತಾಪಾಂಗಾಂ ದಧಾನಾ ದೃಶಮ್।
ಸುಪ್ತೇವಾಲಿಖಿತೇವ ಶೂನ್ಯಹೃದಯಾ ಲೇಖಾವಶೇಷೀಭವ -
ಸ್ಯಾತ್ಮದ್ರೋಹಿಣಿ ಕಿಂ ಹ್ರಿಯಾ ಕಥಯ ಮೇ ಗೂಢೋ ನಿಹಂತಿ ಸ್ಮರಃ ॥'

[ಅಮ್ಮ, ಮತ್ತೆ ಮತ್ತೆ ಅನವರತವೂ ಮೆಯ್ ನವಿರೆದ್ದವಳಾಗಿ, ಆಕಳಿಕೆಯಿಂದ ಅಲಸಿತಗೊಂಡ ತಾರಕೆಗಳಿರುವ ಮಧುರವಾದ ಕಡೆಗಣ್ಣೋಟವಿರುವ ಕಣ್ಣುಗಳನ್ನು ಬಿಟ್ಟು, ಸುಪ್ತಳಾದವಳಂತೆ, ಬರೆದಿಟ್ಟ ಚಿತ್ರವೆಂಬಂತೆ ಶೂನ್ಯಹೃದಯಳಾಗಿ ಚಿತ್ರವತ್ಸ್ಥಿತಳಾಗಿರುವೆಯಲ್ಲ, ಎದೆಯಲ್ಲಿ ಏನನ್ನು ಬಚ್ಚಿಟ್ಟುಕೊಂಡಿರುವೆ? ಎಲೈ ಆತ್ಮದ್ರೋಹಿಣಿ, ರಹಸ್ಯವಾಗಿ ಮನ್ಮಥನು ನಿನ್ನನ್ನು ಪೀಡಿಸುತ್ತಿರುವನೇ? ನಾಚಿಕೆಯೇಕೆ, ನನ್ನೊಡನೆ ಹೇಳು.]

ಮತ್ತು-[ಧನಿಕನದೇ] :

'ಸ್ಮರದವಥುನಿಮಿತ್ತಂ ಗೂಢಮುನ್ನೇತುಮಸ್ಯಾಃ ಸುಭಗ ತವ ಕಥಾಯಾಂ ಪ್ರಸ್ತುತಾಯಾಂಸಖೀಭಿಃ ।
ಭವತಿ ವಿತತಪೃಷ್ಠೋದಸ್ತಪೀನಸ್ತನಾಗ್ರಾ ತತವಲಯಿತಬಾಹುರ್ಜೃಂಭಿತೈಃ ಸಾಂಗಭಂಗೈಃ ॥'

[ಎಲೈ ಸುಭಗ, ಆಕೆಯ ಕಾಮಪೀಡೆಯ ರಹಸ್ಯ ಕಾರಣವನ್ನರಿಯಲು ಸಖಿಯರು ನಿನ್ನ ಕಥೆಯನ್ನು ಆರಂಭಿಸಿದಾಗ ಆಕೆ, ತಲ ಹಸರಿಸಿ ಉನ್ನತ ಕುಚಾಗ್ರಗಳು ಮೇಲೆ ಸೆಟೆದಿರಲು ಆಕಳಿಕೆಯಿಂದ ಮೆಯ್ ಮುರಿಯುತ್ತ ಬಾಹುಗಳನ್ನು ಮುದುಡಿಸಿಬಿಡುತ್ತಾಳೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೧೯; ಸಾ.ದ. : ೩-೧೦೨; ಪ್ರತಾಪ : ೪-೬೧.

## ೬೬. ಕುಟ್ಟಮಿತಲಕ್ಷಣ :

**ಸಾನಂದಾಂತಃ ಕುಟ್ಟಮಿತಂ ಕುಪ್ಯೇತ್ ಕೇಶಾಧರಗ್ರಹೇ ॥ ೪೦ ॥**

ಅನು : [ಶೃಂಗಾರಸಮಯದಲ್ಲಿ ಪ್ರಿಯನು] ಕೂದಲು ತುಟಿಗಳನ್ನು ಹಿಡಿದಾಗ, ಒಳಗೆ ಆನಂದವಿದ್ದು [ತೋರಿಕೆಗೆ] ಕೋಪಗೊಳ್ಳುವುದು 'ಕುಟ್ಟಮಿತ'.

ವ್ಯಾಖ್ಯೆ : ಉದಾ:- [ಆಕರ ತಿಳಿಯದು] :

---

೧ ಈ ಉದಾಹರಣೆ ಪದ್ಮಗುಪ್ತನ 'ನವಸಾಹಸಾಂಕಚರಿತ'ದಿಂದ [೬-೪೨] ಆಯ್ದುಕೊಂಡದ್ದು.

'ನಾಂದೀಪದಾನಿ ರತಿನಾಟಕವಿಭ್ರಮಾಣಾಮಾಜ್ಞಾಕ್ಷರಾಣಿ ಪರಮಾಣ್ಯಥವಾ ಸ್ಮರಸ್ಯ।
ದಷ್ಟೇಧರೇ ಪ್ರಣಯಿನಾ ವಿಧುತಾಗ್ರಪಾಣೇಃ ಸೀತ್ಕಾರಶುಷ್ಕರುದಿತಾನಿ ಜಯಂತಿ ನಾರ್ಯಾಃ ॥'

[ಪ್ರಿಯತಮ ಕೆಳದುಟಿಯನ್ನು ಕಡಿದಾಗ ತುದಿಗೈಯನ್ನಲುಗಿಸುವ ನಾರಿಯರ ಸೀತ್ಕೃತಿ ಶುಷ್ಕರೋದನಗಳು ರತಿನಾಟಕವಿಭ್ರಮದ ನಾಂದೀಪದಗಳಂತೆ ಅಥವಾ ಮನ್ಮಥನ ಪರಮ ಆಜ್ಞಾಕ್ಷರಗಳಂತೆ ಸದಾ ವಿಜಯಿಯಾಗುತ್ತದೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೨೦; ಸಾ.ದ. : ೩-೧೦೩; ಪ್ರತಾಪ : ೪-೬೨.

## ೬೭. ಬಿಬ್ಬೋಕಲಕ್ಷಣ :

**ಗರ್ವಾಭಿಮಾನಾದಿಷ್ಟೇಽಪಿ ಬಿಬ್ಬೋಕೋಽನಾದರಕ್ರಿಯಾ।**

ಅನು : ಗರ್ವ ಅಭಿಮಾನಗಳಿಂದ, ಪ್ರಿಯವಾದದ್ದರಲ್ಲಿ ಕೂಡ ಅನಾದರವನ್ನು ತೋರಿಸುವುದು 'ಬಿಬ್ಬೋಕ'.

ವ್ಯಾಖ್ಯೆ : ಉದಾಃ- [ಧನಿಕನದೇ] :

'ಸವ್ಯಾಜಂ ತಿಲಕಾಲಕಾನ್ವಿರಲಯಂಲ್ಲೋಲಾಂಗುಲಿಃ ಸಂಸ್ಪೃಶನ್
ವಾರಂವಾರಮುದಂಚಯನ್ಕುಚಯುಗಪ್ರೋದಂಚಿನೀಲಾಂಚಲಮ್।
ಯದ್ಭ್ರೂಭಂಗತರಂಗಿತಾಂಚಿದೃಶಾ ಸಾವಜ್ಞಮಾಲೋಕಿತ -
ಸ್ತದ್ಗರ್ವಾದವಧೀರಿತೋಽಸ್ಮಿ ನ ಪುನಃ ಕಾಂತೇ ಕೃತಾರ್ಥೀಕೃತಃ ॥'

[ಯಾವುದೊ ನೆಪದಲ್ಲಿ ಬೆರಳುಗಳ ತುದಿಯಿಂದ ನಿನ್ನ ತಿಲಕಾಲಕಗಳನ್ನು ಮುಟ್ಟಿ ವಿರಲಗೊಳಿಸುವ, ಕುಚಯುಗವನ್ನು ಮುಚ್ಚಿರುವ ನೀಲಾಂಚಲವನ್ನು ಮತ್ತೆ ಮತ್ತೆ ಮೇಲಕ್ಕೆತ್ತುವ ನನ್ನನ್ನು, ಅವಜ್ಞೆಯಿಂದ ಕೊಂಕು ಹುಬ್ಬಿನ ಅಲನೋಟ ಚೆಲ್ಲಿ ಅವಮಾನಗೊಳಿಸಿದೆಯಾ? – ಇಲ್ಲ. ಎಲೈ ಕಾಂತೆ, ನಾನು ಕೃತಾರ್ಥನೇ ಆಗಿದ್ದೇನೆ.]

ಟಿಪ್ಪಣಿ : ಸಾ.ದ.ವಲ್ಲಿ ಇದಕ್ಕೆ 'ವಿವ್ವೋಕ'ಎಂದಿದೆ.

ಹೋಲಿಕೆ = ನಾ.ಶಾ. : ೨೪-೨೧; ಸಾ.ದ. : ೩-೧೦೦; ಪ್ರತಾಪ : ೪-೬೩.

## ೬೮. ಲಲಿತಲಕ್ಷಣ :

**ಸುಕುಮಾರಾಂಗವಿನ್ಯಾಸೋ ಮಸೃಣೋ ಲಲಿತಂ ಭವೇತ್ ॥ ೪೧ ॥**

ಅನು : ಸುಕುಮಾರವಾದ ಅಂಗದ ಮೃದುವಾದ ವಿನ್ಯಾಸವು 'ಲಲಿತ'ವಾಗುತ್ತದೆ.

ವ್ಯಾಖ್ಯೆ : ಉದಾಃ- [ಧನಿಕನದೇ] :

'ಸಭ್ರೂಭಂಗಂ ಕರಕಿಸಲಯಾವರ್ತನೈರಾಲಪಂತೀ
ಸಾ ಪಶ್ಯಂತೀ ಲಲಿತಲಲಿತಂ ಲೋಚನಸ್ಯಾಂಚಲೇನ।
ವಿನ್ಯಸ್ಯಂತೀ ಚರಣಕಮಲೇ ಲೀಲಯಾ ಸ್ವೈರಯಾತೈ-
ರ್ನಿಃಸಂಗೀತಂ ಪ್ರಥಮವಯಸಾ ನರ್ತಿತಾ ಪಂಕಜಾಕ್ಷೀ ॥'

[ಆ ಕಮಲನೇತ್ರೆಯು ಹುಬ್ಬುಗಳನ್ನು ಕುಣಿಸುತ್ತ ಚಿಗುರುಗೈಗಳನ್ನು ಆಡಿಸುತ್ತ ಮಾತನಾಡುತ್ತಾಳೆ; ಕಣ್ಣಿನ ಕುಡಿಯಿಂದ ಲಲಿತತರವಾಗಿ ನೋಡುತ್ತಾಳೆ; ಲೀಲೆಯಿಂದ ಚರಣಕಮಲಗಳನ್ನು ಇರಿಸುತ್ತಾಳೆ. ಹೀಗೆ ಪ್ರಥಮಯೌವನದಲ್ಲಿ ಆಕೆ ರಾಗತಾಲಗಳಿಲ್ಲದೆಯೇ ಸ್ವಚ್ಛಂದಗಮನದಿಂದ ನರ್ತಿಸುತ್ತಿದ್ದಾಳೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪-೨೨; ಸಾ.ದ. : ೩-೧೦೫; ಪ್ರತಾಪ : ೪-೬೪.

## ೬೯. ವಿಹೃತಲಕ್ಷಣ :

**ಪ್ರಾಪ್ತಕಾಲಂ ನ ಯದ್ಬ್ರೂಯಾದ್ವ್ರೀಡಯಾ ವಿಹೃತಂ ಹಿ ತತ್ ।**

ಅನು : [ಅನುಕೂಲವಾದ] ಸಮಯವೊದಗಿದಾಗ [ಕೂಡ] ನಾಚಿಕೆಯಿಂದ [ಹೇಳುವ ಮಾತನ್ನು] ಹೇಳದಿರುವುದು 'ವಿಹೃತ'.

ವ್ಯಾಖ್ಯೆ : ಯಾವುದೊಂದು ಮಾತನ್ನು, ಸಮಯಕ್ಕೆ ಒದಗುವಂತಿದ್ದರೂ ಕೂಡ ನಾಚಿಕೆಯಿಂದ ಹೇಳದೆ ಇರುವುದು 'ವಿಹೃತ'. ಉದಾ– [ಅಮರು : ಶ್ಲೋ. ೧೩೬] :

'ಪಾದಾಂಗುಷ್ಠೇನ ಭೂಮಿಂ ಕಿಸಲಯರುಚಿನಾ ಸಾಪದೇಶಂ ಲಿಖಂತೀ
ಭೂಯೋ ಭೂಯಃ ಕ್ಷಿಪಂತೀ ಮಯಿ ಸಿತಶಬಲೇ ಲೋಚನೇ ಲೋಲತಾರೇ ।
ವಕ್ತ್ರಂ ಹ್ರೀನಮ್ರಮೀಷತ್ಸ್ಫುರದಧರಪುಟಂ ವಾಕ್ಯಗರ್ಭಂ ದಧಾನಾ
ಯನ್ಮಾಂ ನೋವಾಚ ಕಿಂಚಿತ್ಸ್ಥಿತಮಪಿ ಹೃದಯೇ ಮಾನಸಂ ತದ್ದುನೋತಿ ॥'

[ಚಿಗುರುಹೊಗರಿನ ಕಾಲುಬೆರಳಿನಿಂದ ಏನೋ ನೆವದಲ್ಲಿ ನೆಲವನ್ನು ಗೀರುವ, ತಾರೆಗಳು ತಿರುಗುವ ಬಿಳಿಯ ಹಾಗೂ ಕಂದುಬಣ್ಣದ ಕಣ್ಣುಗಳನ್ನು ನನ್ನಲ್ಲಿ ನಟ್ಟಿರುವ, ನಾಚಿಕೆಯಿಂದ ಮುಖ ಬಾಗಿರುವ, ನುಡಿಬಸಿರುಳ್ಳ ತುಟಿ ತುಸುವಷ್ಟೆ ಅಲುಗುತ್ತಿರುವ–ಈಕೆ ತನ್ನ ಹೃದಯದಲ್ಲಿ ಏನೋ ಇಟ್ಟುಕೊಂಡು ಮಾತನಾಡದೆ ಇರುವ ಈ ಸ್ಥಿತಿ ನನ್ನನ್ನು ವ್ಯಥೆಗೊಳಿಸುತ್ತಿದೆ.]

ಟಿಪ್ಪಣಿ : ಸಾ.ದ.ದಲ್ಲಿ ಇದಕ್ಕೆ 'ವಿಕೃತ' ಎಂಬ ಪಾಠಾಂತರವಿದೆ.

ಹೋಲಿಕೆ = ನಾ.ಶಾ. : ೨೪–೨೩; ಸಾ.ದ. : ೩–೧೦೬; ಪ್ರತಾಪ : ೪–೬೭.

# ನಾಯಕನ ಕಾರ್ಯಾಂತರ ಸಹಾಯಕರು

## ೭೦. ಅರ್ಥಚಿಂತನೆಯಲ್ಲಿ ಸಹಾಯಕರು :

**ಮಂತ್ರೀ ಸ್ವಂ ವೋಭಯಂ ವಾಪಿ ಸಖಾ ತಸ್ಯಾರ್ಥಚಿಂತನೇ ॥ ೪೨ ॥**

ಅನು : ಆತನ [ಎಂದರೆ, ನಾಯಕನ] ಅರ್ಥಚಿಂತನೆಯಲ್ಲಿ ಮಂತ್ರಿ [ಅಥವಾ] ತಾನೇ ಅಥವಾ [ಸ್ವಯಂ ನಾಯಕ ಮತ್ತು ಮಂತ್ರಿ] ಇಬ್ಬರೂ ಜೊತೆಗಾರರು.

ವ್ಯಾಖ್ಯೆ : ನಾಯಕನ ಅರ್ಥಚಿಂತನೆಗಳಲ್ಲಿ ಎಂದರೆ, ತಂತ್ರಾವಾಪಾದಿಗಳಲ್ಲಿ[1] ಆತನಿಗೆ ಮಂತ್ರಿಯು ಸಹಾಯಕನಾಗಿರುತ್ತಾನೆ ಅಥವಾ ನಾಯಕನೇ ಸ್ವತಃ ಅರ್ಥಚಿಂತನೆ ಮಾಡುತ್ತಾನೆ ಅಥವಾ ಸ್ವಯಂ ನಾಯಕ ಮತ್ತು ಮಂತ್ರಿ ಇಬ್ಬರೂ ಕೂಡಿ ಅರ್ಥಚಿಂತನೆ ಮಾಡುತ್ತಾರೆ.

ಟಿಪ್ಪಣಿ : ಸಾ.ದ.[೩–೪೩]ದ ಮೂಲವ್ಯಾಖ್ಯೆಯಲ್ಲಿ ಈ ಭಾಗವನ್ನು ಹೀಗೆ ಟೀಕಿಸಿದೆ : ಈ ಭಾಗವನ್ನು ರಾಜನ ಅರ್ಥಚಿಂತನೆಯ ಉಪಾಯಗಳನ್ನು ಹೇಳುವಲ್ಲಿ ಹೇಳಬಹುದಾಗಿತ್ತಲ್ಲದೆ, ರಾಜನ ಸಹಾಯಕರ ವಿವರ ಹೇಳುವಲ್ಲಿ ಹೇಳಬಾರದಾಗಿತ್ತು. 'ನಾಯಕನ ಅರ್ಥಚಿಂತನೆಯಲ್ಲಿ ಮಂತ್ರಿ ಸಹಾಯಕನಾಗಿರುತ್ತಾನೆ' ಎಂದು ಮಾತ್ರ ಇಲ್ಲಿ ಹೇಳಿದ್ದರೆ ಸಾಕಾಗುತ್ತಿತ್ತು.

ಹೋಲಿಕೆ = ನಾ.ಶಾ. : ೩೪–೬೯ರಿಂದ ೭೪; ಸಾ.ದ. : ೩–೪೩.

---

೧ ಸ್ವರಾಷ್ಟ್ರ ಚಿಂತೆ 'ತಂತ್ರ'; ಪರರಾಷ್ಟ್ರ ಚಿಂತೆ 'ಅವಾಪ'.

## ೭೧. ಸಹಾಯದಲ್ಲಿ ವಿಭಾಗ :

**ಮಂತ್ರಿಣಾ ಲಲಿತಃ ಶೇಷಾ ಮಂತ್ರಿಸ್ವಾಯತ್ತಸಿದ್ಧಯಃ ।**

ಅನು : [ಧೀರ]ಲಲಿತ [ನಾಯಕ]ನ [ಎಲ್ಲಾ ಕಾರ್ಯಸಿದ್ಧಿಗಳು] ಮಂತ್ರಿಯಿಂದ [ಸಾಧಿಸಲ್ಪಡುತ್ತವೆ ಮತ್ತು]ಉಳಿದ [ಧೀರೋದಾತ್ತ, ಧೀರಶಾಂತ, ಧೀರೋದ್ಧತ ಮೊದಲಾದ]ವರ ಕಾರ್ಯಗಳು ಮಂತ್ರಿಯಿಂದ [ಮತ್ತು] ಸ್ವಂತವಾಗಿ ಸಾಧಿಸಲ್ಪಡುತ್ತವೆ.

ವ್ಯಾಖ್ಯೆ : ಧೀರೋದಾತ್ತ ಮುಂತಾದ ನಾಲ್ಕು ಬಗೆಯ ನಾಯಕರ ಲಕ್ಷಣವನ್ನು ಹಿಂದೆಯೇ [೨–೩ರಿಂದ ೬] ಹೇಳಿದೆ. ಅವರಲ್ಲಿ ಧೀರಲಲಿತನಾಯಕನು ತನ್ನ ಕಾರ್ಯಗಳನ್ನು ಮಂತ್ರಿಯಿಂದ ಮಾಡಿಸಿಕೊಳ್ಳುತ್ತಾನೆ. ಉಳಿದ ಧೀರೋದಾತ್ತಾದಿ ಮೂರು ಬಗೆಯ ನಾಯಕರು ತಮ್ಮ ಕಾರ್ಯಸಿದ್ಧಿಗಳನ್ನು ಸ್ವತಃ ತಾವೇ ಸಾಧಿಸಬಹುದು, ಮಂತ್ರಿಗಳಿಂದ ಸಾಧಿಸಬಹುದು ಇಲ್ಲವೆ ತಾವು ಮಂತ್ರಿಗಳು ಕೂಡಿ ಸಾಧಿಸಬಹುದು.

ಟಿಪ್ಪಣಿ : ಇಲ್ಲಿ, ನಾಯಕನ ಕಾರ್ಯಗಳೆಂದರೆ ಪ್ರಜಾಪಾಲನೆ ದೇಶಗಳ ಯೋಗಕ್ಷೇಮ ಮುಂತಾದವು. ಧೀರಲಲಿತನಾಯಕನು ಪ್ರಜಾಪಾಲನೆ ಮುಂತಾದವುಗಳಲ್ಲಿ ತಾನು ವಿಶೇಷ ಗಮನ ಕೊಡದೆ ಅವುಗಳನ್ನೆಲ್ಲ ಮಂತ್ರಿಯಿಂದಲೇ ಮಾಡಿಸಿಕೊಳ್ಳುತ್ತಾನೆ. ಉಳಿದ ನಾಯಕರು ಆ ಕಾರ್ಯಗಳನ್ನು ಮಂತ್ರಿಗೆ ವಹಿಸುವುದುಂಟು ಇಲ್ಲವೆ ತಾವೇ ಸ್ವತಃ ನೋಡಿಕೊಳ್ಳುವುದುಂಟು. ಅಥವಾ ಆ ಕಾರ್ಯಗಳನ್ನು ತಾವು ಮತ್ತು ಮಂತ್ರಿಗಳು ಕೂಡಿಯೇ ನಿರ್ವಹಿಸುವುದುಂಟು.

ಸಾ.ದ.[೩–೪೭]ದ ಮೂಲವ್ಯಾಖ್ಯೆಯಲ್ಲಿ ಈ ಭಾಗವನ್ನು ಹೀಗೆ ಟೀಕಿಸಿದೆ :

ಧೀರಲಲಿತನ ಲಕ್ಷಣದಿಂದಲೇ ಆತ ತನ್ನ ಕಾರ್ಯಗಳನ್ನು ಮಂತ್ರಿಗೆ ವಹಿಸುವನೆಂಬುದು ಸ್ಪಷ್ಟವಾಗುತ್ತದೆ. ಅದನ್ನು ಇಲ್ಲಿ ಬೇರೆ ಹೇಳಬೇಕಿರಲಿಲ್ಲ. ಮತ್ತು ಆತನ ಕಾರ್ಯಗಳೆಲ್ಲವನ್ನೂ ಮಂತ್ರಿಯೇ ನೋಡಿಕೊಳ್ಳುವುದು – ಎಂದರೆ, ಮಂತ್ರಿ ಕಾರ್ಯನಿರ್ವಾಹಕನೇ ಆಗುತ್ತಾನೆ; 'ಸಹಾಯಕ'ನಾಗುವುದಿಲ್ಲ.

## ೭೨. ಧರ್ಮಸಹಾಯಕರು :

**ಋತ್ವಿಕ್ಪುರೋಹಿತೌ ಧರ್ಮೇ ತಪಸ್ವಿಬ್ರಹ್ಮವಾದಿನಃ ॥ ೪೩ ॥**

ಅನು : ಋತ್ವಿಜ, ಪುರೋಹಿತ, ತಪಸ್ವಿ, ಬ್ರಹ್ಮವಾದಿ – ಇವರುಗಳು [ನಾಯಕನಿಗೆ] ಧರ್ಮದಲ್ಲಿ [ಎಂದರೆ, ಧರ್ಮಚಿಂತನೆ ಧರ್ಮಕಾರ್ಯ ಮುಂತಾದವುಗಳಲ್ಲಿ – ಸಹಾಯಕರಾಗುತ್ತಾರೆ].

ವ್ಯಾಖ್ಯೆ : ಬ್ರಹ್ಮ ಎಂದರೆ ವೇದ; ವೇದವನ್ನು ಹೇಳುವವರು ಅಥವಾ ವೇದವನ್ನು ಕಾಣುವವರು, ವೇದಶೀಲರಾಗಿರುವ ಕಾರಣ ಬ್ರಹ್ಮವಾದಿಗಳೆನ್ನಿಸಿಕೊಳ್ಳುತ್ತಾರೆ. ಅಥವಾ ಬ್ರಹ್ಮವಾದಿಗಳೆಂದರೆ ಆತ್ಮಜ್ಞಾನಿಗಳು. ಉಳಿದವು ಸ್ಪಷ್ಟವಾಗಿವೆ.

ಟಿಪ್ಪಣಿ : ಹೋಲಿಕೆ = ಸಾ.ದ. : ೩–೪೯.

## ೭೩. ದಂಡಸಹಾಯಕರು

**ಸುಹೃತ್ಕುಮಾರಾಟವಿಕಾ ದಂಡೇ ಸಾಮಂತಸೈನಿಕಾಃ ।**

ಅನು : ಸ್ನೇಹಿತ, ಕುಮಾರ (ಯುವರಾಜ), ಅರಣ್ಯರಕ್ಷಕ, ಸಾಮಂತರು, ಸೈನಿಕರುಗಳು–[ಇವರು ನಾಯಕನಿಗೆ] ದಂಡದಲ್ಲಿ [ಸಹಾಯಕರಾಗಿರುತ್ತಾರೆ].

ವ್ಯಾಖ್ಯೆ : ದಂಡ ಎಂದರೆ ದುಷ್ಟದಮನ. ದುಷ್ಟದಮನ ಕಾರ್ಯದಲ್ಲಿ ಮೇಲಿನವರು ನಾಯಕನಿಗೆ ಸಹಾಯಕರಾಗಿರುತ್ತಾರೆ.

ಟಿಪ್ಪಣಿ : ಹೋಲಿಕೆ = ಸಾ.ದ. : ೩-೪೫.

## ೭೪. ಅಂತಃಪುರಸಹಾಯಕರು :

**ಅಂತಃಪುರೇ ವರ್ಷವರಾಃ ಕಿರಾತಾ ಮೂಕವಾಮನಾಃ ॥ ೪೪ ॥**
**ಮ್ಲೇಚ್ಛಾಭೀರಶಕಾರಾದ್ಯಾಃ ಸ್ವಸ್ವಕಾರ್ಯೋಪಯೋಗಿನಃ ।**

ಅನು : ಅಂತಃಪುರದಲ್ಲಿ [ನಾಯಕನ ಸಹಾಯಕರು:] ವರ್ಷವರ (ನಪುಂಸಕ), ಕಿರಾತ, ಮೂಕ, ಕುಬ್ಜ, ಮ್ಲೇಚ್ಛ, ಆಭೀರ, ಶಕಾರ ಮುಂತಾದವರು. [ಇವರುಗಳು] ತಮ್ಮ ತಮ್ಮ [ನಿಯಮಿತ] ಕಾರ್ಯಗಳಲ್ಲಿ ಉಪಯೋಗಿಗಳಾಗುತ್ತಾರೆ.

ವ್ಯಾಖ್ಯೆ : ಶಕಾರ = ರಾಜನ ಪತ್ನಿಯ ಸಹೋದರ (ಭಾವ); ಆತ ರಾಜನಿಗಿಂತ ತುಸು ಕೆಳಗಿನ ಜಾತಿಯವನಾಗಿರುತ್ತಾನೆ.

ಟಿಪ್ಪಣಿ : ಹೋಲಿಕೆ = ಸಾ.ದ. : ೩-೪೩, ೪೪.

# ಸರ್ವಪಾತ್ರಗಳಲ್ಲಿನ ವಿಶೇಷಭೇದ

## ೭೫. ತಾರತಮ್ಯಭೇದ :

**ಜ್ಯೇಷ್ಠಮಧ್ಯಾಧಮತ್ವೇನ ಸರ್ವೇಷಾಂ ಚ ತ್ರಿರೂಪತಾ ॥ ೪೫ ॥**
**ತಾರತಮ್ಯಾದ್ಯಥೋಕ್ತಾನಾಂ ಗುಣಾನಾಂ ಚೋತ್ತಮಾದಿತಾ ।**

ಅನು : ಉತ್ತಮ ಮಧ್ಯಮ ಅಧಮ ಎಂದು ಎಲ್ಲ ಬಗೆಯ [ಪಾತ್ರಗಳ]ಲ್ಲಿಯೂ ಮೂರು ವಿಧಗಳು. ಹಿಂದೆ ಹೇಳಿದ ಗುಣಗಳ ತಾರತಮ್ಯದಿಂದ ಉತ್ತಮಾದಿ[ಮೂರು ವಿಧಗಳ ನಿಷ್ಕರ್ಷೆ].

ವ್ಯಾಖ್ಯೆ : ಹಿಂದೆ ಹೇಳಿರುವ ನಾಯಕ ನಾಯಿಕೆ ದೂತ ದೂತಿ ಮಂತ್ರಿ ಪುರೋಹಿತ ಮೊದಲಾದ ಎಲ್ಲ ಪಾತ್ರಗಳಿಗೂ ಉತ್ತಮ ಮಧ್ಯಮ ಅಧಮ ಭಾವಗಳಿಂದ ಮೂರು ವಿಧಗಳು ಉಂಟಾಗುತ್ತವೆ. ಈ ಬಗೆಯ ಉತ್ತಮಾದಿ ತಾರತಮ್ಯವು ಗುಣಗಳ ಸಂಖ್ಯೆಯಿಂದ ಉಂಟಾಗುವುದಿಲ್ಲ. ಎಂದರೆ, ಯಾವುದೊಂದು ಪಾತ್ರಕ್ಕೆ ಹೇಳಲಾದ ಗುಣಗಳ ಸಂಖ್ಯೆಯಲ್ಲಿ, ಹೆಚ್ಚು ಸಂಖ್ಯೆಯ ಗುಣಗಳನ್ನುಳ್ಳ ಪಾತ್ರವು ಉತ್ತಮ, ಕಡಿಮೆ ಸಂಖ್ಯೆಯ ಗುಣಗಳುಳ್ಳ ಪಾತ್ರವು ಮಧ್ಯಮ ಅಥವಾ ಕನಿಷ್ಠ ಎಂದು ನಿರ್ಧರಿಸಬಾರದು. ಬದಲು, ಯಾವುದೊಂದು ಪಾತ್ರದಲ್ಲಿರುವ ಗುಣದ ಹೆಚ್ಚಳದಿಂದ ಈ ತಾರತಮ್ಯ ನಿರ್ಧಾರ ಉಂಟಾಗುತ್ತದೆ.

ಟಿಪ್ಪಣಿ : ಒಂದು ವಿಶಿಷ್ಟ ಪಾತ್ರದ ಗುಣಗಳ ಸಂಖ್ಯೆ ಹತ್ತು ಎಂದು ಹೇಳಿರುವಲ್ಲಿ, ಆ ಹತ್ತೂ ಗುಣಗಳನ್ನುಳ್ಳ ಪಾತ್ರವೇ ಉತ್ತಮವಾಗುವುದಿಲ್ಲ. ಬದಲು, ಇರುವ ಗುಣಗಳು ಅತ್ಯುತ್ಕರ್ಷ ಸ್ಥಿತಿಯಲ್ಲಿ ಪ್ರಕಟವಾಗುವ ಪಾತ್ರವೇ ಉತ್ತಮ ಎನ್ನಿಸಿಕೊಳ್ಳುತ್ತದೆ - ಇದು ವ್ಯಾಖ್ಯೆಯ ತಾತ್ಪರ್ಯ.

ಹೋಲಿಕೆ : ನಾ.ಶಾ. : ೩೪-೨; ಸಾ.ದ. : ೩-೪೭.

## ೭೬. ಪಾತ್ರಗಳ ಜೋಡಣೆ :

**ಏವಂ ನಾಟ್ಯೇ ವಿಧಾತವ್ಯೋ ನಾಯಕಃ ೧ಸಪರಿಚ್ಛದಃ೧ ॥ ೪೬ ॥**

ಅನು : ಹೀಗೆ ನಾಟ್ಯದಲ್ಲಿ ಸಹಾಯಕರನ್ನು [ಎಂದರೆ, ನಾಯಿಕೆ ಮಂತ್ರಿ ಪುರೋಹಿತ ದಾಸ ದಾಸಿಯರನ್ನು] ಒಡಗೂಡಿರುವ ನಾಯಕನನ್ನು ಚಿತ್ರಿಸತಕ್ಕದ್ದು.

ವ್ಯಾಖ್ಯೆ : ಈ ವರೆಗೆ ನಾಯಕನನ್ನು ಕುರಿತು ಹೇಳಿಯಾಯಿತು; ಇನ್ನು ಆತನ ವ್ಯಾಪಾರಗಳನ್ನು ಲಕ್ಷಿಸಲಾಗುತ್ತದೆ.

# ಕೈಶಿಕೀವೃತ್ತಿ

## ೭೭. ವೃತ್ತಿಗಳಲ್ಲಿ ಕೈಶಿಕೀ :

**ತದ್ವ್ಯಾಪಾರಾತ್ಮಿಕಾ ವೃತ್ತಿಶ್ಚತುರ್ಧಾ ತತ್ರ ಕೈಶಿಕೀ ।**
**ಗೀತನೃತ್ಯವಿಲಾಸಾದ್ಯೈರ್ಮೃದು ಶೃಂಗಾರಚೇಷ್ಟಿತೈಃ ॥ ೪೭ ॥**

ಅನು : ಅವನ ವ್ಯಾಪಾರಾತ್ಮಕವಾಗಿರುವ [ಎಂದರೆ, ನಾಯಕನ ಕಾರ್ಯವಿಶೇಷ ಗಳಿಂದ ಸಿದ್ಧವಾಗುವ] 'ವೃತ್ತಿ'ಗಳು ನಾಲ್ಕು ವಿಧ. ಅಲ್ಲಿ [ಎಂದರೆ, ಆ ನಾಲ್ಕು ವೃತ್ತಿಗಳಲ್ಲಿ ಒಂದಾದ] 'ಕೈಶಿಕೀ [ವೃತ್ತಿಯು]' ಗೀತ ನೃತ್ಯ ವಿಲಾಸಗಳುಳ್ಳ ಶೃಂಗಾರ ಚೇಷ್ಟಿತಗಳಿಂದ ಲಲಿತವಾಗಿರುತ್ತದೆ.

ವ್ಯಾಖ್ಯೆ : ನಾಯಕನ ಪ್ರವೃತ್ತಿರೂಪವಾದ ಕಾರ್ಯವಿಶೇಷಗಳ ಸ್ವಭಾವವು 'ವೃತ್ತಿ'. ಕೈಶಿಕೀ, ಸಾತ್ತ್ವತೀ, ಆರಭಟೀ, ಭಾರತೀ – ಭೇದಗಳಿಂದ ವೃತ್ತಿಯು ನಾಲ್ಕು ವಿಧವಾಗಿದೆ. ಅವುಗಳಲ್ಲಿ ಕೈಶಿಕೀವೃತ್ತಿಯು ಗೀತ ನೃತ್ಯ ವಿಲಾಸ ಕಾಮೋಪಭೋಗ ಮೊದಲಾದವುಗಳಿಂದ ಕೂಡಿರುವ ಶೃಂಗಾರ ವ್ಯಾಪಾರವಾಗಿರುತ್ತದೆ ಹಾಗೂ ಅದರ ಫಲವು ಕಾಮವಾಗಿರುತ್ತದೆ.

ಟಿಪ್ಪಣಿ : ಈ ನಾಲ್ಕು ವೃತ್ತಿಗಳು ಹೇಗೆ ಹುಟ್ಟಿದುವೆಂಬುವನ್ನು ಕುರಿತ ಕಥೆ ನಾ.ಶಾ. [೨೨ನೇ ಅಧ್ಯಾಯ]ದಲ್ಲಿ ಬಂದಿದೆ.

ಹೋಲಿಕೆ = ನಾ.ಶಾ. : ೨೨-೪೭; ಸಾ.ದ. : ೬-೧೨೪; ಪ್ರತಾಪ : ೨-೧೫.

## ೭೮. ಕೈಶಿಕ್ಯಂಗಗಳು :

**ನರ್ಮತತ್೨ಸ್ಫಿಂಜ೨ತತ್‌ಸ್ಫೋಟತದ್ಗರ್ಭೈಶ್ಚತುರಂಗಿಕಾ ।**

ಅನು : [ಕೈಶಿಕೀವೃತ್ತಿಯು] ನರ್ಮ, ನರ್ಮಸ್ಫಿಂಜ, ನರ್ಮಸ್ಫೋಟ, ನರ್ಮಗರ್ಭ– ಎಂಬ ನಾಲ್ಕು ಅಂಗಗಳನ್ನುಳ್ಳದ್ದಾಗಿದೆ.

---

೧ ಪಾಠ : ಸಪರಿಗ್ರಹಃ

೨ ಪಾಠ : 'ಸ್ಫಂಜ'. 'ನರ್ಮಸ್ಫಿಂಜ'ಕ್ಕೆ ಒಂದೊಂದು ಗ್ರಂಥದಲ್ಲಿ ಒಂದೊಂದು ಬಗೆಯ ಹೆಸರಿದೆ; ಒಂದೇ ಗ್ರಂಥದಲ್ಲಿ ಕೂಡ ಹಲವು ಪಾಠಗಳನ್ನು ಕಾಣಬಹುದು : ನರ್ಮಸ್ಫಂಜ, ನರ್ಮಸ್ಫೂರ್ಜ, ನರ್ಮಸ್ಫುಂಜ, ನರ್ಮಸ್ಫಿಜ ಇತ್ಯಾದಿಯಾಗಿ

ವ್ಯಾಖ್ಯೆ : [ಕಾರಿಕೆಯಲ್ಲಿರುವ] 'ತತ್' ಎಂಬ ಪದವು ಎಲ್ಲೆಡೆಯಲ್ಲಿಯೂ 'ನರ್ಮ' ಎಂಬ ಪದವನ್ನು ಸೂಚಿಸುತ್ತವೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೪೮; ಸಾ.ದ. : ೬-೧೨೫.

## ೭೯. ನರ್ಮಲಕ್ಷಣ :

**ವೈದಗ್ಧ್ಯಕ್ರೀಡಿತಂ ನರ್ಮ ಪ್ರಿಯೋಪಚ್ಛಂದನಾತ್ಮಕಮ್ ॥ ೪೮ ॥**

**ಹಾಸ್ಯೇನೈವ ಸಶೃಂಗಾರಭಯೇನ ವಿಹಿತಂ ತ್ರಿಧಾ ।**
**ಆತ್ಮೋಪಕ್ಷೇಪಸಂಭೋಗಮಾನೈಃ ಶೃಂಗಾರ್ಯಪಿ ತ್ರಿಧಾ ॥ ೪೯ ॥**

**ಶುದ್ಧಮಂಗಂ ಭಯಂ ದ್ವೇಧಾ ತ್ರೇಧಾ ವಾಗ್ವೇಷಚೇಷ್ಟಿತೈಃ ।**
**ಸರ್ವಂ ಸಹಾಸ್ಯಮಿತ್ಯೇವಂ ನರ್ಮಾಷ್ಟಾದಶಧೋದಿತಮ್ ॥ ೫೦ ॥**

ಅನು : ಪ್ರಿಯನನ್ನು [ಅಥವಾ ಪ್ರಿಯಳನ್ನು] ಪ್ರಸನ್ನಗೊಳಿಸುವಂತಹ ಕುಶಲವಾದ ಕ್ರೀಡೆ 'ನರ್ಮ'. [ಅದು]ಕೇವಲ ಹಾಸ್ಯದಿಂದ [ಅಥವಾ] ಶೃಂಗಾರಸಮೇತವಾಗಿ [ಅಥವಾ] ಭಯದಿಂದ ಕೂಡಿದ್ದು – ಹೀಗೆ ಮೂರು ವಿಧ. ಶೃಂಗಾರಿಯಲ್ಲಿ [ಎಂದರೆ, ಶೃಂಗಾರನರ್ಮದಲ್ಲಿ] ಕೂಡ, ಆತ್ಮೋಪಕ್ಷೇಪದಿಂದ [ಎಂದರೆ, ಅನುರಾಗವನ್ನು ಸ್ವತಃ ಸೂಚಿಸುವುದರಿಂದ], ಸಂಭೋಗದಿಂದ [ಮತ್ತು] ಮಾನದಿಂದ – [ಹೀಗೆ] ಮೂರು ವಿಧಗಳು. ಭಯವು [ಎಂದರೆ, ಭಯನರ್ಮವು] ಶುದ್ಧ ಅಂಗ – ಎಂದು ಎರಡು ವಿಧವಾಗಿದೆ. ವಾಕ್, ವೇಷ, ಚೇಷ್ಟೆ–ಇವುಗಳಿಂದ [ಪುನಃ]ಎಲ್ಲವೂ ಮೂರು ವಿಧವಾಗುತ್ತದೆ. ಹೀಗೆ ಹಾಸ್ಯಾತ್ಮಕವಾಗಿರುವ ನರ್ಮವು ಹದಿನೆಂಟು ವಿಧವಾಗಿದೆ.

ವ್ಯಾಖ್ಯೆ : ಪ್ರಿಯಜನರನ್ನು ಪ್ರಸನ್ನಗೊಳಿಸುವಂತಹ ಅಶ್ಲೀಲವಲ್ಲದ ಪರಿಹಾಸವು 'ನರ್ಮ'. ಅದು ಶುದ್ಧವಾದ ಹಾಸ್ಯವಾಗಿರಬಹುದು; ಶೃಂಗಾರದಿಂದ ಕೂಡಿದ ಹಾಸ್ಯವಿರಬಹುದು; ಭಯಸಹಿತವಾದ ಹಾಸ್ಯವಿರಬಹುದು – ಹೀಗೆ ಅದು ಮೂರು ವಿಧವಾಗಿದೆ. ಶೃಂಗಾರ ನರ್ಮದಲ್ಲಿ ಕೂಡ ಪುನಃ ಮೂರು ವಿಧಗಳಿವೆ : ತನ್ನ ಅನುರಾಗವನ್ನು ಸ್ವತಃ ಹೇಳಿಕೊಳ್ಳುವಂಥದು, ಸಂಭೋಗೇಚ್ಛೆಯನ್ನು ಪ್ರಕಟಿಸುವುದು, ಅಪರಾಧಿಯಾದ ಪ್ರಿಯನ [ಅಥವಾ ಪ್ರಿಯಳ] ಭೇದನಕ್ಕಾಗಿ ಗಂಭೀರವಾಗುವುದು – ಹೀಗೆ. ಭಯನರ್ಮವು ಎರಡು ವಿಧವಾಗಿದೆ: ಶುದ್ಧ ಮತ್ತು ಬೇರೊಂದು ರಸದ ಅಂಗವಾಗಿರುವುದು–ಹೀಗೆ. ಈ ಆರು ವಿಧಗಳು ಒಂದೊಂದೂ ವಾಕ್, ವೇಷ, ಚೇಷ್ಟೆ ಈ ಮೂರು ಭೇದಗಳಿಂದ ಪ್ರಕಟವಾಗುವುವಾದ ಕಾರಣ ಒಟ್ಟು ಭೇದಗಳು ಹದಿನೆಂಟು. [ಟಿ. : ನರ್ಮ ಎಂದರೆ ವಿಶಿಷ್ಟವಾದ ಪರಿಹಾಸ; ಆ ಪರಿಹಾಸ ಶುದ್ಧವಾಗಿರಬಹುದು; ಶೃಂಗಾರಪರಿಹಾಸವಾಗಿ ಮೂರು ವಿಧಗಳಾಗಿರಬಹುದು; ಭಯಪರಿಹಾಸವಾಗಿ ಎರಡು ವಿಧಗಳಾಗಿರಬಹುದು. ಶುದ್ಧನರ್ಮ, ಶೃಂಗಾರನರ್ಮದ ಮೂರು ಭೇದ ಮತ್ತು ಭಯನರ್ಮದ ಎರಡು ಭೇದ–ಹೀಗೆ ಆರು ಭೇದಗಳಾದವಷ್ಟೆ. ಈ ಒಂದೊಂದೂ ಮಾತು, ವೇಷ, ಚೇಷ್ಟೆ – ಇವುಗಳಿಂದ ಮೂರು ವಿಧವಾಗುತ್ತವೆ. ಅಲ್ಲಿಗೆ ಒಟ್ಟಿನಲ್ಲಿ ಹದಿನೆಂಟು ಭೇದಗಳಾಗುತ್ತವೆ.]

ಮಾತಿನ ಹಾಸ್ಯನರ್ಮಕ್ಕೆ ಉದಾ:– [ಕು.ಸಂ. : ೭–೧೯] :

'ಪತ್ಯುಃ ಶಿರಶ್ಚಂದ್ರಕಲಾಮನೇನ ಸ್ಪೃಶೇತಿ ಸಖ್ಯಾ ಪರಿಹಾಸಪೂರ್ವಮ್ ।
ಸಾ ರಂಜಯಿತ್ವಾ ಚರಣೌ ಕೃತಾಶೀರ್ಮಾಲ್ಯೇನ ತಾಂ ನಿರ್ವಚನಂ ಜಘಾನ ॥'

[ಪಾರ್ವತಿಯ ಚರಣಗಳನ್ನು ಅಲಂಕರಿಸಿ ಅವಳ ಸಖಿಯು, 'ಇವುಗಳಿಂದ ನಿನ್ನ ಪತಿಯ ಶಿರದಲ್ಲಿರುವ ಚಂದ್ರಕಲೆಯನ್ನು ಸ್ಪರ್ಶಿಸು' ಎಂದು ಪರಿಹಾಸಪೂರ್ವಕವಾಗಿ ಹರಸಲು ಪಾರ್ವತಿ ಅದಕ್ಕೆ ಉತ್ತರ ಕೊಡದೆ ಪುಷ್ಪಮಾಲಿಕೆಯಿಂದ ಸಖಿಯನ್ನು ಪ್ರಹರಿಸಿದಳು.]

ವೇಷನರ್ಮಕ್ಕೆ ಉದಾ:- ನಾಗಾನಂದದಲ್ಲಿನ ವಿದೂಷಕ ಶೇಖರಕನ ಪಾತ್ರ.

ಕ್ರಿಯಾ(ಚೇಷ್ಟಾ)ನರ್ಮಕ್ಕೆ ಉದಾ:- ಮಾಲವಿಕಾಗ್ನಿಮಿತ್ರದಲ್ಲಿ : ಕನವರಿಸುತ್ತಿರುವ ವಿದೂಷಕನ ಮೇಲೆ ನಿಪುಣಿಕೆ ದಂಡಕಾಷ್ಠವನ್ನೆಸೆದು ಸರ್ಪಭ್ರಾಂತಿಯನ್ನುಂಟುಮಾಡುವುದು.

ಶೃಂಗಾರಸಹಿತವಾದ ಆತ್ಮೋಪಕ್ಷೇಪನರ್ಮಕ್ಕೆ ಉದಾ:- [ಆಕರ ತಿಳಿಯದು] :

> 'ಮಧ್ಯಾಹ್ನಂ ಗಮಯ ತ್ಯಜ ಶ್ರಮಜಲಂ ಸ್ಥಿತ್ವಾ ಪಯಃ ಪೀಯತಾಂ
>
> ಮಾ ಶೂನ್ಯೇತಿ ವಿಮುಂಚ ಪಾಂಥ ವಿವಶಃ ಶೀತಃ ಪ್ರಪಾಮಂಡಪಃ ।
>
> ತಾಮೇವ ಸ್ಮರ ಘಸ್ಮರಸ್ಮರಶರತ್ರಸ್ತಾಂ ನಿಜಪ್ರೇಯಸೀಂ
>
> ತ್ವಚ್ಚಿತ್ತಂ ತು ನ ರಂಜಯಂತಿ ಪಥಿಕ ಪ್ರಾಯಃ ಪ್ರಪಾಪಾಲಿಕಾಃ ॥'

[ಮಧ್ಯಾಹ್ನ ಕಳೆದು ಹೋಗುವವೆಯಂತೆ. ಬೆವರಾರಿಸಿಕೊ. ನೀರನ್ನು ಕುಡಿ. ಎಲೈ ಪಾಂಥ, ನಿರ್ಜನವಾಗಿದೆಯೆಂದು ಹೊರಟುಬಿಡಬೇಡ. ಇಲ್ಲಿ ತಂಪಾದ ಪ್ರಪಾಮಂಡಪವಿದೆ. ಕಾಮನ ತೀಕ್ಷ್ಣ ಬಾಣಗಳಿಂದ ನೋಯುವ ನಿನ್ನ ಪ್ರೇಯಸಿಯನ್ನೆ ಬೇಕಿದ್ದರೆ ಸ್ಮರಿಸು. ಏಕೆಂದರೆ, ಎಲೈ ಪಥಿಕ, ಪ್ರಾಯಶಃ ಇಲ್ಲಿನ ಅರವಟ್ಟಿಗೆಯ ಹೆಣ್ಣುಗಳು ನಿನ್ನ ಚಿತ್ತವನ್ನು ರಂಜಿಸಲಾರರು.]

ಸಂಭೋಗನರ್ಮಕ್ಕೆ ಉದಾ:- [ಗಾಥಾ. : ೨-೩೦] :

> 'ಸಾಲೋಏ ವ್ವಿಅ ಸೂರೇ ಘರಿಣೀ ಘರಸಾಮಿಅಸ್ಸ ಘೇತ್ತೂಣ ।
>
> ಣೇಚ್ಛಂ ತಸ್ಸ ವಿ ಪಾಏ ಧುಅಇ ಹಸಂತೀ ಹಸಂತಸ್ಸ ॥'

[ಸೂರ್ಯನು ಕಣ್ಣೆದುರು ತೋರುತ್ತಿದ್ದಾಗ ಕೂಡ (ಹಗಲಿನಲ್ಲಿ ಕೂಡ) ಗೃಹಿಣಿಯು, ಆತನಿಗೆ ಇಚ್ಛೆಯಿಲ್ಲ ದಿದ್ದರೂ, ನಗುತ್ತಿರುವ ತನ್ನ ಗೃಹನಾಥನ ಕಾಲುಗಳನ್ನು ನಗುತ್ತ ಅಲುಗಿಸುತ್ತಿದ್ದಾಳೆ.]

ಮಾನನರ್ಮಕ್ಕೆ ಉದಾ:- [ಹಾಲ.] :

> 'ತದವಿತಥಮವಾದೀರ್ಯನ್ಮಮ ತ್ವಂ ಪ್ರಿಯೇತಿ ಪ್ರಿಯಜನಪರಿಭುಕ್ತಂ
>
> ಯದ್ದುಕೂಲಂ ದಧಾನಃ ।
>
> ಮದಧಿವಸತಿಮಾಗಾಃ ಕಾಮಿನಾಂ ಮಂಡನಶ್ರೀರ್ವ್ರಜತಿ ಹಿ ಸಫಲತ್ವಂ
>
> ವಲ್ಲಭಾಲೋಕನೇನ ॥'

[(ಅಪರಾಧಿಯಾದ ಪತಿಯನ್ನು ಕುರಿತು ಹೇಳುವ ವ್ಯಂಗ್ಯವಚನ :) ನಾನು ನಿನ್ನ ಪ್ರಿಯೆಯೆಂದು ನೀನು ಹೇಳುತ್ತಿದ್ದ ಮಾತು ಸುಳ್ಳಲ್ಲ. ನಿನ್ನ ಪ್ರಿಯೆ ಬಳಸಿದ ದುಕೂಲವನ್ನು ಧರಿಸಿ ನನ್ನ ಮನೆಗೆ ಬಂದಿದ್ದೀಯೆ. ಕಾಮಿಗಳ ಅಲಂಕಾರಸೌಭಾಗ್ಯ ಪ್ರಿಯಾವಲೋಕನದಿಂದಲೇ ಸಫಲವಾಗುತ್ತದೆಯಲ್ಲವೆ?]

ಭಯನರ್ಮಕ್ಕೆ ಉದಾ:- [ರತ್ನಾ. : ೨ನೇ ಅಂಕ ಆಲೇಖ್ಯದರ್ಶನಾವಸರದಲ್ಲಿ] : ಸುಸಂಗತಾ : 'ಜಾಣಿದೋ ಮಏ ಏಸೋ ಸವ್ವೋ ವುತ್ತಂತೋ ಸಮಂ ಚಿತ್ತಫಲಏಣ । ತಾ ದೇವೀಏ ಣಿವೇದಇಸ್ಸಂ ।' ಇತ್ಯಾದಿ [ಈ ಚಿತ್ರಫಲಕದಿಂದ ಎಲ್ಲ ವೃತ್ತಾಂತವೂ ತಿಳಿಯಿತು. ಈ ವಿಷಯವನ್ನು ನಾನು ದೇವಿಗೆ ತಿಳಿಸುತ್ತೇನೆ.]

ಶೃಂಗಾರದ ಅಂಗವಾಗಿ ಬಂದ ಭಯನರ್ಮಕ್ಕೆ ಉದಾ:- [ಧನಿಕನದೇ] :

> 'ಅಭಿವ್ಯಕ್ತಾಲೀಕಃ ಸಕಲವಿಫಲೋಪಾಯವಿಭವ -
>
> ಶ್ಚಿರಂ ಧ್ಯಾತ್ವಾ ಸದ್ಯಃ ಕೃತಕೃತಕಸಂರಂಭನಿಪುಣಮ್ ।
>
> ಇತಃ ಪೃಷ್ಠೇ ಪೃಷ್ಠೇ ಕಿಮಿದಮಿತಿ ಸಂತ್ರಾಸ್ಯ ಸಹಸಾ
>
> ಕೃತಾಶ್ಲೇಷಂ ಧೂರ್ತಃ ಸ್ಮಿತಮಧುರಮಾಲಿಂಗತಿ ವಧೂಮ್ ॥'

[ತನ್ನ ದೋಷ ಪ್ರಕಟವಾಗಿರುವವನೊಬ್ಬನು, ಅದನ್ನು ಮುಚ್ಚಲು ಅನೇಕ ಉಪಾಯಗಳನ್ನು ಮಾಡಿ ಅವೆಲ್ಲ ವಿಫಲಗೊಂಡು ಸೋತನು. ಆವರೆ ಪುನಃ, ಒಡನೊಡನೆಯೇ ಕೃತಕ ಭ್ರಮೆ ಹುಟ್ಟಿಸುವುದರಲ್ಲಿ ನಿಪುಣನಾದ ಆ ಧೂರ್ತನು ಬಹುಕಾಲ ಚಿಂತಿಸಿ, 'ಇದೇನು ಹಿಂದೆ, ಹಿಂದೆ?' ಎಂದು ಆಕೆಯನ್ನು ಭೀತಿಗೊಳಿಸಿ ಮಧುರವಾಗಿ ನಗುತ್ತ ಒಮ್ಮೆಲೆ ಆಕೆಯನ್ನು ಅಪ್ಪಿಬಿಡುತ್ತಾನೆ]

ಟಿಪ್ಪಣಿ : ೧-೫೭ ರಲ್ಲಿ ಬರುವ 'ನರ್ಮ'ಕ್ಕೂ ಇದಕ್ಕೂ ಸಂಬಂಧವಿಲ್ಲ.

ಹೋಲಿಕೆ = ನಾ.ಶಾ. : ೨೨-೪೯, ೫೦; ಸಾ.ದ. : ೬-೧೨೫, ೧೨೬

## ೮೦. ನರ್ಮಸ್ಫಿಂಜಲಕ್ಷಣ :

ನರ್ಮಸ್ಫಿಂಜಃ[1] ಸುಖಾರಂಭೋ ಭಯಾಂತೋ ನವಸಂಗಮೇ ।

ಅನು : [ಪ್ರಿಯರ] ನೂತನ ಸಮಾಗಮವಾದಾಗ ಆರಂಭದಲ್ಲಿ ಸುಖವುಂಟಾಗಿ ಕೊನೆಯಲ್ಲಿ ಭಯವುಂಟಾಗುವುದು 'ನರ್ಮಸ್ಫಿಂಜ'.

ವ್ಯಾಖ್ಯೆ : ಉದಾ:- [ಮಾಲ.ಮಿ. : ೪-೧೩] : ಸಂಕೇತಸ್ಥಳಕ್ಕೆ ಅಭಿಸಾರ ಬಂದ ಮಾಲವಿಕೆಯನ್ನು ಕುರಿತು ನಾಯಕ :

'ವಿಸೃಜ ಸುಂದರಿ ಸಂಗಮಸಾಧ್ವಸಂ ನನು ಚಿರಾತ್ಪ್ರಭೃತಿ ಪ್ರಣಯೋನ್ಮುಖೇ ।
ಪರಿಗೃಹಾಣ ಗತೇ ಸಹಕಾರತಾಂ ತ್ವಮತಿಮುಕ್ತಲತಾಚರಿತಂ ಮಯಿ ।

ಮಾಲವಿಕಾ : ಭಟ್ಟಾ, ದೇವೀಏ ಭಯೇಣ ಅತ್ತಣೋ ವಿ ಪಿಅಂ ಕಾಉಂ ಣಪಾರೇಮಿ ।'

[ಎಲೈ ಸುಂದರಿ, ನೂತನ ಸಂಗಮದ ಭೀತಿಯನ್ನು ಬಿಡು. ಬಹುಕಾಲದಿಂದ ನಿನ್ನ ಪ್ರಣಯಕ್ಕಾಗಿ ಎದುರುನೋಡುತ್ತಿದ್ದೇನೆ. ಸಹಕಾರ(ಮಾವಿನ ಮರ)ದಂತಿರುವ ನನ್ನಲ್ಲಿ ಅತಿಮುಕ್ತದ ಬಳ್ಳಿಯಂತೆ ನಡೆಮುಕೋ.
ಮಾಲವಿಕೆ : ಒಡೆಯ, ನನಗೆ ಪ್ರಿಯವಾಗಿದ್ದರೂ ದೇವಿಯ ಭಯದಿಂದಾಗಿ ನಾನು ಏನೂ ಮಾಡಲಾರಳಾಗಿದ್ದೇನೆ. ]

ಟಿಪ್ಪಣಿ : ನೋಡಿ : ೭೮ನೇ ಖಂಡದ ಅಡಿಟಿಪ್ಪಣಿ.

ಹೋಲಿಕೆ = ನಾ.ಶಾ. : ೨೨-೫೧; ಸಾ.ದ. : ೬-೧೨೭.

## ೮೧. ನರ್ಮಸ್ಫೋಟಲಕ್ಷಣ :

ನರ್ಮಸ್ಫೋಟಸ್ತು ಭಾವಾನಾಂ ಸೂಚಿತೋಽಲ್ಪರಸೋ ಲವೈಃ ॥ ೫೧ ॥

ಅನು : ಲೇಶಮಾತ್ರವಾದ ಭಾವಗಳಿಂದ ರಸವು ಕಿಂಚಿತ್ತಾಗಿ ಸೂಚಿತವಾಗುವುದು 'ನರ್ಮಸ್ಫೋಟ'.

ವ್ಯಾಖ್ಯೆ : ಉದಾ:- [ಮಾ.ಮಾ. : ೧-೨೦] : ಮಕರಂದಃ-

'ಗಮನಮಲಸಂ ಶೂನ್ಯಾ ದೃಷ್ಟಿಃ ಶರೀರಮಸೌಷ್ಠವಂ
ಶ್ವಸಿತಮಧಿಕಂ ಕಿಂ ನ್ವೇತತ್ಸ್ಯಾತ್ಕಿಮನ್ಯದತೋಽಥ ವಾ ।
ಭ್ರಮತಿ ಭುವನೇ ಕಂದರ್ಪಾಜ್ಞಾ ವಿಕಾರಿ ಚ ಯೌವನಂ
ಲಲಿತಮಧುರಾಸ್ತೇ ತೇ ಭಾವಾಃ ಕ್ಷಿಪಂತಿ ಚ ಧೀರತಾಮ್ ॥'

---

೧ ಪಾಠ : ಸ್ಫಂಜಃ (೭೮ನೇ ಖಂಡದ ಅಡಿಟಿಪ್ಪಣಿ ನೋಡಿ)

[ಅಲಸಗೊಂಡ ನಡಗೆ, ಶೂನ್ಯವಾದ ದೃಷ್ಟಿ, ಸೌಷ್ಠವವನ್ನು ಕಳೆದುಕೊಂಡ ಶರೀರ, ಅಧಿಕಗೊಂಡ ಶ್ವಾಸೋಚ್ಛ್ವಾಸ - ಹೀಗಿರಲು ಏನು ಕಾರಣ? ಅಥವಾ, ಜಗತ್ತಿನಲ್ಲಿ ಮನ್ಮಥನ ಆಜ್ಞೆ ಪ್ರವರ್ತಿಸುತ್ತಿದೆ; ಯೌವನ ವಿಕಾರವುಳ್ಳುದಾಗಿದೆ; ಲಲಿತವೂ ಮಧುರವೂ ಆದ ನಾನಾ ಭಾವಗಳು ಧೈರ್ಯವನ್ನು ಕುಂದಿಸುತ್ತವೆ - ಇದಲ್ಲದೆ ಹೀಗಾಗಲು ಮತ್ತಾವ ಕಾರಣವಿದೆ?]

- ಇಲ್ಲಿ ಅಲಸಗಮನಾದಿ ಲೇಶಮಾತ್ರ ಭಾವಗಳಿಂದ ಮಾಲತಿಯನ್ನು ಕುರಿತು ಮಾಧವನಿಗೆ ಇರುವ ಅನುರಾಗವು ಸ್ವಲ್ಪವಾಗಿ ಪ್ರಕಟವಾಗಿದೆ. ಇದು 'ನರ್ಮಸ್ಫೋಟ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೫೨; ಸಾ.ದ. : ೬-೧೨೭

## ೮೨. ನರ್ಮಗರ್ಭಲಕ್ಷಣ :

**ಛನ್ನನೇತೃಪ್ರತೀಚಾರೋ ನರ್ಮಗರ್ಭೋಽರ್ಥಹೇತವೇ ।**
**ಅಂಗೈಃ ಸಹಾಸ್ಯನಿರ್ಹಾಸ್ಯೈರೇಭಿರೇಷಾತ್ರ ಕೈಶಿಕೀ ॥ ೫೨ ॥**

ಅನು : [ಯಾವುದೊಂದು] ಪ್ರಯೋಜನದ ಸಲುವಾಗಿ ಗುಪ್ತನಾಗಿದ್ದ ನಾಯಕನು ಹೊರಬರುವುದು 'ನರ್ಮಗರ್ಭ'. ಹೀಗೆ, ಹಾಸ್ಯಸಹಿತವಾದ [ಮತ್ತು] ಹಾಸ್ಯರಹಿತವಾದ [ಮೇಲೆ ಲಕ್ಷಿತವಾಗಿರುವ] ಅಂಗಗಳಿಂದ ಕೈಶಿಕೀ [ವೃತ್ತಿಯು ಸಿದ್ಧವಾಗುವುದು].

ವ್ಯಾಖ್ಯೆ : ಉದಾ- [ಅಮರು : ಶ್ಲೋ. ೧೯; ೨-೩೧ರಲ್ಲೂ ಉದಾಹೃತವಾಗಿದೆ] :

'ದೃಷ್ಟ್ವೈಕಾಸನಸಂಸ್ಥಿತೇ ಪ್ರಿಯತಮೇ ಪಶ್ಚಾದುಪೇತ್ಯಾದರಾ -
ದೇಕಸ್ಯಾ ನಯನೇ ನಿಮೀಲ್ಯ ವಿಹಿತಕ್ರೀಡಾನುಬಂಧಚ್ಛಲಃ ।
ಈಷದ್ವಕ್ರಿತಕಂಧರಃ ಸಪುಲಕಃ ಪ್ರೇಮೋಲ್ಲಸನ್ಮಾನಸಾ -
ಮಂತರ್ಹಾಸಲಸತ್ಕಪೋಲಫಲಕಾಂ ಧೂರ್ತೋಽಪರಾಂ ಚುಂಬತಿ ॥'

[ಒಂದೇ ಪೀಠದಲ್ಲಿ ಕುಳಿತಿದ್ದ ಪ್ರಿಯತಮೆಯರೀರ್ವರನ್ನು ನೋಡಿ, ಹಿಂದುಗಡೆಯಿಂದ ಬಂದು, ಆ ಕಾಲಕ್ಕೆ ತಕ್ಕುದಾದ ಕ್ರೀಡೆಯ ನೆಪದಿಂದ ಸಾದರನಾಗಿ ಒಬ್ಬಳ ಕಣ್ಣುಗಳನ್ನು ಮುಚ್ಚಿದನು; ಅನಂತರ ಆ ಧೂರ್ತ, ಕೊರಳನ್ನು ತುಸು ಬಾಗಿಸಿ, ಪ್ರೇಮದಿಂದ ಮನಸ್ಸು ಉಲ್ಲಸಿತವಾಗಿ ಒಳನಗೆ ಮಿರುಗುವ ಕಪೋಲವುಳ್ಳ ಮತ್ತೊಬ್ಬಳನ್ನು-ರೋಮಾಂಚಗೊಂಡು-ಚುಂಬಿಸಿದನು.]

ಮತ್ತು-[ಪ್ರಿಯ.] ಗರ್ಭಾಂಕದಲ್ಲಿ ವತ್ಸರಾಜನ ವೇಷವನ್ನು ಧರಿಸಿದ ಸುಸಂಗತೆಯ ಸ್ಥಾನದಲ್ಲಿ ವತ್ಸರಾಜನೇ ಸ್ವತಃ ಪ್ರವೇಶಿಸುವುದು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೫೩; ಸಾ.ದ. : ೬-೧೨೮.

# ಸಾತ್ತ್ವತೀವೃತ್ತಿ

## ೮೩. ಸಾತ್ತ್ವತೀಸಾಂಗಲಕ್ಷಣ :

**ವಿಶೋಕಾ ಸಾತ್ತ್ವತೀ ಸತ್ತ್ವಶೌರ್ಯತ್ಯಾಗದಯಾರ್ಜವೈಃ ।**
**ಸಂಲಾಪೋತ್ಥಾಪಕಾವಸ್ಯಾಂ ಸಾಂಘಾತ್ಯಃ ಪರಿವರ್ತಕಃ ॥ ೫೩ ॥**

ಅನು : ಶೋಕವಿಲ್ಲದಿರುವುದು, ಸತ್ತ್ವ ಶೌರ್ಯ ತ್ಯಾಗ ದಯೆ ಸರಳತೆ [-ಈ ಮೊದಲಾದ ಗುಣ]ಗಳಿಂದ 'ಸಾತ್ತ್ವತೀ[ವೃತ್ತಿ]'ಯು ಸಿದ್ಧವಾಗುವುದು. ಅದರಲ್ಲಿ]ಸಂಲಾಪ, ಉತ್ಥಾಪಕ, ಸಾಂಘಾತ್ಯ, ಪರಿವರ್ತಕ[ಎಂಬ ನಾಲ್ಕು ಅಂಗಗಳಿವೆ].

ವ್ಯಾಖ್ಯೆ: ಶೋಕರಹಿತವಾದ, ಸತ್ತ್ವ ಶೌರ್ಯ ತ್ಯಾಗ ದಯೆ ಹರ್ಷ ಇತ್ಯಾದಿ ಭಾವಗಳು ವಿಶೇಷವಾಗಿರುವ ನಾಯಕವ್ಯಾಪಾರವು 'ಸಾತ್ತ್ವತೀ'. ಅದರಲ್ಲಿನ ಅಂಗಗಳು : ಸಂಲಾಪ, ಉತ್ಥಾಪಕ, ಸಾಂಘಾತ್ಯ, ಪರಿವರ್ತಕ.

ಟಿಪ್ಪಣಿ :ಹೋಲಿಕೆ=ನಾ.ಶಾ. : ೨೨-೩೮, ೩೯, ೪೧; ಸಾ.ದ. : ೬-೧೨೮, ೧೨೯, ೧೩೦; ಪ್ರತಾಪ : ೨-೧೬

## ೮೪. ಸಂಲಾಪಕಲಕ್ಷಣ :

**ಸಂಲಾಪಕೋ ಗಭೀರೋಕ್ತಿರ್ನಾನಾಭಾವರಸಾ ಮಿಥಃ[1] ।**

ಅನು : ವಿಧವಿಧವಾದ ಭಾವರಸಗಳುಳ್ಳ ಪರಸ್ಪರ ಗಂಭೀರ ಸಂಭಾಷಣೆಯು 'ಸಂಲಾಪಕ'.

ವ್ಯಾಖ್ಯೆ : ಉದಾ:- [ಮಹಾ. : ಪು. ೬೮, ೬೯; ೨-೩೪] : 'ರಾಮಃ - ಅಯಂ ಸ ಯಃ ಕಿಲ ಸಪರಿವಾರಕಾರ್ತಿಕೇಯವಿಜಯಾವರ್ಜಿತೇನ ಭಗವತಾ ನೀಲಲೋಹಿತೇನ ಪರಿವತ್ಸರ ಸಹಸ್ರಾಂತೇವಾಸಿನೇ ತುಭ್ಯಂ ಪ್ರಸಾದೀಕೃತಃ ಪರಶುಃ । ಪರಶುರಾಮಃ - ರಾಮ ರಾಮ ದಾಶರಥೇ ಸ ಏವಾಯಮಾಚಾರ್ಯ ಪಾದಾನಾಂ ಪ್ರಿಯಃ ಪರಶುಃ,

> ಶಸ್ತ್ರಪ್ರಯೋಗಖುರಲೀಕಲಹೇ ಗಣಾನಾಂ ಸೈನ್ಯೈರ್ವೃತೋ ವಿಜಿತ ಏವ ಮಯಾ ಕುಮಾರಃ ।
> ಏತಾವತಾಪಿ ಪರಿರಭ್ಯ ಕೃತಪ್ರಸಾದಃ ಪ್ರಾದಾದಮುಂ ಪ್ರಿಯಗುಣೋ
> ಭಗವಾನ್‌ಗುರುರ್ಮೇ ॥'

[ರಾಮ : ಕಾರ್ತಿಕೇಯನನ್ನು ಸಸೈನ್ಯವಾಗಿ ಜಯಿಸಿದ್ದರಿಂದ, ಸಹಸ್ರಾರು ವರ್ಷ ಶಿಷ್ಯರಾದ ತಮಗೆ ಭಗವಾನ್ ಶಂಕರನು ಪ್ರಸಾದರೂಪವಾಗಿ ಕೊಟ್ಟಿರುವ ಪರಶುವಲ್ಲವೆ ಇದು? ಪರಶು : ರಾಮ, ಹೌದು. ಶಸ್ತ್ರಪ್ರಯೋಗದ ಕಲಹಕೇಲಿಯಲ್ಲಿ ದೇವಗಣಗಳನ್ನೊಡಗೊಂಡ ಕುಮಾರಸ್ವಾಮಿಯನ್ನು ನಾನು ಸೋಲಿಸಿವಾಗ ಗುಣಪ್ರಿಯನಾದ ನನ್ನ ಗುರು ಭಗವಂತನು ನನ್ನನ್ನು ಆಲಂಗಿಸಿ ಇದನ್ನು ಪ್ರಸಾದರೂಪವಾಗಿ ಕೊಟ್ಟನು.]

ಹೀಗೆ, ನಾನಾಪ್ರಕಾರವಾದ ಭಾವರಸಗಳಿಂದ ಕೂಡಿದ ರಾಮ ಪರಶುರಾಮರ ಗಂಭೀರವಾದ ಪರಸ್ಪರ ಮಾತುಕತೆ 'ಸಂಲಾಪಕ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೪೪; ಸಾ.ದ. : ೬-೧೩೧.

## ೮೫. ಉತ್ಥಾಪಕಲಕ್ಷಣ :

**ಉತ್ಥಾಪಕಸ್ತು ಯತ್ರಾದೌ ಯುದ್ಧಾಯೋತ್ಥಾಪಯೇತ್ ಪರಮ್ ॥ ೫೪ ॥**

ಅನುಃ ಮೊದಲಲ್ಲಿ [ಒಬ್ಬನು] ಇನ್ನೊಬ್ಬನನ್ನು ಯುದ್ಧಕ್ಕೋಸ್ಕರವಾಗಿ ಪ್ರಚೋದಿಸುವುದು (ಎತ್ತಿಕಟ್ಟುವುದು) 'ಉತ್ಥಾಪಕ'.

ವ್ಯಾಖ್ಯೆ : ಉದಾ:- [ಮಹಾ. : ೫-೪೯].

---

೧ ಪಾಠ : ರಸಾತ್ಮಕಃ ।

'ಆನಂದಾಯ ಚ ವಿಸ್ಮಯಾಯ ಚ ಮಯಾ ದೃಷ್ಟೋಽಸಿ ದುಃಖಾಯ ವಾ
ವೈತೃಷ್ಣ್ಯಂ ನು ಕುತೋಽದ್ಯ ಸಂಪ್ರತಿ ಮಮ ತ್ವದ್ದರ್ಶನೇ ಚಕ್ಷುಷಃ।
ತ್ವತ್ಸಾಂಗತ್ಯಸುಖಸ್ಯ ನಾಸ್ಮಿ ವಿಷಯಃ ಕಿಂ ವಾ ಬಹುವ್ಯಾಹೃತೈ -
ರಸ್ಮಿನ್ವಿಶ್ರುತಜಾಮದಗ್ನ್ಯವಿಜಯೇ ಬಾಹೌ ಧನುರ್ಜೃಂಭತಾಮ್॥'

[ನಾನು ನಿನ್ನನ್ನು ಆನಂದಕ್ಕೋಸ್ಕರ ನೋಡುತ್ತಿರುವೆನೊ, ವಿಸ್ಮಯಕ್ಕಾಗಿಯೋ ಅಥವಾ ದುಃಖದಿಂದಲೋ - ಹೇಳಲಾರೆ. ಈ ಯುದ್ಧ ಒದಗಿರುವಲ್ಲಿ, ನಿನ್ನನ್ನು ಕಣ್ಣುಗಳಿಂದ ನೋಡಿ ನನ್ನ ಆಸೆ ತೀರೀತೆ? ನಿನ್ನ ಸಮಾಗಮದ ಸುಖವನ್ನು ಹೊಂದಲು ನಾನು ವಿಷಯನಲ್ಲ. ಹೆಚ್ಚು ಮಾತಿನಿಂದೇನು? ಈ ಪ್ರಸಿದ್ಧ ಜಾಮದಗ್ನ್ಯವಿಜಯದಲ್ಲಿ ಕೈಯ ಧನುಸ್ಸು ವಿಜೃಂಭಿಸಲಿ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೪೨; ಸಾ.ದ. : ೬-೧೩೦.

## ೮೬. ಸಾಂಘಾತ್ಯಲಕ್ಷಣ :

**ಮಂತ್ರಾರ್ಥದೈವಶಕ್ತ್ಯಾದೇಃ ಸಾಂಘಾತ್ಯಃ ಸಂಘಭೇದನಮ್।**

ಅನು : ಮಂತ್ರ [ಶಕ್ತಿ] ಅರ್ಥ [ಶಕ್ತಿ] ದೈವ [ಶಕ್ತಿ] ಮೊದಲಾದವುಗಳಿಂದ [ಶತ್ರು] ಸಂಘವನ್ನು ಭೇದಿಸುವುದು 'ಸಾಂಘಾತ್ಯ'.

ವ್ಯಾಖ್ಯೆ : ಮಂತ್ರಶಕ್ತಿಗೆ ಉದಾ:- ಮುದ್ರಾರಾಕ್ಷಸದಲ್ಲಿ, ಚಾಣಕ್ಯನು ತನ್ನ ಬುದ್ಧಿಶಕ್ತಿಯಿಂದ ರಾಕ್ಷಸನ ಸಹಾಯಕರನ್ನು ಭೇದಿಸುವುದು.

ಅರ್ಥಶಕ್ತಿಗೆ ಉದಾ:- ಮುದ್ರಾರಾಕ್ಷಸದಲ್ಲಿ, ಪರ್ವತಕನ ಆಭರಣಗಳು ರಾಕ್ಷಸನ ಹಸ್ತಗತವಾಗಲಿರುವಾಗ ಅದನ್ನು ಮಲಯಕೇತುವಿನ ಮೂಲಕ ಭೇದಿಸುವುದು.

ದೈವಶಕ್ತಿಗೆ ಉದಾ:- ರಾಮಾಯಣದಲ್ಲಿ, ರಾಮನು ದೈವಶಕ್ತಿಯ ಮೂಲಕ ರಾವಣನಿಂದ ವಿಭೀಷಣನನ್ನು ಭೇದಿಸುವುದು - ಮುಂತಾಗಿ.

ಟಿಪ್ಪಣಿ : ಇದಕ್ಕೆ 'ಸಂಘಾತಕ' [ನಾ.ಶಾ.] 'ಸಂಘಾತ್ಯಕ' [ಸ.ಕಂ]ಇ., ಹೆಸರುಗಳೂ ಉಂಟು. ಸಾ.ದ.ವಲ್ಲಿ 'ಸಂಹಾತ್ಯ' ಎಂಬ ಪಾಠಾಂತರ ಬೇರೆ ಇದೆ.

ಹೋಲಿಕೆ = ನಾ.ಶಾ. : ೨೨-೪೫; ಸಾ.ದ. : ೬-೧೩೧.

## ೮೭. ಪರಿವರ್ತಕಲಕ್ಷಣ :

**ಪ್ರಾರಬ್ಧೋತ್ಥಾನಕಾರ್ಯಾನ್ಯಕರಣಾತ್ ಪರಿವರ್ತಕಃ ॥ ೫೫ ॥**

ಅನು : ಪ್ರಾರಂಭವಾಗಿ ಪ್ರಗತಿಹೊಂದುತ್ತಿರುವ [ಯಾವುದೊಂದು] ಕಾರ್ಯವನ್ನು ಬಿಟ್ಟು ಬೇರೊಂದನ್ನು ಮಾಡುವುದು 'ಪರಿವರ್ತಕ'.

ವ್ಯಾಖ್ಯೆ : ಪ್ರಸ್ತುತವಾದ ಕಾರ್ಯವನ್ನು ಬಿಟ್ಟು ಬೇರೊಂದು ಕಾರ್ಯವನ್ನು ಮಾಡುವುದು 'ಪರಿವರ್ತಕ'. ಉದಾ:- [ಮಹಾ. : ೨-೩೮] :

'ಹೇರಂಬದಂತಮುಸಲೋಲ್ಲಿಖಿತೈಕಭಿತ್ತಿ ವಕ್ಷೋ ವಿಶಾಖವಿಶಿಖವ್ರಣಲಾಂಛನಂ ಮೇ।
ರೋಮಾಂಚಕಂಚುಕಿತಮದ್ಭುತವೀರಲಾಭಾದ್ಯತ್ಸತ್ಯಮದ್ಯ ಪರಿರಬ್ಧುಮಿವೇಚ್ಛತಿ ತ್ವಾಮ್॥'

ರಾಮಃ - ಭಗವನ್, ಪರಿರಂಭಣಮಿತಿ ಪ್ರಸ್ತುತಪ್ರತೀಪಮೇತತ್। - ಇತ್ಯಾದಿ.

[ಹೇರಂಬನ ದಂತಮುಸಲದಿಂದ ಕೊರೆತಗೊಂಡ ಭಿತ್ತಿಯಾಗಿರುವ ವಿಶಾಖ(ಕಾರ್ತಿಕೇಯ)ನ ಬಾಣಗಳಿಂ ದುಂಟಾದ ಗಾಯದ ಚಿಹ್ನೆಯುಳ್ಳ ಈ ವಕ್ಷಃಸ್ಥಲ, ನಿಶ್ಚಯವಾಗಿ ನಿನ್ನಂತಹ ಅದ್ಭುತ ವೀರನ ಲಾಭದಿಂದ,

ರೋಮಾಂಚಿತಗೊಂಡು ಆಲಂಗಿಸಲಿಚ್ಛಿಸುತ್ತಿದೆ. ರಾಮ : ಭಗವನ್, ಈ ಆಲಿಂಗನವು ಪ್ರಸ್ತುತಕ್ಕೆ ವಿರುದ್ಧವಾಯಿತು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೪೩; ಸಾ.ದ. : ೬-೧೩೨.

# ಆರಭಟೀವೃತ್ತಿ

## ೮೮. ಆರಭಟೀಸಾಂಗಲಕ್ಷಣ :

**ಏಭಿರಂಗೈಶ್ಚತುರ್ಧೇಯಂ ಸಾತ್ತ್ವತ್ಯಾರಭಟೀ ಪುನಃ ।**

**ಮಾಯೇಂದ್ರಜಾಲಸಂಗ್ರಾಮಕ್ರೋಧೋದ್ಭ್ರಾಂತಾದಿ ಚೇಷ್ಟಿತೈಃ ॥ ೫೬ ॥**

**ಸಂಕ್ಷಿಪ್ತಿಕಾ ಸ್ಯಾತ್ಸಂಫೇಟೋ ವಸ್ತೂತ್ಥಾನಾವಪಾತನೇ ।**

ಅನುಃ ಹೀಗೆ [ಮೇಲೆ ಲಕ್ಷಿತವಾದ] ನಾಲ್ಕು ಅಂಗಗಳನ್ನುಳ್ಳದ್ದು ಸಾತ್ತ್ವತೀ. ಇನ್ನು, 'ಆರಭಟೀ[ವೃತ್ತಿ]'ಯು ಮಾಯೆ, ಇಂದ್ರಜಾಲ, ಯುದ್ಧ, ಕ್ರೋಧ, ಉದ್ಭ್ರಾಂತ ಮೊದಲಾದ ಚೇಷ್ಟೆಗಳಿಂದ [ಕೂಡಿದ್ದು]. [ಅದರಲ್ಲಿ] ಸಂಕ್ಷಿಪ್ತಿಕಾ, ಸಂಫೇಟ, ವಸ್ತೂತ್ಥಾನ, ಅವಪಾತನ [ – ಈ ನಾಲ್ಕು ಅಂಗಗಳು ] ಇರುತ್ತವೆ.

ವ್ಯಾಖ್ಯೆ : ಇಲ್ಲದ ವಸ್ತುವನ್ನು ಮಂತ್ರಬಲದಿಂದ ತೋರಿಸುವುದು ಮಾಯೆ; ತಂತ್ರಬಲದಿಂದ ತೋರಿಸುವುದು ಇಂದ್ರಜಾಲ.

ಟಿಪ್ಪಣಿ : ನಾ.ಶಾ.ದಲ್ಲಿ 'ಅವಪಾತನ'ಕ್ಕೆ 'ಅವಘಾತ' ಎಂಬ ಹೆಸರೂ ಇದೆ.

ಹೋಲಿಕೆ = ನಾ.ಶಾ. : ೨೨-೫೬ರಿಂದ ೫೯; ಸಾ.ದ. : ೬-೧೩೨ರಿಂದ ೧೩೪; ಪ್ರತಾಪ : ೨-೧೫.

## ೮೯. ಸಂಕ್ಷಿಪ್ತಿಕಾಲಕ್ಷಣ :

**ಸಂಕ್ಷಿಪ್ತವಸ್ತುರಚನಾ ಸಂಕ್ಷಿಪ್ತಿಃ ಶಿಲ್ಪಯೋಗತಃ ॥ ೫೭ ॥**

**ಪೂರ್ವನೇತೃನಿವೃತ್ತ್ಯಾನ್ಯೇ ನೇತ್ರಂತರಪರಿಗ್ರಹಃ ।**

ಅನು : [ಯಾವುದೊಂದು] ವಸ್ತುವನ್ನು ಕುಶಲಕರ್ಮದಿಂದ ಸಂಕ್ಷೇಪವಾಗಿ ರಚಿಸುವುದು 'ಸಂಕ್ಷಿಪ್ತಿ[ಕಾ]'. ಅನ್ಯರಲ್ಲಿ [ಎಂದರೆ, ಬೇರೆ ಕೆಲವರ ಮತದಲ್ಲಿ 'ಸಂಕ್ಷಿಪ್ತಿಕಾ' ಎಂದರೆ] ಹಿಂದಿನ ನಾಯಕನನ್ನು ಬಿಟ್ಟು ಬೇರೆಯವನನ್ನು ನಾಯಕನನ್ನಾಗಿ ಸ್ವೀಕರಿಸುವುದು.

ವ್ಯಾಖ್ಯೆ : ಮಣ್ಣು, ಬಿದಿರು, ಎಲೆ, ಚರ್ಮ ಮೊದಲಾದವುಗಳಿಂದ ಯಾವುದೊಂದು ವಸ್ತುವನ್ನು ರಚಿಸುವುದು 'ಸಂಕ್ಷಿಪ್ತಿ'. ಉದಾಃ- ಉದಯನ ಚರಿತ್ರೆಯಲ್ಲಿ ಕಿಲಿಂಜಹಸ್ತಿ ಪ್ರಯೋಗ. ಇನ್ನು ಕೆಲವರು ಹಿಂದಿನ ನಾಯಕನನ್ನು ಅಥವಾ ನಾಯಕನ ಹಿಂದಿನ ಅವಸ್ಥೆಯನ್ನು ಬಿಟ್ಟು ಬೇರೆ ನಾಯಕನನ್ನು ಅಥವಾ ನಾಯಕನ ಬೇರೆಯ ಅವಸ್ಥೆಯನ್ನು ಸ್ವೀಕರಿಸುವುದು 'ಸಂಕ್ಷಿಪ್ತಿ' ಎನ್ನುತ್ತಾರೆ. ಅದಕ್ಕೆ ಉದಾಃ-ರಾಮಾಯಣದಲ್ಲಿ ವಾಲಿ ನಿವೃತ್ತನಾಗಿ ಸುಗ್ರೀವನು ನಾಯಕಸ್ಥಾನಕ್ಕೆ ಬರುವುದು. ಅಥವಾ-ಪರಶುರಾಮನು ತನ್ನ ಔದ್ಧತ್ಯವನ್ನು ಬಿಟ್ಟು 'ಪುಣ್ಯಾಬ್ರಾಹ್ಮಣಜಾತಿಃ....'[ಮಹಾ. : ೪-೨೨, ೨-೬ರಲ್ಲಿ ಉದಾಹೃತವಾಗಿದೆ] (ಬ್ರಾಹ್ಮಣ ಜಾತಿಯು ಪವಿತ್ರವಾದದ್ದು....) ಎಂದು ಶಾಂತತ್ವವನ್ನು ಸ್ವೀಕರಿಸುವುದು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೬೦; ಸಾ.ದ. : ೬-೧೩೫, ೧೩೬.

## ೯೦. ಸಂಫೇಟಲಕ್ಷಣ :

**ಸಂಫೇಟಸ್ತು ಸಮಾಘಾತಃ ಕ್ರುದ್ಧಸಂರಬ್ಧಯೋರ್ದ್ವಯೋಃ ॥ ೫೮ ॥**

ಅನು : ಕ್ರುದ್ಧರೂ ಉತ್ತೇಜಿತರೂ ಆದ ಇಬ್ಬರೊಳಗಿನ [ಪರಸ್ಪರ] ಸಂಘರ್ಷಣೆ 'ಸಂಫೇಟ'ವಾಗಿದೆ.

ವ್ಯಾಖ್ಯೆ : ಉದಾ:- ಮಾಲತೀಮಾಧವದಲ್ಲಿನ ಮಾಧವ ಅಘೋರಘಂಟರ ಸಂಘರ್ಷಣೆ; ಅಥವಾ ರಾಮಾಯಣದ ಕಥಾವಸ್ತುವನ್ನುಳ್ಳ ರೂಪಕದಲ್ಲಿ ಇಂದ್ರಜಿತ್ತು ಲಕ್ಷ್ಮಣ ಇವರ ನಡುವಿನ ಸಂಘರ್ಷಣೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೬೩; ಸಾ.ದ. : ೬-೧೩೫.

## ೯೧. ವಸ್ತೂತ್ಥಾಪನಲಕ್ಷಣ :

**ಮಾಯಾದ್ಯುತ್ಥಾಪಿತಂ ವಸ್ತು ವಸ್ತೂತ್ಥಾಪನಮಿಷ್ಯತೇ ।**

ಅನು : [ಮಂತ್ರಬಲದ] ಮಾಯೆ ಮುಂತಾದವುಗಳಿಂದ ವಸ್ತುವನ್ನು ಮೇಲಕ್ಕೆತ್ತುವುದು [ಎಂದರೆ, ರಚಿಸಿ ನಿಲ್ಲಿಸುವುದು] 'ವಸ್ತೂತ್ಥಾಪನ'.

ವ್ಯಾಖ್ಯೆ : ಉದಾ:- [ಉದಾತ್ತರಾಘವ][1] :

'ಜೀಯಂತೇ ಜಯಿನೋಽಪಿ ಸಾಂದ್ರತಿಮಿರವ್ರಾತೈರ್ವಿಯದ್ವ್ಯಾಪಿಭಿ-
ರ್ಭಾಸ್ವಂತಃ ಸಕಲಾ ರವೇರಪಿ ರುಚಃ ಕಸ್ಮಾದಕಸ್ಮಾದಮೀ ।
ಏತೈಶ್ಚೋಗ್ರಕಬಂಧರಂಧ್ರರುಧಿರೈರಾಧ್ಮಾಯಮಾನೋದರಾ
ಮುಂಚಂತ್ಯಾನನಕಂದರಾನಲಮುಚಸ್ತೀವ್ರಾರವಾಃ ಫೇರವಾಃ ॥' - ಇತ್ಯಾದಿ.

[ಏನಿದು, ಸರ್ವತ್ರ ಜಯಶಾಲಿಯಾದ ಸೂರ್ಯನ ಜ್ವಲಂತ ಕಿರಣಸಮಸ್ತಗಳನ್ನೂ ಆಕಾಶಕ್ಕೆ ಮುಸುಕಿದ ಕಾಳ್ಗತ್ತಲೆ ಅಕಸ್ಮಾತ್ತಾಗಿ ಜಯಿಸಿಬಿಟ್ಟಿದೆ. ಭಯಂಕರವಾಗಿರುವ ಕಬಂಧದ ತುದಿಯ ರಂಧ್ರಗಳಿಂದ ಉಕ್ಕುತ್ತಿರುವ ನೆತ್ತರನ್ನು ಹೀರಿ ಹೊಟ್ಟೆ ತುಂಬಿ ನರಿಗಳು ಉಗ್ರವಾಗಿ ಕೂಗುತ್ತ ತಮ್ಮ ಮುಖದಲ್ಲಿ ಬೆಂಕಿಯನ್ನುಗುಳುತ್ತಿವೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೬೨; ಸಾ.ದ. : ೬-೧೩೪.

## ೯೨. ಅವಪಾತಲಕ್ಷಣ :

**ಅವಪಾತಸ್ತು ನಿಷ್ಕ್ರಾಮಪ್ರವೇಶತ್ರಾಸವಿದ್ರವೈಃ ॥ ೫೯ ॥**

ಅನು : [ಪಾತ್ರಗಳ] ಹೊರಹೋಗುವಿಕೆ, ಒಳಬರುವಿಕೆ, ಭಯ, ಪಲಾಯನಗಳಿಂದ 'ಅವಪಾತ'ವುಂಟಾಗುವುದು.

ವ್ಯಾಖ್ಯೆ : ಉದಾ:- [ರತ್ನಾ. : ೨-೨ ಮತ್ತು ೩; ಈ ಉದಾ. ೪-೦೭ರಲ್ಲೂ ಬಂದಿದೆ] :

'ಕಂಠೇ ಕೃತ್ವಾವಶೇಷಂ ಕನಕಮಯಮಧಃ ಶೃಂಖಲಾದಾಮ ಕರ್ಷ-
ನ್ಕ್ರಾಂತ್ವಾ ದ್ವಾರಾಣಿ ಹೇಲಾವಲಚರಣವಲತ್ಕಿಂಕಿಣೀಚಕ್ರವಾಲಃ ।
ದತ್ತಾತಂಕೋ ಗಜಾನಾಮನುಸೃತಸರಣಿಃ ಸಂಭ್ರಮಾದಶ್ವಪಾಲೈಃ
ಪ್ರಭ್ರಷ್ಟೋಽಯಂ ಪ್ಲವಂಗಃ ಪ್ರವಿಶತಿ ನೃಪತೇರ್ಮಂದಿರಂ ಮಂದುರಾತಃ ।

---

೧ ಉಪಲಬ್ಧವಾಗಿಲ್ಲದ ಒಂದು ರೂಪಕ; ಮಾಯುರಾಜವಿರಚಿತವೆಂದು ತಿಳಿಯುತ್ತದೆ.

ನಷ್ಟಂ ವರ್ಷವರೈರ್ಮನುಷ್ಯಗಣನಾಭಾವಾದಕೃತ್ವಾ ತ್ರಪಾ-
ಮಂತಃ ಕಂಚುಕಿಕಂಚುಕಸ್ಯ ವಿಶತಿ ತ್ರಾಸಾದಯಂ ವಾಮನಃ।
ಪರ್ಯಂತಾಶ್ರಯಿಭಿರ್ನಿಜಸ್ಯ ಸದೃಶಂ ನಾಮ್ನಃ ಕಿರಾತೈಃ ಕೃತಂ
ಕುಬ್ಜಾ ನೀಚತಯೈವ ಯಾಂತಿ ಶನಕೈರಾತ್ಮೇಕ್ಷಣಾಶಂಕಿನಃ॥'

[ಕುತ್ತಿಗೆಯಲ್ಲಿರುವ ಚಿನ್ನದ ಸರಪಳಿ ತುಂಡಾಗಿರಲು ಅದರ ಒಂದು ಕೊನೆಯನ್ನು ನೆಲದ ಮೇಲೆಳೆಯುತ್ತ ಲೀಲೆಯಿಂದ ನಡೆಯುವಾಗ ಕಿರುಗೆಜ್ಜೆಗಳ ಬಳೆ ಕಿಣಿಗುಡುತ್ತಿರಲು, ಹಾದಿಯಲ್ಲಿನ ಆನೆಗಳು ಆತಂಕಗೊಳ್ಳಲು, ಅಶ್ವಪಾಲರು ತ್ವರೆಯಿಂದ ಹಿಂದಟ್ಟಿ ಬರುತ್ತಿರಲು ಅಲ್ಲಿಂದ ತಪ್ಪಿಸಿಕೊಂಡು ಬಂದಿರುವ ಈ ಕಪಿಯು-ರಾಜಮಂದಿರವನ್ನು ಪ್ರವೇಶಿಸುತ್ತಿದೆ. ಮನುಷ್ಯರ ಶ್ರೇಣಿಯಲ್ಲಿ ಪರಿಗಣಿತರಾಗದಿರುವ ನಪುಂಸಕ(ವರ್ಷವರ)ರು ಓಡಿಹೋಗಿದ್ದಾರೆ. ವಾಮನನು ಭಯದಿಂದ ಕಂಚುಕಿಯ ಅಂಗಿಯೊಳಕ್ಕೆ ತೂರಿಕೊಳ್ಳುತ್ತಿದ್ದಾನೆ. ಕಿರಾತರುಗಳು ಮೂಲೆಗಳನ್ನಾಶ್ರಯಿಸಿ ತಮ್ಮ ಹೆಸರಿಗೆ ತಕ್ಕುದನ್ನು ಮಾಡಿದ್ದಾರೆ. (ಪರ್ಯಂತಭಾಗಗಳಲ್ಲಿ ಅಲೆಯುವವರು ಕಿರಾತರು : ಕಿರಂ ಪರ್ಯಂತದೇಶಂ ಅತತಿ ಸಃ) ಆ ಕಪಿ ತಮ್ಮನ್ನು ನೋಡಿಬಿಟ್ಟೀತೆಂದು ಮತ್ತೆ ಮತ್ತೆ ಶಂಕಿಸುತ್ತ ಕುಬ್ಜರು ಮೆಯ್ ಬಗ್ಗಿಸಿಕೊಂಡು ಜಾರುತ್ತಿದ್ದಾರೆ.

ಮತ್ತು - ಪ್ರಿಯದ.ದ ಮೊದಲನೆಯ ಅಂಕದಲ್ಲಿ ವಿಂಧ್ಯಕೇತುವಿನ ಆಕ್ರಮಣ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೬೧; ಸಾ.ದ. : ೬-೧೩೭, ೧೩೭

## ೯೩. ಆರಭಟೀ ಉಪಸಂಹಾರ :

**ಏಭಿರಂಗೈಶ್ಚತುರ್ಧೇಯಂ**

ಅನು : [ಹೀಗೆ ಆರಭಟೀವೃತ್ತಿಗೆ] ನಾಲ್ಕು ಅಂಗಗಳು.

## ೯೪. ವೃತ್ತಿಸಂಖ್ಯೆ :

**ನಾರ್ಥವೃತ್ತಿರತಃ ಪರಾ।**

**ಚತುರ್ಥೀ ಭಾರತೀ ಸಾಪಿ ವಾಚ್ಯಾ ನಾಟಕಲಕ್ಷಣೇ ॥ ೬೦ ॥**

**ಕೈಶಿಕೀಂ ಸಾತ್ತ್ವತೀಂ ಚಾರ್ಥವೃತ್ತಿಮಾರಭಟೀಮಿತಿ।**
**ಪಠಂತಃ ಪಂಚಮೀಂ ವೃತ್ತಿಮೌದ್ಭಟಾಃ ಪ್ರತಿಜಾನತೇ ॥ ೬೧ ॥**

ಅನು : [ಮೇಲೆ ಹೇಳಿದ ಕೈಶಿಕೀ ಸಾತ್ತ್ವತೀ ಆರಭಟೀ ಇವುಗಳಲ್ಲದೆ] ಇನ್ನು ಬೇರೆ ಯಾವ ವೃತ್ತಿಗಳೂ ಇಲ್ಲ. ನಾಲ್ಕನೆಯದಾದ 'ಭಾರತೀ[ವೃತ್ತಿ]'ಯನ್ನು ಕೂಡ ನಾಟಕ ಲಕ್ಷಣದಲ್ಲಿ ಹೇಳತಕ್ಕದ್ದು. ಔದ್ಭಟರು [ಎಂದರೆ, ಉದ್ಭಟ ಎಂಬ ಆಲಂಕಾರಿಕನ ಮತಾನುಯಾಯಿಗಳು] ಕೈಶಿಕೀ ಸಾತ್ತ್ವತೀ ಆರಭಟೀ-ಈ ಅರ್ಥವೃತ್ತಿಗಳನ್ನು [ಮತ್ತು ಶಬ್ದವೃತ್ತಿಯಾದ ಭಾರತಿಯನ್ನು] ಹೇಳುತ್ತ ಐದನೆಯ [ಮತ್ತೊಂದು ಹೊಸ] ವೃತ್ತಿಯನ್ನು ಸ್ವೀಕರಿಸುತ್ತಾರೆ.

ವ್ಯಾಖ್ಯೆ : ಔದ್ಭಟರು ಹೇಳುವ ಆ ಐದನೆಯ ಹೊಸ ವೃತ್ತಿ ಎಲ್ಲಿಯೂ ಕ್ವಚಿತ್ತಾಗಿ ಕೂಡ ಲಕ್ಷ್ಯದಲ್ಲಿ ತೋರುವುದಿಲ್ಲ ಮತ್ತು ಹಾಸ್ಯಾದಿಗಳು ಭಾರತೀವೃತ್ತ್ಯಾತ್ಮಕವಾಗಿರುವ ಕಾರಣ ರಸಗಳಲ್ಲೂ ಅದು ಹೊಂದುವುದಿಲ್ಲ. ರಸವರ್ಜಿತವಾದ ಕಾವ್ಯಾರ್ಥ ಯಾವುದೂ ಇರುವುದಿಲ್ಲ. ಆದ್ದರಿಂದ ಅರ್ಥವೃತ್ತಿಗಳು ಕೇವಲ

ಮೂರು. ಭಾರತೀವೃತ್ತಿಯು ಶಬ್ದವೃತ್ತಿಯಾಗಿದ್ದು 'ಆಮುಖ'ದ ಒಂದು ಅಂಗವಾಗಿರುವ ಕಾರಣ ಅಲ್ಲಿಯೇ ಅದನ್ನು ಹೇಳತಕ್ಕದ್ದು.

ಟಿಪ್ಪಣಿ : 'ಆಮುಖ' ಎಂಬುದು ನಾಟಕದ ಆದಿಭಾಗ; ಅದರ ವಿವರಣೆ ೩–೫ರಲ್ಲಿ ಬಂದಿದೆ. ಭಾರತೀಲಕ್ಷಣವೂ ೩–೫ರಲ್ಲಿ ಬಂದಿದೆ.

ಮೊದಲ ಮೂರು ವೃತ್ತಿಗಳಂತಲ್ಲದೆ, ನಾಲ್ಕನೆಯದಾದ ಭಾರತೀವೃತ್ತಿಯು ಕೇವಲ ಶಾಬ್ದಿಕವಾದದ್ದು. ಆದ್ದರಿಂದ ಮೊದಲ ಮೂರಕ್ಕೆ 'ಅರ್ಥವೃತ್ತಿ' ಎಂದೂ ಕೊನೆಯದಕ್ಕೆ 'ಶಬ್ದವೃತ್ತಿ' ಎಂದೂ ಹೆಸರಿಸಲಾಗಿದೆ.

'ಔದ್ಭಟ'ರು ಎಂದರೆ ಉದ್ಭಟನ ಅನುಯಾಯಿಗಳು; ಉದ್ಭಟನೆಂಬ ಅಲಂಕಾರಿಕ ಸು. ಕ್ರಿ.ಶ. ೮೦೦ರ ವೇಳೆಯಲ್ಲಿ ಕಾಶ್ಮೀರದ ಜಯಾಪೀಡನೆಂಬ ರಾಜನ ಆಸ್ಥಾನದಲ್ಲಿ ಇದ್ದನೆಂದು ತಿಳಿಯುತ್ತದೆ. ಆತ ನಾಟ್ಯಶಾಸ್ತ್ರ ಹಾಗೂ ಭಾಮಹನ ಕಾವ್ಯಾಲಂಕಾರ ಗ್ರಂಥಗಳ ಮೇಲೆ ವ್ಯಾಖ್ಯೆ ಬರೆದಿದ್ದನೆಂದು ಗೊತ್ತಾಗುತ್ತದೆ. ಉಪಲಬ್ಧವಾಗಿರುವ ಆತನ ಗ್ರಂಥ : 'ಕಾವ್ಯಾಲಂಕಾರ ಸಂಗ್ರಹ'.

ಹೋಲಿಕೆ = ೨–೭೭ ಮತ್ತು ೩–೫ರ ಹೋಲಿಕೆ ನೋಡಿ.

# ವೃತ್ತಿಗಳ ಬಳಕೆ

## ೯೫. ವೃತ್ತಿನಿಯಮ :

**ಶೃಂಗಾರೇ ಕೈಶಿಕೀ ವೀರೇ ಸಾತ್ತ್ವತ್ಯಾರಭಟೀ ಪುನಃ ।**
**ರಸೇ ರೌದ್ರೇ ಚ ಬೀಭತ್ಸೇ ವೃತ್ತಿಃ ಸರ್ವತ್ರ ಭಾರತೀ ॥ ೬೨ ॥**

ಅನು : ಶೃಂಗಾರ[ರಸ]ದಲ್ಲಿ ಕೈಶಿಕೀ[ವೃತ್ತಿ]ಯೂ, ವೀರದಲ್ಲಿ ಸಾತ್ತ್ವತಿಯೂ ರೌದ್ರ ಮತ್ತು ಬೀಭತ್ಸರಸದಲ್ಲಿ ಆರಭಟಿಯೂ [ಮತ್ತು ಈ] ಎಲ್ಲ ಎಡೆಗಳಲ್ಲೂ ಭಾರತೀ ವೃತ್ತಿಯೂ [ಇರತಕ್ಕದ್ದು].

ಟಿಪ್ಪಣಿ : ರಸವಿವರಗಳಿಗೆ ೪–೫೬, ೫೭, ೭೮ರಿಂದ ೮೭ ನೋಡಿ.

ನಾ.ಶಾ.ದ ಪ್ರಕಾರ ಕೈಶಿಕಿ ಹಾಸ್ಯಶೃಂಗಾರಗಳಲ್ಲೂ, ಸಾತ್ತ್ವತಿ ವೀರರೌದ್ರಾದ್ಭುತಗಳಲ್ಲೂ, ಆರಭಟಿ ಭಯಾನಕಬೀಭತ್ಸರೌದ್ರಗಳಲ್ಲೂ, ಭಾರತಿ ಕರುಣಾದ್ಭುತಗಳಲ್ಲೂ ಯೋಜಿತವಾಗುತ್ತದೆ. [ನೋಡಿ : ನಾ.ಶಾ. : ೨೨–೬೫, ೬೬]

ಹೋಲಿಕೆ = ನಾ.ಶಾ. : ೨೨–೬೫, ೬೬; ಸಾ.ದ. : ೬–೧೨೨, ೧೨೩.

# ನಾಟ್ಯಪ್ರವೃತ್ತಿ

## ೯೬. ಪ್ರವೃತ್ತಿಲಕ್ಷಣ :

**ದೇಶಭಾಷಾಕ್ರಿಯಾವೇಷಲಕ್ಷಣಾಃ ಸ್ಯುಃ ಪ್ರವೃತ್ತಯಃ ।**
**ಲೋಕಾದೇವಾಗವಗಮ್ಯೈತಾ[1] ಯಥೌಚಿತ್ಯಂ ಪ್ರಯೋಜಯೇತ್ ॥ ೬೩ ॥**

---

[1] ಪಾಠಗಳು : ಅಧಿಗಮ್ಯ; ಉಪಗಮ್ಯ; ಅನುಗಮ್ಯ.

ಅನು : [ಯಾವುದೊಂದು ವಿಶಿಷ್ಟವಾದ] ದೇಶ ಭಾಷೆ ಕ್ರಿಯೆ ವೇಷ ಇವುಗಳ ಲಕ್ಷಣಗಳು 'ಪ್ರವೃತ್ತಿ'ಗಳಾಗಿವೆ. ಲೋಕ[ವೃತ್ತ]ದಿಂದಲೇ ಇದನ್ನು ಅರಿತುಕೊಂಡು ಉಚಿತ ವಾಗಿರುವಂತೆ [ಪ್ರವೃತ್ತಿಗಳನ್ನು ನಾಟ್ಯದಲ್ಲಿ] ಚೆನ್ನಾಗಿ ಯೋಜಿಸತಕ್ಕದ್ದು.

ವ್ಯಾಖ್ಯೆ : ದೇಶಭೇದ ವೇಷಭೇದ ಮುಂತಾದವುಗಳಿಂದ ಭಿನ್ನವಾಗುವ ನಾಯಕ ವ್ಯಾಪಾರ 'ಪ್ರವೃತ್ತಿ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೧೪–೩೬ರ ಮುಂದಿನ ಗದ್ಯ ಇ.

## ೯೭. ಸಂಸ್ಕೃತಪಾಠ್ಯ :

**ಪಾಠ್ಯಂ ತು ಸಂಸ್ಕೃತಂ ನೄಣಾಮನೀಚಾನಾಂ ಕೃತಾತ್ಮನಾಮ್ ।**
**ಲಿಂಗಿನೀನಾಂ ಮಹಾದೇವ್ಯಾ ಮಂತ್ರಿಜಾವೇಶ್ಯಯೋಃ ಕ್ವಚಿತ್ ॥ ೬೪ ॥**

ಅನು : ನೀಚರಲ್ಲದ [ಎಂದರೆ, ಉತ್ತಮರಾದ] ಕೃತಾತ್ಮರ [ಎಂದರೆ, ಕೃತಕೃತ್ಯ ರಾದವರ] ಮಾತು ಸಂಸ್ಕೃತವಾಗಿರುತ್ತದೆ; ಕೆಲವು ವೇಳೆ, ತಪಸ್ವಿನಿಯರು ಮಹಾ ರಾಣಿಯರು ಮಂತ್ರಿಪುತ್ರಿ ವೇಶ್ಯೆಯರು–ಇವರ[ಮಾತು ಸಂಸ್ಕೃತವಾಗಿಯೇ ಇರುತ್ತದೆ].

ವ್ಯಾಖ್ಯೆ : ಕಾರಿಕೆಯಲ್ಲಿರುವ 'ಕ್ವಚಿತ್' (ಕೆಲವು ವೇಳೆ) ಎಂಬುದು ಲಿಂಗಿನೀ ಮಹಾದೇವಿ ಮುಂತಾದವರನ್ನು ಕುರಿತದ್ದು.

ಟಿಪ್ಪಣಿ : ಸ್ತ್ರೀಯರಿಗೆ ಸಾಮಾನ್ಯವಾಗಿ ಪ್ರಾಕೃತಭಾಷೆಯ ಮಾತು ಇರುತ್ತದೆ. (ನೋಡಿ : ೯೮)ಅದರಲ್ಲಿ, ಕೆಲವರಿಗೆ ಕೆಲವೆಡೆ ಸಂಸ್ಕೃತವೂ ಇರುವುದುಂಟು. ಅಂಥದನ್ನು ಮೇಲೆ ಹೇಳಿದೆ.

ಹೋಲಿಕೆ = ನಾ.ಶಾ. : ೧೮–೨೮ರಿಂದ ಮುಂದೆ; ಸಾ.ದ. : ೬–೧೫೮ರಿಂದ ಮುಂದೆ. (ಮುಂದಿನ ಎರಡು ಖಂಡಗಳಿಗೂ ಇದೇ ಹೋಲಿಕೆ ಅನ್ವಯಿಸುತ್ತದೆ.)

## ೯೮. ಪ್ರಾಕೃತಶೌರಸೇನಿಗಳು :

**ಸ್ತ್ರೀಣಾಂ ತು ಪ್ರಾಕೃತಂ ಪ್ರಾಯಃ ೧ಶೌರಸೇನ್ಯಧಮೇಷು ಚ।**

ಅನು : ಸ್ತ್ರೀಯರಿಗೆ ವಿಶೇಷವಾಗಿ ಪ್ರಾಕೃತ ಮತ್ತು ಅಧಮರಿಗೆ ಶೌರಸೇನಿ [ಭಾಷೆಯ ಮಾತು ಇರುತ್ತದೆ.]

ವ್ಯಾಖ್ಯೆ : ಪ್ರಾಕೃತವೆಂದರೆ ಪ್ರಕೃತಿಯಿಂದ ಬಂದದ್ದು (ಪ್ರಕೃತೇರಾಗತಂ). ಸಂಸ್ಕೃತ ಭಾಷೆ ಪ್ರಕೃತಿ. ಅದರಿಂದ ಬಂದ ತದ್ಭವ ತತ್ಸಮ ದೇಶೀ ಮುಂತಾದ ಅನೇಕ ಪ್ರಕಾರಗಳು ಪ್ರಾಕೃತ. ಶೂರಸೇನೀ ಮಾಗಧೀಗಳು ನಾಟಕಾದಿಗಳಲ್ಲಿ ನಿಯಮಿತವಾಗಿವೆ.

## ೯೯. ಪೈಶಾಚ ಇತ್ಯಾದಿ :

**ಪಿಶಾಚಾತ್ಯಂತನೀಚಾದೌ ಪೈಶಾಚಂ ಮಾಗಧಂ ತಥಾ ॥ ೬೫ ॥**

**ಯದ್ದೇಶಂ ನೀಚಪಾತ್ರಂ ಯತ್ತದ್ದೇಶಂ ತಸ್ಯ ಭಾಷಿತಮ್ ।**
**ಕಾರ್ಯತಶ್ಚೋತ್ತಮಾದೀನಾಂ ಕಾರ್ಯೋ ಭಾಷಾವ್ಯತಿಕ್ರಮಃ ॥ ೬೬ ॥**

---

೧ ಪಾಠಗಳು : ಶೂರಸೇನೀ; ಸೌರಸೇನೀ.

ಅನು : ಪಿಶಾಚರಿಗೆ ಹಾಗೂ ಅತ್ಯಂತ ಅಧಮ [ಪಾತ್ರಗಳು] ಮೊದಲಾದವುಗಳಿಗೆ ಪೈಶಾಚ [ಮತ್ತು] ಮಾಗಧ [ಇವು ಮಾತನಾಡುವ ಭಾಷೆಗಳಾಗಿರತಕ್ಕದ್ದು]. ನೀಚ ಪಾತ್ರವು ಯಾವ ದೇಶದ್ದೋ [ಎಂದರೆ, ಯಾವ ದೇಶದಲ್ಲಿ ವಾಸಮಾಡುವುದೊ]ಆ ದೇಶದ ಭಾಷೆಯನ್ನೆ ಆ [ನೀಚ] ಪಾತ್ರಕ್ಕೆ ಅಳವಡಿಸತಕ್ಕದ್ದು. ಉತ್ತಮಾದಿ [ಎಂದರೆ ಉತ್ತಮ ಮಧ್ಯಮ] ಪಾತ್ರಗಳಿಗೆ ಭಾಷೆಯನ್ನು ವ್ಯತ್ಯಾಸಮಾಡಬಹುದು.

ಟಿಪ್ಪಣಿ : ನಾಟಕಾದಿಗಳಲ್ಲಿ ವಿವಿಧ ಪಾತ್ರಗಳು ಸಾಮಾನ್ಯವಾಗಿ ಆಡತಕ್ಕ ಭಾಷೆಗಳನ್ನು ಸೂಚಿಸಿ, ಅನಂತರ ಈ ಕಾರಿಕೆಯಲ್ಲಿ ಹೀಗೆ ಹೇಳಿದೆ : ಅಧಮ ಪಾತ್ರಗಳ ಮಾತಿನಲ್ಲಿ ಅವು ಯಾವ ದೇಶದವೊ ಅದೇ ದೇಶದ ಭಾಷೆಯನ್ನು ಬಳಸತಕ್ಕದ್ದು; ಉತ್ತಮ ಮಧ್ಯಮ ಪಾತ್ರಗಳಿಗೆ ಮಾತ್ರ, ಅಗತ್ಯವಿದ್ದಲ್ಲಿ, ಯಾವೊಂದು ಭಾಷೆಯನ್ನು ಬೇಕಿದ್ದರೂ ಬಳಸಬಹುದು; ಅದು ದೇಶಾನುಸಾರಿಯಾಗಿಲ್ಲದಿದ್ದರೂ ಅಡ್ಡಿಯಿಲ್ಲ.

# ಸಂಬೋಧನೆಗಳು

## ೧೦೦. ಸಂಬೋಧನ ಕ್ರಮ–೧ :

ಭಗವಂತೋ ವರೈರ್ವಾಚ್ಯಾ ವಿದ್ವದ್ದೇವರ್ಷಿಲಿಂಗಿನಃ।
ವಿಪ್ರಾಮಾತ್ಯಾಗ್ರಜಾಶ್ಚಾऽऽರ್ಯಾ ನಟೀ ಸೂತ್ರಭೃತೌ ಮಿಥಃ ॥ ೬೭ ॥

ಅನು : ಶ್ರೇಷ್ಠರಾಗಿರುವ ಕಾರಣ, ವಿದ್ವಾಂಸರು ದೇವರ್ಷಿಗಳು ತಪಸ್ವಿಗಳು–ಇವರನ್ನು 'ಭಗವನ್' ಎಂದೂ, ಬ್ರಾಹ್ಮಣರು ಅಮಾತ್ಯರು ಅಗ್ರಜರು–ಇವರನ್ನು [ಹಾಗೂ] ನಟೀ ಸೂತ್ರಧಾರ ಇವರು ಒಬ್ಬರೊಬ್ಬರನ್ನು 'ಆರ್ಯ' ಎಂದೂ ಕರೆಯತಕ್ಕದ್ದು.

ಟಿಪ್ಪಣಿ : ನಟಿಯು ಸೂತ್ರಧಾರನನ್ನು 'ಆರ್ಯ' ಎಂದೂ, ಸೂತ್ರಧಾರನು ನಟಿಯನ್ನು 'ಆರ್ಯೆ' ಎಂದೂ ಹೇಳತಕ್ಕದ್ದು.

ಹೋಲಿಕೆ = ನಾ.ಶಾ. : ೧೯–೨೯ರಿಂದ ಮುಂದೆ; ಸಾ.ದ. : ೬–೧೪೪ರಿಂದ ಮುಂದೆ. (ಮುಂದಿನ ನಾಲ್ಕು ಖಂಡಗಳಿಗೆ ಇದೇ ಹೋಲಿಕೆ ಅನ್ವಯಿಸುತ್ತದೆ.)

## ೧೦೧. ಸಂಬೋಧನ ಕ್ರಮ–೨ :

ರಥೀ ಸೂತೇನ ಚಾಯುಷ್ಮಾನ್ ಪೂಜ್ಯೈಃ ಶಿಷ್ಯಾತ್ಮಜಾನುಜಾಃ।
ವತ್ಸೇತಿ ತಾತಃ ಪೂಜ್ಯೋऽಪಿ ಸುಗೃಹೀತಾಭಿಧಸ್ತು ತೈಃ ॥ ೬೮ ॥

ಅನುಃ ಸೂತನು[ಎಂದರೆ, ರಥ ನಡೆಸುವವನು]ರಥಿಕನನ್ನು 'ಆಯುಷ್ಮಾನ್' ಎಂದೂ, ಪೂಜ್ಯರಾದವರು ಶಿಷ್ಯ ಪುತ್ರ ಅನುಜರುಗಳನ್ನು 'ವತ್ಸ' 'ತಾತ' ಎಂದೂ, ಅವರು [ಎಂದರೆ, ಶಿಷ್ಯ ಪುತ್ರ ಅನುಜ ಮೊದಲಾದವರು] ಪೂಜ್ಯರನ್ನು ['ತಾತ' ಎಂದು ] ಕೂಡ [ಕರೆಯಬಹುದು ಅಥವಾ] 'ಸುಗೃಹೀತನಾಮಾ' ಎಂದು [ಸಂಬೋಧಿಸತಕ್ಕದ್ದು]

ವ್ಯಾಖ್ಯೆ : ಕಾರಿಕೆಯಲ್ಲಿ 'ಅಪಿ' (ಕೂಡ) ಶಬ್ದವಿರುವುದಕ್ಕೆ ಕಾರಣ : ಶಿಷ್ಯರು ಪುತ್ರರು ಅನುಜರು– ಇವರುಗಳನ್ನು ಪೂಜ್ಯರಾದವರು 'ತಾತ' ಎಂದು ಕೂಗತಕ್ಕದ್ದು; ಶಿಷ್ಯರು ಪುತ್ರರು ಅನುಜರು–ಇವರು ಕೂಡ ಪೂಜ್ಯರನ್ನು 'ತಾತ' ಎಂದು ಅಥವಾ 'ಸುಗೃಹೀತನಾಮಾ' ಎಂದು ಸಂಬೋಧಿಸತಕ್ಕದ್ದು.

ಟಿಪ್ಪಣಿ : 'ಸುಗೃಹೀತನಾಮಾ' ಅಥವಾ 'ಸುಗೃಹೀತಾಭಿಧ' ಎಂದರೆ ಪ್ರಸಿದ್ಧವಾಗಿರುವ ಹೆಸರುಳ್ಳವರು ಎಂದು.

## ೧೦೨. ಸಂಬೋಧನ ಕ್ರಮ-೩ :

**ಭಾವೋಽನುಗೇನ ಸೂತ್ರೀ ಚ ಮಾರ್ಷೇತ್ಯೇತೇನ ಸೋಽಪಿ ಚ ।**

ಅನು : ಸೂತ್ರಧಾರನನ್ನು ಅನುವರ್ತಿಯು [ಎಂದರೆ, ಪಾರಿಪಾರ್ಶ್ವಿಕನು] 'ಭಾವ' ಎಂದು ಮತ್ತು ಆತನು [ಎಂದರೆ, ಸೂತ್ರಧಾರನು] ಈತನನ್ನು [ಎಂದರೆ, ಪಾರಿಪಾರ್ಶ್ವಿಕನನ್ನು] 'ಮಾರ್ಷ' ಎಂದೂ [ಕರೆಯತಕ್ಕದ್ದು].

ವ್ಯಾಖ್ಯೆ : ಪಾರಿಪಾರ್ಶ್ವಕನು ಸೂತ್ರಧಾರನನ್ನು 'ಭಾವ' ಎಂದೂ, ಸೂತ್ರಧಾರನು ಆತನನ್ನು 'ಮಾರ್ಷ' ಎಂದೂ ಕರೆಯತಕ್ಕದ್ದು.

ಟಿಪ್ಪಣಿ : 'ಮಾರ್ಷ' ಎಂಬುದಕ್ಕೆ 'ಮಾರಿಷ' ಎನ್ನುವುದೂ ಉಂಟು.

## ೧೦೩. ಸಂಬೋಧನ ಕ್ರಮ-೪ :

**ದೇವಃ ಸ್ವಾಮೀತಿ ನೃಪತಿರ್ಭೃತ್ಯೈರ್ಭಟ್ಟೇತಿ ಚಾಧಮೈಃ ॥ ೬೯ ॥**
**ಆಮಂತ್ರಣೀಯಾಃ ಪತಿವಜ್ಜ್ಯೇಷ್ಠಮಧ್ಯಾಧಮೈಃಸ್ತ್ರಿಯಃ ।**

ಅನು: ರಾಜನನ್ನು ಭೃತ್ಯರು 'ದೇವ' 'ಸ್ವಾಮಿನ್' ಎಂದೂ, ಅಧಮರು 'ಭಟ್ಟ' ಎಂದೂ [ಕರೆಯತಕ್ಕದ್ದು]; ಸ್ತ್ರೀಯರನ್ನು ಉತ್ತಮಾಧಮಮಧ್ಯಮ ಪಾತ್ರಗಳು[ಎಲ್ಲವೂ] ಪತಿಯಂತೆಯೇ [ಎಂದರೆ, ಆಯಾ ಸ್ತ್ರೀಯಳ ಪತಿಯನ್ನು ಸಂಬೋಧಿಸುವ ರೀತಿಯಲ್ಲಿ] ಕರೆಯುವುದು.

ವ್ಯಾಖ್ಯೆ: ವಿದ್ವತ್ ದೇವಾದಿ ಸ್ತ್ರೀಯರನ್ನು, ಅವರ ಪತಿಯನ್ನು ಸಂಬೋಧಿಸುವಂತೆಯೇ ('ಭಗವತಿ', 'ದೇವಿ' ಮುಂತಾಗಿ) ಸಂಬೋಧಿಸತಕ್ಕದ್ದು.

## ೧೦೪. ಸಂಬೋಧನ ಕ್ರಮ-೫ :

**ಸಮಾ ಹಲೇತಿ ಪ್ರೇಷ್ಯಾ ಚ ಹಂಜೇ [1]ವೇಶ್ಯಾಽಜ್ಜುಕಾ[1] ತಥಾ ॥ ೭೦ ॥**

**[2]ಕುಟ್ಟನ್ಯಂಬೇತ್ಯನುಗತೈಃ ಪೂಜ್ಯಾ ವಾ ಜರತೀ ಜನೈಃ ।[2]**
**ವಿದೂಷಕೇಣ ಭವತೀ[3]ರಾಜ್ಞೀ[3]ಚೇಟೀತಿ ಶಬ್ದ್ಯತೇ ॥ ೭೧ ॥**

---

೧ ಪಾಠ : ವೇಶ್ಯಾಽರ್ಜುಕಾ ।

೨ ಪಾಠ : ಕುಟ್ಟನ್ಯನುಗತೈಃ ಪೂಜ್ಯಾ ಅಂಬೇತಿ ಯುವತೀಜನೈಃ ।

೩ ಪಾಠ : ರಾಜ್ಞಾ.

ಅನು : [ಸ್ತ್ರೀಯರಲ್ಲಿ ಸಂಬೋಧನೆ:] ತನ್ನ ಸಮಾನಳನ್ನು 'ಹಲಾ' ಎಂದೂ, ಸೇವಕಿಯನ್ನು 'ಹಂಜೇ' ಎಂದೂ, ವೇಶ್ಯೆಯನ್ನು 'ಅಜ್ಜುಕಾ' ಎಂದೂ, ಕುಟ್ಟನಿಂಯನ್ನು [ಎಂದರೆ, ಮಧ್ಯಸ್ಥಿಕೆ ನಡಸುವ ವೇಶ್ಯೆಯ ತಾಯಿ] ಅವಳ ಅನುವರ್ತಿಗಳಾದ ಜನರು 'ಅಂಬಾ' ಎಂದೂ [ಅದರಂತೆಯೇ] ಪೂಜ್ಯಳನ್ನು ಹಾಗೂ ವೃದ್ಧಸ್ತ್ರೀಯನ್ನು [ಕೂಡ 'ಅಂಬಾ' ಎಂದು ಕರೆಯುತಕ್ಕದ್ದು]; ವಿದೂಷಕನು ರಾಣಿಯನ್ನು [ಮತ್ತು ಆಕೆಯ] ಚೇಟಿಯನ್ನು 'ಭವತೀ' ಎನ್ನತಕ್ಕದ್ದು.

ವ್ಯಾಖ್ಯೆ : ಪೂಜ್ಯಳನ್ನು ಹಾಗೂ ವೃದ್ಧೆಯನ್ನು 'ಅಂಬಾ' ಎನ್ನತಕ್ಕದ್ದು; ಉಳಿದವು ಸ್ಪಷ್ಟವಾಗಿವೆ.

# ಎರಡನೆಯ ಪ್ರಕಾಶದ ಉಪಸಂಹಾರ

## ೧೦೫. ನೇತೃವಿಷಯದ ಉಪಸಂಹಾರ :

ಚೇಷ್ಟಾಗುಣೋದಾಹೃತಿಸತ್ತ್ವಭಾವಾ-
ನಶೇಷತೋ ನೇತೃದಶಾವಿಭಿನ್ನಾನ್ ।
ಕೋ ವಕ್ತುಮೀಶೋ ಭರತೋನ ಯೋ ವಾ
ಯೋ ವಾ ನ ದೇವಃ ಶಶಿಖಂಡಮೌಲಿಃ ॥ ೬೨ ॥

ಅನು : ನಾಯಕನ ವಿಧವಿಧವಾದ ದಶೆಗಳಿಗೆ ಕಾರಣವಾದ ಚೇಷ್ಟೆ, ಗುಣ, ಉದಾಹೃತಿ(ಉಕ್ತಿ), ಸತ್ತ್ವ, ಭಾವಗಳನ್ನು ನಿಃಶೇಷವಾಗಿ ಹೇಳಲು, ಭರತನಲ್ಲದೆ ಅಥವಾ ದೇವನಾದ ಶಶಿಖಂಡಮೌಲಿ(ಶಿವ)ಯಲ್ಲದೆ, [ಬೇರೆ] ಯಾರು ತಾನೆ ಶಕ್ತರು?

ವ್ಯಾಖ್ಯೆ : ಇಲ್ಲಿ ಹೇಳಿರುವ ನಾಯಕವಿಚಾರ ದಿಙ್ಮಾತ್ರದರ್ಶಕವಾಗಿದೆ ಎಂಬುದು ಮೇಲಿನ ಕಾರಿಕೆಯ ತಾತ್ಪರ್ಯ. ಚೇಷ್ಟೆ = ಲೀಲೆ ಮೊದಲಾದವು; ಗುಣ = ವಿನಯಾದಿಗಳು; ಉದಾಹೃತಿ = ಸಂಸ್ಕೃತ ಪ್ರಾಕೃತ ಮೊದಲಾದ ಮಾತುಗಳು; ಸತ್ತ್ವ = ನಿರ್ವಿಕಾರಾತ್ಮಕವಾದ ಮನಃ ಭಾವ = ಸತ್ತ್ವದ ಮೊದಲ ವಿಕಾರ; ಇದರಿಂದ ಹಾವಾದಿಗಳು ಲಕ್ಷಿತವಾಗಿವೆ. ಇಲ್ಲಿಗೆ ಶ್ರೀ ವಿಷ್ಣುವಿನ ಮಗನಾದ ಧನಿಕನಿಂದ ರಚಿತವಾದ 'ದಶರೂಪಾವಲೋಕ'ದಲ್ಲಿ 'ನೇತೃಪ್ರಕಾಶ'ವೆಂಬ ಹೆಸರಿನ ದ್ವಿತೀಯ ಪ್ರಕಾಶ ಮುಗಿಯಿತು.

ಟಿಪ್ಪಣಿ : ಛಂದಸ್ಸು : ಉಪಜಾತಿ

–ಎರಡನೆಯ ಪ್ರಕಾಶ ಮುಗಿಯಿತು–

## ಮೂರನೆಯ ಪ್ರಕಾಶ : ರೂಪಕಭೇದಗಳು

# ರೂಪಕಗಳಲ್ಲಿ ವಿಶಿಷ್ಟವಾದ ನಾಟಕ

### ೧. ನಾಟಕದ ಹೆಚ್ಚಳ :

**ಪ್ರಕೃತಿತ್ವಾದಥಾನ್ಯೇಷಾಂ ಭೂಯೋರಸಪರಿಗ್ರಹಾತ್ ।**
**ಸಂಪೂರ್ಣ ಲಕ್ಷಣತ್ವಾಚ್ಚ ಪೂರ್ವಂ ನಾಟಕಮುಚ್ಯತೇ ॥ ೧ ॥**

ಅನು : ಉಳಿದವುಗಳಿಗೆ [ಎಂದರೆ, ಪ್ರಕರಣ ಮುಂತಾದ ಇತರ ರೂಪಕ ಭೇದಗಳಿಗೆ] ಪ್ರಕೃತಿ (ಮೂಲ) ರೂಪವಾಗಿರುವ ಕಾರಣ, ರಸಗಳನ್ನು ವಿಶೇಷವಾಗಿ ಹಿಡಿದಿರುವ ಕಾರಣ ಮತ್ತು [ರೂಪಕ] ಲಕ್ಷಣಗಳೆಲ್ಲವನ್ನೂ ಸಂಪೂರ್ಣವಾಗಿ ಹೊಂದಿರುವ ಕಾರಣ 'ನಾಟಕ' [ಲಕ್ಷಣವನ್ನು] ಮೊದಲು ಹೇಳಿದೆ.

ವ್ಯಾಖ್ಯೆ : ರಸವಿಚಾರವನ್ನು ಪ್ರಸ್ತಾಪಿಸುವ ಮುನ್ನ, ಬೇರೆಯಾಗಿ ಮಧ್ಯದಲ್ಲಿ, ವಸ್ತುನಾಯಕರಸ ಇವುಗಳ ವಿಭಾಗವನ್ನನುಸರಿಸಿ ಉಂಟಾಗುವ ನಾಟಕಾದಿ ಭೇದಗಳನ್ನು [ಈ ಪ್ರಕಾಶದಲ್ಲಿ] ಹೇಳಿದೆ. 'ನಾಟಕ'ವು ಪ್ರಕರಣ ಮುಂತಾದ ಇತರ ರೂಪಕಗಳಿಗೆ ಮೂಲಸ್ವರೂಪವಾಗಿದೆ.

ಟಿಪ್ಪಣಿ : 'ನಾಟಕ' ಎಂಬುದು ದಶರೂಪಕಗಳಲ್ಲಿ ಒಂದು. ಅದು ರೂಪಕದ ಸರ್ವಲಕ್ಷಣಗಳನ್ನೂ ಹೊಂದಿದೆ. ದಶರೂಪಕಗಳಲ್ಲಿ ಮಾದರಿಯಾಗಿದೆ. ಇದರ ಲಕ್ಷಣಗಳ ಆಧಾರದ ಮೇಲೆ ಪ್ರಕರಣ ಮುಂತಾದ ಉಳಿದ ಒಂಬತ್ತು ಬಗೆಯ ರೂಪಕಗಳ ಲಕ್ಷಣಗಳನ್ನು ಗಮನಿಸಬಹುದಾಗಿದೆ. ಆದಕಾರಣ ನಾಟಕಲಕ್ಷಣವನ್ನು ಆದಿಯಲ್ಲೆ ವಿವರವಾಗಿ ಹೇಳಲಾಗಿದೆ. ಈ ಪ್ರಕಾಶದ ಮೊದಲ ೪೩ ಖಂಡಗಳಲ್ಲಿ ನಾಟಕದ ಲಕ್ಷಣಗಳು ಬಂದಿವೆ. ಅನಂತರ ಉಳಿದವುಗಳ ಲಕ್ಷಣಗಳನ್ನು ಸಂಕ್ಷೇಪವಾಗಿ [೪೪ರಿಂದ ೭೪ರ ವರೆಗೆ] ಹೇಳಿದೆ. ಅಲ್ಲಿ, ಆಯಾ ರೂಪಕದ ವಿಶೇಷಲಕ್ಷಣಗಳನ್ನು ಹೇಳಿ, ಉಳಿದ ಲಕ್ಷಣಗಳು ನಾಟಕದಂತೆಯೇ ಇರತಕ್ಕದ್ದೆಂದು ಸೂಚಿಸಲಾಗಿದೆ. [ನೋಡಿ : ೩-೪೪ರ ಕೊನೆ.]

ನಾಟಕದ ಸಂಕ್ಷೇಪಲಕ್ಷಣಗಳಿಗೆ ನೋಡಿ: ಸಾ.ದ. : ೬-೭ರಿಂದ ಮುಂದೆ; ಪ್ರತಾಪ : ೩-೩೨, ೩೩.

# ನಾಟಕದ ಆರಂಭ

### ೨. ನಟನ ಆದ್ಯಕರ್ತವ್ಯಗಳು :

**ಪೂರ್ವರಂಗಂ ವಿಧಾಯಾದೌ ಸೂತ್ರಧಾರೇ ವಿನಿರ್ಗತೇ ।**
**ಪ್ರವಿಶ್ಯ ತದ್ವದಪರಃ ಕಾವ್ಯಮಾಸ್ಥಾಪಯೇನ್ನಟಃ ॥ ೨ ॥**

ಅನು : 'ಪೂರ್ವರಂಗ'ವನ್ನು ನೆರವೇರಿಸಿ ಸೂತ್ರಧಾರನು [ರಂಗದಿಂದ] ಹೊರ ಹೊರಡಲು, ಇನ್ನೊಬ್ಬ ನಟನು ಅವನಂತೆಯೇ ಪ್ರವೇಶಿಸಿ ಕಾವ್ಯವನ್ನು ಪ್ರಸ್ಥಾಪಿಸತಕ್ಕದ್ದು.

ವ್ಯಾಖ್ಯೆ : ನಾಟಕಪೂರ್ವದಲ್ಲಿ ರಂಜನೆ ಉಂಟುಮಾಡುವುದಕ್ಕೆ (ಪೂರ್ವಂರಜ್ಯತೇಽಸ್ಮಿನ್ ಇತಿ) ಎಂದರೆ, ನಾಟ್ಯಶಾಲೆಗೆ 'ಪೂರ್ವರಂಗ' ಎಂಬ ಹೆಸರು. ನಾಟ್ಯಶಾಲೆಯಲ್ಲಿ, ಪ್ರಯೋಗಕ್ಕೆ ಮೊದಲು ನಡೆಯುವ ಆರಂಭದ ಕಾರ್ಯಗಳು 'ಪೂರ್ವರಂಗತಾ' (ಪೂರ್ವರಂಗಕ್ರಿಯೆ) ಎನ್ನಿಸಿಕೊಳ್ಳುತ್ತವೆ. 'ಪೂರ್ವರಂಗ'ದ ಮಂಗಲಾಚರಣೆ ಮೊದಲಾದವುಗಳನ್ನು ಮುಗಿಸಿ ಸೂತ್ರಧಾರನು ಒಳಕ್ಕೆ ಹೋಗಲು, ಮತ್ತೊಬ್ಬ ನಟನು ಅವನಂತೆಯೇ

ವೈಷ್ಣವಸ್ಥಾನಕದಿಂದ ಪ್ರವೇಶಿಸಿ ಕಾವ್ಯ ವಿಷಯವನ್ನು ಸ್ಥಾಪಿಸತಕ್ಕದ್ದು. ಕಾವ್ಯಾರ್ಥವನ್ನು ಸೂಚಿಸಿ ಸ್ಥಾಪಿಸುವುದರಿಂದ ಆತನಿಗೆ 'ಸ್ಥಾಪಕ' ಎನ್ನುತ್ತಾರೆ.

ಟಿಪ್ಪಣಿ : ಪೂರ್ವರಂಗದ ವಿಧಿವಿವರಗಳಿಗೆ ನಾ.ಶಾ.ದ ಐದನೆಯ ಅಧ್ಯಾಯ (೧೦ರಿಂದ ೧೭೫) ನೋಡಿ.

ಸ್ಥಾಪಕನೂ ಸೂತ್ರಧಾರನಂತೆಯೇ ವೈಷ್ಣವಸ್ಥಾನದಿಂದ ಪ್ರವೇಶಿಸತಕ್ಕದ್ದು. 'ವೈಷ್ಣವ ಸ್ಥಾನ' ಎಂಬುದು ಪಾತ್ರಧಾರಿಯು ನಿಲ್ಲುವ ಒಂದು ಭಂಗಿ. ಅದರ ವಿವರಗಳಿಗೆ ನಾ.ಶಾ.: ೧೧-೫೧, ೫೨ ನೋಡಿ.

ಹೋಲಿಕೆ = ನಾ.ಶಾ. : ೫-೧೭೪, ೧೭೫; ಸಾ.ದ. ೬-೨೭.

## ೩. ಸೂಚನೆಯ ಕ್ರಮ :

**ದಿವ್ಯಮರ್ತ್ಯೇ ಸ ತದ್ರೂಪೋ ಮಿಶ್ರಮನ್ಯತರಸ್ತಯೋಃ ।**
**ಸೂಚಯೇದ್ವಸ್ತು ಬೀಜಂ ವಾ ಮುಖಂ ಪಾತ್ರಮಥಾಪಿ ವಾ ॥ ೩ ॥**

ಅನು : ಅವನಿಗೆ [ಎಂದರೆ, ಸ್ಥಾಪಕನಿಗೆ] ದೇವಸಂಬಂಧಿಯಾದ (ದಿವ್ಯ) ರೂಪಕದಲ್ಲಿ [ಮತ್ತು] ಮಾನವಸಂಬಂಧಿಯಾದ (ಮರ್ತ್ಯ) ರೂಪಕದಲ್ಲಿ ಅದೇ ರೂಪ [ಎಂದರೆ, ದಿವ್ಯದಲ್ಲಿ ದೇವರೂಪ ಮತ್ತು ಮರ್ತ್ಯದಲ್ಲಿ ಮಾನವರೂಪ]; ಮಿಶ್ರ [ಎಂದರೆ, ದಿವ್ಯ ಮರ್ತ್ಯಗಳ ಬೆರಕೆಯಿರುವ ರೂಪಕಗಳಲ್ಲಿ] ಯಾವುದಾದರೂ [ಎಂದರೆ, ದಿವ್ಯರೂಪ ವಾದರೂ ಆಗಬಹುದು ಅಥವಾ ಮರ್ತ್ಯವಾದರೂ ಆದೀತು-ಹೀಗೆ ರೂಪವನ್ನು ಧರಿಸಿರತಕ್ಕದ್ದು.] ಆತನು [ರೂಪಕದ] ವಸ್ತುವನ್ನು ಅಥವಾ [ಕಥೆಯ] ಬೀಜವನ್ನು ಅಥವಾ [ಕಥೆಯ] ಮುಖವನ್ನು ಅಥವಾ [ಕಥೆಯ] ಪಾತ್ರವನ್ನು ಸೂಚಿಸತಕ್ಕದ್ದು.

ವ್ಯಾಖ್ಯೆ : ಸ್ಥಾಪಕನು ದೇವಸಂಬಂಧಿಯಾದ ರೂಪಕಗಳಲ್ಲಿ ದೇವವೇಷವನ್ನೂ ಮರ್ತ್ಯಕಥೆಗಳಲ್ಲಿ ಮಾನವವೇಷವನ್ನೂ ಧರಿಸತಕ್ಕದ್ದು. ಮಿಶ್ರ ಕಥೆಗಳಲ್ಲಿ ದೇವಮಾನವ ವೇಷಗಳಲ್ಲಿ ಯಾವುದೊಂದನ್ನಾದರೂ ಧರಿಸಿರಬಹುದು. ಆತ ಸೂಚಿಸತಕ್ಕದ್ದು ಕಥೆಯ ವಸ್ತು ಇಲ್ಲವೆ ಬೀಜ ಇಲ್ಲವೆ ಮುಖ ಅಥವಾ ಪಾತ್ರ.

ಉದಾ:- ವಸ್ತುಸೂಚನೆ [ಮಾಯುರಾಜವಿರಚಿತವಾದ ಉದಾತ್ತರಾಘವ ಎಂಬ ಅಪ್ರಕಟಿತ ರೂಪಕದಿಂದ] :

'ರಾಮೋ ಮೂರ್ಧ್ನಿ ನಿಧಾಯ ಕಾನನಮಗಾನ್ಮಾಲಾಮಿವಾಜ್ಞಾಂ ಗುರೋ-
ಸ್ತದ್ಭಕ್ತ್ಯಾ ಭರತೇನ ರಾಜ್ಯಮಖಿಲಂ ಮಾತ್ರಾ ಸಹೈವೋಜ್ಝಿತಮ್ ।
ತೌ ಸುಗ್ರೀವವಿಭೀಷಣಾವನುಗತೌ ನೀತೌ ಪರಾಂ ಸಂಪದಮ್
ಪ್ರೋದ್ವೃತ್ತಾ ದಶಕಂಧರಪ್ರಭೃತಯೋ ಧ್ವಸ್ತಾಃ ಸಮಸ್ತಾ ದ್ವಿಷಃ ॥'

[ಹಿರಿಯನಾದ ತಂದೆಯ ಆಜ್ಞೆಯನ್ನು ಮಾಲೆಯಂತೆ ಶಿರದಲ್ಲಿ ಧರಿಸಿ ರಾಮನು ಕಾಡಿಗೆ ಹೋದನು. ಆತನ ಮೇಲಿರುವ ಭಕ್ತಿಯಿಂದ ಭರತನು ತನ್ನ ತಾಯಿಯನ್ನೂ ಜೊತೆಗೆ ಸಮಸ್ತರಾಜ್ಯವನ್ನೂ ಪರಿತ್ಯಜಿಸಿದನು. ಜೊತೆಗೆ ಬಂದ ಸುಗ್ರೀವ ವಿಭೀಷಣರು ಪರಮಸಂಪದವನ್ನು ಪಡೆದರು. ಶ್ರೀರಾಮನು ದುರ್ಜಯರಾಗಿದ್ದ ರಾವಣ ಮೊದಲಾದ ಸಮಸ್ತ ವೈರಿಗಳನ್ನೂ ನಾಶಮಾಡಿದನು.]

ಬೀಜಸೂಚನೆಗೆ ಉದಾ:-[ರತ್ನಾ : ೧-೬; ೧-೩೯ ಮತ್ತು ೩-೧೦ರಲ್ಲಿ ಕೂಡ ಬಂದಿದೆ.]

'ದ್ವೀಪಾದನ್ಯಸ್ಮಾದಪಿ ಮಧ್ಯಾದಪಿ ಜಲನಿಧೇರ್ದಿಶೋಽಪ್ಯಂತಾತ್ ।
ಆನೀಯ ಝಟಿತಿ ಘಟಯತಿ ವಿಧಿರಭಿಮತಮಭಿಮುಖೀಭೂತಃ ॥'

[ವಿಧಿ ಅನುಕೂಲವಾಗಿದ್ದರೆ ಅದು ನಮಗೆ ಇಷ್ಟವಾದದ್ದನ್ನು ಬೇರೊಂದು ದ್ವೀಪದಿಂದಲಾದರೂ ಅಥವಾ ಸಮುದ್ರಮಧ್ಯದಿಂದಲಾದರೂ ಅಥವಾ ದಿಕ್ಕಿನ ಅಂತ್ಯದಿಂದಲಾದರೂ ತಂದು ಕೂಡಿಸುತ್ತದೆ.]

ಮುಖಸೂಚನೆಗೆ ಉದಾ:-[ಆಕರ ತಿಳಿಯದು; ೩-೧೧ರಲ್ಲಿ ಮತ್ತೆ ಬಂದಿದೆ.]

'ಆಸಾದಿತಪ್ರಕಟನಿರ್ಮಲಚಂದ್ರಹಾಸಃ ಪ್ರಾಪ್ತಃ ಶರತ್ಸಮಯ ಏಷ ವಿಶುದ್ಧಕಾಂತಃ।
ಉತ್ಖಾಯ ಗಾಢತಮಸಂ ಘನಕಾಲಮುಗ್ರಂ ರಾಮೋ ದಶಾಸ್ಯಮಿವ ಸಂಭೃತಬಂಧುಜೀವಃ॥'

[ನಿರ್ಮಲವಾದ ಚಂದ್ರಕಾಂತಿ ಪ್ರಕಟವಾಗಿರಲು, ಬಂಧುಜೀವ (ದಾಸವಾಳ) ಪುಷ್ಪವನ್ನು ಧರಿಸಿ ಬಂದ ಶುದ್ಧವೂ ರಮ್ಯವೂ ಆದ ಶರತ್ಕಾಲವು-ಚಂದ್ರಸಮಾನವಾದ ಹಾಸ ಉಕ್ಕುತ್ತಿರಲು, ಶುದ್ಧನೂ ರಮ್ಯನೂ ಆದ ಅಥವಾ ರಾವಣನ ಚಂದ್ರಹಾಸ ಖಡ್ಗವನ್ನು ನಾಶಮಾಡಿದವನಾದ ರಾಮಚಂದ್ರನು ತನ್ನ ಬಂಧುಗಳನ್ನು ಉದ್ಧರಿಸಲು, ತಮೋಗುಣದ ಆಧಿಕ್ಯದಿಂದ ಭಯಂಕರನೂ ಉಗ್ರನೂ ಆದ ದುಶಾಸ್ಯನನ್ನು ನಾಶಗೊಳಿಸಿದಂತೆ-ಗಾಢವಾದ ಅಂಧಕಾರದಿಂದ ಕೂಡಿದ ಭಯಂಕರವಾದ ಮತ್ತು ದಟ್ಟವಾದ ವರ್ಷಾಕಾಲವನ್ನು ನಾಶಮಾಡಿತು.]

ಪಾತ್ರಸೂಚನೆಗೆ ಉದಾ:-[ಶಾಕುಂ. : ೧-೫; ೩-೧೨ರಲ್ಲಿ ಮತ್ತೆ ಬಂದಿದೆ.]

'ತವಾಸ್ಮಿ ಗೀತರಾಗೇಣ ಹಾರಿಣಾ ಪ್ರಸಭಂ ಹೃತಃ।
ಏಷ ರಾಜೇವ ದುಷ್ಯಂತಃ ಸಾರಂಗೇಣಾತಿರಂಹಸಾ॥'

[ಎಲೈ ನಟಿ, ಅತಿವೇಗಶಾಲಿಯಾದ ಜಿಂಕೆಯಿಂದ ಆಕರ್ಷಿತನಾದ ಈ ರಾಜ ದುಷ್ಯಂತನಂತೆ, ನಾನು ನಿನ್ನ ಗೀತರಾಗದಿಂದ ಹೃತನಾಗಿದ್ದೇನೆ.] (ಅನಂತರ ಮೃಗವನ್ನನುಸರಿಸಿದ ದುಷ್ಯಂತ ಪ್ರವೇಶಿಸುತ್ತಾನೆ.)

ಟಿಪ್ಪಣಿ : ಹೋಲಿಕೆ = ನಾ.ಶಾ. : ೫-೧೬೯, ೧೭೦; ಸಾ.ದ. : ೬-೨೭

## ೪. ಸ್ಥಾಪನಾನಂತರದ ಕರ್ತವ್ಯ :

**ರಂಗಂ ಪ್ರಸಾದ್ಯ ಮಧುರೈಃ ಶ್ಲೋಕೈಃ ಕಾವ್ಯಾರ್ಥಸೂಚಕೈಃ।**
**ಋತುಂ ಕಂಚಿದುಪಾದಾಯ ಭಾರತೀಂ ವೃತ್ತಿಮಾಶ್ರಯೇತ್ ॥ ೪ ॥**

ಅನು : ಕಾವ್ಯದ ಅರ್ಥವನ್ನು ಸೂಚಿಸುವ ಮಧುರ ಶ್ಲೋಕಗಳಿಂದ ರಂಗವನ್ನು [ಎಂದರೆ, ಸಾಮಾಜಿಕರನ್ನು] ಸಂತೋಷಗೊಳಿಸಿ ಯಾವುದಾದರೊಂದು ಋತುವನ್ನು ಎತ್ತಿಕೊಂಡು ಭಾರತೀವೃತ್ತಿಯನ್ನು ಆಶ್ರಯಿಸತಕ್ಕದ್ದು.

ವ್ಯಾಖ್ಯೆ : ಕಾವ್ಯದ ಅರ್ಥವನ್ನು ಪ್ರತಿಪಾದಿಸುವ ಶ್ಲೋಕದಿಂದ ರಂಗಪ್ರಶಸ್ತಿಯನ್ನು ಮಾಡಿ ಅನಂತರ ಭಾರತೀವೃತ್ತಿಯನ್ನು ಆಶ್ರಯಿಸಬೇಕು. ಕೆಳಗಿನ ಉದಾಹರಣೆಯಂತೆಯೇ ಭಾರತೀವೃತ್ತಿಯನ್ನು ಆಶ್ರಯಿಸ ತಕ್ಕದ್ದು : ಉದಾ.-[ರತ್ನಾ : ೧-೨]

'ಔತ್ಸುಕ್ಯೇನ ಕೃತತ್ವರಾ ಸಹಭುವಾ ವ್ಯಾವರ್ತಮಾನಾ ಹ್ರಿಯಾ
ತೈಸ್ತೈರ್ಬಂಧುವಧೂಜನಸ್ಯ ವಚನೈರ್ನೀತಾಭಿಮುಖ್ಯಂ ಪುನಃ
ದೃಷ್ಟ್ವಾಗ್ರೇ ವರಮಾತ್ತಸಾಧ್ವಸರಸಾ ಗೌರೀ ನವೇ ಸಂಗಮೇ
ಸಂರೋಹತ್ಪುಲಕಾ ಹರೇಣ ಹಸತಾಶ್ಲಿಷ್ಟಾ ಶಿವಾ ಪಾತು ವಃ॥'.

[ನವಸಂಗಮದಲ್ಲಿ, ಔತ್ಸುಕ್ಯದಿಂದ ತ್ವರೆಗೊಂಡು ಈಶ್ವರನ ಬಳಿ ಹೋಗಿ ಹಾಗೆಯೇ ಒಡಮೂಡಿದ ಲಜ್ಜೆಯಿಂದ ಹಿಂತಿರುಗಿದ, ಮತ್ತೆ ತನ್ನ ಬಂಧುಗಳ ಹಾಗೂ ಸಖೀಜನರ ಪ್ರಚೋದಕವಚನಗಳಿಂದ ಪತಿಯ ಎದುರು ಕೊಂಡೊಯ್ಯಲ್ಪಟ್ಟು ಪತಿಯನ್ನು ಎದುರು ಕಂಡೊಡನೆಯೇ ಭೀತಳಾದ, ಅನಂತರ ಶಿವನು ನಗುನಗುತ್ತ ಆಲಂಗಿಸಿಕೊಳ್ಳಲು ರೋಮಾಂಚಿತಳಾದ-ಶಿವೆ ನಿಮ್ಮನ್ನು ಕಾಪಾಡಲಿ.]

ಟಿಪ್ಪಣಿ : 'ಭಾರತೀ'ವೃತ್ತಿಗೆ ೩-೫ ನೋಡಿ.

ಹೋಲಿಕೆ = ನಾ.ಶಾ. : ೫-೧೬೭, ೧೬೮; ಸಾ.ದ. : ೬-೨೮, ೨೯; ಪ್ರತಾಪ : ೩-೩೫

# ಭಾರತೀವೃತ್ತಿ

## ೫. ಭಾರತೀಲಕ್ಷಣ :

**ಭಾರತೀ ಸಂಸ್ಕೃತಪ್ರಾಯೋ ವಾಗ್ವ್ಯಾಪಾರೋ ನಟಾಶ್ರಯಃ ।**
**ಭೇದೈಃ ಪ್ರರೋಚನಾಯುಕ್ತೈರ್ವೀಥೀಪ್ರಹಸನಾಮುಖೈಃ ॥ ೫ ॥**

ಅನು : ನಟನನ್ನು ಆಶ್ರಯಿಸಿದ ಸಂಸ್ಕೃತ[ಭಾಷಾ] ಪ್ರಾಚುರ್ಯವುಳ್ಳ ಮಾತುಕತೆಗಳು 'ಭಾರತೀ'[ವೃತ್ತಿ]; [ಅದರಲ್ಲಿ] ಭೇದಗಳು : ಪ್ರರೋಚನಾ, ವೀಥೀ, ಪ್ರಹಸನ, ಆಮುಖ.

ವ್ಯಾಖ್ಯೆ : ಸಂಸ್ಕೃತಬಾಹುಲ್ಯವುಳ್ಳ ವಾಕ್ಯಪ್ರಧಾನವಾದ ವ್ಯಾಪಾರ 'ಭಾರತೀ'. ಇದು ಬಹುವಾಗಿ ಪುರುಷನಟನಿಂದಲೇ ಪ್ರಯೋಗಿಸಲ್ಪಡುತ್ತದೆ.

ಟಿಪ್ಪಣಿ : ವೃತ್ತಿಗಳ ಲಕ್ಷಣಗಳಿಗೆ ೨-೭೭, ೮೩, ೮೮, ೯೪, ೯೫ ನೋಡಿ.

ಹೋಲಿಕೆ = ನಾ.ಶಾ. : ೨೨-೨೫, ೨೬; ಸಾ.ದ. : ೬-೨೯, ೩೦; ಪ್ರತಾಪ : ೨-೧೬

## ೬. ಪ್ರರೋಚನಾಲಕ್ಷಣ :

**ಉನ್ಮುಖೀಕರಣಂ ತತ್ರ ಪ್ರಶಂಸಾತಃ ಪ್ರರೋಚನಾ ।**

ಅನು : ಅಲ್ಲಿ, [ಕಾವ್ಯಾರ್ಥದ] ಪ್ರಶಂಸೆಯ ಮೂಲಕವಾಗಿ [ಸಾಮಾಜಿಕರ ಮನಸ್ಸನ್ನು ಕಾವ್ಯದತ್ತ] ತಿರುಗಿಸುವುದು 'ಪ್ರರೋಚನಾ'.

ವ್ಯಾಖ್ಯೆ : ಪ್ರಸ್ತುತವಾಗಿರುವ ಅರ್ಥವನ್ನು ಎತ್ತಿಹೇಳಿ ಶ್ರೋತೃಗಳ ಚಿತ್ತವನ್ನು ಸೆಳೆದುಕೊಳ್ಳುವುದು 'ಪ್ರರೋಚನಾ'. ಉದಾ-[ರತ್ನಾ. : ೧-೫] :

'ಶ್ರೀಹರ್ಷೋನಿಪುಣಃ ಕವಿಃ ಪರಿಷದಪ್ಯೇಷಾ ಗುಣಗ್ರಾಹಿಣೀ
ಲೋಕೇ ಹಾರಿ ಚ ವತ್ಸರಾಜಚರಿತಂ ನಾಟ್ಯೇ ಚ ದಕ್ಷಾ ವಯಮ್ ।
ವಸ್ತ್ವೇಕೈಕಮಪೀಹ ವಾಂಛಿತಫಲಪ್ರಾಪ್ತೇಃ ಪದಂ ಕಿಂ ಪುನ –
ರ್ಮದ್ಭಾಗ್ಯೋಪಚಯಾದಯಂ ಸಮುದಿತಃ ಸರ್ವೋ ಗುಣಾನಾಂ ಗಣಃ ॥'

[ನಿಪುಣನಾದ ಶ್ರೀಹರ್ಷನು ಕವಿ; ಸಭೆಯಲ್ಲಿ ಕೂಡಿರುವ ಸಾಮಾಜಿಕರು ಕೂಡ ಗುಣವನ್ನ ಗ್ರಹಿಸುವಂಥವರು; ಲೋಕದ ಚಿತ್ತವನ್ನ ಸೆಳೆಯಬಲ್ಲ ವತ್ಸರಾಜನ ಚರಿತ್ರ ಕಥೆ; ನಾವೋ ನಾಟ್ಯಕಲೆಯಲ್ಲಿ ದಕ್ಷರು. ಈ ಅಂಶಗಳಲ್ಲಿ ಒಂದೊಂದೇ ಸಾಕು, ಇಚ್ಚಿತ ಫಲ ಪ್ರಾಪ್ತಿಯಾಗಲು. ನನ್ನ ಭಾಗ್ಯವಿಶೇಷದಿಂದ ಎಲ್ಲ ಗುಣಗಳು ಗುಂಪಿನಲ್ಲಿ ಬಂದು ಕೂಡಿಕೊಂಡಿರುವಾಗ ಮತ್ತೇನು? ]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೨೭; ಸಾ.ದ. : ೬-೩೦.

## ೭. ವೀಥಿಯ ಅಂಗಗಳು :

**ವೀಥೀ ಪ್ರಹಸನಂ ಚಾಪಿ ಸ್ವಪ್ರಸಂಗೇಽಭಿಧಾಸ್ಯತೇ ॥ ೬ ॥**
**ವೀಥ್ಯಂಗಾನ್ಯಾಮುಖಾಂಗತ್ವಾದುಚ್ಯಂತೇಽತ್ರೈವ ತತ್ಪುನಃ ।**

ಅನು : ವೀಥೀ ಪ್ರಹಸನಗಳನ್ನು ಆಯಾ ಪ್ರಸಂಗದಲ್ಲಿ ಹೇಳಲಾಗುವುದು. ಆದರೂ ವೀಥಿಯ ಅಂಗಗಳು 'ಆಮುಖದ' ಅಂಗಗಳೂ ಆಗಿರುವ ಕಾರಣ [ಅವುಗಳನ್ನು] ಇಲ್ಲಿ ಹೇಳಲಾಗುತ್ತದೆ.

ಟಿಪ್ಪಣಿ : ಪ್ರಹಸನ ವೀಥೀ ಇವುಗಳಿಗೆ ೩-೫೫ರಿಂದ ೫೮ ಮತ್ತು ೩-೬೨ ನೋಡಿ.

ಹೋಲಿಕೆ = ನಾ.ಶಾ. : ೨೨-೩೬; ಪ್ರತಾಪ : ೩-೩೦.

## 'ಆಮುಖ'ದ ವಿವರಗಳು

### ೮. ಆಮುಖಲಕ್ಷಣ :

**ಸೂತ್ರಧಾರೋ ನಟೀಂ ಬ್ರೂತೇ ಮಾರ್ಷಂ ವಾಥ ವಿದೂಷಕಮ್ ॥ ೭ ॥**

**ಸ್ವಕಾರ್ಯಂ ಪ್ರಸ್ತುತಾಕ್ಷೇಪಿ ಚಿತ್ರೋಕ್ತ್ಯಾ ಯತ್ತದಾಮುಖಮ್ ।**
**ಪ್ರಸ್ತಾವನಾ ವಾ**

ಅನು : ಸೂತ್ರಧಾರನು ನಟೀ ಮಾರ್ಷ ಅಥವಾ ವಿದೂಷಕನನ್ನು ಕರೆದು ಚಿತ್ರ ವಾಕ್ಯ(ಸುಂದರವಾದ ಅಥವಾ ಚತುರವಾದ ಮಾತು)ಗಳಿಂದ ಪ್ರಸ್ತುತವಾದ [ವಿಷಯ ವನ್ನು ಸೂಚಿಸುವುದರ ಮೂಲಕ] ತನ್ನ ಕಾರ್ಯವನ್ನು ಎತ್ತಿಹೇಳುತ್ತಾನೆ; ಇದೇ 'ಆಮುಖ' ಅಥವಾ 'ಪ್ರಸ್ತಾವನಾ'

ಟಿಪ್ಪಣಿ : 'ಮಾರ್ಷ'ನ ಲಕ್ಷಣಗಳಿಗೆ ೨-೧೦೨ ನೋಡಿ. 'ಮಾರ್ಷ'ನಿಗೆ 'ಪಾರಿಪಾರ್ಶ್ವಕ' ಎಂದೂ ಹೇಳುತ್ತಾರೆ. [ಸಾ.ದ. ನೋಡಿ]

ಹೋಲಿಕೆ = ನಾ.ಶಾ. : ೨೨-೨೮, ೨೯; ಸಾ.ದ. : ೬-೩೧, ೩೨; ಪ್ರತಾಪ : ೩-೨೫, ೨೬

### ೯. ಆಮುಖದ ಅಂಗಗಳು :

**ತತ್ರ ಸ್ಯುಃ ಕಥೋದ್ಘಾತಃ ಪ್ರವೃತ್ತಕಮ್ ॥ ೮ ॥**

**ಪ್ರಯೋಗಾತಿಶಯಶ್ಚಾಥ ವೀಥ್ಯಂಗಾನಿ ತ್ರಯೋದಶ ।**

ಅನು : ಅಲ್ಲಿ [ಎಂದರೆ, ಆಮುಖದಲ್ಲಿ] ಕಥೋದ್ಘಾತ, ಪ್ರವೃತ್ತಕ ಮತ್ತು ಪ್ರಯೋ ಗಾತಿಶಯ [ಎಂಬ ಮೂರು ಅಂಗಗಳು] ಇರುತ್ತವೆ. ವೀಥಿಯಲ್ಲಿ ಹದಿಮೂರು ಅಂಗಗಳು.

ಟಿಪ್ಪಣಿ : ಕಥೋದ್ಘಾತ ಮುಂತಾದ ಆಮುಖಾಂಗಗಳ ಲಕ್ಷಣಗಳನ್ನು ಇನ್ನು ಹೇಳಲಾಗುತ್ತದೆ. ವೀಥಿಯ ಹದಿಮೂರು ಅಂಗಗಳು ಮುಂದೆ [೩-೧೩] ಬಂದಿವೆ. ನಾ.ಶಾ. ದಲ್ಲಿ ಮತ್ತು ಸಾ.ದ. ದಲ್ಲಿ 'ಆಮುಖ'ದ ಅಂಗಗಳು ಐದು ಎಂದು ಹೇಳಿದೆ. ಉದ್ಘಾತ್ಯಕ, ಅವಲಗಿತ-ಇವೆರಡು ಹೆಚ್ಚಿನವುಗಳು. ಅವು ವೀಥಿಯ ಅಂಗಗಳಲ್ಲೂ ಬರುತ್ತವೆ. [ನೋಡಿ: ೩-೧೪, ೧೫.]

ಹೋಲಿಕೆ = ನಾ.ಶಾ.: ೨೨-೩೦; ಸಾ.ದ.: ೬-೩೩; ಪ್ರತಾಪ: ೩-೨೬

## ೧೦. ಕಥೋದ್ಘಾತಲಕ್ಷಣ :

೧ಸ್ವೇತಿವೃತ್ತಸಮಂ ವಾಕ್ಯಮರ್ಥಂ ವಾ ಯತ್ರ ಸೂತ್ರಿಣಃ೧ ॥ ೯ ॥
ಗೃಹೀತ್ವಾ ಪ್ರವಿಶೇತ್ಪಾತ್ರಂ ಕಥೋದ್ಘಾತೋ ದ್ವಿಧೈವ ಸಃ ।

ಅನು : [ರೂಪಕದ] ಇತಿವೃತ್ತಕ್ಕೆ ಸಮಾನವಾದ [ಯಾವುದಾದರೊಂದು] ವಾಕ್ಯವನ್ನು ಅಥವಾ ಅರ್ಥವನ್ನು ಸೂತ್ರಧಾರನು ಹೇಳಲು, ಅದನ್ನೆ ಹಿಡಿದು, [ರೂಪಕದ ಯಾವುದೊಂದು] ಪಾತ್ರವು [ರಂಗವನ್ನು]ಪ್ರವೇಶಿಸುವುದು 'ಕಥೋದ್ಘಾತ'. ಅದು [ಕಥೆಗೆ ಹೊಂದುವ ವಾಕ್ಯವನ್ನು ಹಿಡಿದು ಅದನ್ನು ಪುನರುಚ್ಚರಿಸುತ್ತ ಪ್ರವೇಶಿಸುವುದು ಅಥವಾ ಕಥೆಗೆ ಹೊಂದುವ ಅರ್ಥವನ್ನು ಹಿಡಿದು ಅದನ್ನು ಉಚ್ಚರಿಸುತ್ತ ಪ್ರವೇಶಿಸುವುದು-ಹೀಗೆ] ಎರಡು ವಿಧ.

ವ್ಯಾಖ್ಯೆ : ಉದಾ-ಸಮಾನವಾಕ್ಯ ಪ್ರಯೋಗಕ್ಕೆ [ರತ್ನಾ. : ೧-೬; ೧-೩೯ ಮತ್ತು ३-३ರಲ್ಲೂ ಬಂದಿದೆ. ಪಾಠ ಮತ್ತು ಅನುವಾದಗಳಿಗೆ ೧-೩೯ ನೋಡಿ] : 'ದ್ವೀಪಾದನ್ಯಸ್ಮಾದಪಿ....' ಇತ್ಯಾದಿ. (ಸೂತ್ರಧಾರನು ಈ ಶ್ಲೋಕ ಹೇಳಿಮುಗಿಸಲು, ನೇಪಥ್ಯದಿಂದ ಯೌಗಂಧರಾಯಣನು ಇದೇ ಶ್ಲೋಕವನ್ನು ಪುನಃ ಉಚ್ಚರಿಸುತ್ತಾನೆ; ಅಲ್ಲಿಂದ ರೂಪಕ ಆರಂಭವಾಗುತ್ತದೆ.)

ಸಮಾನ ವಾಕ್ಯಾರ್ಥಕ್ಕೆ [ವೇಣಿ : ೧-೭] : 'ಸೂತ್ರ-

ನಿರ್ವಾಣವೈರದಹನಾಃ ಪ್ರಶಮಾದರೀಣಾಂ ನಂದಂತು ಪಾಂಡುತನಯಾಃ ಸಹ ಕೇಶವೇನ ।
ರಕ್ತಪ್ರಸಾಧಿತ ಭುವಃ ಕ್ಷತವಿಗ್ರಹಾಶ್ಚ ಸ್ವಸ್ತಾ ಭವಂತು ಕುರುರಾಜಸುತಾಃ ಸಭೃತ್ಯಾಃ ॥

[ವೈರಾಗ್ನಿ ನೊಂದಿ ಶತ್ರುಗಳು ಶಾಂತರಾಗಲು ಕೇಶವನನ್ನು ಕೂಡಿ ಪಾಂಡವರು ಆನಂದಗೊಳ್ಳಲಿ. ಭೃತ್ಯರನ್ನೊಡಗೂಡಿದ ಕುರುರಾಜಸುತರು, ಜಗತ್ತನ್ನು ಪ್ರಸನ್ನಗೊಳಿಸಿ ಯುದ್ಧವನ್ನು ಸಮಾಪ್ತಗೊಳಿಸಿ ಸ್ವಸ್ಥರಾಗಲಿ. (ಅಥವಾ-ಭೃತ್ಯರನ್ನೊಡಗೂಡಿದ ಕೌರವರು ಕ್ಷತವಿಕ್ಷತರಾಗಿ ನೆಲವನ್ನು ನೆತ್ತರುಗೊಳಿಸಿ ತಣ್ಣಗಾಗಲಿ.)]

ಅನಂತರ, 'ಭೀಮಃ [ವೇಣೀ.: ೧-೮; ೪-೮೧ರಲ್ಲೂ ಬಂದಿದೆ.]

ಲಾಕ್ಷಾಗೃಹಾನಲವಿಷಾನ್ನಸಭಾಪ್ರವೇಶೈಃ ಪ್ರಾಣೇಷು ವಿತ್ತನಿಚಯೇಷು ಚ ನಃ ಪ್ರಹೃತ್ಯ ।
ಆಕೃಷ್ಟಪಾಂಡವವಧೂಪರಿಧಾನಕೇಶಾಃ ಸ್ವಸ್ಥಾ ಭವಂತು ಮಯಿ ಜೀವತಿ ಧಾರ್ತರಾಷ್ಟ್ರಾಃ ॥'

[ಅರಗಿನ ಮನೆಯ ಬೆಂಕಿಯಿಂದ ವಿಷಾನ್ನದಿಂದ ದ್ಯೂತಸಭಾಪ್ರವೇಶದಿಂದ ನಮ್ಮ ಪ್ರಾಣ ಐಶ್ವರ್ಯಗಳನ್ನು ಸೆಳೆದ, ಪಾಂಡವಪತ್ನಿಯ ಸೀರೆ ಮುಡಿಗಳನ್ನು ಸೆಳೆದ ಧಾರ್ತರಾಷ್ಟ್ರರು, ನಾನು ಜೀವಿಸಿರುವಾಗ, ಸ್ವಸ್ಥರಾಗಿರುವರೆ?]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೩೨; ಸಾ.ದ. : ೬-३೫; ಪ್ರತಾಪ : ३-೨೭.

## ೧೧. ಪ್ರವೃತ್ತಕ ಲಕ್ಷಣ :

ಕಾಲಸಾಮ್ಯಸಮಾಕ್ಷಿಪ್ತಪ್ರವೇಶಃ ಸ್ಯಾತ್ ಪ್ರವೃತ್ತಕಮ್ ॥ ೧೦ ॥

ಅನು : ಕಾಲದ[ಎಂದರೆ, ಋತುವಿನ ವರ್ಣನೆಯ]ಲ್ಲಿ, ಸಮಾನವಾಗಿ [ನಟನ] ಪ್ರವೇಶವು ಸೂಚಿತವಾಗಿರುವುದು 'ಪ್ರವೃತ್ತಕ'.

---

೧ ಪಾಠ : ವಾಕ್ಯಂ ವಾಕ್ಯಾರ್ಥಮಥವಾ ಪ್ರಸ್ತುತಂ ಯತ್ರ ಸೂತ್ರಿಣಃ ॥

ವ್ಯಾಖ್ಯೆ : ಪಾತ್ರವ ಪ್ರವೇಶವು ಋತುವರ್ಣನೆಯಲ್ಲಿ ಸಮಾನವಾಗಿ ಸೂಚಿಸಲ್ಪಟ್ಟಿದ್ದರೆ ಅದು 'ಪ್ರವೃತ್ತಕ'. ಉದಾ:-[ಆಕರ ತಿಳಿಯದು; ೩-೩ರಲ್ಲೂ ಬಂದಿದೆ.]

'ಆಸಾದಿತಪ್ರಕಟನಿರ್ಮಲಚಂದ್ರಹಾಸಃ ಪ್ರಾಪ್ತಃ ಶರತ್ಸಮಯ ಏಷ ವಿಶುದ್ಧಕಾಂತಃ।

ಉತ್ಖಾಯ ಗಾಢತಮಸಂ ಘನಕಾಲಮುಗ್ರಂ ರಾಮೋ ದಶಾಸ್ಯಮಿವ ಸಂಭೃತಬಂಧುಜೀವಃ ॥'

[ನಿರ್ಮಲವಾದ ಚಂದ್ರಕಾಂತಿ ಪ್ರಕಟವಾಗಿರಲು, ಬಂಧುಜೀವ (ದಾಸವಾಳ) ಪುಷ್ಪವನ್ನು ಧರಿಸಿ ಬಂದ ಶುದ್ಧವೂ ರಮ್ಯವೂ ಆದ ಶರತ್ಕಾಲವು-ಚಂದ್ರಸಮಾನವಾದ ಹಾಸ ಉಕ್ಕುತ್ತಿರಲು, ಶುದ್ಧನೂ ರಮ್ಯನೂ ಆದ (ಅಥವಾ ರಾವಣನ ಚಂದ್ರಹಾಸಖಡ್ಗವನ್ನು ನಾಶಮಾಡಿದವನಾದ) ರಾಮಚಂದ್ರನು ತನ್ನ ಬಂಧುಗಳನ್ನುದ್ಧರಿಸಲು, ತಮೋಗುಣದ ಆಧಿಕ್ಯದಿಂದ ಭಯಂಕರನೂ ಉಗ್ರನೂ ಆದ ದಶಾಸ್ಯನನ್ನು ನಾಶಗೊಳಿಸಿದಂತೆ – ಗಾಢವಾದ ಅಂಧಕಾರದಿಂದ ಕೂಡಿದ ಭಯಂಕರವಾದ ಮತ್ತು ದಟ್ಟವಾದ ವರ್ಷಕಾಲವನ್ನು ನಾಶಮಾಡಿತು.] 'ತತಃ ಪ್ರವಿಶತಿಯಥಾನಿರ್ದಿಷ್ಟೋ ರಾಮಃ।' [ಅನಂತರ ಹಿಂದೆ ನಿರ್ದೇಶಿಸಿರುವ ರಾಮನು ಪ್ರವೇಶಿಸುತ್ತಾನೆ.].

ಟಿಪ್ಪಣಿ : ಇದಕ್ಕೆ ಸಾ.ದ.ದಲ್ಲಿ 'ಪ್ರವರ್ತಕ' ಎಂಬ ಹೆಸರಿದೆ.'ಋತುವರ್ಣನೆ'ಗೆ ೩-೪ ನೋಡಿ.

ಹೋಲಿಕೆ = ನಾ.ಶಾ. : ೨೨-೩೪; ಸಾ.ದ. : ೬-೩೭; ಪ್ರತಾಪ : ೩-೨೮.

## ೧೨. ಪ್ರಯೋಗಾತಿಶಯಲಕ್ಷಣ :

**ಏಷೋಽಯಮಿತ್ಯುಪಕ್ಷೇಪಾತ್ ಸೂತ್ರಧಾರಪ್ರಯೋಗತಃ।**

**ಪಾತ್ರಪ್ರವೇಶೋ ಯತ್ರೈಷ ಪ್ರಯೋಗಾತಿಶಯೋ ಮತಃ ॥ ೧೧ ॥**

ಅನು : 'ಇದೋ ಈ ಇವನು' – ಹೀಗೆ ಸೂತ್ರಧಾರನು ಸೂಚಿಸಿ ಹೇಳುವಾಗ ಪಾತ್ರಪ್ರವೇಶವಾಗುವುದು 'ಪ್ರಯೋಗಾತಿಶಯ'.

ವ್ಯಾಖ್ಯೆ : ಉದಾ:- [ಶಾಕುಂ. : ೧-ನೆಯ ಭಾಗ; ೩-೩ರಲ್ಲಿ ಈ ಪದ್ಯ ಪೂರ್ಣವಾಗಿ ಬಂದಿದೆ.] :
'ಏಷ ರಾಜೇವ ದುಷ್ಯಂತಃ'-[ಈ ರಾಜ ದುಷ್ಯಂತನಂತೆ.] (ಅನಂತರದಲ್ಲಿ ದುಷ್ಯಂತ ಪ್ರವೇಶಿಸುವನು.)

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೨-೩೩; ಸಾ.ದ. : ೬-೩೬; ಪ್ರತಾಪ : ೩-೨೯.

# ವೀಥಿಯ ಅಂಗಗಳು

## ೧೩. ಹದಿಮೂರು ವೀಥ್ಯಂಗಗಳು :

**ಉದ್ಘಾತ್ಯಕಾವಲಗಿತೇ ಪ್ರಪಂಚತ್ರಿಗತೇ ಛಲಮ್।**

**ವಾಕ್ಕೇಲ್ಯಧಿಬಲೇ ಗಂಡಮವಸ್ಯಂದಿತನಾಲಿಕೇ ॥ ೧೨ ॥**

**ಅಸತ್ಪ್ರಲಾಪವ್ಯಾಹಾರಮೃದವಾನಿ ತ್ರಯೋದಶ।**

ಅನು : [ವೀಥಿಯ ಅಂಗಗಳು ಈ] ಹದಿಮೂರು : ಉದ್ಘಾತಕ, ಅವಲಗಿತ, ಪ್ರಪಂಚ, ತ್ರಿಗತ, ಛಲ, ವಾಕ್ಕೇಲೀ, ಅಧಿಬಲ, ಗಂಡ, ಅವಸ್ಯಂದಿತ, ನಾಲಿಕಾ, ಅಸತ್ಪ್ರಲಾಪ, ವ್ಯಾಹಾರ, ಮೃದವ.

ಟಿಪ್ಪಣಿ : ವೀಥೀಲಕ್ಷಣಕ್ಕೆ ೩-೬೨ ನೋಡಿ.

ಹೋಲಿಕೆ = ನಾ.ಶಾ. : ೨೦-೧೧೮ ರಿಂದ ೧೨೦; ಸಾ.ದ. : ೬-೨೫೫, ೨೫೬; ಪ್ರತಾಪ : ೩-೩೦, ೩೧.

## ೧೪. ಉದ್ಘಾತ್ಯ[ಕ]ಲಕ್ಷಣ :

**ಗೂಢಾರ್ಥಪದಪರ್ಯಾಯಮಾಲಾ ಪ್ರಶ್ನೋತ್ತರಸ್ಯ ವಾ ॥ ೧೩ ॥**
**ಯತ್ರಾನ್ಯೋನ್ಯಂ ಸಮಾಲಾಪೋ ದ್ವೇಧೋದ್ಘಾತ್ಯಂ ತದುಚ್ಯತೇ ।**

ಅನು : [ಪಾತ್ರಗಳ] ಪರಸ್ಪರವಾದ ಮಾತುಕತೆಯಲ್ಲಿ, ರಹಸ್ಯವಾದ ಅರ್ಥವುಳ್ಳ ಪದಗಳು ಮರುಕೊಳಿಸುತ್ತಿರುವುದು ಅಥವಾ ಪ್ರಶ್ನೋತ್ತರದ ಮಾಲೆ [ಹೀಗೆ] ಎರಡು ವಿಧವಾಗಿ 'ಉದ್ಘಾತ್ಯವು' ಹೇಳಲ್ಪಟ್ಟದೆ.

ವ್ಯಾಖ್ಯೆ : ಗೂಢ ಅರ್ಥವುಳ್ಳ ಪದ ಮತ್ತು ಅದರ ಮರುಕೊಳಿಸುವಿಕೆ ಇವುಗಳ ಮಾಲೆ; ಅಥವಾ ಪ್ರಶ್ನೆ ಉತ್ತರಗಳ ಮಾಲೆ –ಹೀಗೆ ಇಬ್ಬರ ಮಾತುಕತೆಗಳಲ್ಲಿ ತೋರುವ ಎರಡು ಬಗೆಯ ಉದ್ಘಾತ್ಯಕಗಳು. ಮೊದಲನೆಯದಕ್ಕೆ ಎಂದರೆ ಗೂಢಾರ್ಥಪದಪರ್ಯಾಯಮಾಲೆಗೆ, ಉದಾ–[ವಿಕ್ರಮೋ.] :

'ವಿದೂಷಕ : ಭೋ ವಅಸ್ಸ, ಕೋ ಏಸೋ ಕಾಮೋ ಜೇಣ ತುಮಂ ಪಿ ದೂಮಿಜ್ಜಸೇ । ಸೋ ಕಿಂ ಪುರಿಸೋ ಆದು ಇತ್ಥಿಅ ತ್ತಿ । [ಎಲೈ ಮಿತ್ರ ನಿನ್ನನ್ನು ಖೇದಗೊಳಿಸುವ ಆ ಕಾಮ ಯಾರು? ಅವನು ಪುರುಷನೋ ಅಥವಾ ಸ್ತ್ರೀಯೋ? ]

ರಾಜಾ : ಸಖೇ,

ಮನೋಜಾತಿರನಾಧೀನಾ ಸುಖೇಷ್ವೇವ ಪ್ರವರ್ತತೇ ।
ಸ್ನೇಹಸ್ಯ ಲಲಿತೋ ಮಾರ್ಗಃ ಕಾಮ ಇತ್ಯಭಿಧೀಯತೇ ॥

[ಸ್ನೇಹಿತನೆ, ಮನಸ್ಸಿನಲ್ಲಿಯೇ ಹುಟ್ಟಿ ಕೇವಲ ಸುಖಗಳಲ್ಲಿಯೇ ಪ್ರವರ್ತಿಸುವ ಸ್ನೇಹದ ಲಲಿತವಾದ ಮಾರ್ಗವನ್ನು 'ಕಾಮ' ಎನ್ನುತ್ತಾರೆ.]

ವಿದೂ : ಏವಂ ಪಿ ಣ ಜಾಣೇ । [ನನಗೆ ಇದು ಕೂಡ ತಿಳಿಯುವುದಿಲ್ಲ.]

ರಾಜಾ : ವಯಸ್ಯ, ಇಚ್ಛಾಪ್ರಭವಃ ಸ ಇತಿ । [ಮಿತ್ರ, ಆತನು ಇಚ್ಛೆಯಿಂದಲೇ ಹುಟ್ಟುವವನು.]

ವಿದೂ : ಕಿಂ ಜೋ ಜಂ ಇಚ್ಛಾದಿ ಸೋ ತಂ ಕಾಮೇದಿತ್ತಿ । [ಹಾಗಾದರೆ, ಒಬ್ಬನು ಏನನ್ನಾದರೂ ಇಚ್ಛಿಸಿದರೆ ಅವನು ಅದನ್ನು ಕಾಮಿಸಿದಂತೆಯೇನು? ]

ರಾಜಾ : ಅಥ ಕಿಂ । [ಅಲ್ಲದೆ ಮತ್ತೇನು?]

ವಿದೂ : ತಾ ಜಾಣಿದಂ ಜಹ ಅಹಂ ಸೂಅಆರಸಾಲಾಏ ಭೋಅಣಂ ಇಚ್ಛಾಮಿ ।

[ತಿಳಿಯಿತು. ಹೇಗೆಂದರೆ, ನಾನು ಭೋಜನಶಾಲೆಯಲ್ಲಿ ಭೋಜನವನ್ನು ಇಚ್ಛಿಸುತ್ತೇನೆ.]'

ಎರಡನೆಯದಕ್ಕೆ ಎಂದರೆ, ಪ್ರಶ್ನೋತ್ತರಮಾಲೆಗೆ ಉದಾ– [ಪಾಂಡವಾನಂದ ; ಅಪ್ರಕ್ಷಿಪ್ತ ರೂಪಕ]

'ಕಾ ಶ್ಲಾಘ್ಯಾ ಗುಣಿನಾಂ ಕ್ಷಮಾ ಪರಿಭವಃ ಕೋ ಯಃ ಸ್ವಕುಲ್ಯೈಃ ಕೃತಃ
ಕಿಂ ದುಃಖಂ ಪರಸಂಶ್ರಯೋ ಜಗತಿ ಕಃ ಶ್ಲಾಘ್ಯೋ ಯ ಆಶ್ರೀಯತೇ ।
ಕೋ ಮೃತ್ಯುರ್ವ್ಯಸನಂ ಶುಚಂ ಜಹತಿ ಕೇ ಯೈರ್ನಿರ್ಜಿತಾಃ ಶತ್ರವಃ
ಕೈರ್ವಿಜ್ಞಾತಮಿದಂ ವಿರಾಟನಗರೇ ಛನ್ನಸ್ಥಿತೈಃ ಪಾಂಡವೈಃ ॥'

[ಶ್ಲಾಘ್ಯವಾದದ್ದು ಯಾವುದು?– ಗುಣಿಗಳ ಕ್ಷಮೆ. ಹೆಚ್ಚಿನ ಅವಮಾನ ಯಾವುದು? ತನ್ನ ಕುಲದವರಿಂದಲೇ ಉಂಟಾದ ತಿರಸ್ಕಾರ. ದುಃಖ ಯಾವುದು? –ಪರಾಶ್ರಯ. ಜಗತ್ತಿನಲ್ಲೆಲ್ಲ ಪ್ರಶಂಸನೀಯವಾದದ್ದು ಯಾವುದು? – ಬೇರೆಯವರಿಗೆ ಆಶ್ರಯವೀಯುವುದು. ಮೃತ್ಯು ಯಾವುದು? ವ್ಯಸನ. ಯಾರು ಶೋಕವನ್ನು ಬಿಡಬಲ್ಲರು?

-ಶತ್ರುಗಳನ್ನು ನಿಗ್ರಹಿಸಿದವರು. ಇದನ್ನೆಲ್ಲ ತಿಳಿದವರು ಯಾರು? -ವಿರಾಟನಗರದಲ್ಲಿ ಅಜ್ಞಾತರಾಗಿರುವ ಪಾಂಡವರು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦-೧೨೦; ಸಾ.ದ. : ೬-೩೩ ; ಪ್ರತಾಪ : ೩-೩೨.

## ೧೫. ಅವಲಗಿತಲಕ್ಷಣ :

ಯತ್ರೈಕತ್ರ ಸಮಾವೇಶಾತ್ ಕಾರ್ಯಮನ್ಯತ್ರಸಾಧ್ಯತೇ ॥ ೧೪ ॥
ಪ್ರಸ್ತುತೇಽನ್ಯತ್ರ ವಾನ್ಯತ್ಸ್ಯಾತ್ತಚ್ಚಾವಲಗಿತಂ ದ್ವಿಧಾ ।

ಅನು : ಒಂದೆಡೆಯಲ್ಲಿ, ಒಂದೇ ಸಮಾವೇಶದಿಂದ ಮತ್ತೊಂದು ಕಾರ್ಯವನ್ನು ಸಾಧಿಸುವುದು; ಇನ್ನೊಂದೆಡೆಯಲ್ಲಿ, ಯಾವುದು ಪ್ರಸ್ತುತ[ಕಾರ್ಯ]ವೋ ಅದಲ್ಲದೆ ಬೇರೊಂದು [ಕಾರ್ಯವು ಸಾಧಿಸಲ್ಪಡುವುದು]– [ಹೀಗೆ] 'ಅವಲಗಿತ 'ವು ಎರಡು ವಿಧ.

ವ್ಯಾಖ್ಯೆ : ಮೊದಲನೆಯದಕ್ಕೆ ಉದಾ:– ಉತ್ತರರಾಮಚರಿತ್ರೆಯಲ್ಲಿ, ಸೀತೆಗೆ ವನವಿಹಾರದ ಬಸಿರ ಬಯಕೆ ಇರುವಾಗ, ಅದೇ ಉದ್ದೇಶದಿಂದ ವನಕ್ಕೆ ಕೊಂಡೊಯ್ದು ಜನಾಪವಾದದ ಕಾರಣಕ್ಕಾಗಿ ಅಲ್ಲೆ ಪರಿತ್ಯಜಿಸಲಾಗುತ್ತದೆ. ಇಲ್ಲಿ ಒಂದು ಕ್ರಿಯೆಯ ಮೂಲಕ ಮತ್ತೊಂದನ್ನು ಸಾಧಿಸಲಾಗಿದೆ.

ಎರಡನೆಯದಕ್ಕೆ ಉದಾ:– [ಛಲಿತರಾಮ : ಅಪ್ರಕಟಿತ ರೂಪಕ] : 'ರಾಮಃ–ಲಕ್ಷ್ಮಣ , ತಾತವಿಯುಕ್ತಾ ಮಯೋಧ್ಯಾಂ ವಿಮಾನಸ್ಥೋ ನಾಹಂ ಪ್ರವೇಷ್ಟುಂ ಶಕ್ನೋಮಿ । ತದವತೀರ್ಯ ಗಚ್ಛಾಮಿ ।

ಕೋಽಪಿ ಸಿಂಹಾಸನಸ್ಯಾಧಃ ಸ್ಥಿತಃ ಪಾದುಕಯೋಃ ಪುರಃ ।
ಜಟಾವಾನಕ್ಷಮಾಲೀ ಚ ಚಾಮರೀ ಚ ವಿರಾಜತೇ ॥',

[ಲಕ್ಷ್ಮಣ, ತಂದೆ ಬಿಟ್ಟುಹೋಗಿರುವ ಅಯೋಧ್ಯೆಯನ್ನು ವಿಮಾನಸ್ಥನಾಗಿ ನಾನು ಪ್ರವೇಶಿಸಲಾರೆ. ಆದ್ದರಿಂದ ಇಳಿದೇ ಹೋಗುತ್ತೇನೆ.

ಇದೇನು, ಸಿಂಹಾಸನದ ಕೆಳಗೆ ಪಾದುಕೆಗಳ ಎದುರು ಜಟಾಧಾರಿಯಾಗಿ ಅಕ್ಷಮಾಲೆಗಳನ್ನು ಧರಿಸಿ ಚಾಮರ ಹಿಡಿದು ವಿರಾಜಮಾನನಾಗಿ ನಿಂತಿರುವ ಈತನಾರು?]

–ಹೀಗೆ ರಾಮಾಗಮನದಲ್ಲಿ ಭರತದರ್ಶನ ಕಾರ್ಯವು ಸಿದ್ಧಿಸುತ್ತದೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦-೧೨೨; ಸಾ.ದ. : ೬-೩೮; ಪ್ರತಾಪ : ೩-೩೨.

## ೧೬. ಪ್ರಪಂಚಲಕ್ಷಣ :

೧ಅಸದ್ಭೂತಂ ಮಿಥಃ ಸ್ತೋತ್ರಂ೧ ಪ್ರಪಂಚೋ ಹಾಸ್ಯಕೃನ್ಮತಃ ॥ ೧೫ ॥

ಅನು : ಹಾಸ್ಯವನ್ನುಂಟುಮಾಡುವ ಪರಸ್ಪರವಾದ ಸುಳ್ಳು ಸ್ತೋತ್ರವು (ಹೊಗಳಿಕೆಯು) 'ಪ್ರಪಂಚ'.

ವ್ಯಾಖ್ಯೆ : ಪರನಾರೀಲೋಲುಪತೆಯಿಂದುಂಟಾದದ್ದು ಮುಂತಾಗಿ ಅಸತ್ಯವಾದ ಪರಸ್ಪರ ಪ್ರಶಂಸೆಯೇ ಪ್ರಪಂಚ. ಉದಾ:–[ಕರ್ಪೂರಮಂಜರಿ : ೧–೨೩] :

'ರಂಡಾ ಚಂಡಾ ದಿಕ್ಖಿದಾ ಧಮ್ಮದಾರಾ ಮಜ್ಜಂ ಮಂಸಂ ಪಿಜ್ಜ ಏ ಖಜ್ಜ ಏ ಅ ।
ಭಿಕ್ಖಾ ಭೋಜ್ಜಂ ಚಮ್ಮಖಂಡಂ ಚ ಸೇಜ್ಜಾ ಕೋಲೋ ಧಮ್ಮೋ ಕಸ್ಸ ಣೋ
ಹೋಯಿ ರಮ್ಮೋ ॥'

---

೧ ಪಾಠ : ಅಸದ್ಭೂತಮಿಥಸ್ತೋತ್ರಂ

[ವಿಭವಾದೀಕ್ಷೆಯಲ್ಲಿರುವ ಚಂಡಿ ಧರ್ಮಪತ್ನಿ; ಕುಡಿಯಲು ಮದ್ಯ, ತಿನ್ನಲು ಮಾಂಸ; ಭಿಕ್ಷೆಯ ಭೋಜನ; ಚರ್ಮದ ಚೂರು ಹಾಸಿಗೆ– ಈ ನನ್ನ ಕುಲಧರ್ಮ ಯಾರಿಗೆ ತಾನೆ ರಮ್ಯವೆನಿಸದು?]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦–೧೨೬; ಸಾ.ದ. : ೬–೨೫೭; ಪ್ರತಾಪ : ೩–೩೨.

## ೧೭. ತ್ರಿಗತಲಕ್ಷಣ :

ಶ್ರುತಿಸಾಮ್ಯಾದನೇಕಾರ್ಥಯೋಜನಂ ತ್ರಿಗತಂ ತ್ವಿಹ ।
ನಟಾದಿತ್ರಿತಯಾಲಾಪಃ ಪೂರ್ವರಂಗೇ ತದಿಷ್ಯತೇ ॥ ೧೭ ॥

ಅನು : ಶಬ್ದದ ಸಾಮ್ಯದಿಂದ [ಯಾವುದೊಂದರಲ್ಲಿ ] ಅನೇಕ ಅರ್ಥಗಳನ್ನು ಯೋಜಿಸುವುದು 'ತ್ರಿಗತ'. ನಟ ಮುಂತಾಗಿ ಮೂವರ ಮಾತುಕತೆಯಾಗಿ ಅದು (ತ್ರಿಗತವು) 'ಪೂರ್ವರಂಗ'ದಲ್ಲಿ ಇರಬಹುದಾಗಿದೆ.

ವ್ಯಾಖ್ಯೆ : ಉದಾ:– [ವಿಕ್ರಮೋ. : ೧–೩] :

'ಮತ್ತಾನಾಂ ಕುಸುಮರಸೇನ ಷಟ್ಪದಾನಾಂ ಶಬ್ದೋಽಯಂ ಪರಭೃತನಾದ ಏಷ ಧೀರಃ ।
ಕೈಲಾಸೇ ಸುರಗಣಸೇವಿತೇ ಸಮಂತಾತ್ಕಿನ್ನರ್ಯಾಃ ಕಲಮಧುರಾಕ್ಷರಂ ಪ್ರಗೀತಾಃ ॥'

[ಕುಸುಮರಸದಿಂದ ಮತ್ತವಾದ ದುಂಬಿಗಳ ಝೇಂಕೃತಿ ಇದು; ಇದು ಕೋಗಿಲೆಯ ಗಂಭೀರನಾದ – ದೇವಗಣಗಳು ಸುತ್ತಿ ಸೇವಿಸುತ್ತಿರುವ ಕೈಲಾಸದಲ್ಲಿ ಕಿನ್ನರಿಯರು ಹಾಡುವ ಮೃದುಮಧುರಾಕ್ಷರವುಳ್ಳ ಪ್ರಗೀತಗಳು (ಹೀಗಿವೆ).]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦ –೧೩೨ ; ಸಾ.ದ. : ೬–೨೫೭; ಪ್ರತಾಪ : ೩–೩೨.

## ೧೮. ಛಲಲಕ್ಷಣ :

ಪ್ರಿಯಾಭೈರಪ್ರಿಯೈರ್ವಾಕ್ಯೈರ್ವಿಲೋಭ್ಯ ಛಲನಾಚ್ಛಲಮ್[1] ।

ಅನು : [ಎದುರಿಗೆ ] ಪ್ರಿಯವಾಗಿರುವಂತೆ ತೋರುವ ಅಪ್ರಿಯ ವಾಕ್ಯಗಳಿಂದ ಲೋಭಗೊಳಿಸಿ [ಪ್ರತಿಪಕ್ಷಿಯಲ್ಲಿ] ಛಲವನ್ನುಂಟುಮಾಡುವುದು 'ಛಲ[ನಾ]'.

ವ್ಯಾಖ್ಯೆ : ಉದಾ:–[ವೇಣೀ. : ೫–೨೬] 'ಭೀಮಾರ್ಜುನರು :

ಕರ್ತಾ ದ್ಯೂತಚ್ಛಲಾನಾಂ ಜತುಮಯಶರಣೋದ್ದೀಪನಃ ಸೋಽಭಿಮಾನೀ
ರಾಜಾ ದುಃಶಾಸನಾದೇರ್ಗುರುರನುಜಶತಸ್ಯಾಂಗರಾಜಸ್ಯ ಮಿತ್ರಮ್ ।
ಕೃಷ್ಣಾಕೇಶೋತ್ತರೀಯವ್ಯಪನಯನಪಟುಃ ಪಾಂಡವಾ ಯಸ್ಯ ದಾಸಾಃ
ಕ್ವಾಸ್ತೇ ದುರ್ಯೋಧನೋಽಸೌ ಕಥಯತ ಪುರುಷಾ ದ್ರಷ್ಟುಮಭ್ಯಾಗತೌ ಸ್ವಃ ॥'

[ದ್ಯೂತದಲ್ಲಿ ಹುಟುಮಾಡಿದವ, ಲಾಕ್ಷಾಗೃಹಕ್ಕೆ ಬೆಂಕಿ ಹಚ್ಚಿದವ, ದುಃಶಾಸನ ಮುಂತಾದ ನೂರ್ವರು ತಮ್ಮಂದಿರ ಗುರು, ಅಂಗರಾಜನ ಮಿತ್ರ, ದ್ರೌಪದಿಯ ಕೇಶ ಉತ್ತರೀಯಗಳನ್ನು ಸೆಳೆದ ಚತುರ, ಪಾಂಡವರನ್ನು ಸೇವಕರನ್ನಾಗಿಸಿಕೊಂಡವ–ಎಲ್ಲೈ ಪುರುಷರೆ, ಎಲ್ಲಿ ಆ ಅಭಿಮಾನಿ, ಆ ರಾಜ ದುರ್ಯೋಧನ? ಹೇಳಿ, ಆತನನ್ನು ನೋಡಲು ಬಂದಿದ್ದೇವೆ ನಾವು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦–೧೨೫; ಸಾ.ದ. : ೬–೧೫೮; ಪ್ರತಾಪ : ೩–೩೨.

---

[1] ಪಾಠ : ಛಲನಾ ಛಲನಮ್.

## ೧೯. ವಾಕ್ಕೇಲೀಲಕ್ಷಣ :

**ವಿನಿವೃತ್ತ್ಯಾಸ್ಯ ವಾಕ್ಕೇಲೀ ದ್ವಿಸ್ತ್ರಿಃ ಪ್ರತ್ಯುಕ್ತಿತೋಽಪಿ ವಾ ॥ ೧೭ ॥**

ಅನು : ಅದನ್ನು [ಎಂದರೆ, ಅರ್ಥಪೂರ್ಣವಾದ ಮಾತನ್ನು] [ಮಧ್ಯದಲ್ಲಿ] ನಿಲ್ಲಿಸುವುದು ಅಥವಾ ಎರಡು ಮೂರು ಬಾರಿ ಪ್ರತ್ಯುಕ್ತಿ ಕೊಡುವುದು [ಇವೆರಡೂ] 'ವಾಕ್ಕೇಲೀ'.

ವ್ಯಾಖ್ಯೆ : ಮುಂದುವರಿಯುವ ಆಕಾಂಕ್ಷಾಪೂರ್ಣವಾದ ಮಾತನ್ನು ಮಧ್ಯೆ ನಿಲ್ಲಿಸುವುದು [-ಹಾಗೆ ನಿಲ್ಲಿಸಿದಾಗ ಮುಂದಿನದು ಸೂಚ್ಯವಾಗುತ್ತದೆ-] ಅಥವಾ ಎರಡು ಮೂರು ಉಕ್ತಿ ಪ್ರತ್ಯುಕ್ತಿಗಳು 'ವಾಕ್ಕೇಲೀ'. ಮೊದಲನೆಯದಕ್ಕೆ ಉದಾ:- [ಉತ್ತರ : ೩-೨೬]'ವಾಸಂತೀ :

ತ್ವಂ ಜೀವಿತಂ ತ್ವಮಸಿ ಮೇ ಹೃದಯಂ ದ್ವಿತೀಯಂ ತ್ವಂ ಕೌಮುದೀ
ನಯನಯೋರಮೃತಂತ್ವಮಂಗೇ ।

ಇತ್ಯಾದಿಭಿಃ ಪ್ರಿಯಶತೈರನುರುಧ್ಯ ಮುಗ್ಧಾಂ ತಾಮೇವ ಶಾಂತಮಥವಾ ಕಿಮತಃ ಪರೇಣ॥'

[ನೀನೇ ನನ್ನ ಜೀವ, ನೀನೆ ನನ್ನ ದ್ವಿತಿಯ ಹೃದಯ, ನೀನೇ ನನ್ನ ಕಣ್ಣುಗಳಿಗೆ ಬೆಳುದಿಂಗಳು, ನೀನೆ ನನ್ನ ಅಂಗಗಳಿಗೆ ಅಮೃತ – ಹೀಗೆ ಪ್ರಿಯವಾದ ನೂರು ಮಾತುಗಳಿಂದ ಮುಗ್ಧೆಯನ್ನು ಆದರಿಸಿ ಅವಳನ್ನೇ....ಸಾಕು; ಮುಂದಿನ ವಿಚಾರ ಏಕೆ?]

ಎರಡನೆಯದಕ್ಕೆ ಉದಾಃ-[ರತ್ನಾ : ಪು. ೩೦] :

'ವಿದೂಃ ಭೋದಿ, ಮಅಣಿಏ, ಮಂ ಪಿ ಏದಂ ಚಚ್ಚರಿಂ ಸಿಕ್ಖಾವೇಹಿ।

[ಎಲ್ಲೆ ಮದನಿಕೆ, ನನಗೂ ಈ ಚರ್ಚರೀ ರಾಗವನ್ನು ಕಲಿಸು.]

ಮದನಿಕೆಃ ಹದಾಸ, ಣ ಕ್ಖು ಏಸಾ ಚಚ್ಚರೀ । ದುವದಿಖಂಡಅಂ ಕ್ಖು ಏದಂ ।

[ಹತಾಶನೆ, ಇದು ಚರ್ಚರೀ ರಾಗವಲ್ಲ, ದ್ವಿಪದೀಖಂಡಕ.]

ವಿದೂಃ ಭೋದಿ, ಕಿಂ ಏದಿಣಾ ಖಂಡೇಣ ಮೋದಆ ಕರೀಅಂತಿ ।

[ಈ ಖಂಡದಿಂದ ಮೋದಕವನ್ನು ಮಾಡುತ್ತಾರೇನು?]

ಮದಃ ಣಹಿ। ಪಢೀಅದಿ ಕ್ಖು ಏದಂ । [ಇಲ್ಲ, ಇದನ್ನು, ಹಾಡುತ್ತಾರೆ.]'

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦-೧೨೭; ಸಾ.ದ. ೬-೨೪೯; ಪ್ರತಾಪಃ ೩-೩.೨.

## ೨೦. ಅಧಿಬಲಲಕ್ಷಣ :

**ಅನ್ಯೋನ್ಯವಾಕ್ಯಾಧಿಕ್ಯೋಕ್ತಿಃ ಸ್ಪರ್ಧಯಾಽಧಿಬಲಂ ಭವೇತ್ ।**

ಅನು : ಪರಸ್ಪರವಾಗಿ ಮಾತನಾಡುವಾಗ ಸ್ಪರ್ಧೆಯಿಂದ [ಬರುವ, ಹೆಚ್ಚು] ಹೆಚ್ಚಿನ ಮಾತು 'ಅಧಿಬಲ'ವಾಗುತ್ತದೆ.

ವ್ಯಾಖ್ಯೆ : ಉದಾಃ-[ವೇಣೀ. : ೫-೨೭, ೩೪; ೧-೯೨ ಮತ್ತು ೧-೯ಳಗಳಲ್ಲೂ ಭಾಗಶಃ ಬಂದಿದೆ.] :

'ಭೀಮಃ-

ಸಕಲರಿಪುಜಯಾಶಾ ಯತ್ರ ಬದ್ಧಾ ಸುತೈಸ್ತೇ ತೃಣಮಿವ ಪರಿಭೂತೋ
ಯಸ್ಯ ಗರ್ವೇಣಲೋಕಃ।

ರಣಶಿರಸಿ ನಿಹಂತಾ ತಸ್ಯ ರಾಧಾಸುತಸ್ಯ ಪ್ರಣಮತಿ ಪಿತರೌ ವಾಂ ಮಧ್ಯಮಃ ಪಾಂಡುಪುತ್ರಃ'

[ನಿಮ್ಮ ಪುತ್ರರ ಸಕಲ ಶತ್ರುಗಳನ್ನೂ ಜಯಿಸುವ ಆಸೆಯಿಂದ ಬದ್ಧನಾಗಿದ್ದ ಗರ್ವದಿಂದ ಲೋಕವನ್ನು ತೃಣವೆಂದು ತಿರಸ್ಕರಿಸಿದ ಕರ್ಣನನ್ನು, ಯುದ್ಧದಲ್ಲಿ ಕೊಂದುಹಾಕಿದ ಪಾಂಡವಮಧ್ಯಮನಾದ ನಾನು ತಂದೆತಾಯಿಗಳಾದ ನಿಮಗೆ (ಧೃತರಾಷ್ಟ್ರಗಾಂಧಾರಿಯರಿಗೆ) ನಮಸ್ಕರಿಸುತ್ತೇನೆ.]– ಎಂಬಲ್ಲಿಂದ ಆರಂಭವಾಗಿ,

'ರಾಜಾ–ಅರೆ, ನಾಹಂ ಭವಾನಿವ ವಿಕತ್ಥನಾಪ್ರಗಲ್ಭಃ। ಕಿಂತು–

ದ್ರಕ್ಷ್ಯಂತಿ ನ ಚಿರಾತ್ಸುಪ್ತಂ ಬಾಂಧವಾಸ್ತ್ವಾಂ ರಣಾಂಗಣೇ।

ಮದ್ಗದಾಭಿನ್ನವಕ್ಷೋಽಸ್ಥಿವೇಣಿಕಾಭಂಗಭೀಷಣಮ್ ॥'

[ನಾನು ನಿನ್ನಂತೆ ಆತ್ಮಪ್ರಶಂಸೆಯಲ್ಲಿ ಪಂಡಿತನಲ್ಲ. ಆದರೆ ಅತ್ಯಲ್ಪಕಾಲದಲ್ಲಿಯೇ, ರಣರಂಗದಲ್ಲಿ ನನ್ನ ಗದೆಯಿಂದ ಎಲುಬಿನ ಹಂದರ ಮುರಿದು ಚೂರಾಗಿರಲು ಭಯಂಕರವಾಗಿ ಬಿದ್ದಿರುವ ನಿನ್ನನ್ನು ನಿನ್ನ ಬಾಂಧವರು ನೋಡುವರು.]

ಟಿಪ್ಪಣಿ : ೧–೭೬ರಲ್ಲಿ ಬಂದಿರುವ 'ಅಧಿಬಲ'ಕ್ಕೂ ಇದಕ್ಕೂ ಸಂಬಂಧವಿಲ್ಲ.

ಹೋಲಿಕೆ = ನಾ.ಶಾ. : ೨೦–೧೨೮; ಸಾ.ದ. : ೬–೨೬೦; ಪ್ರತಾಪ : ೩–೩೨.

## ೨೧. ಗಂಡಲಕ್ಷಣ :

**ಗಂಡಃ ಪ್ರಸ್ತುತಸಂಬಂಧಿಭಿನ್ನಾರ್ಥಂ ಸಹಸೋದಿತಮ್ ॥ ೧೮ ॥**

ಅನು : ಪ್ರಸ್ತುತ [ವಿಷಯಕ್ಕೆ] ಸಂಬಂಧಿಸಿ ಬೇರೆ [ಯಾವುದೋ] ವಿಷಯ ಒಮ್ಮೆಲೇ ಬರುವುದು 'ಗಂಡ'.

ವ್ಯಾಖ್ಯೆ : ಉದಾ:–[ಉತ್ತರ. : ೧–೩೮] :'ರಾಮಃ

ಇಯಂ ಗೇಹೇ ಲಕ್ಷ್ಮೀರಿಯಮಮೃತವರ್ತಿರ್ನಯನಯೋ–

ರಸಾವಸ್ಯಾಃ ಸ್ಪರ್ಶೋ ವಪುಷಿ ಬಹಲಶ್ಚಂದನರಸಃ।

ಅಯಂ ಬಾಹುಃ ಕಂಠೇ ಶಿಶಿರಮಸೃಣೋ ಮೌಕ್ತಿಕಸರಃ

ಕಿಮಸ್ಯಾ ನ ಪ್ರೇಯೋ ಯದಿ ಪರಮಸಹ್ಯಸ್ತು ವಿರಹಃ ॥'

[ಇವಳು ಮನೆಗೆ ಲಕ್ಷ್ಮಿ; ಇವಳು ಕಣ್ಣುಗಳಿಗೆ ಅಮೃತ ಸುರಿಸುವ ಸುಧಾಶಲಾಕೆ; ಆಕೆಯ ಸೋಂಕು ಮೈಯಿಗೆ ಚಂದನದ ರಸಲೇಪ; ಇವಳ ಬಾಹುಗಳು ಕಂಠದಲ್ಲಿ ಕೋಮಲವೂ ಶೀತಲವೂ ಆದ ಮುತ್ತಿನ ಹಾರ; ಆಕೆಯಲ್ಲಿ ಯಾವುದು ತಾನೆ ಪ್ರಿಯವಾಗಿಲ್ಲ? ಕೇವಲ ಅವಳ ವಿರಹವೊಂದೇ ಅಸಹ್ಯವಾಗಿದೆ.]

'ಪ್ರತೀಹಾರಿ–(ಪ್ರವೇಶಿಸಿ) ದೇವ, ಉಅತ್ಥಿದೋ। [ದೇವ, ಬಂದು ನಿಂತಿದ್ದಾನೆ.]

ರಾಮಃ– ಅಯಿ, ಕಃ? [ಯಾರು?]

ಪ್ರತಿ–ದೇವಸ್ಸ ಆಸಣ್ಣಪರಿಚಾರಓ ದುಮ್ಮುಹೋ। [ದೇವರ ಸಮೀಪದ ಸೇವಕ, ದುರ್ಮುಖ.]'

ಟಿಪ್ಪಣಿ : ಉದಾ.ಲ್ಲಿ–ಸೀತೆಯ ವಿರಹ ಅಸಹ್ಯ ಎಂದು ರಾಮ ಹೇಳುತ್ತಿರುವಾಗ, ಮಧ್ಯೆ ಪ್ರತೀಹಾರಿ ದುರ್ಮುಖನ ಬರವನ್ನು ಸಾರುತ್ತಾನೆ. ಒಂದು ರೀತಿಯಲ್ಲಿ ವಿಷಯ ಬೇರೆಯಾಯಿತು; ಮತ್ತೊಂದು ರೀತಿಯಲ್ಲಿ–ದುರ್ಮುಖ ಸೀತೆಯ ಮೇಲಿನ ಅಪವಾದವನ್ನು ಹೇಳುವುದು, ಅದರಿಂದ ರಾಮ ಆಕೆಯನ್ನು ತ್ಯಜಿಸುವುದು ಹೀಗೆ–ಸಂಬಂಧವುಳ್ಳ ವಿಷಯವೇ ಆಯಿತು!

ಹೋಲಿಕೆ = ನಾ.ಶಾ. : ೨೦–೧೩೩; ಸಾ.ದ. : ೬–೨೬೦; ಪ್ರತಾಪ : ೩–೩೨.

## ೨೨. ಅವಸ್ಯಂದಿತಲಕ್ಷಣ :

**ರಸೋಕ್ತಸ್ಯಾನ್ಯಥಾ ವ್ಯಾಖ್ಯಾ ಯತ್ರಾವಸ್ಯಂದಿತಂ ಹಿ ತತ್ ।**

ಅನು : ರಸಪೂರ್ಣವಾದ (ಭಾವೋತ್ಕರ್ಷದ) ಮಾತಿನಲ್ಲಿ [ಸಹಜವಾದ ಅರ್ಥವನ್ನು ಬಿಟ್ಟು] ಬೇರೆ ವ್ಯಾಖ್ಯಾನಮಾಡುವುದು 'ಅವಸ್ಯಂದಿತ'.

ವ್ಯಾಖ್ಯೆ : ಉದಾ-[ಛಲಿತರಾಮ : ಅಪ್ರಕಟಿತ ರೂಪಕ] :

'ಸೀತಾ-ಜಾದ, ಕಲ್ಲಂ ಕ್ಖು ತುಮ್ಹೇಹಿಂ ಅಜುಜ್ಝಾಏ ಗಂತವ್ವಂ । ತಹಿಂ ಸೋ ರಾಅವಿಣಏಣ ಣಮಿದವ್ವೋ । [ಮಗೂ, ನಾಳೆ ನೀವು ಅಯೋಧ್ಯೆಗೆ ಹೋದಾಗ ಅಲ್ಲಿ ರಾಜನಿಗೆ ವಿನಯದಿಂದ ನಮಸ್ಕರಿಸಬೇಕು.]

ಲವಃ-ಅಂಬ, ಕಿಮಾವಾಭ್ಯಾಂ ರಾಜೋಪಜೀವಿಭ್ಯಾಂ ಭವಿತವ್ಯಮ್? [ತಾಯಿ, ಏಕೆ? ನಾವು ರಾಜೋಪಜೀವಿಗಳಾಗಬೇಕೇನು?]

ಸೀತಾ-ಜಾದ, ಸೋ ಕ್ಖು ತುಮ್ಹಾಣಂ ಪಿದಾ । [ಮಗೂ, ಆತನು ನಿಮ್ಮ ತಂದೆ.]

ಲವಃ-ಕಿಮಾವಯೋಃ ರಘುಪತಿಃ ಪಿತಾ? [ಏನು, ರಘುಪತಿಯು ನಮ್ಮ ತಂದೆಯೇ?]

ಸೀತಾ-(ಸಾಶಂಕಂ) ಜಾದ, ಣ ಕ್ಖು ಪರಂ ತುಮ್ಹಾಣಂ । ಸಅಲಾಏ ಜ್ಜೇವ್ವ ಪುಹವೀಏ । [(ಶಂಕೆ) ಮಗೂ, ನಿಮಗೆ ಮಾತ್ರವಲ್ಲ. ಅವನು ಪೃಥ್ವಿಯೆಲ್ಲಕ್ಕೂ ತಂದೆ.]'

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦-೧೨೩; ಸಾ.ದ. : ೬-೨೬೧; ಪ್ರತಾಪ : ೩-೩೨.

## ೨೩. ನಾಲಿಕಾಲಕ್ಷಣ :

**ಸೋಪಹಾಸಾ ನಿಗೂಢಾರ್ಥಾ ನಾಲಿಕೈವ ಪ್ರಹೇಲಿಕಾ ॥ ೧೯ ॥**

ಅನು : ಹಾಸ್ಯಪೂರ್ಣವಾಗಿದ್ದು ರಹಸ್ಯವಾದ ಅರ್ಥವುಳ್ಳ ಪ್ರಹೇಲಿಕೆಯೇ (ಒಗಟು) 'ನಾಲಿಕಾ'.

ವ್ಯಾಖ್ಯೆ : ಉದಾ-[ಮುದ್ರಾ : ಪು. ೭೨] :

'ಚರ : ಹಂಹೋ ಬಮ್ಹಣ, ಮಾ ಕುಪ್ಪ । ಕಿಂ ಪಿ ತುಹ ಉಅಜ್ಝಾಓ ಜಾಣಾದಿ । ಕಿಂ ಪಿ ಅಮ್ಹಾರಿಸಾ ಜಣಾ ಜಾಣಂತಿ । [ಹೋ ಬ್ರಾಹ್ಮಣ, ಕೋಪಿಸಬೇಡ. ನಿನ್ನ ಉಪಾಧ್ಯಾಯನು ಏನನ್ನು ಬೇಕಾದರೂ ತಿಳಿಯಬಲ್ಲ. ನಮ್ಮಂತಹ ಜನರೂ ಏನನ್ನಾದರೂ ತಿಳಿಯುತ್ತಾರೆ.]

ಶಿಷ್ಯ : ಕಿಮಸ್ಮದುಪಾಧ್ಯಾಯಸ್ಯ ಸರ್ವಜ್ಞತ್ವಮಪಹರ್ತುಮಿಚ್ಛಸಿ । [ನಮ್ಮ ಉಪಾಧ್ಯಾಯರ ಸರ್ವಜ್ಞತ್ವವನ್ನು ನೀನು ಅಪಹರಿಸಲಿಚ್ಛಿಸುವೆಯೇನು।]

ಚರ : ಯದಿ ದೇ ಉವಜ್ಝಾಓ ಸವ್ವಂ ಜಾಣಾದಿ ತಾ ಜಾಣಾದು ದಾವ ಕಸ್ಸ ಚಂದೋಅಣಭಿಪ್ಪೇದೋತ್ತಿ। [ನಿನ್ನ ಉಪಧ್ಯಾಯನಿಗೆ ಎಲ್ಲ ತಿಳಿದಿರುವುದಾದರೆ ಹೇಳಲಿ-ಯಾರು ಚಂದ್ರನನ್ನು (ಚಂದ್ರ ಎಂದು ಒಂದು ಅರ್ಥ; ಚಂದ್ರಗುಪ್ತ ಎಂಬುದು ಮತ್ತೊಂದು ಅರ್ಥ) ಇಚ್ಛಿಸುತ್ತಾರೆ?]

ಶಿಷ್ಯ : ಕಿಮನೇನ ಜ್ಞಾತೇನ ಭವತಿ । [ಅದನ್ನು ತಿಳಿದು ಏನಾಗಬೇಕು ?]'

-ಹೀಗೆ ಆರಂಭವಾಗಿ,

'ಚಾಣಕ್ಯ : ಚಂದ್ರಗುಪ್ತಾದಪರಕ್ತಾನ್ ಪುರುಷಾಂ ಜಾನಾಮಿ । [ಚಂದ್ರಗುಪ್ತನಿಂದ ಅಪ್ರಸನ್ನರಾದ ಪುರುಷರನ್ನು ತಿಳಿದುಕೊಳ್ಳುತ್ತೇನೆ.]'- ಹೀಗೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦-೧೨೭; ಸಾ.ದ. : ೬-೨೬೧; ಪ್ರತಾಪ : ೩-೩೨.

## ೨೪. ಅಸತ್ಪ್ರಲಾಪಲಕ್ಷಣ :

**ಅಸಂಬದ್ಧಕಥಾಪ್ರಾಯೋಽಸತ್ಪ್ರಲಾಪೋ೧ಯಥೋತ್ತರಃ ।**[1]

ಅನು : ['ನಾಲಿಕಾ'ದ ಅನಂತರ] ಮುಂದಿನದಾದ 'ಅಸತ್ಪ್ರಲಾಪ' ಅಸಂಬದ್ಧವಾದ ಮಾತುಗಳಿಂದ ಕೂಡಿದ್ದು.

ವ್ಯಾಖ್ಯೆ : ಅಸಂಬದ್ಧವಾದ ವಿಷಯವು 'ಅಸಂಗತಿ' ಎಂಬ ವಾಕ್ಯದೋಷವಲ್ಲವೆ? [ಅಂತಹ ದೋಷ ರೂಪಕದಲ್ಲಿ ಬರಕೂಡದಲ್ಲವೆ?]-ಎಂದು ಪ್ರಶ್ನಿಸಬಹುದು. ಹಾಗಲ್ಲ. ಅರೆಯೆಚ್ಚರು, ಮದ, ಉನ್ಮಾದ ಹಾಗೂ ಮಕ್ಕಳ ಮಾತುಗಳಲ್ಲಿ ಬರುವ ಅಸಂಬದ್ಧತೆಯೇ ಇಲ್ಲಿ ವಿಭಾವ. [ಅದು ಸಹಜವಾಗಿರುವ ಕಾರಣ ದೋಷವಲ್ಲ].
ಉದಾ:-[ ಶಾರ್ಙ್ಗಧರ ] :

'ಅರ್ಚಿಷ್ಮಂತಿ ವಿದಾರ್ಯ ವಕ್ತ್ರಕುಹರಾಣ್ಯಾಸೃಕ್ಕತೋವಾಸುಕೇ-
ರಂಗುಲ್ಯಾ ವಿಷಕರ್ಬುರಾನ್ ಗಣಯತಃ ಸಂಸ್ಪೃಶ್ಯ ದಂತಾಂಕುರಾನ್।
ಏಕಂ ತ್ರೀಣಿ ನವಾಷ್ಟ ಸಪ್ತ ಷಡಿತಿ ಪ್ರಧ್ವಸ್ತಸಂಖ್ಯಾಕ್ರಮಾ
ವಾಚಃ ಕ್ರೌಂಚರಿಪೋಃ ಶಿಶುತ್ವವಿಕಲಾಃ ಶ್ರೇಯಾಂಸಿ ಪುಷ್ಣಾಂತು ವಃ ॥'

[(ಹರನ ಕಂಠದಲ್ಲಿ ಹೆಡೆಯಾಡುತ್ತಿರುವ) ವಾಸುಕಿಯ ಜಾಜ್ವಲ್ಯಮಾನವಾದ ಬಾಯ್ದೆರೆಯ ಕಟವಾಯಿಯನ್ನು ಬಿಡಿಸಿ, ಒಂದು ಮೂರು ಒಂಬತ್ತು ಎಂಟು ಏಳು ಆರು ಎಂದು ಎಣಿಕೆ ತಪ್ಪಿ (ಅದರ) ಚಿತ್ರವಿಚಿತ್ರವಾದ ವಿಷದ ಹಲ್ಲುಗಳನ್ನು ಬೆರಳಿಟ್ಟು ಎಣಿಸುತ್ತಿರುವ ಬಾಲಷಣ್ಮುಖಸ್ವಾಮಿಯ ಮುದ್ದು ಮಾತುಗಳು ನಿಮ್ಮ ಶ್ರೇಯಸ್ಸನ್ನು ವರ್ಧಿಸಲಿ.]

ಮತ್ತು-[ವಿಕ್ರಮ : ೪-೩೩] :

'ಹಂಸ ಪ್ರಯಚ್ಛ ಮೇ ಕಾಂತಾಂ ಗತಿಸ್ತಸ್ಯಾಸ್ತ್ವಯಾ ಹೃತಾ।
ವಿಭಾವಿತೈಕದೇಶೇನ ದೇಯಂ ಯದಭಿಯುಜ್ಯತೇ ॥'

[ಎಲೈ ಹಂಸವೆ, ನೀನು ಯಾವಳ ನಡೆಯನ್ನು ಅಪಹರಿಸಿರುವೆಯೋ ಅಂತಹ ನನ್ನ ಕಾಂತೆಯನ್ನು ಹಿಂದಕ್ಕೆ ಕೊಡು. ಎಲ್ಲಿ ಒಂದು ಭಾಗ ದೊರೆಯುವುದೋ ಅಲ್ಲಿಂದಲೇ ಪೂರ್ಣವಾಗಿ (ಉಳಿದುದೂ) ದೊರೆಯಬೇಕು.]
ಮತ್ತು [ಆಕರ ತಿಳಿಯದ ಒಂದು ಶ್ಲೋಕ]:

'ಭುಕ್ತಾ ಹಿ ಮಯಾ ಗಿರಯಃ ಸ್ನಾತೋಽಹಂ ವಹ್ನಿನಾ ಪಿಬಾಮಿ ವಿಯತ್।
ಹರಿಹರಹಿರಣ್ಯಗರ್ಭಾ ಮತ್ಪುತ್ರಾಸ್ತೇನ ನೃತ್ಯಾಮಿ॥'

[ನಾನು ಪರ್ವತಗಳನ್ನು ತಿಂದಿದ್ದೇನೆ, ಬೆಂಕಿಯಲ್ಲಿ ಸ್ನಾನಮಾಡಿದ್ದೇನೆ, ಆಕಾಶವನ್ನು ಕುಡಿಯುತ್ತೇನೆ. ಹರಿಹರಬ್ರಹ್ಮರು ನನ್ನ ಮಕ್ಕಳು. ಆದಕ್ಕಾಗಿ ನಾನು ನರ್ತಿಸುತ್ತೇನೆ.]

ಟಿಪ್ಪಣಿ: ಅಸಂಬದ್ಧವಾದ ಮಾತು ಅಥವಾ ಉತ್ತರವೇ 'ಅಸತ್ಪ್ರಲಾಪ' ಎಂದು ಹೇಳಿ ಜೊತೆಗೆ, ಮಾತು ಕೇಳದ ಮೂರ್ಖನಿಗೆ ತಿಳಿದವರು ಹೇಳುವ ಬುದ್ಧಿವಾದವೂ ಕೂಡ 'ಅಸತ್ಪ್ರಲಾಪ' ಎಂದು ನಾ.ಶಾ., ಸಾ.ದ.ಗಳಲ್ಲಿ ಹೇಳಿದೆ.

ಹೋಲಿಕೆ = ನಾ.ಶಾ. : ೨೦-೧೨೪, ೧೨೫; ಸಾ.ದ. : ೬-೨೬೨; ಪ್ರತಾಪ : ೩-೩೨.

## ೨೫. ವ್ಯಾಹಾರಲಕ್ಷಣ :

**ಅನ್ಯಾರ್ಥಮೇವ ವ್ಯಾಹಾರೋ ಹಾಸ್ಯಲೋಭಕರಂ ವಚಃ ॥ ೨೦ ॥**

---

೧ ಪಾಠ : ಯಥೋತ್ತರಮ್.

ಅನು : ಹಾಸ್ಯ ಆಸೆಗಳನ್ನು ಹುಟ್ಟಿಸುವ ಅನ್ಯಾರ್ಥವುಳ್ಳ ಮಾತೇ 'ವ್ಯಾಹಾರ'.

ವ್ಯಾಖ್ಯೆ : ಉದಾ–[ಮಾಲವಿಕಾ : ಪು.೨೮, ೩೦] :

'ಲಾಸ್ಯಪ್ರಯೋಗ ಮುಗಿಯುತ್ತಿರಲು, [ಮಾಲವಿಕಾ ನಿರ್ಗಂತುಮಿಚ್ಛತಿ] (ಮಾಲವಿಕೆ ಹೊರಡ ಲಿಚ್ಛಿಸುತ್ತಾಳೆ).

ವಿದೂ–ಮಾ ದಾವ । ಉವಏಸಸುದ್ಧಾ ಗಮಿಸ್ಸಸಿ । [ನಿಲ್ಲು, ನೀನು ನನ್ನ ಉಪದೇಶ ಕೇಳಿ ಶುದ್ಧಳಾಗಿ ಹೋಗತಕ್ಕದ್ದು]–ಇತ್ಯಾದಿಯಿಂದ,

ಗಣದಾಸಃ–(ವಿದೂಷಕಂ ಪ್ರತಿ) ಆರ್ಯ, ಉಚ್ಯತಾಂ ಯಸ್ತ್ವಯಾ ಕ್ರಮಭೇದೋ ಲಕ್ಷಿತಃ । [ಆರ್ಯ, ಕ್ರಮಭೇದವನ್ನೇನಾದರೂ ನೋಡಿದರೆ ಹೇಳು.]

ವಿದೂ–ಪಢಮಂ ಪಚ್ಚೂಸೇ ಬಮ್ಹಣಸ್ಸ ಪೂಆ ಭೋದಿ । ಸಾ ತಏ ಲಂಘಿದಾ । (ಮಾಲವಿಕಾ ಸ್ಮಯತೇ) [ಮೊದಲು ಪ್ರಾತಃಕಾಲದಲ್ಲಿ ಬ್ರಾಹ್ಮಣರ ಪೂಜೆಯಾಗಬೇಕು. ಅದನ್ನು ಇವಳು ಬಿಟ್ಟಿದ್ದಾಳೆ.] (ಮಾಲವಿಕಾ ನಗುವಳು ]'– ಇಲ್ಲಿ, ನಾಯಕನು ತನ್ನ ವಿಶ್ವಾಸದ ನಾಯಿಕೆಯನ್ನು ಇನ್ನೂ ಸ್ವಲ್ಪಕಾಲ ನೋಡಲೆಂದು, ವಿದೂಷಕನು ಹಾಸ್ಯಲೋಭಕಾರಿಯಾದ ಮಾತನ್ನು ಪ್ರಯೋಗಿಸಿದ್ದಾನೆ. ಇದು 'ವ್ಯಾಹಾರ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦–೧೩೦; ಸಾ.ದ : ೬–೨೬೩; ಪ್ರತಾಪ : ೩–೩೨.

## ೨೬. ಮೃದವಲಕ್ಷಣ :

**ದೋಷಾ ಗುಣಾ ಗುಣಾ ದೋಷಾ ಯತ್ರ ಸ್ಯುರ್ಮೃದವಂ ಹಿತತ್ ।**

ಅನು : ಎಲ್ಲಿ ದೋಷವು ಗುಣವಾಗಿ [ಮತ್ತು] ಗುಣವು ದೋಷವಾಗಿ [ಕಲ್ಪಿಸಿಗೊಂಡು] ಇರುತ್ತದೊ ಅದು 'ಮೃದವ'.

ವ್ಯಾಖ್ಯೆ : ಉದಾ–ದೋಷ ಗುಣವಾಗುವುದಕ್ಕೆ–[ಶಾಕುಂ. : ೨–೫] :

'ಮೇದಶ್ಛೇದಕೃಶೋದರಂ ಲಘು ಭವತ್ಯುತ್ಥಾನಯೋಗ್ಯಂ ವಪುಃ
ಸತ್ತ್ವಾನಾಮುಪಲಕ್ಷ್ಯತೇ ವಿಕೃತಿಮಚ್ಚಿತ್ತಂ ಭಯಕ್ರೋಧಯೋಃ ।
ಉತ್ಕರ್ಷಃ ಸ ಚ ಧನ್ವಿನಾಂ ಯದಿಷವಃ ಸಿಧ್ಯಂತಿ ಲಕ್ಷ್ಯೇಚಲೇ
ಮಿಥ್ಯೈವ ವ್ಯಸನಂ ವದಂತಿ ಮೃಗಯಾಮೀದೃಗ್ವಿನೋದಃ ಕುತಃ ॥'

[ಕೊಬ್ಬು ಕರಗಿ ಹೊಟ್ಟೆ ಕಿರಿದಾಗಿ ಶರೀರವು ಲಘುವಾಗುತ್ತದೆ (ಚಟುವಟಿಕೆಯುಳ್ಳುದಾಗುತ್ತದೆ), ಭಯ ಕ್ರೋಧಗಳಿಂದ ಮೃಗಗಳಲ್ಲಿ ಉಂಟಾಗುವ ವಿಕಾರವನ್ನು ಕಂಡುಕೊಳ್ಳಲಾಗುತ್ತದೆ; ಬಾಣ ಬಿಡುವಾಗ ಚಲವಾದ ಲಕ್ಷ್ಯದಲ್ಲಿ ಗುರಿಸಾಧಿಸಿ ಬಿಲ್ಲುಗಾರರ ಹೆಚ್ಚಳ ಸಿದ್ಧವಾಗುತ್ತದೆ. ಇಂತಹ ಮೃಗಬೇಟೆ ವ್ಯಸನವೆಂದು ಹೇಳುವುದು ಕೇವಲ ಮಿಥ್ಯೆ. ಇಂತಹ ವಿನೋದ ಇನ್ನೆಲ್ಲಿ?]

–ಇಲ್ಲಿ ಬೇಟೆಯ ದೋಷವು ಗುಣವಾಗಿದೆ. ಮತ್ತು–[ಆಕರ ತಿಳಿಯದ ಪದ್ಯ]:

'ಸತತಮನಿರ್ವೃತಮಾನಸಮಾಯಾಸಸಹಸ್ರಸಂಕುಲಕ್ಲಿಷ್ಟಮ್ ।
ಗತನಿದ್ರಮವಿಶ್ವಾಸಂ ಜೀವತಿ ರಾಜಾ ಜಿಗೀಷುರಯಮ್ ॥'

[ಸದಾ ಅಶಾಂತವಾದ ಮನಸ್ಸು ಸಹಸ್ರ ವ್ಯಥೆಗಳಿಂದ ಕಷ್ಟಕೊಡುತ್ತಿರಲು, ನಿದ್ರೆಯಿಲ್ಲದೆ ಯಾರೊಬ್ಬರಲ್ಲಿಯೂ ವಿಶ್ವಾಸವಿಲ್ಲದೆ ಇದೋ ಈ ಜಯೇಚ್ಛೆಯ ರಾಜನು ಜೀವಿಸುತ್ತಿದ್ದಾನೆ.]–ಇಲ್ಲಿ, ರಾಜಪದವಿಯ ಗುಣಗಳನ್ನು ದೋಷವಾಗಿ ಪರಿಗಣಿಸಲಾಗಿದೆ.

ಮತ್ತು–ಗುಣದೋಷಗಳು ಪರಸ್ಪರ ವಿರುದ್ಧವಾಗಿ ಚಿತ್ರಿತವಾಗಿರುವ ಉದಾ–[ಆಕರ ತಿಳಿಯದು] :

'ಸಂತಃ ಸಚ್ಚರಿತೋದಯವ್ಯಸನಿನಃ ಪ್ರಾದುರ್ಭವದ್ಯಂತ್ರಣಾಃ
ಸರ್ವತ್ರೈವ ಜನಾಪವಾದಚಕಿತಾ ಜೀವಂತಿ ದುಃಖಂ ಸದಾ।
ಅವ್ಯುತ್ಪನ್ನಮತಿಃ ಕೃತೇನ ನ ಸತಾ ನೈವಾಸತಾ ವ್ಯಾಕುಲೋ
ಯುಕ್ತಾಯುಕ್ತವಿವೇಕಶೂನ್ಯಹೃದಯೋ ಧನ್ಯೋ ಜನಃ ಪ್ರಾಕೃತಃ॥'

[ಸತ್ಪುರುಷನು ಒಳ್ಳೆಯ ನಡತೆ ಹೆಚ್ಚಲೆಂದು ಸದಾ ಚಿಂತಿಸುತ್ತ ನಿಯಮಬದ್ಧನಾಗಿ ಯಾವಾಗಲೂ ಜನಾಪವಾದಕ್ಕೆ ಬೆದರುತ್ತ ಸದಾ ದುಃಖದಲ್ಲಿಯೇ ಬದುಕುತ್ತಿರುತ್ತಾನೆ. ತಿಳಿವಿಲ್ಲದವ(ಮೂರ್ಖ)ನಾದರೋ ಒಳಿತು ಕೆಡುಕುಗಳಾವುದರಿಂದಲೂ ಖೇದಹೊಂದದೆ ಯುಕ್ತಾಯುಕ್ತವಿವೇಕಶೂನ್ಯವಾದ ಹೃದಯವುಳ್ಳವಾಗಿರುತ್ತಾನೆ. ಅಂತಹ ಸಾಮಾನ್ಯನೇ ಧನ್ಯನು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦-೧೩೧; ಸಾ.ದ. : ೬-೨೬೩; ಪ್ರತಾಪ : ೩-೩೨.

# ಇತಿವೃತ್ತಯೋಜನೆ

## ೨೭. ಪ್ರಸ್ತಾವನೆಯ ಉಪಸಂಹಾರ :

**ಏಷಾಮನ್ಯತಮೇನಾರ್ಥಂ ಪಾತ್ರಂ ಚಾಕ್ಷಿಪ್ಯ ಸೂತ್ರಭೃತ್ ॥ ೨೧ ॥**
**ಪ್ರಸ್ತಾವನಾಂತೇ ನಿರ್ಗಚ್ಛೇತ್ತತೋ ವಸ್ತು ಪ್ರಪಂಚಯೇತ್ ।**

ಅನು : [ಮೇಲೆ ಹೇಳಿದಂತೆ, ಭಾರತೀವೃತ್ತಿಯನ್ನಾಶ್ರಯಿಸಿದ ಪ್ರರೋಚನಾ, ವೀಥೀ, ಪ್ರಹಸನ, ಆಮುಖ]-ಇವುಗಳಲ್ಲಿ ಯಾವುದಾದರೊಂದರಿಂದ [ನಾಟಕದ]ವಿಷಯ ಪಾತ್ರಗಳನ್ನು ಸೂಚಿಸಿ, ಪ್ರಸ್ತಾವನೆಯ ಕೊನೆಯಲ್ಲಿ ಸೂತ್ರಧಾರನು [ರಂಗದಿಂದ] ನಿರ್ಗಮಿಸಬೇಕು; ಅನಂತರ [ನಾಟಕದ ವಸ್ತುವನ್ನು ವಿಸ್ತಾರವಾಗಿ [ಚಿತ್ರಿ]ಸಬೇಕು.

ಟಿಪ್ಪಣಿ : 'ಸೂತ್ರಭೃತ್' ಎಂಬುದು, 'ಸೂತ್ರಿನ್' ಎಂಬಂತೆ [೩-೧೦] ಛಂದಸ್ಸಿನ ಅನುಕೂಲಕ್ಕಾಗಿ ಬಂದ 'ಸೂತ್ರಧಾರ' ಎಂಬುದರ ಮತ್ತೊಂದು ರೂಪ.

ಹೋಲಿಕೆ = ಸಾ.ದ. : ೬-೪೦, ೪೧.

## ೨೮. ಆಧಿಕಾರಿಕವೃತ್ತ :

**೧ಅಭಿಗಮ್ಯ೧ಗುಣೈರ್ಯುಕ್ತೋ ಧೀರೋದಾತ್ತಃ ಪ್ರತಾಪವಾನ್ ॥ ೨೨ ॥**
**ಕೀರ್ತಿಕಾಮೋ ಮಹೋತ್ಸಾಹಸ್ತ್ರಯ್ಯಾಸ್ತ್ರಾತಾ ಮಹೀಪತಿಃ ।**
**ಪ್ರಖ್ಯಾತವಂಶೋ ರಾಜರ್ಷಿರ್ದಿವ್ಯೋ ವಾ ಯತ್ರ ನಾಯಕಃ ॥ ೨೩ ॥**
**ತತ್ಪ್ರಖ್ಯಾತಂ ವಿಧಾತವ್ಯಂ ವೃತ್ತಮತ್ರಾಧಿಕಾರಿಕಮ್ ।**

ಅನು : ಆಕರ್ಷಕ ಗುಣಗಳಿಂದ ಕೂಡಿದವನೂ, 'ಧೀರೋದಾತ್ತ'ನೂ, ಪ್ರತಾಪಶಾಲಿಯೂ, ಕೀರ್ತಿಯನ್ನಪೇಕ್ಷಿಸುವವನೂ, ವಿಶೇಷ ಉತ್ಸಾಹವುಳ್ಳವನೂ, ಮೂರು ವೇದಗಳನ್ನು ಕಾಪಾಡುವಂತಹವನೂ, ರಾಜನೂ, ಪ್ರಖ್ಯಾತವಂಶದಲ್ಲಿ ಜನಿಸಿದವನೂ

---

೧-ಪಾಠ : (i) ಅಭಿಗಾಮಿ (ii) ಅಧಿಗಮ್ಯ.

ಆದ ರಾಜರ್ಷಿಯಾಗಲಿ ಅಥವಾ ದೇವನಾಗಲಿ ಅಲ್ಲಿ [ಎಂದರೆ, ನಾಟಕದಲ್ಲಿ] ನಾಯಕ [ನಾಗಿರತಕ್ಕದ್ದು]. ಅಲ್ಲಿ 'ಪ್ರಖ್ಯಾತ'ವಾದ ವೃತ್ತವನ್ನೇ 'ಆಧಿಕಾರಿಕ'ವನ್ನಾಗಿ ಬಳಸಿ ಕೊಳ್ಳತಕ್ಕದ್ದು.

ವ್ಯಾಖ್ಯೆ : ಸತ್ಯವಾದಿಯೂ ನೀತಿಶಾಸ್ತ್ರಜ್ಞನೂ ಉತ್ತಮ ಗುಣಗಳುಳ್ಳವನೂ ಅನುಚಿತ ಕಾರ್ಯಗಳಲ್ಲಿ ತೊಡಗದಿರುವವನೂ ಆದ, ರಾಮಾಯಣ ಮಹಾಭಾರತ ಮುಂತಾದುವುಗಳಲ್ಲಿ ಪ್ರಸಿದ್ಧನಾಗಿರುವ ರಾಜರ್ಷಿಯ ಅಥವಾ ದಿವ್ಯನ ಪ್ರಸಿದ್ಧವಾದ ಇತಿವೃತ್ತವನ್ನೆ 'ಆಧಿಕಾರಿಕ'ವಾಗಿ ನಾಟಕದಲ್ಲಿ ಬಳಸಿಕೊಳ್ಳತಕ್ಕದ್ದು.

ಟಿಪ್ಪಣಿ : ಧೀರೋದಾತ್ತ : ನಾಯಕಪ್ರಭೇದಗಳಲ್ಲೊಂದು : ನೋಡಿ–೨–೫.

ಪ್ರಖ್ಯಾತ : ಪೂರ್ವಪ್ರಸಿದ್ಧವಾದ ಕಥೆ : ನೋಡಿ–೧–೨೩.

ಆಧಿಕಾರಿಕ : ಮುಖ್ಯ ಕಥೆ : ನೋಡಿ–೧–೧೯.

## ೨೯. ಮೂಲ ಇತಿವೃತ್ತದ ಮಾರ್ಪಾಟು :

ಯತ್ತತ್ರಾನುಚಿತಂ ಕಿಂಚಿನ್ನಾಯಕಸ್ಯ ರಸಸ್ಯ ವಾ ॥ ೨೪ ॥
ವಿರುದ್ಧಂ ತತ್ಪರಿತ್ಯಾಜ್ಯಮನ್ಯಥಾ ವಾ ಪ್ರಕಲ್ಪಯೇತ್ ।

ಅನು : ಅಲ್ಲಿ [ಎಂದರೆ, ಕವಿ ಆಯ್ದುಕೊಂಡ ಮೂಲಕಥೆಯಲ್ಲಿ] ನಾಯಕನಿಗೆ ಅಥವಾ ರಸಕ್ಕೆ ಅನುಚಿತವಾಗಿರುವುದನ್ನು [ಮತ್ತು] ವಿರುದ್ಧವಾಗಿರುವುದನ್ನು ಬಿಟ್ಟು ಬಿಡತಕ್ಕದ್ದು ಅಥವಾ ಬೇರೆಯಾಗಿ ಕಲ್ಪಿಸಿಕೊಳ್ಳತಕ್ಕದ್ದು.

ವ್ಯಾಖ್ಯೆ : 'ಉದಾತ್ತರಾಘವ'ದಲ್ಲಿ ಮಾಯುರಾಜನು ವಾಲಿಯ ಕಪಟ ವಧೆಯನ್ನು ಬಿಟ್ಟುಬಿಟ್ಟಿದ್ದಾನೆ. 'ಮಹಾವೀರಚರಿತ'ಯಲ್ಲಿ ವಾಲಿಯು ರಾವಣನ ಸ್ನೇಹಿತನಾಗಿದ್ದು ಶ್ರೀರಾಮನನ್ನು ಕೊಲ್ಲಲೆಂದು ಬಂದಾಗ ವಧಿಸಲ್ಪಟ್ಟನೆಂದು ಬದಲಿಸಲಾಗಿದೆ.

ಟಿಪ್ಪಣಿ : ಹೋಲಿಕೆ = ಸಾ.ದ. : ೬–೫೦.

## ೩೦. ಆಧಿಕಾರಿಕಯೋಜನೆ :

ಆದ್ಯಂತ್ಯಮೇವಂ ನಿಶ್ಚಿತ್ಯ ಪಂಚಧಾ ತದ್ವಿಭಜ್ಯ ಚ ॥ ೨೫ ॥
ಖಂಡಶಃ ಸಂಧಿಸಂಜ್ಞಾಂಶ್ಚ ವಿಭಾಗಾನಪಿ ಖಂಡಯೇತ್ ।

ಅನು : [ನಾಟಕಕಾರನು ನಾಟಕವನ್ನು] ಆದ್ಯಂತವಾಗಿ ನಿರ್ಧರಿಸಿಕೊಂಡು, [ಆಧಿಕಾರಿಕ ಎಂದರೆ, ಪ್ರಧಾನವೃತ್ತವನ್ನು] ಐದು ಭಾಗಗಳಾಗಿ ವಿಭಜಿಸಿ, ಸಂಧಿಯೆಂದು ಹೆಸರುಳ್ಳ [ಆ ಐದು ವಿಭಾಗಗಳನ್ನು] ಮತ್ತೆ ಪುನಃ ಭಾಗಭಾಗವಾಗಿ [ಎಂದರೆ, ಸಂಧ್ಯಂಗಗಳಾಗಿ] ವಿಭಜಿಸತಕ್ಕದ್ದು.

ವ್ಯಾಖ್ಯೆ : [ಆರಿಸಿಕೊಂಡ ಪ್ರಧಾನ ಕಥೆಯಲ್ಲಿನ] ಅನೌಚಿತ್ಯ ರಸವಿರೋಧಗಳನ್ನು ತ್ಯಜಿಸಿ ಶುದ್ಧಮಾಡಿಕೊಳ್ಳಬೇಕು; ಅನಂತರ ಸೂಚಿಸಲು ಯೋಗ್ಯವಾದ ಭಾಗ ಯಾವುದು ರಂಗದಲ್ಲಿ ತೋರಿಸಲು ಯೋಗ್ಯವಾದ ಭಾಗ ಯಾವುದು – ಎಂಬ ವಸ್ತುವಿಭಾಗವನ್ನು ಅನುಸರಿಸಿ, ಅದನ್ನು ನಿಶ್ಚಯಿಸಿಕೊಳ್ಳತಕ್ಕದ್ದು; ಅನಂತರ ಬೀಜ ಬಿಂದು ಪತಾಕಾ ಪ್ರಕರೀ ಕಾರ್ಯ – ಈ ಐದು ಅರ್ಥಪ್ರಕೃತಿಗಳು ಮತ್ತು [ಅವಕ್ಕೆ ಸರಿಹೊಂದುವ, ಆರಂಭ ಪ್ರಯತ್ನ ಪ್ರಾಪ್ತ್ಯಾಶೆ ನಿಯತಾಪ್ತಿ ಫಲಾಗಮ ಮೊದಲಾದ] ಐದು ಅವಸ್ಥೆಗಳಿಗೆ ಅನುಸಾರ ವಸ್ತುವನ್ನು

ಐದು ಸಂಧಿಗಳಾಗಿ ಭಾಗಮಾಡಿಕೊಳ್ಳತಕ್ಕದ್ದು; ಆಮೇಲೆ ಒಂದೊಂದು ಭಾಗಕ್ಕೂ ಒಳವಿಭಾಗಗಳನ್ನು ಕಲ್ಪಿಸಿಕೊಳ್ಳತಕ್ಕದ್ದು. [ಸಂಧಿಯ ಆ ಒಳವಿಭಾಗಗಳೇ ಸಂಧ್ಯಂಗಗಳು].

ಟಿಪ್ಪಣಿ : ಸಂಧಿಯ ವಿವರಣೆಗೆ ೧–೩೪ರಿಂದ ೩೬, ಸಂಧ್ಯಂಗಗಳ ವಿವರಣೆಗೆ ೧–೩೭ರಿಂದ ೧೧೧, ಅರ್ಥಪ್ರಕೃತಿಗಳ ವಿವರಣೆಗೆ ೧–೨೭, ಅವಸ್ಥೆಗಳ ವಿವರಣೆಗೆ ೧–೨೮, ದೃಶ್ಯಸೂಚ್ಯಗಳಿಗೆ ೧–೧೧೩, ೧೧೪ ಮತ್ತು ಆಧಿಕಾರಿಕ ಇತಿವೃತ್ತಕ್ಕೆ ೧–೧೮–ನೋಡಿ.

## ೩೧. ಪ್ರಾಸಂಗಿಕವೃತ್ತದ ಯೋಜನೆ :

**ಚತುಃಷಷ್ಟಿಸ್ತು ತಾನಿ ಸ್ಯುರಂಗಾನೀತ್ಯಪರಂ ತಥಾ ॥ ೨೬ ॥**

**ಪತಾಕಾವೃತ್ತಮಪ್ಯೂನಮೇಕಾದ್ಯೈರನುಸಂಧಿಭಿಃ ।**
**ಅಂಗಾನ್ಯತ್ರ ಯಥಾಲಾಭಮಸಂಧಿಂ ಪ್ರಕರೀಂ ನ್ಯಸೇತ್ ॥ ೨೭ ॥**

ಅನು : [ಮೇಲೆ ಹೇಳಿದಂತೆ ಆಧಿಕಾರಿಕವೃತ್ತವನ್ನು ಸಂಧಿ ಸಂಧ್ಯಂಗಗಳಾಗಿ ವಿಭಜಿಸಿದಾಗ] ಅವು ಅರವತ್ತುನಾಲ್ಕು ಅಂಗಗಳಾಗುವುವು. ಅನಂತರ [ಪ್ರಾಸಂಗಿಕ ಇತಿವೃತ್ತ : ಅದರಲ್ಲಿ ಪ್ರಕರೀಯಲ್ಲದೆ] ಇನ್ನೊಂದು [ಭಾಗವಾದ] ಪತಾಕಾವೃತ್ತವನ್ನೂ ಅನುಸಂಧಿಗಳಾಗಿ ವಿಭಜಿಸತಕ್ಕದ್ದು. [ಹಾಗೆ ವಿಭಜಿಸಿದ ಅನುಸಂಧಿಗಳು, ಆಧಿಕಾರಿಕ ದಲ್ಲಿನ ಸಂಧಿಗಳಿಗಿಂತ ಸಂಖ್ಯೆಯಲ್ಲಿ] ಒಂದು ಮುಂತಾಗಿ ಕಡಿಮೆಯಿರತಕ್ಕದ್ದು [ಎಂದರೆ, ಆಧಿಕಾರಿಕದಲ್ಲಿ ಐದು ಸಂಧಿಗಳಿರುತ್ತವಷ್ಟೆ. ಪ್ರಾಸಂಗಿಕದಲ್ಲಿನ ಅನುಸಂಧಿಗಳು ಐದಕ್ಕೆ ಒಂದಾದರೂ ಕಡಿಮೆ ಇರತಕ್ಕದ್ದು. ಅವು ನಾಲ್ಕು ಇರಬಹುದು, ಮೂರು ಇರಬಹುದು, ಎರಡು ಇರಬಹುದು ಅಥವಾ ಒಂದೇ ಇರಬಹುದು]. ಇದರಲ್ಲಿ [ಎಂದರೆ, ಪ್ರಾಸಂಗಿಕದ ಅನುಸಂಧಿಗಳಲ್ಲಿ, ಆಧಿಕಾರಿಕದ ಸಂಧಿಗಳಿಗಿರುವಂತೆ] ಅಂಗಗಳು [ನಿಶ್ಚಿತವಾಗಿರಬೇಕಿಲ್ಲ;] ಹೇಗೆ ಒದಗುವುದೊ ಹಾಗೆ [ಬೇಕೆನ್ನುವಷ್ಟು ಅಂಗಗಳನ್ನು ಯೋಜಿಸಬಹುದು. ಇನ್ನು ಪ್ರಾಸಂಗಿಕದ ಮತ್ತೊಂದು ಭಾಗವಾದ 'ಪ್ರಕರೀ' ಇರುವುದಷ್ಟೆ. ಆ] 'ಪ್ರಕರೀ'ಯಲ್ಲಿ ಸಂಧಿಯನ್ನು ಯೋಜಿಸಬಾರದು.

ವ್ಯಾಖ್ಯೆ : ಪ್ರಾಸಂಗಿಕ ಇತಿವೃತ್ತದಲ್ಲಿ : (೧) ಪತಾಕಾವೃತ್ತದಲ್ಲಿ ಯೋಜಿಸುವ ಅನುಸಂಧಿಗಳು, ಪ್ರಧಾನ ಇತಿವೃತ್ತದ ಸಂಧಿಗಳಿಗಿಂತ, ಒಂದು ಅಥವಾ ಎರಡು ಅಥವಾ ಮೂರು ಅಥವಾ ನಾಲ್ಕು ಕಡಿಮೆಯಾಗಿರತಕ್ಕದ್ದು. ಪತಾಕಾದಲ್ಲಿನ ಅಂಗಗಳು, ಪ್ರಧಾನವೃತ್ತದ ಅಂಗಗಳಿಗೆ ವ್ಯತ್ಯಾಸ ಬರದಂತೆ, ಎಷ್ಟು ಬೇಕಿದ್ದರೂ ಇರಬಹುದು.

(೨) ಪ್ರಕರೀ ವೃತ್ತದಲ್ಲಿ ಸಂಧಿಗಳನ್ನು ಸಂಪೂರ್ಣವಾಗಿ ಯೋಜಿಸಬೇಕಿಲ್ಲ.

ಟಿಪ್ಪಣಿ : ನಾಟಕದಲ್ಲಿ ಸಂಧಿವಿಭಾಗ ಹೇಗೆ ಎಂಬುದನ್ನು ಇಲ್ಲಿ ಹೇಳಿದೆ. ಮೇಲೆ [೩೦ರಲ್ಲಿ] ಪ್ರಧಾನಕಥೆಯ [ಎಂದರೆ, ಆಧಿಕಾರಿಕದ] ಸಂಧಿವಿಭಾಗ ಹೇಗೆ, ಅವುಗಳ ಅಂಗಗಳನ್ನು ಹೇಗೆ ಯೋಜಿಸಬೇಕು – ಎಂಬುದನ್ನು ಹೇಳಿಯಾಯಿತು. ಈ ಖಂಡದ ಕಾರಿಕೆಗಳಲ್ಲಿ ಉಪಕಥೆಯ [ಎಂದರೆ, ಪ್ರಾಸಂಗಿಕವೃತ್ತದ] ಯೋಜನೆ ಹೇಗೆ ಎಂಬುದನ್ನು ಹೇಳಿದೆ. ಪ್ರಾಸಂಗಿಕದಲ್ಲಿ ಪತಾಕಾ ಪ್ರಕರೀ ಎಂದು ಎರಡು ವಿಧ. ಪತಾಕಾದಲ್ಲಿ, ಆಧಿಕಾರಿಕದಂತೆಯೇ, 'ಅನುಸಂಧಿ' ಎಂಬ ವಿಭಾಗಗಳನ್ನು ಮಾಡಿಕೊಳ್ಳಬೇಕು. ಆಧಿಕಾರಿಕದಲ್ಲಿರುವ ಸಂಧಿಗಳ ಸಂಖ್ಯೆಗಿಂತ ಕಡಿಮೆ ಸಂಖ್ಯೆಯ ಸಂಧಿಗಳು ಪತಾಕಾದಲ್ಲಿರಬೇಕು. ಆಧಿಕಾರಿಕದಲ್ಲಿರುವ ಸಂಧಿಗಳ ಸಂಖ್ಯೆ ಐದು. ಆದ್ದರಿಂದ ಪತಾಕಾದಲ್ಲಿ ಒಂದು ಅನುಸಂಧಿ ಇರಬಹುದು ಅಥವಾ ಎರಡು ಅಥವಾ ಮೂರು ಅಥವಾ ನಾಲ್ಕು ಇರಬಹುದು. ಇನ್ನು, ಪ್ರಕರೀಯಲ್ಲಿ ಸಂಧಿವಿಭಜನೆಯ ಆವಶ್ಯಕತೆಯಿಲ್ಲ.

ಪ್ರಾಸಂಗಿಕ ಇತಿವೃತ್ತಲಕ್ಷಣಕ್ಕೆ ೧-೧೮ ಮತ್ತು ಪತಾಕಾ ಪ್ರಕರೀಗಳ ಲಕ್ಷಣಕ್ಕೆ ೧-೨೧ ನೋಡಿ.

ಹೋಲಿಕೆ = ನಾ.ಶಾ. : ೨೧-೫.

# ಆರಂಭಯೋಜನೆ

## ೩೨. ಆದಿಯ ವಿಷ್ಕಂಭ ಅಥವಾ ಅಂಕ :

**ಆದೌ ವಿಷ್ಕಂಭಕಂ ಕುರ್ಯಾದಂಕಂ ವಾ ಕಾರ್ಯಯುಕ್ತಿತಃ ।**

ಅನು : [ನಾಟಕದ] ಮೊದಲಲ್ಲಿ, ಕಾರ್ಯಯುಕ್ತಿಯಿಂದ ವಿಷ್ಕಂಭಕ ಅಥವಾ ಅಂಕವನ್ನು ಯೋಜಿಸಬೇಕು.

ಟಿಪ್ಪಣಿ : 'ಕಾರ್ಯಯುಕ್ತಿಯಿಂದ' ಎಂದರೆ - ನಾಟಕಕಾರನು ನಾಟಕದ ಮೊದಲಲ್ಲಿರುವ ವಿಷಯದ ಪ್ರಾಮುಖ್ಯದ ಮೇಲೆ, ಅಂಕವನ್ನೊ ಅಥವಾ ವಿಷ್ಕಂಭವನ್ನೊ ಯೋಜಿಸತಕ್ಕದ್ದು.

## ೩೩. ಆದಿಯಲ್ಲಿ ವಿಷ್ಕಂಭಯೋಜನೆ :

**ಅಪೇಕ್ಷಿತಂ ಪರಿತ್ಯಜ್ಯ ನೀರಸಂ ವಸ್ತುವಿಸ್ತರಮ್ ॥ ೨೮ ॥**
**ಯದಾ ಸಂದರ್ಶಯೇಚ್ಛೇಷಂ ಕುರ್ಯಾದ್ವಿಷ್ಕಂಭಕಂ ತದಾ ।**

ಅನು : [ನಾಟಕದ ಆರಂಭದ ಕಥೆಯಲ್ಲಿ] ವಸ್ತು ವಿಸ್ತಾರವಾಗಿದ್ದು ರಸವಿಹೀನವಾಗಿದ್ದಾಗ ಅದರಲ್ಲಿ [ಬಿಟ್ಟುಬಿಡಬೇಕೆಂದು] ಇಚ್ಛೆಯಾದ ಭಾಗಗಳನ್ನು ತ್ಯಜಿಸಿ ಉಳಿದುದನ್ನು ವಿಷ್ಕಂಭಕದಲ್ಲಿ ಯೋಜಿಸಿ ತೋರಿಸತಕ್ಕದ್ದು.

ಟಿಪ್ಪಣಿ : ವಿಷ್ಕಂಭಕ ಲಕ್ಷಣಕ್ಕೆ ೧-೧೧೬, ೧೧೭ ನೋಡಿ.

ಹೋಲಿಕೆ = ಸಾ.ದ. : ೬-೬೧, ೬೨.

## ೩೪. ಆದಿಯಲ್ಲಿ ಅಂಕಯೋಜನೆ :

**ಯದಾ ತು ಸರಸಂ ವಸ್ತು ಮೂಲಾದೇವ ಪ್ರವರ್ತತೇ ॥ ೨೯ ॥**
**ಆದಾವೇವ ತದಾಂಕಃ ಸ್ಯಾದಾಮುಖಾಕ್ಷೇಪಸಂಶ್ರಯಃ ।**

ಅನು : [ಮೇಲೆ ಹೇಳಿದಂತಲ್ಲದೆ] ಒಮ್ಮೆ ವಸ್ತುವು ಮೊದಲಲ್ಲಿಯೇ ರಸಪೂರ್ಣವಾಗಿ ಆರಂಭವಾಗುವುದಾದರೆ, ಆಗ [ನಾಟಕದ] ಆರಂಭದಲ್ಲಿಯೇ ಅಂಕವನ್ನು [ಯೋಜಿಸತಕ್ಕದ್ದು ಮತ್ತು ಆ ಅಂಕವು] 'ಆಮುಖ'ವನ್ನುಳ್ಳುದಾಗಿ [ಇರುವಂತೆ] ಯೋಜಿಸತಕ್ಕದ್ದು.

ಟಿಪ್ಪಣಿ : 'ಆಮುಖ'ದ ವಿವರಗಳಿಗೆ ೩-೮ ನೋಡಿ.

ಹೋಲಿಕೆ = ಸಾ.ದ. : ೬-೬೨, ೬೩.

# ಅಂಕಲಕ್ಷಣ

## ೩೫. ಅಂಕದ ಸಂಕ್ಷೇಪಲಕ್ಷಣ :

**ಪ್ರತ್ಯಕ್ಷನೇತೃಚರಿತೋ ಬಿಂದುವ್ಯಾಪ್ತಿಪುರಸ್ಕೃತಃ ॥ ೩೦ ॥**
**ಅಂಕೋ ನಾನಾಪ್ರಕಾರಾರ್ಥಸಂವಿಧಾನರಸಾಶ್ರಯಃ ।**

ಅನು : 'ಅಂಕ'ವು ನಾಯಕನ ಚರಿತ್ರೆಯನ್ನು ಪ್ರತ್ಯಕ್ಷವಾಗಿ[ತೋರಿ]ಸುತ್ತದೆ; ಬಿಂದುವಿನ ಪ್ರಸಾರದಿಂದ ಕೂಡಿರುತ್ತದೆ; ಬಹುಬಗೆಯ ಅರ್ಥಸಂವಿಧಾನ ರಸಗಳಿಗೆ ಆಶ್ರಯವಾಗಿರುತ್ತದೆ.

ವ್ಯಾಖ್ಯೆ : 'ಅಂಕ'ದಲ್ಲಿ ರಂಗದ ಮೇಲೆ ನಾಯಕನ ವ್ಯಾಪಾರವು ಸಾಕ್ಷಾತ್ತಾಗಿ ತೋರುವಂತಿರುತ್ತದೆ; 'ಬಿಂದು'ವು [ಅಂಕದ] ಪರಿಮಿತಿಯೊಳಗೆ ಹರಡಿರುತ್ತದೆ; ಅನೇಕ ಪ್ರಯೋಜನಗಳಿಗೆ ಸಂವಿಧಾನಕ್ಕೆ ಮತ್ತು ರಸಗಳಿಗೆ ಆಶ್ರಯರೂಪವಾಗಿರುತ್ತದೆ. [ಹೀಗೆ ನಾಯಕವ್ಯಾಪಾರ ಅರ್ಥಬಿಂದು ರಸಗಳಿಗೆ ಆಶ್ರಯವಾಗಿರುವುದರಿಂದ ಅಥವಾ ಅವುಗಳ ಸಂಮಿಲನಕ್ಕೆ ಕಾರಣವಾಗಿರುವುದರಿಂದ – 'ಅಂಕ' ಎಂಬ ಹೆಸರು.] ಉತ್ಸಂಗ (ಆಶ್ರಯ) ಎಂಬುದರ ಹೋಲಿಕೆಯಿಂದ 'ಅಂಕ' ಎಂಬ ಹೆಸರು.

ಟಿಪ್ಪಣಿ : ಬಿಂದುಲಕ್ಷಣಕ್ಕೆ ೧-೨೫ ನೋಡಿ. 'ಅಂಕ'ದ ಇತರ ವಿವರಗಳಿಗೆ ೩-೪೧ ಮತ್ತು ೪೨ ನೋಡಿ.

ಹೋಲಿಕೆ = ನಾ.ಶಾ. : ೨೦-೧೪ರಿಂದ ಮುಂದೆ; ಸಾ.ದ. : ೬-೧೨ರಿಂದ ೧೬; ಪ್ರತಾಪ : ೩-೨೪.

# ರಸ ಮತ್ತು ಅದರ ಬಳಕೆ

## ೩೬. ರಸಪರಿಪೋಷಣ :

**ಅನುಭಾವವಿಭಾವಾಭ್ಯಾಂ ಸ್ಥಾಯಿನಾ ವ್ಯಭಿಚಾರಿಭಿಃ ॥ ೩೧ ॥**
**ಗೃಹೀತಮುಕ್ತೈಃ ಕರ್ತವ್ಯಮಂಗಿನಃ ಪರಿಪೋಷಣಮ್ ।**

ಅನು : ಅನುಭಾವ ವಿಭಾವಗಳಿಂದಲೂ ಸ್ಥಾಯಿ[ಭಾವ] ವ್ಯಭಿಚಾರಿ[ಭಾವ]ಗಳಿಂದಲೂ, ಹಿಡಿದು ಬಿಟ್ಟು [ಎಂದರೆ, ಮೇಲಿನವುಗಳಲ್ಲಿ ಯಾವುದು ಯಾವ ಸಂದರ್ಭದಲ್ಲಿ ಆವಶ್ಯಕವೊ ಆಗ ಅದನ್ನು ಹಿಡಿದು ಅದರ ಅಗತ್ಯ ಮುಗಿದೊಡನೆ ಬಿಟ್ಟು], ಪ್ರಧಾನ[ರಸ]ದ ಪರಿಪೋಷಣೆಯನ್ನು ಮಾಡತಕ್ಕದ್ದು.

ವ್ಯಾಖ್ಯೆ : ಮೇಲಿನ ಕಾರಿಕೆಯಲ್ಲಿ ಅಂಗಿ(ಪ್ರಧಾನ)ರಸದ ಪರಿಪೋಷಣೆ ಮಾಡುವುದಕ್ಕೆ [ಅನುಭಾವ ವಿಭಾವ ವ್ಯಭಿಚಾರಿಗಳ ಕೂಡ] ಸ್ಥಾಯಿಭಾವವನ್ನೂ ಬಳಸಿಕೊಳ್ಳತಕ್ಕದ್ದೆಂದು ಹೇಳಿದೆ. ಅಂಗಿರಸಕ್ಕೆ ಮೂಲವಾಗಿ ಅಂಗಿಸ್ಥಾಯಿಭಾವವೊಂದು ಇದ್ದೇ ತೀರುತ್ತದೆ. ಅದನ್ನು ಪರಿಪೋಷಿಸಲು ಸ್ಥಾಯಿಭಾವವನ್ನು ಬಳಸಿಕೊಳ್ಳಬೇಕು. ಎಂದರೆ, ಪ್ರಧಾನ ಸ್ಥಾಯಿಯಲ್ಲದೆ ಮತ್ತೊಂದು ಸ್ಥಾಯಿಯನ್ನು ಬಳಸಿಕೊಳ್ಳಬೇಕೆಂದು ಅರ್ಥ. [ಆಗ ಅಲ್ಲಿ ಪ್ರಧಾನಸ್ಥಾಯಿಭಾವವೊಂದರ ಪರಿಪೋಷಣೆಗೆ, ಮತ್ತೊಂದು ಸ್ಥಾಯಿಭಾವವು ಅಂಗವಾಗಿ ಬರುತ್ತದೆ.] ['ಹಿಡಿದುಬಿಟ್ಟು' ಎಂಬ ಮಾತಿಗೆ ಅರ್ಥ ಇದು : ಯಾವುದಾದರೊಂದು ಭಾವ ಇರುವಾಗ,ಮತ್ತೊಂದನ್ನು ಹಿಡಿಯುವುದಕ್ಕೆ ಮೊದಲಿನದನ್ನು ಬಿಡತಕ್ಕದ್ದು ಆವಶ್ಯಕ. ಇಲ್ಲದಿದ್ದರೆ ಮೊದಲು ಇದ್ದದ್ದು ಮತ್ತು ಅನಂತರ ತಂದದ್ದು ಎರಡೂ ಬೆರೆತುಹೋಗುತ್ತವೆ.] ಭಾವಮಿಶ್ರಣವಾಗದಿರಲೆಂದು 'ಹಿಡಿದುಬಿಟ್ಟು' (ಗೃಹೀತಮುಕ್ತಃ) ಎಂದು ಹೇಳಿದೆ.

ಟಿಪ್ಪಣಿ : ಅನುಭಾವ ವಿಭಾವ ಸ್ಥಾಯಿಭಾವ ವ್ಯಭಿಚಾರಿಭಾವಗಳ ವಿವರಣೆಗೆ ೪-೧, ೮, ೪೩, ೫೪-ನೋಡಿ.

## ೩೭. ವಸ್ತುರಸಗಳ ಹೊಂದಿಕೆ :

ನ ಚಾತಿರಸತೋ ವಸ್ತು ದೂರಂ ವಿಚ್ಛಿನ್ನತಾಂ ನಯೇತ್ ॥ ೩೨ ॥
ರಸಂ ವಾ ನ ತಿರೋದಧ್ಯಾದ್ವಸ್ತ್ವಲಂಕಾರಲಕ್ಷಣೈಃ ।

ಅನು : [ಕಥಾ]ವಸ್ತುವು ಕಡಿದು ದೂರ ಹೋಗುವಷ್ಟು ಹೆಚ್ಚಾಗಿ ರಸ[ದ ಪರಿಪೋಷಣೆಯನ್ನು] ಎಳೆಯಬಾರದು ಅಥವಾ [ನಾಟಕದ] ವಸ್ತು ಅಲಂಕಾರ ಲಕ್ಷಣಗಳಿಂದ ರಸವನ್ನು ಮುಚ್ಚಿಬಿಡಬಾರದು.

ವ್ಯಾಖ್ಯೆ : ವಸ್ತು ಅಲಂಕಾರ ಲಕ್ಷಣಗಳಿಂದ ಎಂದರೆ, ಕಥೆ ಸಂಧಿ ಅಂಗ ಉಪಮೆ ಮುಂತಾದ ಭೂಷಣಗಳಿಂದ ಎಂದು ಅರ್ಥ.

ಟಿಪ್ಪಣಿ : ಈ ಭಾಗ ಸಾ.ದ.ದಲ್ಲಿ [೬-೬೪ರ ಮೂಲ ವ್ಯಾಖ್ಯೆ] ಉದ್ಧೃತವಾಗಿದೆ.

## ೩೮. ಪ್ರಧಾನರಸನಿರ್ದೇಶನ :

ಏಕೋ ರಸೋಽಂಗೀಕರ್ತವ್ಯೋ ವೀರಃ ಶೃಂಗಾರ ಏವ ವಾ ॥ ೩೩ ॥
ಅಂಗಮನ್ಯೇ ರಸಾಃ ಸರ್ವೇ ಕುರ್ಯಾನ್ನಿರ್ವಹಣೇಽದ್ಭುತಮ್ ।

ಅನು : [ನಾಟಕದಲ್ಲಿ] ವೀರ ಅಥವಾ ಶೃಂಗಾರ [ಇವೆರಡರಲ್ಲಿ ಯಾವುದಾದರೂ] ಒಂದನ್ನೇ ಪ್ರಧಾನ[ರಸ]ವನ್ನಾಗಿ ಮಾಡತಕ್ಕದ್ದು. ಉಳಿದೆಲ್ಲ ರಸಗಳೂ ಅಂಗ[ರಸಗಳಾಗಿ ಮಾತ್ರ ಬರಬಹುದು]. 'ನಿರ್ವಹಣ'[ಸಂಧಿ]ಯಲ್ಲಿ ಅದ್ಭುತ[ರಸ]ವನ್ನು ಯೋಜಿಸ ತಕ್ಕದ್ದು.

ವ್ಯಾಖ್ಯೆ : ಹಿಂದೆ [೩೬ನೇ ಖಂಡದಲ್ಲಿ] ಪ್ರಧಾನರಸವಲ್ಲದ ಬೇರೆ ರಸ ಅಂಗವಾಗಿ ಬರತಕ್ಕದ್ದು ಎಂದು ಹೇಳಿದೆ. ಈ ಕಾರಿಕೆಯಲ್ಲಿ, 'ಉಳಿದ ರಸಗಳು ಅಂಗವಾಗಿ ಬರಬಹುದು' ಎಂದು ಪುನಃ ಹೇಳುವ ಆವಶ್ಯಕತೆಯೇನು? – ಎಂದು ಪ್ರಶ್ನಿಸಿದರೆ, ಅದಕ್ಕೆ ಸಮಾಧಾನ : ಹಿಂದೆ ಹೇಳಿದ 'ಸ್ಥಾಯಿ' ಅಥವಾ 'ರಸ'ವು ತನಗೆ ಸಂಬಂಧಿಸಿದ ಅನುಭಾವ ವಿಭಾವ ವ್ಯಭಿಚಾರಿ ಭಾವಗಳಿಂದ ಕೂಡಿಕೊಂಡು, ಸ್ಥಾಯಿಸ್ವರೂಪದಲ್ಲೆ ಬರುತ್ತದೆ. ಇಲ್ಲಿ ಹೇಳಿದ 'ಸ್ಥಾಯಿ'ಯು ಅನುಭಾವ ಇತ್ಯಾದಿಗಳೊಡನೆ ಕೂಡಿಕೊಳ್ಳದೆ ಕೇವಲ ಭಾವವಾಗಿ ಬಂದು ಹೋಗುತ್ತದೆ. ಆದ್ದರಿಂದ ಇಲ್ಲಿ ಬರುವ ಸ್ಥಾಯಿಭಾವವು ಕೂಡ ವ್ಯಭಿಚಾರಿಭಾವವಾಗಿಯೇ ಉಳಿಯುತ್ತದೆ. ಆದ್ದರಿಂದ ಹಿಂದೆ ಹೇಳಿದ್ದು : ಪೂರ್ಣ ಸ್ಥಾಯಿಗೆ ಅಂಗತ್ವ; ಇಲ್ಲಿ ಹೇಳಿರುವುದು ವ್ಯಭಿಚಾರಿ ರೂಪದ ಸ್ಥಾಯಿಗೆ ಅಂಗತ್ವ.

ಟಿಪ್ಪಣಿ : ಧನಂಜಯ ಧನಿಕರಿಬ್ಬರೂ ಶಾಂತರಸವನ್ನು ಒಪ್ಪುವುದಿಲ್ಲವೆಂಬ ಅಂಶ ಗಮನಿಸತಕ್ಕದ್ದು. (ವಿವರಗಳಿಗೆ ನಾಲ್ಕನೆಯ ಪ್ರಕಾಶ ನೋಡಿ.) 'ಶೃಂಗಾರ'ದ ವಿವರಣೆಗೆ ೪-೫೭, 'ವೀರ'ಕ್ಕೆ ೪-೭೯, 'ಅದ್ಭುತ'ಕ್ಕೆ ೪-೮೫ ಮತ್ತು 'ನಿರ್ವಹಣಸಂಧಿ'ಗೆ ೧-೯೭ ನೋಡಿ.

ಹೋಲಿಕೆ = ಪ್ರತಾಪ : ೩-೪.

# ಅನಿರ್ದೇಶ್ಯಗಳು

## ೩೯. ಅಂಕದಲ್ಲಿ ಅನಿರ್ದೇಶ್ಯಗಳು :

ದೂರಾಧ್ವಾನಂ ವಧಂ ಯುದ್ಧಂ ರಾಜ್ಯದೇಶಾದಿವಿಪ್ಲವಮ್ ॥ ೩೪ ॥

ಸಂರೋಧಂ ಭೋಜನಂ ಸ್ನಾನಂ ಸುರತಂ ಚಾನುಲೇಪನಮ್ ।
[1]ಅಂಬರ[1] ಗ್ರಹಣಾದೀನಿ ಪ್ರತ್ಯಕ್ಷಾಣಿ ನ ನಿರ್ದಿಶೇತ್ ॥ ೩೫ ॥

ಅನು : ದೂರಮಾರ್ಗ[ಗಮನ], ವಧೆ, ಯುದ್ಧ, ರಾಜ್ಯ ದೇಶ ಮುಂತಾದವುಗಳಲ್ಲಿನ ವಿಪ್ಲವ, ಮುತ್ತಿಗೆ, ಭೋಜನ, ಸ್ನಾನ, ಸುರತ, ಅನುಲೇಪನ(ಮೆಯ್ಗೆ ಸುಗಂಧ ದ್ರವ್ಯಗಳನ್ನು ಹಚ್ಚಿಕೊಳ್ಳುವುದು ಮುಂತಾದ ಶೃಂಗಾರಕಾರ್ಯಗಳು), ವಸ್ತ್ರಧಾರಣೆ-ಮುಂತಾದವುಗಳನ್ನು ಪ್ರತ್ಯಕ್ಷವಾಗಿ [ಅಂಕದಲ್ಲಿ] ತೋರಿಸಕೂಡದು.

ವ್ಯಾಖ್ಯೆ : ಮೇಲಿನವುಗಳನ್ನು 'ಅಂಕ'ಗಳಲ್ಲಿ ಯಾವಾಗಲೂ ತರಬಾರದು; ಅವುಗಳನ್ನು 'ಪ್ರವೇಶಕ'ಗಳಲ್ಲಿ ಮಾತ್ರವೇ ಸೂಚಿಸಬಹುದು.

ಟಿಪ್ಪಣಿ : 'ಪ್ರವೇಶಕ'ದ ಲಕ್ಷಣಕ್ಕೆ ೧-೧೧೮, 'ಅನಿರ್ದೇಶ್ಯವಸ್ತು'ಗಳ ಸಾಮಾನ್ಯ ವಿವರಣಕ್ಕೆ ೧-೧೧೩, ೧೧೪ ನೋಡಿ.

'ದೂರಾಧ್ವಾನಂ' (ದೂರ ಮಾರ್ಗ) ಎಂಬುದಕ್ಕೆ ಬದಲಾಗಿ ಸಾ.ದ.ದಲ್ಲಿ 'ದೂರಾಹ್ವಾನ' (ದೂರದಿಂದ ಕೂಗುವುದು) ಎಂದಿದೆ.

ಹೋಲಿಕೆ = ನಾ.ಶಾ. : ೨೦-೨೨, ೨೩; ಸಾ.ದ. : ೬-೧೬ರಿಂದ ೧೯.

## ೪೦. ಸರ್ವಥಾ ಅನಿರ್ದೇಶ್ಯ ಮತ್ತು ನಿರ್ದೇಶ್ಯ:

ನಾಧಿಕಾರಿವಧಂ ಕ್ವಾಪಿ ತ್ಯಾಜ್ಯಮಾವಶ್ಯಕಂ ನ ಚ ।

ಅನು : ಅಧಿಕಾರಿಯ [ಎಂದರೆ, ನಾಟಕದ ನಾಯಕನ] ವಧೆಯನ್ನು ಎಲ್ಲಿಯೂ ಕೂಡ [ತರಬಾರದು ಅಥವಾ ಸೂಚಿಸಲೂಬಾರದು] ಮತ್ತು [ಯಾವ ವಿವರವನ್ನಾಗಲೀ] ಅವಶ್ಯಕವಾದದ್ದನ್ನು ಬಿಡಕೂಡದು.

ವ್ಯಾಖ್ಯೆ : ಅಧಿಕೃತನಾಯಕನ ವಧೆಯನ್ನು ಪ್ರವೇಶಿಕಾದಿಗಳಲ್ಲಿ ಕೂಡ ಸೂಚಿಸಬಾರದು. ಆವಶ್ಯಕವಾದದ್ದನ್ನು ಎಂದರೆ, ದೇವಪಿತೃಕಾರ್ಯಾದಿಗಳನ್ನು ಕೂಡ ಆವಶ್ಯಕವಾದ ಕೆಲವೆಡೆಗಳಲ್ಲಿ ಮಾತ್ರ ಮಾಡತಕ್ಕದ್ದು.

ಟಿಪ್ಪಣಿ : ವಸ್ತು ನಾಯಕ ಹಾಗೂ ರಸ ಇವುಗಳ ದೃಷ್ಟಿಯಿಂದ ಅತ್ಯಗತ್ಯವಾಗಿದ್ದಲ್ಲಿ, ಕೆಲವೊಮ್ಮೆ, ಅನಿರ್ದೇಶ್ಯಗಳನ್ನೂ ತೋರಿಸಬಹುದೆಂದು ಇಲ್ಲಿನ ಅರ್ಥ. ಯಾವುದಾದರೊಂದು ವರ ಇತ್ಯಾದಿಯಿಂದ ನಾಯಕನು ಪುನಃ ಬದುಕುವುದಾದರೆ ಆತನ ಸಾವನ್ನು ನಾಟಕದಲ್ಲಿ ತೋರಿಸಬಹುದೆಂದು- ನಮ್ಮೆದುರಿರುವ ಅನೇಕ ಉದಾಹರಣೆಗಳಿಂದ- ತೋರಿಬರುತ್ತದೆ. [ನಾಗಾನಂದ ೫., ನೋಡಿ.]

ಹೋಲಿಕೆ = ನಾ.ಶಾ. : ೨೦-೨೩; ಸಾ.ದ : ೬-೬೩, ೬೪.

---

೧ ಪಾಠ : 'ಅಸ್ತ್ರಸ್ಯ'.

# ಅಂಕರಚನೆ ಮತ್ತು ನಾಟಕದ ಅಂಕಸಂಖ್ಯೆ

## ೪೧. ಅಂಕರಚನೆಯ ರೀತಿ–೧ :

ಏಕಾಹಾಚರಿ೧ತೈಕಾರ್ಥಮಿ೧ತ್ಥಮಾಸನ್ನನಾಯಕಮ್ ॥ ೩೬ ॥
ಪಾತ್ರೈಸ್ತ್ರಿಚತುರೈರಂಕಂ ತೇಷಾಮಂತೇಽಸ್ಯ ನಿರ್ಗಮಃ ।

ಅನು : ಅಂಕದಲ್ಲಿ ಒಂದೇ ದಿನದ ಚರಿತ್ರೆ (ಕಥೆ), ಒಂದೇ ಪ್ರಯೋಜನ, ಆಸನ್ನನಾದ ನಾಯಕ ( ಸಮೀಪದಲ್ಲಿರುವ ನಾಯಕ, ಎಂದರೆ, ಅಂಕದಲ್ಲಿ ಕಥಾನಾಯಕನು ಇರಲೇ ಬೇಕು) [ಇರತಕ್ಕದ್ದು]; [ಅಂಕದಲ್ಲಿ ಬರತಕ್ಕ] ಪಾತ್ರಗಳು ಮೂರು [ಅಥವಾ] ನಾಲ್ಕು; ಅಂಕದ ಕೊನೆಯಲ್ಲಿ ಅವರು [ಎಂದರೆ, ಪಾತ್ರಗಳು] ನಿಷ್ಕ್ರಮಿಸತಕ್ಕದ್ದು.

ವ್ಯಾಖ್ಯೆ : ಒಂದು ದಿನದಲ್ಲಿ ನಡೆಯುವ [ಘಟನೆ]ಯಿಂದ, ಒಂದೇ ಪ್ರಯೋಜನಕ್ಕಾಗಿ, ನಾಯಕನನ್ನು ಹೊಂದಿ, ಹಲವು ಪಾತ್ರಗಳಿಂದ ಕೂಡಿ 'ಅಂಕ'ವಾಗತಕ್ಕದ್ದು. ಅಂಕದ ಕೊನೆಯಲ್ಲಿ ಪಾತ್ರಗಳೆಲ್ಲವೂ ನಿರ್ಗಮಿಸಬೇಕಾದದ್ದು ಆವಶ್ಯಕ.

ಟಿಪ್ಪಣಿ : 'ಅಂಕ'ವನ್ನು ಕುರಿತ ಇನ್ನು ಕೆಲವು ವಿಷಯಗಳು ೩-೩೫ರಲ್ಲಿ ಬಂದಿವೆ.

ಹೋಲಿಕೆ = ನಾ.ಶಾ. : ೨೦-೨೪, ೨೫; ಸಾ.ದ. : ೬-೧೫.

## ೪೨. ಅಂಕರಚನೆಯ ರೀತಿ– ೨ :

ಪತಾಕಾಸ್ಥಾನಕಾನ್ಯತ್ರ ಬಿಂದುರಂತೇ ಚ ಬೀಜವತ್ ॥ ೩೭ ॥
ಏವಮಂಕಾಃ ಪ್ರಕರ್ತವ್ಯಾಃ ಪ್ರವೇಶಾದಿಪುರಸ್ಕೃತಾಃ॥

ಅನು : ಅಲ್ಲಿ [ಎಂದರೆ, ಅಂಕದಲ್ಲಿ] 'ಪತಾಕಾಸ್ಥಾನಕ'ಗಳನ್ನು, ಬಿಂದುವನ್ನು ಮತ್ತು ಅಂತ್ಯದಲ್ಲಿ ಬೀಜದ ಪರಾಮರ್ಶೆಯನ್ನು [ಯೋಜಿಸತಕ್ಕದ್ದು;] ಅಂಕಗಳನ್ನು ಈ ರೀತಿಯಲ್ಲಿ, 'ಪ್ರವೇಶಕ' ಮುಂತಾದವುಗಳಿಂದ ಕೂಡಿಕೊಂಡುದಾಗಿ, ಚೆನ್ನಾಗಿ ರಚಿಸತಕ್ಕದ್ದು.

ಟಿಪ್ಪಣಿ : 'ಪತಾಕಾಸ್ಥಾನಕ'ಕ್ಕೆ ೧-೨೨, 'ಬೀಜ'ಕ್ಕೆ ೧-೨೫, 'ಬಿಂದು'ವಿಗೆ ೧-೨೬ ಮತ್ತು 'ಪ್ರವೇಶಕ'ಕ್ಕೆ ೧-೧೧೮ ನೋಡಿ.

## ೪೩. ನಾಟಕದಲ್ಲಿ ಅಂಕಸಂಖ್ಯೆ :

ಪಂಚಾಂಕಮೇತದವರಂ ದಶಾಂಕಂ ನಾಟಕಂ ಪರಮ್ ॥ ೩೮ ॥

ಅನು : ಐದು ಅಂಕಗಳಿರುವ ನಾಟಕ ಸಾಮಾನ್ಯ; ಹತ್ತು ಅಂಕಗಳಿದ್ದರೆ ಶ್ರೇಷ್ಠ.

ಟಿಪ್ಪಣಿ : ಐದರಿಂದ ಹತ್ತರವರೆಗೆ ಅಂಕಗಳಿರುವ ನಾಟಕಗಳು ಸಾಮಾನ್ಯವಾಗಿವೆ. ಹತ್ತಕ್ಕೂ ಮೀರಿದ ಅಂಕಗಳಿರುವ ನಾಟಕಗಳುಂಟು. 'ಹನೂಮನ್ನಾಟಕ'ದಲ್ಲಿ ಹದಿನಾಲ್ಕು ಅಂಕಗಳಿವೆ. ಹತ್ತು ಅಥವಾ ಅದಕ್ಕಿಂತ ಮಿಗಿಲಾದ ಅಂಕಗಳುಳ್ಳ ನಾಟಕಕ್ಕೆ 'ಮಹಾನಾಟಕ' ಎನ್ನುತ್ತಾರೆ.

ಹೋಲಿಕೆ = ನಾ.ಶಾ. : ೨೦-೫೮; ಸಾ.ದ. : ೬-೨೨೪.

---

೧ ಪಾಠ : ತೈ। ಕಾರ್ಯಮ್.

# ಪ್ರಕರಣಲಕ್ಷಣ

## ೪೪. ಪ್ರಕರಣದ ವೃತ್ತ ಮತ್ತು ನಾಯಕ :

ಅಥ ಪ್ರಕರಣೇ ವೃತ್ತಮುತ್ಪಾದ್ಯಂ ಲೋಕಸಂಶ್ರಯಮ್ ।
ಅಮಾತ್ಯವಿಪ್ರವಣಿಜಾಮೇಕಂ ಕುರ್ಯಾಚ್ಚ ನಾಯಕಮ್ ॥ ३೯ ॥

ಧೀರಪ್ರಶಾಂತಂ[1]ಸಾಪಾಯಂ[1] ಧರ್ಮಕಾಮಾರ್ಥತತ್ಪರಮ್।
ಶೇಷಂ ನಾಟಕವತ್ಸಂಧಿಪ್ರವೇಶಕರಸಾಧಿಕಮ್ ॥ ೪೦ ॥

ಅನು : ಅನಂತರ [ಬರುವ] 'ಪ್ರಕರಣ'ದಲ್ಲಿ ಲೋಕವನ್ನು ಆಶ್ರಯಿಸಿ [ಎಂದರೆ, ಜಗತ್ತಿನಲ್ಲಿ ಸಾಮಾನ್ಯವಾಗಿ ನಡೆಯಬಹುದಾದ ಕಥೆಯನ್ನು ಆಶ್ರಯಿಸಿ] [ಕವಿಯಿಂದ] ಕಲ್ಪಿತವಾದ (ಉತ್ಪಾದ್ಯ) ವಸ್ತು [ಇರತಕ್ಕದ್ದು] ; ಮತ್ತು [ಅದರಲ್ಲಿ] ಮಂತ್ರಿ ಬ್ರಾಹ್ಮಣ ವೈಶ್ಯ–ಇವರಲ್ಲಿ ಒಬ್ಬನನ್ನು ನಾಯಕನನ್ನಾಗಿ ಮಾಡತಕ್ಕದ್ದು; [ಆ ನಾಯಕನು] ಧರ್ಮ ಕಾಮ ಅರ್ಥಗಳಲ್ಲಿ ಆಸಕ್ತಿಯುಳ್ಳ, [ಜೀವನದಲ್ಲಿ ಹಲವಾರು] ಕಷ್ಟಗಳು ತುಂಬಿರುವ 'ಧೀರಪ್ರಶಾಂತ' [ವರ್ಗದವ] ನಾಗಿರತಕ್ಕದ್ದು. ಸಂಧಿ ಪ್ರವೇಶಕ ರಸ ಮುಂತಾದ ಉಳಿದ ವಿಷಯಗಳು ನಾಟಕದಂತೆಯೇ [ಯೋಜಿತವಾಗತಕ್ಕದ್ದು].

ವ್ಯಾಖ್ಯೆ : ಪ್ರಕರಣದಲ್ಲಿನ ಇತಿವೃತ್ತವು ಕವಿಬುದ್ಧಿಯಿಂದ ರಚಿತವಾದದ್ದು. ಲೋಕ ಸಂಶ್ರಯವಾಗಿರುವುದರಿಂದ ನಾಯಕನು ಅನುದಾತ್ತನಾಗಿರಬಹುದು. ಧೀರಪ್ರಶಾಂತವರ್ಗದ ಅಮಾತ್ಯ ಮುಂತಾದ ಯಾವನೊಬ್ಬನು ನಾಯಕನಾಗಿರಬಹುದು. ವಿಪತ್ತುಗಳ ಮೂಲಕ ಆತನಿಗೆ ಫಲಲಾಭವಾಗತಕ್ಕದ್ದು. ಮಂತ್ರಿ ಎಂದರೆ ಅಮಾತ್ಯ, ಸಾರ್ಥವಾಹ ಎಂದರೆ ವೈಶ್ಯ.

ಟಿಪ್ಪಣಿ : ಧರ್ಮಾರ್ಥಕಾಮಗಳಿಗೆ 'ತ್ರಿವರ್ಗ' ಎಂಬ ಹೆಸರಿದೆ (ನೋಡಿ : ೧–೨೪). 'ನಾಟಕ'ವನ್ನು ಕುರಿತು ಹೇಳಿರುವ ಇತರ ವಿವರಗಳೆಲ್ಲ 'ಪ್ರಕರಣ'ಕ್ಕೂ ಅನ್ವಯಿಸುತ್ತವೆ.

ಹೋಲಿಕೆ = ನಾ.ಶಾ. : ೨೦–೪೯ರಿಂದ ೫३; ಸಾ.ದ. : ६–೨೨೪, ೨೨೫; ಪ್ರತಾಪ : ३–३೫.

## ೪೫. ಪ್ರಕರಣದ ನಾಯಿಕೆ :

ನಾಯಿಕಾ ತು ದ್ವಿಧಾ ನೇತುಃ ಕುಲಸ್ತ್ರೀ ಗಣಿಕಾ ತಥಾ ।
ಕ್ವಚಿದೇಕೈವ ಕುಲಜಾ ವೇಶ್ಯಾ ಕ್ವಾಪಿ ದ್ವಯಂ ಕ್ವಚಿತ್ ॥ ೪೧ ॥

ಕುಲಜಾಭ್ಯಂತರಾ ಬಾಹ್ಯಾ ವೇಶ್ಯಾ ನಾತಿಕ್ರಮೋಽನಯೋಃ ।
ಆಭಿಃ ಪ್ರಕರಣಂ ತ್ರೇಧಾ ಸಂಕೀರ್ಣಂ ಧೂರ್ತಸಂಕುಲಮ್ ॥ ೪೨ ॥

ಅನು : [ಪ್ರಕರಣದಲ್ಲಿ] ನಾಯಿಕೆಯು ಎರಡು ಬಗೆ : ನಾಯಕನ [ಪತ್ನಿಯಾಗಿರುವ] ಕುಲಸ್ತ್ರೀ ಮತ್ತು ವೇಶ್ಯೆ; ಹಲವೊಮ್ಮೆ ಕುಲಸ್ತ್ರೀಯೊಬ್ಬಳೇ, ಹಲವೊಮ್ಮೆ ವೇಶ್ಯೆ ಮಾತ್ರವೇ

---

[1] ಪಾಠ : ಸೋಪಾಯಂ.

[ಪ್ರಕರಣದಲ್ಲಿ ನಾಯಿಕೆಯಾಗಿರಬಹುದು; ಮತ್ತು] ಕೆಲವೊಮ್ಮೆ [ಕುಲಸ್ತ್ರೀ ಗಣಿಕೆ] ಇಬ್ಬರೂ [ನಾಯಿಕೆಯರಾಗಿರಬಹುದು]. ಕುಲಸ್ತ್ರೀಯು ಆಂತರ್ಯದಲ್ಲಿ [ಎಂದರೆ, ನಾಯಕನ ಮನೆಯ ಒಳಗೆ ಇರುವಂಥವಳು ಮತ್ತು] ವೇಶ್ಯೆಯು ಬಾಹ್ಯದಲ್ಲಿ [ಎಂದರೆ, ನಾಯಕನ ಮನೆಯ ಹೊರಗೆ ಇರುವಂಥವಳು]; ಇದರಲ್ಲಿ ಹೆಚ್ಚುಕಡಿಮೆಯಾಗಬಾರದು. [ಮೇಲೆ ಹೇಳಿದ ಕುಲಜಾನಾಯಿಕಾ, ವೇಶ್ಯಾನಾಯಿಕಾ, ಉಭಯನಾಯಿಕಾ] ಇವರುಗಳಿಂದ 'ಪ್ರಕರಣವು' ಮೂರು ವಿಧವಾಗಿದೆ. ಧೂರ್ತ ಜನಗಳಿಂದ ಕೂಡಿದ್ದರೆ [ಪ್ರಕರಣವು] 'ಸಂಕೀರ್ಣ' [ಎನ್ನಿಸಿಕೊಳ್ಳುತ್ತದೆ].

ವ್ಯಾಖ್ಯೆ : ವೇಶಃ = ಭೃತಿಃ (ಭರಣೆ, ಪೋಷಣೆ); ಭರಣಪೋಷಣಗಳೇ ಜೀವನವಾಗಿರುವಂಥವಳು ವೇಶ್ಯೆ. ವೇಶ್ಯಾವಿಶೇಷ ಗಣಿಕೆ. [ವಾತ್ಸ್ಯಾಯನನ ಕಾಮಸೂತ್ರ ೩, ಪು. ೪೧ರಲ್ಲಿ] ಅದನ್ನು ಕುರಿತು ಹೀಗೆ ಹೇಳಿದೆ :

> 'ಆಭಿರಭ್ಯರ್ಥಿತಾ ವೇಶ್ಯಾ ರೂಪಶೀಲಗುಣಾನ್ವಿತಾ ।
> ಲಭತೇ ಗಣಿಕಾ ಶಬ್ದಂ ಸ್ಥಾನಂ ಚ ಜನಸಂಸದಿ ॥'

[ಜನಗಳಿಂದ ಆಹ್ವಾನಿಸಲ್ಪಡುವ ರೂಪಶೀಲಗುಣಗಳಿಂದ ಕೂಡಿದ ವೇಶ್ಯೆಗೆ 'ಗಣಿಕಾ' ಎಂಬ ಹೆಸರು; ಆಕೆಗೆ ಸಭಾಸ್ಥಾನಗಳಲ್ಲಿ ಮನ್ನಣೆಯುಂಟು.]

ಕುಲಜಾ ವೇಶ್ಯಾ ಉಭಯರು – ಹೀಗೆ ನಾಯಿಕಾಭೇದದಿಂದ ಪ್ರಕರಣದಲ್ಲಿ ಮೂರು ವಿಧ. ಉದಾ: –ವೇಶ್ಯೆ : ತರಂಗದತ್ತಾದಲ್ಲಿ [ಪ್ರಕ್ಷಿಪ್ತರೂಪಕ]; ಕುಲಜೆ ಪುಷ್ಪದೂಷಿತಕದಲ್ಲಿ [ಪ್ರಕ್ಷಿಪ್ತ ರೂಪಕ; ಸಾ.ದ. : (೬–೨೨೭)ರ ಮೂಲ ವ್ಯಾಖ್ಯೆಯಲ್ಲಿ 'ಪುಷ್ಪಭೂಷಿತ' ಎಂಬ ರೂಪಕವೊಂದರ ಹೆಸರು ಉದ್ಧೃತವಾಗಿದೆ.] ಎರಡೂ : ಮೃಚ್ಛಕಟಿಕದಲ್ಲಿ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦–೫೪ ರಿಂದ ಮುಂದೆ ; ಸಾ.ದ. : ೬–೨೨೬, ೨೨೭

## ನಾಟಿಕಾಲಕ್ಷಣ

### ೪೬. ನಾಟಿಕಾಲಕ್ಷಣ ಹೇಳಿರುವ ಉದ್ದೇಶ :

> ಲಕ್ಷ್ಯತೇ ನಾಟಿಕಾಪ್ಯತ್ರ ಸಂಕೀರ್ಣಾನ್ಯನಿವೃತ್ತಯೇ ।

ಅನು : ಇಲ್ಲಿ, [ನಾಟಿಕೆಯಂತೆಯೇ ಇರುವ] ಬೇರೆಯವುಗಳನ್ನು [ಎಂದರೆ, ದಶರೂಪಕಗಳಲ್ಲದೆ ಬೇರೆಯವಾದ ಹದಿನೆಂಟು ಉಪರೂಪಕಗಳನ್ನು] ನಿವಾರಿಸುವ ಸಲುವಾಗಿ ಸಂಕೀರ್ಣವಾದ 'ನಾಟಿಕಾ' [ಲಕ್ಷಣ]ವನ್ನು ಕೂಡ ಲಕ್ಷಿಸಿದೆ.

ವ್ಯಾಖ್ಯೆ : 'ಅನಯೋಶ್ಚ ಬಂಧಯೋಗಾದೇಕೋ ಭೇದಃ ಪ್ರಯೋಕ್ತೃಭಿರ್ಜ್ಞೇಯಃ ।
ಪ್ರಖ್ಯಾತಸ್ತ್ವಿತರೋ ವಾ ನಾಟೀಸಂಜ್ಞಾಶ್ರಿತೇ ಕಾವ್ಯೇ ॥'

[ನಾ.ಶಾ. : ೨೦–೬೦, ೬೧]

–ಈ ಭಾರತೀಯ ಶ್ಲೋಕವನ್ನು ಆಧರಿಸಿ, ಕೆಲವರು–'ನಾಟಕ'ದ ಒಂದು ಭೇದವಾದ 'ನಾಟಿಕಾ' ಎಂಬುದು ಪ್ರಖ್ಯಾತವಾಗಿದೆ; ಹಾಗೆಯೇ 'ಪ್ರಕರಣಿಕಾ' ಎಂಬುದೂ ನಾಟ್ಯದಲ್ಲಿ ಒಂದು ಭೇದ, ಅಪ್ರಖ್ಯಾತವಾದ ಭೇದ; ಇವೆರಡಕ್ಕೂ 'ನಾಟೀ' ಎಂಬ ಸಂಜ್ಞೆಯಿದೆ–ಎನ್ನುತ್ತಾರೆ. ಭಾರತೀಯ ಶ್ಲೋಕವನ್ನು ಹೀಗೆ ಅರ್ಥಮಾಡಿ ಕೆಲವರು 'ಪ್ರಕರಣಿಕಾ'ವನ್ನೂ ಮಾನ್ಯ ಮಾಡುತ್ತಾರೆ. ಅದು ತಪ್ಪು. ಏಕೆಂದರೆ –ಭರತಮುನಿ 'ಪ್ರಕರಣಿಕಾ'ದ ಉದ್ದೇಶವನ್ನಾಗಲಿ ಅದರ ಲಕ್ಷಣಗಳನ್ನಾಗಲಿ ಹೆಸರಿಸಿಲ್ಲ; ಮತ್ತು ಪ್ರಕರಣ ಪ್ರಕರಣಿಕಾಗಳ ನಡುವೆ ಯಾವ ಭೇದವೂ ಇಲ್ಲ. ವಸ್ತು ರಸ ನಾಯಕ– ಈ ಮೂರರಲ್ಲೂ ಪ್ರಕರಣ ಪ್ರಕರಣಿಕಾಗಳಲ್ಲಿ ಭೇದವಿಲ್ಲ. ಇನ್ನು,

ಭರತಮುನಿ ನಾಟಿಕಾಲಕ್ಷಣವನ್ನು ಏಕೆ ಹೇಳಿದ್ದಾನೆ ಎಂದರೆ -ನಾಟಿಕೆಯಲ್ಲಿ [ನಾಟಕ ಪ್ರಕರಣಗಳೆರಡರ] ಲಕ್ಷಣಗಳು ಸಂಕೀರ್ಣವಾಗಿವೆ. ಹೀಗೆ ಲಕ್ಷಣಗಳ ಸಂಕರದಿಂದ ಹುಟ್ಟಿದ್ದು ನಾಟಿಕೆ. ಲಕ್ಷಣಗಳ ಸಂಕರದಿಂದ ಹುಟ್ಟಿರುವ [ಉಪರೂಪಕ ಮುಂತಾದ]ವುಗಳಲ್ಲಿ 'ನಾಟಿಕೆ'ಯನ್ನು ಮಾತ್ರವೇ ಪ್ರಯೋಗಿಸತಕ್ಕದ್ದು [ನಾಟಿಕೆಯೇ ಉಪರೂಪಕಗಳಲ್ಲೆಲ್ಲ ಪ್ರಯೋಗಾರ್ಹವಾದದ್ದು]ಎಂಬುದನ್ನು ಸೂಚಿಸುವ ಸಲುವಾಗಿ ಭರತ ಅದೊಂದರ ಲಕ್ಷಣವನ್ನೇ ಎತ್ತಿಹೇಳಿದ್ದಾನೆ.

ಟಿಪ್ಪಣಿ : 'ದಶರೂಪಕ'ಗಳಲ್ಲಿ ; 'ನಾಟಿಕಾ' ಸೇರಿಲ್ಲ. ಅದೊಂದು ಉಪರೂಪಕಭೇದ. ಭರತಮುನಿಯೂ ದಶರೂಪಕಗಳ ಜೊತೆಯಲ್ಲಿ ನಾಟಿಕೆಯನ್ನು ಲಕ್ಷಿಸಿದ್ದಾನೆ. ನಾಟಿಕೆಯು ನಾಟಕ ಮತ್ತು ಪ್ರಕರಣಗಳೆರಡರ ಅಂಶಗಳನ್ನೂ ಕೂಡಿರುವುದೆಂಬ ಆಧಾರದಮೇಲೆ 'ನಾಟಿಕಾ'ಲಕ್ಷಣವನ್ನು ಇಲ್ಲಿ ಪ್ರಸ್ತಾಪಿಸಿದೆ. ನೋಡಿ : ೧-೧೧ರ ಟಿಪ್ಪಣಿ.

## ೪೭. ವಸ್ತು ನಾಯಕ ರಸ :

**ತತ್ರ, ವಸ್ತು ಪ್ರಕರಣಾನ್ನಾಟಕಾನ್ನಾಯಕೋ ನೃಪಃ**
**ಪ್ರಖ್ಯಾತೋ ಧೀರಲಲಿತಃ ಶೃಂಗಾರೋಽಂಗೀ ಸಲಕ್ಷಣಃ ।**

ಅನು : ಅಲ್ಲಿ [ಎಂದರೆ, 'ನಾಟಿಕಾ'ದಲ್ಲಿ] ವಸ್ತುವು 'ಪ್ರಕರಣ'ದಲ್ಲಿನಂತೆ [ಕವಿಕಲ್ಪಿತ ವಾದದ್ದು]; ನಾಯಕನು 'ನಾಟಕದ'ಲ್ಲಿರುವಂತೆ ಪ್ರಖ್ಯಾತನೂ ಧೀರಲಲಿತನೂ ಆದ ರಾಜ; ಎಲ್ಲ ಲಕ್ಷಣಗಳಿಂದ ಕೂಡಿದ ಶೃಂಗಾರವೂ [ಇಲ್ಲಿ]ಪ್ರಧಾನ [ರಸವಾಗಿರ ತಕ್ಕದ್ದು].

ವ್ಯಾಖ್ಯೆ : ಕವಿಕಲ್ಪಿತವಾದ ಇತಿವೃತ್ತವು ಪ್ರಕರಣಧರ್ಮ, ಪ್ರಖ್ಯಾತನೃಪನಾಯಕತ್ವ ಮುಂತಾದವು ನಾಟಕಧರ್ಮ. ಹೀಗೆ ಕೂಡ, ನಾಟಕ ಪ್ರಕರಣ ನಾಟಿಕಾ- ಈ ಮೂರು ಭೇದಗಳಲ್ಲಿ ಅಡಕವಾಗದೆ 'ಪ್ರಕರಣಿಕೆ'ಗೆ ಉಳಿಯಬಲ್ಲ ವಸ್ತು ಇತ್ಯಾದಿಗಳು ಬೇರೆ ಇಲ್ಲ. ಆದಕಾರಣ 'ಪ್ರಕರಣಿಕಾ' ಎಂಬ ಭೇದಕ್ಕೆ ಅಸ್ತಿತ್ವವೇ ಇಲ್ಲ. ಇನ್ನು ಅಂಕ ಪಾತ್ರಗಳ ಸಂಖ್ಯೆ ಅನುಸರಿಸಿ ಭೇದ ಹೇಳುವುದಾದರೆ, ಅಂತಹ ಭೇದಗಳು ಅಸಂಖ್ಯವಾದಾವು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦ -೬೦ರಿಂದ ಮುಂದೆ; ಸಾ.ದ. : ೬-೨೬೯ರಿಂದ ಮುಂದೆ. (ಈ ಹೋಲಿಕೆ ಮುಂದಿನ ಐದು ಖಂಡಗಳಿಗೂ ಅನ್ವಯಿಸುತ್ತದೆ.)

## ೪೮. ನಾಟಿಕೆಯ ವಿಶೇಷ :

**ಸ್ತ್ರೀಪ್ರಾಯಚತುರಂಕಾದಿಭೇದಕಂ ಯದಿ ಚೇಷ್ಯತೇ ॥ ೪೪ ॥**
**ಏಕದ್ವಿತ್ರ್ಯಂಕಪಾತ್ರಾದಿಭೇದೇನಾನಂತರೂಪತಾ ।**

ಅನು : ಸ್ತ್ರೀಯರು ಬಹಳವಾಗಿದ್ದು ನಾಲ್ಕು ಅಂಕ ಮುಂತಾಗಿ ಭೇದವುಳ್ಳದ್ದೆಂದು ಹೇಳಿರುವ [ನಾಟಿಕಾದ]ಲ್ಲಿ ಒಂದು ಎರಡು ಮೂರು [-ಹೀಗೆ ಕೂಡ] ಅಂಕಗಳಿರ ಬಹುದು, ಪಾತ್ರ ಇತ್ಯಾದಿಗಳ [ಸಂಖ್ಯೆಯ]ಲ್ಲಿ ಭೇದವಿರಬಹುದು. [ಆದಕಾರಣ ನಾಟಿಕಾದಲ್ಲಿ ] ಅನೇಕಾನೇಕ ರೂಪಗಳುಂಟಾಗುತ್ತವೆ.

ವ್ಯಾಖ್ಯೆ : 'ನಾಟಿಕಾ' ಎಂಬ ಸ್ತ್ರೀಸಂಜ್ಞೆಯ ಹೆಸರಿಗೆ ಸಮನಾಗಿ ಅದರಲ್ಲಿ ಸ್ತ್ರೀಪಾತ್ರಗಳಿಗೆ ವಿಶೇಷ ಪ್ರಾಧಾನ್ಯ ಉಂಟು. ಅದರಲ್ಲಿ ಕೈಶಿಕೀವೃತ್ತಿ; ನರ್ಮಾದಿ ನಾಲ್ಕು ಅಂಗಗಳು. ನಾಟಿಕಾದಲ್ಲಿ ಅವಮರ್ಶ ಸಂಧಿಯು ಬಹು ಸ್ವಲ್ಪವಾಗಿರುವ ಕಾರಣ, ನಾಲ್ಕು ಅಂಕಗಳು ಸರಿಹೊಂದುತ್ತವೆ.

ಟಿಪ್ಪಣಿ : 'ನಾಟಿಕಾ'ದಲ್ಲಿ ಅಂಕಭೇದ ಪಾತ್ರಾದಿ ಭೇದಗಳಿಂದ ಅನೇಕಾನೇಕ ರೂಪಗಳು ಉಂಟಾಗಬಹುದು; ಅವುಗಳೊಂದೊಂದಕ್ಕೂ ಪ್ರಕರಣಿಕಾ ಮುಂತಾಗಿ ಹೆಸರು ಹಚ್ಚುತ್ತ ಹೋಗಬೇಕಿಲ್ಲ- ಎಂಬುದು ಈ ಕಾರಿಕೆಯ ತಾತ್ಪರ್ಯ. ಕೈಶಿಕೀವೃತ್ತಿ ಮತ್ತು ಅದರ ಅಂಗಗಳಿಗೆ ೨-೭೭ರಿಂದ ೮೨ ನೋಡಿ.

## ೪೯. ಅಲ್ಲಿ ಜ್ಯೇಷ್ಠಾನಾಯಿಕೆ :

**ದೇವೀ ತತ್ರ ಭವೇಜ್ಜ್ಯೇಷ್ಠಾ ಪ್ರಗಲ್ಭಾ ನೃಪವಂಶಜಾ ॥ ೪೫ ॥**

**ಗಂಭೀರಾ ಮಾನಿನೀ ಕೃಚ್ಛ್ರಾತ್ತದ್ವಶಾನ್ನೇತೃ೧ಸಂಗಮಃ ।೧**

ಅನು : ಅಲ್ಲಿ [ಎಂದರೆ, ನಾಟಿಕೆಯಲ್ಲಿ] ಜ್ಯೇಷ್ಠಾ [ನಾಯಿಕೆಯು]ರಾಣಿಯೂ, ಪ್ರಗಲ್ಭೆಯೂ, ರಾಜವಂಶಸ್ಥಳೂ, ಗಂಭೀರೆಯೂ, ಮಾನವತಿಯೂ ಆಗಿರುತ್ತಾಳೆ. [ಕನಿಷ್ಠಾ ನಾಯಿಕೆಯ ಸಂಗಡ] ನಾಯಕನ ಸಮಾಗಮವು ಕಷ್ಟಸಾಧ್ಯವಾಗುತ್ತದೆ [ಮತ್ತು ಆ ಸಮಾಗಮವು] ಈಕೆಯ [ಎಂದರೆ, ಜ್ಯೇಷ್ಠೆಯ] ಅಧೀನದಲ್ಲಿರುತ್ತದೆ.

ಟಿಪ್ಪಣಿ : 'ನಾಟಿಕಾ'ದಲ್ಲಿ ಜ್ಯೇಷ್ಠಾ ಕನಿಷ್ಠಾನಾಯಿಕೆಯರಿಬ್ಬರೂ ಇರುತ್ತಾರೆ. ಕನಿಷ್ಠೆಯ ಪ್ರಾಪ್ತಿಯಲ್ಲಿ ನಾಯಕನಿಗೆ ಜ್ಯೇಷ್ಠೆಯಿಂದ ಕಷ್ಟವೊದಗುತ್ತದೆ. ಅನಂತರ ಜ್ಯೇಷ್ಠೆಯ ಸಮ್ಮತಿಯಿಂದಲೇ ಕನಿಷ್ಠೆಯ ಸಮಾಗಮ ವಾಗುತ್ತದೆ.

ಜ್ಯೇಷ್ಠಾ ಕನಿಷ್ಠಾಭೇದಕ್ಕೆ ೨-೩೧ ಮತ್ತು ಪ್ರಗಲ್ಭಾಲಕ್ಷಣಕ್ಕೆ ೨-೨೯ ನೋಡಿ.

## ೫೦. ಅಲ್ಲಿ ಕನಿಷ್ಠಾನಾಯಿಕೆ :

**೨ನಾಯಿಕಾ೨ತಾದೃಶೀ ಮುಗ್ಧಾ ದಿವ್ಯಾ ಚಾತಿಮನೋಹರಾ ॥ ೪೬ ॥**

ಅನು : [ಕನಿಷ್ಠಾ] ನಾಯಿಕೆಯು ಅವಳಂತೆಯೆ [ಎಂದರೆ, ಜ್ಯೇಷ್ಠೆಯಂತೆಯೇ ರಾಜವಂಶಜಳಾಗಿ] ಇರುವವಳೂ, ಮುಗ್ಧೆಯೂ, ದಿವ್ಯಳೂ ಮತ್ತು ತುಂಬ ಮನೋಹರಳೂ [ಆಗಿರುತ್ತಾಳೆ].

ವ್ಯಾಖ್ಯೆ : ಅವಳಂತೆಯೇ ಎಂದರೆ ನೃಪವಂಶಜಳಾಗಿರುವವಳು; ಈಕೆ ನಾಯಕನಿಗೆ ಮುಂದೆ ಪ್ರಾಪ್ತಳಾಗತಕ್ಕವಳು.

ಟಿಪ್ಪಣಿ : ಮುಗ್ಧಾಲಕ್ಷಣಕ್ಕೆ ೨-೨೬ ನೋಡಿ.

## ೫೧. ನಾಯಕ-ನಾಯಿಕಾ ಸಂಬಂಧ :

**ಅಂತಃಪುರಾದಿಸಂಬಂಧಾದಾಸನ್ನಾ ಶ್ರುತಿದರ್ಶನೈಃ ।**

**ಅನುರಾಗೋ ನವಾವಸ್ಥೋ ನೇತುಸ್ತಸ್ಯಾಂ ಯಥೋತ್ತರಂ ॥ ೪೭ ॥**

**ನೇತಾ ತತ್ರ ಪ್ರವರ್ತೇತ ದೇವೀತ್ರಾಸೇನ ಶಂಕಿತಃ ।**

---

೧ ಪಾಠ : ಸಂಗಮೇ ।

೨ ಪಾಠ : ಪ್ರಾಪ್ಯಾನ್ಯ ।

ಅನು : [ನಾಯಿಕೆಯು] ಅಂತಃಪುರ ಮುಂತಾದವುಗಳ ಸಂಬಂಧದಿಂದ [ನಾಯಕನಿಗೆ ನಿತ್ಯವೂ] ಕಾಣಕೇಳುವಂತೆ ಹತ್ತಿರವಿರುವುದರಿಂದ, ನಾಯಕನಲ್ಲಿ ಉತ್ತರೋತ್ತರವಾಗಿ ಅನುರಾಗದ ನೂತನ ಅವಸ್ಥೆಯು [ಉಂಟಾಗುತ್ತದೆ]. ಅಲ್ಲಿ ನಾಯಕನು ದೇವಿಯ [ಎಂದರೆ, ಜ್ಯೇಷ್ಠೆಯ] ಭಯದಿಂದ ಸಂಶಯಚಿತ್ತನಾಗಿ ನಡೆದುಕೊಳ್ಳುತ್ತಾನೆ.

ವ್ಯಾಖ್ಯೆ : ಮುಗ್ಧಳಾದ ಆ ನಾಯಿಕೆ ಅಂತಃಪುರದ ಮತ್ತು ಸಂಗೀತ ಮೊದಲಾದವುಗಳ ಸಂಬಂಧದಿಂದ ನಾಯಕನಿಗೆ ಹತ್ತಿರವಾಗಿರುತ್ತಾಳೆ. ಆದರಿಂದ ಬರುಬರುತ್ತ ಅವಳಲ್ಲಿ ನಾಯಕನ ಪ್ರೇಮವುಂಟಾಗುತ್ತದೆ ಮತ್ತು ಜ್ಯೇಷ್ಠೆಯ ಪ್ರತಿಬಂಧಕಗಳ ಒಳಗೊಳಗೇ ಬೆಳೆಯುತ್ತದೆ.

### ೫೨. ಕೈಶಿಕೀವೃತ್ತಿಯೋಜನೆ :

**ಕೈಶಿಕ್ಯಂಗೈಶ್ಚತುರ್ಭಿಶ್ಚ ಯುಕ್ತಾಂಕೈರಿವ ನಾಟಿಕಾ ॥ ೪೮ ॥**

ಅನು : ನಾಟಿಕೆಯಲ್ಲಿ ಕೈಶಿಕೀ[ವೃತ್ತಿ]ಯ ನಾಲ್ಕು ಅಂಗಗಳು [ಅದರ ನಾಲ್ಕು] ಅಂಕಗಳೊಡನೆ ಕೂಡಿರುವುದೆಂಬಂತೆ ಇರುತ್ತದೆ.

ವ್ಯಾಖ್ಯೆ : [ತನ್ನ ನಾಲ್ಕು ಅಂಕಗಳಲ್ಲಿ] ಕೈಶಿಕೀವೃತ್ತಿಯ ನಾಲ್ಕು ಅಂಗಗಳನ್ನು ಹೊಂದಿಸಿಕೊಂಡಿರುವುದು 'ನಾಟಿಕಾ'.

ಟಿಪ್ಪಣಿ : ನಾಟಿಕೆಯಲ್ಲಿ ನಾಲ್ಕು ಅಂಕಗಳು; ಒಂದೊಂದು ಅಂಕದಲ್ಲಿ ಕೈಶಿಕೀವೃತ್ತಿಯ ಒಂದೊಂದು ಅಂಗಗಳು ಯೋಜಿಸಲ್ಪಟ್ಟಿರುತ್ತವೆ. ಕೈಶಿಕೀ ಮತ್ತು ಅದರ ನಾಲ್ಕು ಅಂಗಗಳಿಗೆ ೨–೭೭ ರಿಂದ ೮೨ ನೋಡಿ.

## ಭಾಣದ ಲಕ್ಷಣ

### ೫೩. ಭಾಣದ ಮುಖ್ಯ ಲಕ್ಷಣಗಳು :

**ಬಾಣಸ್ತು ಧೂರ್ತಚರಿತಂ ಸ್ವಾನುಭೂತಂ ಪರೇಣ ವಾ ।**
**ಯತ್ರೋಪವರ್ಣಯೇದೇಕೋ ನಿಪುಣಃ ಪಂಡಿತೋ ವಿಟಃ ॥ ೪೯ ॥**

**ಸಂಬೋಧನೋಕ್ತಿಪ್ರತ್ಯುಕ್ತಿ ಕುರ್ಯಾದಾಕಾಶಭಾಷಿತೈಃ ।**
**ಸೂಚಯೇದ್ವೀರಶೃಂಗಾರೌ ಶೌರ್ಯಸೌಭಾಗ್ಯಸಂಸ್ತವೈಃ ॥ ೫೦ ॥**

**ಭೂಯಸಾ ಭಾರತೀ ವೃತ್ತಿರೇಕಾಂಕಂ ವಸ್ತು ಕಲ್ಪಿತಮ್ ।**
**ಮುಖನಿರ್ವಹಣೇ ಸಾಂಗೇ ಲಾಸ್ಯಾಂಗಾನಿ ದಶಾಪಿ ಚ. ॥ ೫೧ ॥**

ಅನು : ಚತುರನೂ ಬುದ್ಧಿವಂತನೂ ಆದ ವಿಟನೊಬ್ಬನಿಂದ ವರ್ಣಿಸಲ್ಪಡುವ, ತನ್ನ ಸ್ವಂತದ ಅಥವಾ ಬೇರೊಬ್ಬರ ಧೂರ್ತಚರಿತ್ರೆಯು 'ಭಾಣ'ವಾಗುತ್ತದೆ. [ಈ ರೂಪಕ ವಿಶೇಷದಲ್ಲಿ ಕೇವಲ ಒಂದೇ ಪಾತ್ರವಿರುವುದರಿಂದ] ಸಂಬೋಧನೆ [ಮತ್ತು] ಮಾತು ಮರುಮಾತುಗಳನ್ನು 'ಆಕಾಶಭಾಷಿತ'ದ ಮೂಲಕ ಮಾಡತಕ್ಕದ್ದು. [ಅಲ್ಲಿ, ಆ ಏಕಪಾತ್ರವು ಕಥಾನಾಯಕನ–ನಾಯಕ ತಾನೇ ಇರಬಹುದು ಅಥವಾ ಬೇರೆಯವನಿರಬಹುದು–]

ಶೌರ್ಯಸೌಭಾಗ್ಯಗಳನ್ನು ಹೊಗಳುತ್ತ ವೀರ ಶೃಂಗಾರ [ರಸ]ಗಳನ್ನು ಸೂಚಿಸತಕ್ಕದ್ದು. [ಭಾಣದಲ್ಲಿ] ವಿಶೇಷವಾಗಿ ಭಾರತೀವೃತ್ತಿ [ಇರತಕ್ಕದ್ದು]; ಅಂಕ ಒಂದೇ, ವಸ್ತುವು ಕಲ್ಪಿತವಾದದ್ದು. [ಭಾಣದಲ್ಲಿ] ಅಂಗಸಮೇತವಾದ 'ಮುಖ' [ಮತ್ತು] 'ನಿರ್ವಹಣ' [ಸಂಧಿಗಳೂ] ಮತ್ತು ಲಾಸ್ಯದ ಹತ್ತು ಅಂಗಗಳೂ [ಇರತಕ್ಕದ್ದು].

ವ್ಯಾಖ್ಯೆ : ಧೂರ್ತಚರಿತ ಎಂದರೆ ಚೋರರು ಜೂಜುಗಾರರು ಮುಂತಾದವರ ಕಥೆ; ವಿಟನೊಬ್ಬನೇ ತಾನು ಮಾಡಿದ ಅಥವಾ ಬೇರೆಯವನು ಮಾಡಿದ ಧೂರ್ತ ಕಥೆಯನ್ನು ಹೇಳಿಕೊಳ್ಳತಕ್ಕದ್ದು; ಭಾರತೀವೃತ್ತಿ ಪ್ರಧಾನ; ಒಂದೇ ಅಂಕ; ಮಾತು ಮರುಮಾತು ಮುಂತಾದವುಗಳನ್ನು 'ಆಕಾಶಭಾಷಿತ'ದ ಮೂಲಕ ನಡೆಸುತ್ತ [ಎಂದರೆ, ಏನನ್ನೊ ಕೇಳಿಸಿಕೊಂಡವನಂತೆ ಮಾತನಾಡುವುದು; ಅದಕ್ಕೆ ಉತ್ತರ ಬಂದಿತೆಂಬಂತೆ ಮತ್ತೆ ಮಾತನಾಡುವುದು-ಹೀಗೆ], [ಅವಕಾಶ ಕಡಿಮೆಯಾಗಿ] ರಸಗಳು ಅಸ್ಪಷ್ಟವಾಗುವ ಕಾರಣ ಶೌರ್ಯಸೌಭಾಗ್ಯಗಳ ವರ್ಣನೆಯಿಂದ ವೀರಶೃಂಗಾರಗಳನ್ನು ಸೂಚಿಸತಕ್ಕದ್ದು.

ಟಿಪ್ಪಣಿ : 'ಏಕಪಾತ್ರಾಭಿನಯ'ವು ಭಾಣದ ಮುಖ್ಯ ವೈಶಿಷ್ಟ್ಯ.

ವಿಟಲಕ್ಷಣಕ್ಕೆ ೨-೧೩, ಆಕಾಶಭಾಷಿತಕ್ಕೆ ೧-೧೨೮, ಭಾರತೀವೃತ್ತಿಗೆ ೩-೫ ನೋಡಿ. ಹತ್ತು ಲಾಸ್ಯಾಂಗಗಳಿಗೆ ಮುಂದಿನ ಖಂಡ ನೋಡಿ.

ಹೋಲಿಕೆ = ನಾ.ಶಾ. : ೨೦-೧೧೪, ೧೧೫; ಸಾ.ದ. : ೬-೨೨೭ ರಿಂದ ೨೩೦.

## ಲಾಸ್ಯಾಂಗಗಳು

### ೫೪. ಲಾಸ್ಯದ ಹತ್ತು ಅಂಗಗಳು :

**ಗೇಯಂ ಪದಂ ಸ್ಥಿತಂ ಪಾಠ್ಯಮಾಸೀನಂ ಪುಷ್ಪಗಂಡಿಕಾ ।**
**ಪ್ರಚ್ಛೇದಕಸ್ತ್ರಿಗೂಢಂ ಚ ಸೈಂಧವಾಖ್ಯಂ ದ್ವಿಗೂಢಕಮ್ ॥ ೫೨ ॥**

**ಉತ್ತಮೋತ್ತಮಕಂ೧ಚೈವ ಉಕ್ತ೧ಪ್ರತ್ಯುಕ್ತಮೇವ ಚ ।**
**ಲಾಸ್ಯೇ ದಶವಿಧಂ ಹ್ಯೇತದಂಗನಿರ್ದೇಶ೨ಕಲ್ಪನಮ್೨ ॥ ೫೩ ॥**

ಅನು : ಗೇಯಪದ, ಸ್ಥಿತ ಪಾಠ್ಯ, ಆಸೀನ [ಪಾಠ್ಯ], ಪುಷ್ಪಗಂಡಿಕಾ, ಪ್ರಚ್ಛೇದಕ, ತ್ರಿಗೂಢ, ಸೈಂಧವ, ದ್ವಿಗೂಢ, ಉತ್ತಮೋತ್ತಮಕ, ಉಕ್ತಪ್ರತ್ಯುಕ್ತ – ಹೀಗೆ ಲಾಸ್ಯದಲ್ಲಿ ಹತ್ತು ಅಂಗಗಳ ಲಕ್ಷಣಗಳು ಕಲ್ಪಿತವಾಗಿವೆ.

ಟಿಪ್ಪಣಿ: ನಾ.ಶಾ.ದಲ್ಲಿ [೨೦-೧೪೦ರಿಂದ ಮುಂದೆ] ಈ ಅಂಗಗಳಿಗೊಂದೊಂದಕ್ಕೂ ಲಕ್ಷಣಗಳನ್ನು ಹೇಳಲಾಗಿದೆ. ಸಾ.ದ.ದಲ್ಲೂ ಈ ಅಂಗಗಳನ್ನು ಹೇಳಿದ ಅನಂತರ ಲಕ್ಷಣಗಳನ್ನೂ ಹೇಳಿದೆ. ದ.ರೂ.ದಲ್ಲಿ ಹೆಸರಲ್ಲದೆ ಬೇರೆ ವಿವರಗಳನ್ನು ಹೇಳಿಲ್ಲ. ಈ ಲಾಸ್ಯಾಂಗಗಳ ಲಕ್ಷಣಕ್ಕೆ ಅನುಬಂಧ: ೧ನೋಡಿ.

ಹೋಲಿಕೆ = ನಾ.ಶಾ. : ೨೦-೧೩೮, ೧೩೯; ಸಾ.ದ. : ೬-೨೧೨ ರಿಂದ ೨೧೪.

---

೧ ಪಾಠ : ಚಾನ್ಯದುಕ್ತಂ ।
೨ ಪಾಠ : ಲಕ್ಷಣಮ್ ।

# ಪ್ರಹಸನಲಕ್ಷಣ

## ೫೫. ಪ್ರಹಸನ ಪ್ರಕಾರಗಳು :

**ತದ್ವತ್ಪ್ರಹಸನಂ ತ್ರೇಧಾ ಶುದ್ಧವೈಕೃತಸಂಕರೈಃ**

ಅನುಃ ಅದರಂತೆಯೇ [ಎಂದರೆ, ಭಾಣದಂತೆಯೇ] ಇರುವ ಪ್ರಹಸನದಲ್ಲಿ, ಶುದ್ಧ ವಿಕೃತ ಸಂಕರ ಎಂದು ಮೂರು ವಿಧ.

ವ್ಯಾಖ್ಯೆ: ವಸ್ತು ಸಂಧಿ ಸಂಧ್ಯಂಗ ಲಾಸ್ಯ ಮೊದಲಾದವುಗಳಲ್ಲಿ ಪ್ರಹಸನವು ಭಾಣವನ್ನು ಹೋಲುತ್ತದೆ. ಆದ್ದರಿಂದಲೇ 'ಅದರಂತೆಯೇ' ಎಂದು ಹೇಳಲಾಗಿದೆ.

ಟಿಪ್ಪಣಿ: ಹೋಲಿಕೆ = ನಾ.ಶಾ.: ೨೦–೧೦೭ ರಿಂದ ೧೧೧; ಸಾ.ದ.: ೬–೨೬೪, ೨೬೫; ಪ್ರತಾಪ: ೩–೩೮.

## ೫೬. ಶುದ್ಧಪ್ರಹಸನಲಕ್ಷಣ :

**ಪಾಖಂಡಿವಿಪ್ರಪ್ರಭೃತಿಚೇಟಚೇಟೀವಿಟಾಕುಲಮ್ ॥ ೫೪ ॥**

**ಚೇಷ್ಟಿತಂ [1]ವೇಷಭಾಷಾಭಿಃ[1] ಶುದ್ಧಂ ಹಾಸ್ಯವಚೋಽನ್ವಿತಮ್ ।**

ಅನು : [ಪ್ರಹಸನವು] ಪಾಖಂಡಿಗಳು ಬ್ರಾಹ್ಮಣರು ಮುಂತಾದವರು, ಚೇಟಚೇಟಿಯರು (ಸೇವಕಸೇವಕಿಯರು) ವಿಟರುಗಳಿಂದ ಕೂಡಿದ್ದು, [ಅದಕ್ಕೆ ಹೊಂದುವ] ವೇಷಭಾಷೆಗಳ ಚೇಷ್ಟೆಯಿಂದ [ಮತ್ತು] ಹಾಸ್ಯಕರವಾದ ಮಾತುಗಳಿಂದ ತುಂಬಿದ್ದರೆ 'ಶುದ್ಧ'.

ವ್ಯಾಖ್ಯೆ : ಪಾಖಂಡಿಗಳು = ಶಾಕ್ಯನಿರ್ಗ್ರಂಥರು [ಎಂದರೆ, ಬೌದ್ಧಜೈನಕುಲದ ಕಪಟ ಸಂನ್ಯಾಸಿಗಳು]. ವಿಪ್ರರು ತುಂಬ ಸರಳರು ಇಲ್ಲವೆ ಜಾತಿಯ ಹೆಸರಿನಲ್ಲೆ ಜೀವಿಸುವವರು. ಪ್ರಹಸನದಲ್ಲಿ ಹಾಸ್ಯರಸದ ವಿಭಾವವಿರುತ್ತದೆ. ಅದಕ್ಕೆ ಹೊಂದಿದ ಚೇಟಚೇಟೀ ಮುಂತಾದವರ ವ್ಯವಹಾರವು ಪ್ರಹಸನದಲ್ಲಿದ್ದರೆ ಅದು 'ಶುದ್ಧ' ಎನ್ನಿಸಿಕೊಳ್ಳುತ್ತದೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦–೧೦೮, ೧೦೯; ಸಾ.ದ. : ೬–೨೬೬; ಪ್ರತಾಪ : ೩–೩೯.

## ೫೭. ವಿಕೃತ, ಸಂಕೀರ್ಣ ಪ್ರಹಸನಗಳು :

**ಕಾಮುಕಾದಿವಚೋವೇಷೈಃ ಷಂಢಕಂಚುಕಿತಾಪಸೈಃ ॥ ೫೫ ॥**

**ವಿಕೃತಂ ಸಂಕರಾದ್ವೀಥ್ಯಾ ಸಂಕೀರ್ಣಂ ಧೂರ್ತಸಂಕುಲಮ್ ।**

ಅನು : ನಪುಂಸಕರು ಕಂಚುಕಿಗಳು ತಾಪಸರು [–ಈ ಪಾತ್ರಗಳು] ಕಾಮುಕರೇ ಮುಂತಾದವರ ವೇಷಭಾಷೆಗಳ ಮೂಲಕ [ತೋರಿಸಲ್ಪಟ್ಟರೆ ಅದು] 'ವಿಕೃತ' [ಪ್ರಹಸನ]. ಧೂರ್ತ ಪಾತ್ರಗಳಿಂದ ಕೂಡಿ [ಆ ವಿಷಯದಲ್ಲಿ] 'ವೀಥಿ'ಯೊಡನೆ ಬೆರೆತುಕೊಂಡರೆ [ಆ ಪ್ರಹಸನವು] 'ಸಂಕೀರ್ಣ'.

---

[1] ಪಾಠ : ವೇಷಭಾಷಾದಿ ಮತ್ತು ದೇಶಭಾಷಾದಿ.

ವ್ಯಾಖ್ಯೆ : ಷಂಢ ಕಂಚುಕಿ ತಾಪಸ ವೃದ್ಧ ಮುಂತಾದವರು ಕಾಮುಕಾದಿಗಳ,-ಎಂದರೆ ಭುಜಂಗ ಚಾರ ಭಟ ಮುಂತಾದವರ-ವೇಷಭಾಷೆಗಳನ್ನು ಅನುಕರಿಸಿದರೆ, ಆ ಅನುಕರಣೆ ಆಯಾ ಪಾತ್ರಗಳ ಸ್ವರೂಪಕ್ಕೆ ವಿರುದ್ಧವಾಗುತ್ತದೆ. ಅದು [ವಿಕಾರವಾಗಿ ತೋರಿ ಹಾಸ್ಯವನ್ನುಕ್ಕಿಸುವ ಕಾರಣ] 'ವಿಕೃತಪ್ರಹಸನ'. ವೀಥಿಯ ಅಂಗಗಳು ಯಾವ ಪ್ರಹಸನದಲ್ಲಿ ಬೆರತುಕೊಂಡಿರುತ್ತವೆಯೋ ಅಂಥ ಪ್ರಹಸನ 'ಸಂಕೀರ್ಣ'.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦-೧೪ ರಿಂದ ೧೧೧; ಸಾ.ದ. : ೬-೨೬೬ ರಿಂದ ೨೬೮; ಪ್ರತಾಪ : ೩-೪೦, ೪೧.

## ೫೮. ಪ್ರಹಸನದಲ್ಲಿ ರಸ :

**ರಸಸ್ತು ಭೂಯಸಾ ಕಾರ್ಯಃ ಷಡ್ವಿಧೋ ಹಾಸ್ಯ ಏವ ತು ॥ ೫೬ ॥**

ಅನು : [ಪ್ರಹಸನದಲ್ಲಿ] ಆರು ವಿಧವಾಗಿರುವ ಹಾಸ್ಯವನ್ನು ಮಾತ್ರವೇ ವಿಶೇಷ ರಸವನ್ನಾಗಿ ಯೋಜಿಸತಕ್ಕದ್ದು.

ಟಿಪ್ಪಣಿ : ಹಾಸ್ಯದ ಆರು ವಿಧಗಳು : ಸ್ಮಿತ, ಹಸಿತ, ವಿಹಸಿತ, ಉಪಹಸಿತ, ಅಪಹಸಿತ, ಅತಿಹಸಿತ. [ನೋಡಿ: ೪-೮೩.]

ಹೋಲಿಕೆ = ಪ್ರತಾಪ : ೩-೩೮.

# ಡಿಮದ ಲಕ್ಷಣ

## ೫೯. ಡಿಮದ ವಿಶೇಷ ಲಕ್ಷಣಗಳು :

**ಡಿಮೇ ವಸ್ತು ಪ್ರಸಿದ್ಧಂ ಸ್ಯಾದ್ವೃತ್ತಯಃ ಕೈಶಿಕೀಂ ವಿನಾ ।**
**ನೇತಾರೋ ದೇವಗಂಧರ್ವಯಕ್ಷರಕ್ಷೋಮಹೋರಗಾಃ ॥ ೫೭ ॥**

**ಭೂತಪ್ರೇತಪಿಶಾಚಾದ್ಯಾಃ ಷೋಡಶಾತ್ಯಂತಮುದ್ಧತಾಃ ।**
**ರಸೈರಹಾಸ್ಯಶೃಂಗಾರೈಃ ಷಡ್ಭಿರ್ದೀಪ್ತೈಃ ಸಮನ್ವಿತಃ ॥ ೫೮ ॥**

**ಮಾಯೇಂದ್ರಜಾಲಸಂಗ್ರಾಮಕ್ರೋಧೋದ್ಭ್ರಾಂತಾದಿಚೇಷ್ಟಿತೈಃ ।**
**ಚಂದ್ರಸೂರ್ಯೋಪರಾಗೈಶ್ಚ ನ್ಯಾಯ್ಯೇ ರೌದ್ರರಸೇಂಗಿನಿ ॥ ೫೯ ॥**

**ಚತುರಂಕಚತುಃಸಂಧಿರ್ನಿರ್ವಿಮರ್ಶೋ ಡಿಮಃ ಸ್ಮೃತಃ ।**

ಅನು : ಡಿಮದಲ್ಲಿ – ವಸ್ತುವು ಪ್ರಸಿದ್ಧವಾಗಿರತಕ್ಕದ್ದು; ಕೈಶಿಕಿಯನ್ನುಳಿದು ಇತರ ವೃತ್ತಿಗಳು [ಯೋಜಿತವಾಗತಕ್ಕದ್ದು]; ದೇವತೆಗಳು ಗಂಧರ್ವರು ಯಕ್ಷರು ರಾಕ್ಷಸರು ಮಹೋರಗರು ಭೂತಗಳು ಪ್ರೇತಗಳು ಪಿಶಾಚ ಮುಂತಾದವು– ಹೀಗೆ ಹದಿನಾರು [ರೀತಿಗಳಲ್ಲಿನ] ಅತ್ಯಂತ ಉದ್ಧತ ನಾಯಕ [ಇರುತ್ತಾನೆ]. [ಮತ್ತು ಡಿಮವು] ಮಾಯೆ ಇಂದ್ರಜಾಲ ಸಂಗ್ರಾಮ ಕೋಪ ಮುಂತಾದ ವ್ಯಾಪಾರಗಳಿಂದಲೂ ಸೂರ್ಯಗ್ರಹಣ ಚಂದ್ರಗ್ರಹಣಗಳಿಂದಲೂ ಕೂಡಿರುತ್ತದೆ. ಹಾಸ್ಯಶೃಂಗಾರಗಳನ್ನುಳಿದು ಇತರ ಆರು

ರಸಗಳಿಂದ ಉಜ್ವಲವಾಗಿರುತ್ತದೆ. [ಆದರೂ ಡಿಮದಲ್ಲಿ] ನ್ಯಾಯವಾಗಿ ರೌದ್ರವು ಪ್ರಧಾನ ರಸ. ಡಿಮಕ್ಕೆ ನಾಲ್ಕು ಅಂಕಗಳು [ಮತ್ತು] ನಾಲ್ಕು ಸಂಧಿಗಳು; [ಅದರಲ್ಲಿ] 'ವಿಮರ್ಶ' ಸಂಧಿ ಇರುವುದಿಲ್ಲ.

ವ್ಯಾಖ್ಯೆ : ಡಿಮ ಎಂದರೆ ಸಂಘಾತ (ಪೆಟ್ಟು). ನಾಯಕನ ಸಂಘಾತದ ವ್ಯಾಪಾರವಿರುವ ರೂಪಕವೇ ಡಿಮ. ಅಲ್ಲಿ ಕಥೆ ಇತಿಹಾಸಪ್ರಸಿದ್ಧವಾದದ್ದು. ವೃತ್ತಿಗಳು ಕೈಶಿಕೀಯನ್ನುಳಿದು [ಭಾರತೀ ಸಾತ್ವತೀ ಆರಭಟೀ–ಈ] ಮೂರು. ರಸಗಳು: ವೀರ ರೌದ್ರ ಬೀಭತ್ಸ ಅದ್ಭುತ ಕರುಣ ಭಯಾನಕ–ಈ ಆರು. ಪ್ರಧಾನ ರಸ ರೌದ್ರ. ವಿಮರ್ಶ ಸಂಧಿಯನ್ನುಳಿದು ಮುಖ ಪ್ರತಿಮುಖ ಗರ್ಭ ನಿರ್ವಹಣ – ಈ ನಾಲ್ಕು ಸಂಧಿಗಳು ಅಂಗಸಹಿತವಾಗಿ ಇರತಕ್ಕದ್ದು. ಪ್ರಸ್ತಾವನೆ ಮೊದಲಾದ ಇತರ ಅಂಶಗಳು ನಾಟಕದಂತೆಯೇ. 'ತ್ರಿಪುರದಾಹ'ದ ವಸ್ತುವನ್ನು ಹೋಲುವ ವಸ್ತುಗಳು ಡಿಮಕ್ಕೆ ಹೊಂದುವುದೆಂದು ಭರತಮುನಿ ಹೇಳಿದ್ದಾನೆ:

> 'ಇದಂ ತ್ರಿಪುರದಾಹೇ ತು ಲಕ್ಷಣಂ ಬ್ರಹ್ಮಣೋದಿತಮ್।
> ತತಸ್ತ್ರಿಪುರದಾಹಶ್ಚ ಡಿಮಸಂಜ್ಞಃ ಪ್ರಯೋಜಿತಃ ॥'

[...ಇದು 'ತ್ರಿಪುರದಾಹ'ದಲ್ಲಿ ಬ್ರಹ್ಮನು ಹೇಳಿದ ಲಕ್ಷಣ; ಅನಂತರ 'ಡಿಮ' ಎಂಬ ಹೆಸರುಳ್ಳ 'ತ್ರಿಪುರದಾಹ'ವು ಪ್ರಯೋಗಿಸಲ್ಪಟ್ಟಿತು.] (ನಾ.ಶಾ.ವಲ್ಲಿ [೪–೧೦] ಮೇಲೆ ಉದ್ಧೃತವಾದ ಶ್ಲೋಕದ ಎರಡನೆಯ ಸಾಲು ಮಾತ್ರ ದೊರೆಯುತ್ತದೆ.)

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦–೮೮ರಿಂದ ೯೩; ಸಾ.ದ. : ೬–೨೪೧ ರಿಂದ ೨೪೪; ಪ್ರತಾಪ : ೩–೪೨ ರಿಂದ ೪೪.

# ವ್ಯಾಯೋಗಲಕ್ಷಣ

## ೬೦. ವ್ಯಾಯೋಗದ ವಿಶಿಷ್ಟಲಕ್ಷಣಗಳು :

> **ಖ್ಯಾತೇತಿವೃತ್ತೋವ್ಯಾಯೋಗಃ ಖ್ಯಾತೋದ್ಧತನರಾಶ್ರಯಃ ॥ ೬೦ ॥**
> **ಹೀನೋ ಗರ್ಭವಿಮರ್ಶಾಭ್ಯಾಂ ದೀಪ್ತಾಃಸ್ಯುರ್ಡಿಮವದ್ರಸಾಃ ।**
> **ಅಸ್ತ್ರೀನಿಮಿತ್ತಸಂಗ್ರಾಮೋ ಜಾಮದಗ್ನ್ಯಜಯೇ ಯಥಾ ॥ ೬೧ ॥**
> **ಏಕಾಹಾಚರಿತೈಕಾಂಕೋ ವ್ಯಾಯೋಗೋ ಬಹುಭಿರ್ನರೈಃ ।**

ಅನು : ವ್ಯಾಯೋಗವು ಪ್ರಖ್ಯಾತವಾದ ಕಥೆ[ಯನ್ನುಳ್ಳದ್ದು]; ಪ್ರಖ್ಯಾತನಾದ ಉದ್ಧತ ಮನುಷ್ಯನನ್ನು ಆಶ್ರಯಿಸಿದ್ದು. ಗರ್ಭ[ಮತ್ತು]ವಿಮರ್ಶ[ಈ ಎರಡು] ಸಂಧಿಗಳು ಇರುವುದಿಲ್ಲ [ಎಂದರೆ, ಉಳಿದ ಮೂರು ಸಂಧಿಗಳು ಮಾತ್ರ ಇರತಕ್ಕದ್ದು]. 'ಡಿಮ' ದಂತೆಯೇ [ಹಾಸ್ಯಶೃಂಗಾರಗಳನ್ನುಳಿದು ಆರು] ರಸಗಳಿಂದ ಉಜ್ವಲವಾದದ್ದು. ಪರಶುರಾಮವಿಜಯದಂತೆ, ಸ್ತ್ರೀನಿಮಿತ್ತವಾಗಿಯಲ್ಲದೆ [ಬೇರೆ ಕಾರಣಗಳಿಗಾಗಿ ನಡೆಯುವ] ಯುದ್ಧ[ವನ್ನುಳ್ಳದ್ದು]. ವ್ಯಾಯೋಗದಲ್ಲಿ ಒಂದು ದಿನದ ಕಥೆ [ಇರುತ್ತದೆ ಮತ್ತು ಕೇವಲ] ಒಂದು ಅಂಕ [ಇರುತ್ತದೆ. ಮತ್ತು ಅಲ್ಲಿ] ಅನೇಕ ಮನುಷ್ಯರು [ಪಾತ್ರಗಳಾಗಿ ಇರತಕ್ಕದ್ದು].

ವ್ಯಾಖ್ಯೆ : 'ಅನೇಕ ಪುರುಷರಿಂದ ಯೋಜಿಸಲಾದದ್ದು' (ವ್ಯಾಯುಜ್ಯಂತೇಽಸ್ಮಿನ್ಬಹವಃ ಪುರುಷಾ ಇತಿ) – ಎಂಬ ವ್ಯುತ್ಪತ್ತಿಯಿಂದ 'ವ್ಯಾಯೋಗ'. ಅಲ್ಲಿ ರಸಗಳು, ಡಿಮದಂತೆಯೇ, ಹಾಸ್ಯಶೃಂಗಾರಗಳನ್ನುಳಿದ ಇತರ ಆರು.

ರಸಗಳು ವೃತ್ತಿಗಳನ್ನು ಆಶ್ರಯಿಸುತ್ತವೆ; ಆದ್ದರಿಂದ, ಬೇರೆಯಾಗಿ ಹೇಳಿರದಿದ್ದರೂ, ಇಲ್ಲಿ ವೃತ್ತಿಗಳು ಕೈಶಿಕೀಯನ್ನುಳಿದ ಇತರ ಮೂರು. [ಡಿಮದ ರಸವೇ ಇಲ್ಲಿಯೂ ರಸವೆಂದು ಹೇಳಿರುವ ಕಾರಣ ಅಲ್ಲಿನ ವೃತ್ತಿಗಳೇ ಇಲ್ಲಿಗೂ ಹೊಂದುತ್ತವೆ.] ಇಲ್ಲಿ ಯುದ್ಧ ಉಂಟು; ಅದಕ್ಕೆ ಕಾರಣ ಸ್ತ್ರೀಯಲ್ಲದೆ ಬೇರೆ ಯಾವುದಾದರೂ ಆಗಬಹುದು. ಉದಾ:–ಪರಶುರಾಮನು ತಂದೆಯ ವಧೆಯ ಕೋಪದಿಂದ ಸಹಸ್ರಾರ್ಜುನವಧೆಮಾಡುತ್ತಾನೆ.

ಟಿಪ್ಪಣಿ : ಹೋರಿಕೆ = ನಾ.ಶಾ. : ೨೦–೯೪ರಿಂದ ೯೭; ಸಾ.ದ. : ೬–೨೩೧ರಿಂದ ೨೩೩; ಪ್ರತಾಪ : ೩–೪೫.

# ಸಮವಕಾರಲಕ್ಷಣ

## ೬೧. ಸಮವಕಾರದ ಲಕ್ಷಣವಿಶೇಷ :

ಕಾರ್ಯಂ ಸಮವಕಾರೇಽಪಿ ಆಮುಖಂ ನಾಟಕಾದಿವತ್ ॥ ೬೨ ॥

ಖ್ಯಾತಂ ದೇವಾಸುರಂ ವಸ್ತು ನಿರ್ವಿಮರ್ಶಾಸ್ತು ಸಂಧಯಃ ।
ವೃತ್ತಯೋ ಮಂದಕೈಶಿಕ್ಯೋ ನೇತಾರೋ ದೇವದಾನವಾಃ ॥ ೬೩ ॥

ದ್ವಾದಶೋದಾತ್ತವಿಖ್ಯಾತಾಃ ಫಲಂ ತೇಷಾಂ ಪೃಥಕ್ಪೃಥಕ್ ।
ಬಹುವೀರರಸಾಃ ಸರ್ವೇ ಯದ್ವದಂಭೋಧಿಮಂಥನೇ ॥ ೬೪ ॥

ಅಂಕೈಸ್ತ್ರಿಭಿಸ್ತ್ರಿಕಪಟಸ್ತ್ರಿಶೃಂಗಾರಸ್ತ್ರಿವಿದ್ರವಃ ।
ದ್ವಿಸಂಧಿರಂಕಃ ಪ್ರಥಮಃ ಕಾರ್ಯೋ ದ್ವಾದಶ[೧]ನಾಲಿಕಃ[೧] ॥ ೬೫ ॥

ಚತುರ್ದ್ವಿ[೨]ನಾಲಿಕಾ[೨]ವಂತ್ಯೌ [೩]ನಾಲಿಕಾ[೩] ಘಟಿಕಾದ್ವಯಮ್ ।
ವಸ್ತುಸ್ವಭಾವದೈವಾರಿಕೃತಾಃ ಸ್ಯುಃ ಕಪಟಾಸ್ತ್ರಯಃ ॥ ೬೬ ॥

ನಗರೋಪರೋಧಯುದ್ಧೇ ವಾತಾಗ್ನ್ಯಾದಿಕ ವಿದ್ರವಾಃ ।
ಧರ್ಮಾರ್ಥಕಾಮೈಃ ಶೃಂಗಾರೋ ನಾತ್ರ ಬಿಂದುಪ್ರವೇಶಕೌ ॥ ೬೭ ॥

ವೀಥ್ಯಂಗಾನಿ ಯಥಾಲಾಭಂ ಕುರ್ಯಾತ್ಪ್ರಹಸನೇ ಯಥಾ ।

ಅನು : ಸಮವಕಾರದಲ್ಲಿ ಕೂಡ ನಾಟಕ ಮೊದಲಾದವುಗಳಂತೆಯೇ 'ಆಮುಖ'ವನ್ನು ಯೋಜಿಸತಕ್ಕದ್ದು. [ಅದರಲ್ಲಿ] ದೇವತೆಗಳಿಗೆ [ಅಥವಾ] ದೈತ್ಯರಿಗೆ ಸಂಬಂಧಿಸಿದ ಪ್ರಖ್ಯಾತವಾದ ವಸ್ತು [ಇರತಕ್ಕದ್ದು.] ವಿಮರ್ಶವನ್ನುಳಿದು [ಇತರ ನಾಲ್ಕು] ಸಂಧಿಗಳಿರತಕ್ಕದ್ದು. ಕೈಶಿಕೀಯನ್ನುಳಿದು (ಅಥವಾ ಕೈಶಿಕೀ ಸ್ವಲ್ಪವಾಗಿದ್ದು) ಇತರ ವೃತ್ತಿಗಳು [ಯೋಜಿತವಾಗತಕ್ಕದ್ದು]. ದೇವತೆಗಳು [ಅಥವಾ] ದಾನವರು ನಾಯಕರು; ಉದಾತ್ತರೂ

---

೧ ಪಾಠ : ನಾಡಿಕಃ ।
೨–೩ ಪಾಠ : ನಾಡಿಕಾ ।

ಪ್ರಖ್ಯಾತರೂ [ಆದ ಅಂತಹ ನಾಯಕರಲ್ಲಿ] ಹನ್ನೆರಡು [ಪ್ರಕಾರಗಳಿರುತ್ತವೆ]; ಅವರುಗಳ [ಎಂದರೆ, ಆ ಹನ್ನೆರಡು ಬಗೆಯ ನಾಯಕರ] ಫಲವು ಬೇರೆಬೇರೆಯಾಗಿರುತ್ತದೆ. ಎಲ್ಲ[ಬಗೆಯ ನಾಯಕ]ರಲ್ಲಿಯೂ ಬಹುವಾದ ವೀರರಸವಿರುತ್ತದೆ – 'ಸಮುದ್ರ ಮಂಥನ'ದ[ಕಥೆಯ]ಲ್ಲಿರುವಂತೆ. [ಸಮವಕಾರದಲ್ಲಿ] ಮೂರು ಅಂಕಗಳು [ಇದ್ದು ಅವುಗಳಲ್ಲಿ] ಮೂರು ಬಗೆಯ ಕಪಟ (ಮೋಸ), ಮೂರು ರೀತಿಯ ಶೃಂಗಾರ, ಮೂರು ಪ್ರಕಾರದ ವಿದ್ರವ (ಗಲಭೆ) [ಇರತಕ್ಕದ್ದು]. ಮೊದಲನೆಯ ಅಂಕದಲ್ಲಿ ಎರಡು ಸಂಧಿಗಳನ್ನು [ಮತ್ತು] ಹನ್ನೆರಡು ನಾಲಿಕಾಗಳ[ಕಾಲಪ್ರಮಾಣವ]ನ್ನು ಯೋಜಿಸತಕ್ಕದ್ದು. [ಎರಡು ಮತ್ತು ಮೂರನೆಯ ಅಂಕಗಳು ಕ್ರಮವಾಗಿ] ನಾಲ್ಕು ಮತ್ತು ಎರಡು ನಾಲಿಕಾಗಳ [ಕಾಲಪ್ರಮಾಣ]ವನ್ನು ಹೊಂದಿರುತ್ತವೆ; ಒಂದು ನಾಲಿಕಾ ಎಂದರೆ ಎರಡು ಘಟಿಕಾ. [ಸಮವಕಾರದಲ್ಲಿ ಮೂರು ಬಗೆಯ ಕಪಟ, ಮೂರು ಬಗೆಯ ಶೃಂಗಾರ, ಮೂರು ಬಗೆಯ ವಿದ್ರವ ಇರತಕ್ಕದ್ದೆಂದು ಹೇಳಿದೆಯಷ್ಟೆ. ಅವುಗಳು :]ವಸ್ತುಸ್ವಭಾವದಿಂದ [ಉಂಟಾದದ್ದು], ದೈವದಿಂದ [ಉಂಟಾದದ್ದು ಮತ್ತು] ಶತ್ರುವಿನಿಂದ ಉಂಟಾದದ್ದು [–ಹೀಗೆ] ಮೂರು ಕಪಟಗಳಾಗುತ್ತವೆ; ನಗರವನ್ನು ಮುತ್ತುವುದು, ಯುದ್ಧ, ಗಾಳಿ, ಬೆಂಕಿ ಮೊದಲಾದವುಗಳು – [ಇವೇ ಮೂರು] ವಿದ್ರವಗಳು; ಧರ್ಮ, ಅರ್ಥ, ಕಾಮ – [ಇವುಗಳಿಂದ ಮೂರು ಬಗೆಯ] ಶೃಂಗಾರ. [ಸಮವಕಾರದಲ್ಲಿ] ಬಿಂದು ಪ್ರವೇಶಕಗಳು ಇರುವುದಿಲ್ಲ. ಪ್ರಹಸನದಲ್ಲಿನಂತೆಯೇ, [ಸಮವಕಾರದಲ್ಲಿಯೂ] ಆವಶ್ಯಕತೆಗೆ ತಕ್ಕಂತೆ ವೀಥ್ಯಂಗಗಳನ್ನು ಬಳಸಿಕೊಳ್ಳಬಹುದು.

ವ್ಯಾಖ್ಯ : 'ವಿಷಯಗಳು ಚದುರಿಕೊಂಡಿರುತ್ತವೆ' ಎಂಬ ಕಾರಣದಿಂದ 'ಸಮವಕಾರ' ಎಂಬ ಹೆಸರು. (ಸಮವಕೀರ್ಯಂತೇಽಸ್ಮಿನ್ನರ್ಥಾ ಇತಿ ಸಮವಕಾರಃ). ನಾಟಕ ಮತ್ತು ಇತರ ರೂಪಗಳಂತೆಯೇ ಇಲ್ಲಿಯೂ 'ಆಮುಖ' ಇರತಕ್ಕದ್ದು. ವಿಮರ್ಶಸಂಧಿಯನ್ನುಳಿದು ಉಳಿದ ನಾಲ್ಕು ಸಂಧಿಗಳು. ದೇವಾಸುರ ಮುಂತಾದ ಹನ್ನೆರಡು ಬಗೆಯ ನಾಯಕರು; ಅವರಲ್ಲಿ ಒಬ್ಬೊಬ್ಬರ ಫಲವೂ ಬೇರೆಬೇರೆಯಾಗಿರುತ್ತದೆ; 'ಸಮುದ್ರ ಮಂಥನ'ದಲ್ಲಿ ವಾಸುದೇವಾದಿಗಳಿಗೆ ಕ್ರಮವಾಗಿ ಲಕ್ಷ್ಮಿ ಮುಂತಾದ ಫಲಗಳು ದೊರಕುವಂತೆ. ಪ್ರಧಾನರಸ ವೀರ. ಎಲ್ಲ ರಸಗಳೂ ಅಂಗವಾಗಿ ಬರಬಹುದು. ಮೂರು ಅಂಕಗಳು. ಅವುಗಳಲ್ಲಿ, ಮೊದಲನೆಯ ಅಂಕವು ಹನ್ನೆರಡು ನಾಲಿಕೆಗಳ ಕಾಲಪ್ರಮಾಣದಲ್ಲಿ ನಡೆಯುವಂಥದು; ಉಳಿದೆರಡು ಅಂಕಗಳಿಗೆ ಕ್ರಮವಾಗಿ ನಾಲ್ಕು ಮತ್ತು ಎರಡು ನಾಲಿಕೆಗಳ ಕಾಲಪ್ರಮಾಣ. ನಾಲಿಕಾ = ಎರಡು ಘಟಿಕಾ. ಮೂರು ಅಂಕಗಳಿಗೆ ಸಮನಾಗಿ ಮೂರು ಕಪಟಗಳು. ಒಂದೊಂದು ಅಂಕದಲ್ಲಿ ಒಂದೊಂದು ಕಪಟ ಬರತಕ್ಕದ್ದು. ಧರ್ಮ ಅರ್ಥ ಕಾಮ ಶೃಂಗಾರಗಳಲ್ಲಿ ಒಂದೊಂದು ಒಂದೊಂದು ಅಂಕದಲ್ಲಿ ಯೋಜಿತವಾಗತಕ್ಕದ್ದು. ಅವಶ್ಯ ಕಂಡಂತೆ ವೀಥಿಯ ಅಂಗಗಳನ್ನು ಬಳಸಿಕೊಳ್ಳಬಹುದು. ನಾಟಕದಲ್ಲಿ ಹೇಳಿದ್ದರೂ, ಇಲ್ಲಿ ಬಿಂದು ಪ್ರವೇಶಕಗಳನ್ನು ಯೋಜಿಸಬಾರದು – ಹೀಗೆ ಸಮವಕಾರ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೦–೬೫ರಿಂದ ೮೧; ಸಾ.ದ. : ೬–೨೩೪ರಿಂದ ೨೪೦; ಪ್ರತಾಪ : ೩–೪೬ರಿಂದ ೪೯.

# ವೀಥೀಲಕ್ಷಣ

## ೬೨. ವೀಥೀಯ ಪ್ರಮುಖಲಕ್ಷಣ :

**ವೀಥೀ ತು ಕೈಶಿಕೀವೃತ್ತೌ ಸಂಧ್ಯಂಗಾಂಕೈಸ್ತು ಭಾಣವತ್ ॥ ೬೮ ॥**

ರಸಃ ಸೂಚ್ಯಸ್ತು ಶೃಂಗಾರಃ ಸ್ಪೃಶೇದಪಿ ರಸಾಂತರಮ್ ।
ಯುಕ್ತಾ ಪ್ರಸ್ತಾವನಾಖ್ಯಾತೈರಂಗೈರುದ್ಘಾತ್ಯಕಾದಿಭಿಃ ॥ ೬೯ ॥
ಏವಂ ವೀಥೀ ವಿಧಾತವ್ಯಾ ದ್ವೇಕಪಾತ್ರಪ್ರಯೋಜಿತಾ ।

ಅನು : ವೀಥಿಯು ಕೈಶಿಕೀವೃತ್ತಿ[ಯಿಂದ ಯೋಜಿತವಾಗಿರುತ್ತದೆ ಮತ್ತು] ಸಂಧಿ, [ಸಂಧಿಯ] ಅಂಗಗಳು, [ಹಾಗೂ] ಅಂಕಗಳಲ್ಲಿ ಭಾಣವನ್ನು ಹೋಲುತ್ತದೆ. [ವೀಥಿಯಲ್ಲಿ] ಸೂಚಿಸತಕ್ಕ ರಸವು ಶೃಂಗಾರ; [ಆದರೂ] ಉಳಿದ ರಸಗಳನ್ನು ಕೂಡ [ಅಂಗವಾಗಿ] ಬಳಸಿಕೊಳ್ಳತಕ್ಕದ್ದು. [ವೀಥಿಯು] 'ಪ್ರಸ್ತಾವನಾ' [ಮತ್ತು] ಉದ್ಘಾತ್ಯಕ ಮುಂತಾದ [ವೀಥಿಯ] ಅಂಗಗಳಿಂದ ಕೂಡಿರತಕ್ಕದ್ದು. ಹೀಗೆ, ಒಂದು [ಅಥವಾ] ಎರಡು ಪಾತ್ರಗಳಿಂದ ವೀಥಿಯನ್ನು ಯೋಜಿಸತಕ್ಕದ್ದು.

ವ್ಯಾಖ್ಯೆ : ವೀಥೀ ಎಂದರೆ ಮಾರ್ಗ ಅಥವಾ ಅಂಗಗಳ ಪಙ್ಕ್ತಿ ; ಹಾಗಿರುವ ಕಾರಣ 'ವೀಥೀ' ಎಂಬ ಹೆಸರು. ಸಾಮಾನ್ಯವಾಗಿ ಇದು ಭಾಣವನ್ನು ಹೋಲುತ್ತದೆ. ವಿಶೇಷಗಳು : ರಸವು ಶೃಂಗಾರ; ಅದು ಅಸ್ಪಷ್ಟವಾಗ ಬಹುದಾದ ಕಾರಣ ಅದನ್ನು ಕೇವಲ ಸೂಚಿಸತಕ್ಕದ್ದು. ಬೇರೆ ರಸಗಳನ್ನೂ ಕ್ವಚಿತ್ತಾಗಿ ತಾಗಿಸಬಹುದು. ರಸೌಚಿತ್ಯದ ದೆಸೆಯಿಂದಲೇ ಇಲ್ಲಿ ಕೈಶಿಕೀವೃತ್ತಿ.

ಟಿಪ್ಪಣಿ : ಪ್ರಸ್ತಾವನಾಲಕ್ಷಣಕ್ಕೆ ೩-೮, ಸಂಧ್ಯಂಗಗಳಿಗೆ ೧-೩೭ರಿಂದ ೧೧೧, ವೀಥ್ಯಂಗಗಳಿಗೆ ೩-೧೩ರಿಂದ ೨೬ ನೋಡಿ.

ಹೋಲಿಕೆ = ನಾ.ಶಾ. : ೨೦-೧೧೫ರಿಂದ ೧೧೭; ಸಾದ. : ೬-೨೫೩, ೨೫೪; ಪ್ರತಾಪ : ೩-೫೦.

## ಉತ್ಸೃಷ್ಟಿಕಾಂಕಲಕ್ಷಣ

### ೬೩. ಉತ್ಸೃಷ್ಟಿಕಾಂಕದ ವಿಶಿಷ್ಟಲಕ್ಷಣ :

ಉತ್ಸೃಷ್ಟಿಕಾಂಕೇ ಪ್ರಖ್ಯಾತಂ ವೃತ್ತಂ ಬುದ್ಧ್ಯಾ ಪ್ರಪಂಚಯೇತ್ ॥ ೭೦ ॥

ರಸಸ್ತು ಕರುಣಃ ಸ್ಥಾಯೀ ನೇತಾರಃ ಪ್ರಾಕೃತಾ ನರಾಃ ।
ಭಾಣವತ್ಸಂಧಿವೃತ್ತ್ಯಂಗೈರ್ಯುಕ್ತಃ ಸ್ತ್ರೀಪರಿದೇವಿತೈಃ ॥ ೭೧ ॥

ವಾಚಾ ಯುದ್ಧಂ ವಿಧಾತವ್ಯಂ ತಥಾ ಜಯಪರಾಜಯೌ ।

ಅನು : 'ಉತ್ಸೃಷ್ಟಿಕಾಂಕ'ದಲ್ಲಿ ಪ್ರಖ್ಯಾತ ಇತಿವೃತ್ತವನ್ನು [ಕವಿಯು] ಬುದ್ಧಿಪೂರ್ವಕ ವಾಗಿ ಹೆಸರಿಸತಕ್ಕದ್ದು. [ಅದರಲ್ಲಿ] ಸ್ಥಾಯಿಯಾದ ರಸ ಕರುಣ; ಸಾಮಾನ್ಯ ಜನರು ನಾಯಕರು; ಸಂಧಿ ವೃತ್ತಿ ಅಂಗಗಳು ಭಾಣದಂತೆಯೇ [ಇರತಕ್ಕದ್ದು]. [ಉತ್ಸೃಷ್ಟಿಕಾಂಕವು] ಸ್ತ್ರೀಯರ ದುಃಖಗಳಿಂದ ಕೂಡಿರತಕ್ಕದ್ದು. [ಅದರಲ್ಲಿ] ವಾಗ್ಯುದ್ಧವನ್ನೇ ಯೋಜಿಸತಕ್ಕದ್ದು [ಮತ್ತು] ಅದರಿಂದಲೇ ಜಯ ಅಪಜಯ[ಗಳನ್ನು ತೋರಿಸತಕ್ಕದ್ದು].

ವ್ಯಾಖ್ಯೆ : ರೂಪಕವಲ್ಲಿನ ವಿಭಾಗಕ್ಕೂ 'ಅಂಕ' ಎಂಬ ಹೆಸರಿರುವುದರಿಂದ, ಅರ್ಥ ಸೌಲಭ್ಯಕ್ಕಾಗಿ, ಇದಕ್ಕೆ 'ಅಂಕ' ಎಂದು ಕರೆಯದೆ 'ಉತ್ಸೃಷ್ಟಿಕಾಂಕ' ಎಂದು ಕರೆಯುತ್ತಾರೆ.

ಟಿಪ್ಪಣಿ : ಇದಕ್ಕೆ 'ಅಂಕ' 'ಉತ್ಸೃಷ್ಟಿಕಾಂಕ' ಎಂಬ ಎರಡು ಹೆಸರುಗಳನ್ನೂ ಬಳಸಲಾಗುತ್ತದೆ.

ಹೋಲಿಕೆ = ನಾ.ಶಾ. : ೨೦-೯೮ರಿಂದ ೧೦೫; ಸಾ.ದ. : ೬-೨೫೦ರಿಂದ ೨೫೨; ಪ್ರತಾಪ : ೩-೫೧.

## ಈಹಾಮೃಗಲಕ್ಷಣ

### ೬೪. ಈಹಾಮೃಗಲಕ್ಷಣವಿಶೇಷ :

**ಮಿಶ್ರಮೀಹಾಮೃಗೇ ವೃತ್ತಂ ಚತುರಂಕಂ ತ್ರಿಸಂಧಿಮತ್ ॥ ೬೨ ॥**

**ನರದಿವ್ಯಾವನಿಯಮಾನ್ನಾಯಕಪ್ರತಿನಾಯಕೌ ।**
**ಖ್ಯಾತೌ ಧೀರೋದ್ಧತಾವಂತ್ಯೋ ವಿಪರ್ಯಾಸಾದಯುಕ್ತಕೃತ್ ॥ ೬೩ ॥**

**ದಿವ್ಯಸ್ತ್ರಿಯಮನಿಚ್ಛಂತೀಮಪಹಾರಾದಿನೇಚ್ಛತಃ ।**
**ಶೃಂಗಾರಾಭಾಸಮಪ್ಯಸ್ಯ ಕಿಂಚಿತ್ಕಿಂಚಿತ್ಪ್ರದರ್ಶಯೇತ್ ॥ ೬೪ ॥**

**ಸಂರಂಭಂ ಪರಮಾನೀಯ ಯುದ್ಧಂ ವ್ಯಾಜಾನ್ನಿವಾರಯೇತ್ ।**
**ವಧಪ್ರಾಪ್ತಸ್ಯ ಕುರ್ವೀತ ವಧಂ ನೈವ ಮಹಾತ್ಮನಃ ॥ ೬೫ ॥**

ಅನು : 'ಈಹಾಮೃಗ'ದಲ್ಲಿ ಇತಿವೃತ್ತವು ಮಿಶ್ರ[ವಾಗಿರುತ್ತದೆ]. [ಅದರಲ್ಲಿ] ನಾಲ್ಕು ಅಂಕಗಳು ಮತ್ತು ಮೂರು ಸಂಧಿಗಳು. ನರರು ಮತ್ತು ದೇವತೆಗಳು, ಅನಿಯಮಿತವಾಗಿ, ನಾಯಕಪ್ರತಿನಾಯಕರಾಗಿರುತ್ತಾರೆ. [ನಾಯಕಪ್ರತಿನಾಯಕರಿಬ್ಬರೂ] ಖ್ಯಾತರೂ ಧೀರೋದ್ಧತರೂ [ಆಗಿರುತ್ತಾರೆ.] [ಅವರಲ್ಲಿ] ಎರಡನೆಯವನು [ಎಂದರೆ, ಪ್ರತಿನಾಯಕನು] ಭ್ರಾಂತಿಯಿಂದ ಯುಕ್ತವಲ್ಲದುದನ್ನು ಮಾಡುತ್ತಾನೆ. ಇಚ್ಛೆಯಿಲ್ಲದ ದಿವ್ಯಸ್ತ್ರೀಯೊಬ್ಬಳನ್ನು ಅಪಹರಿಸಿಕೊಂಡು ಹೋಗಲು ಯತ್ನಿಸುವಂತಹ – ಶೃಂಗಾರಾಭಾಸವನ್ನು ಕೂಡ ಅಲ್ಲಿ ಸ್ವಲ್ಪ ಸ್ವಲ್ಪ ತೋರಿಸತಕ್ಕದ್ದು. ವಿರೋಧ ಕ್ರೋಧಗಳು ಹೆಚ್ಚಾಗಿ[ತೋರಿಸಲ್ಪಟ್ಟ]ದ್ದರೂ, [ಅಂತ್ಯದಲ್ಲಿ ಯಾವುದಾದರೊಂದು] ನೆಪದಿಂದ ಯುದ್ಧವನ್ನು ನಿವಾರಿಸತಕ್ಕದ್ದು. ವಧೆಯಾಗುವಂತಿದ್ದರೂ ಕೂಡ ಮಹಾತ್ಮನಾದ [ನಾಯಕನ] ವಧೆಯನ್ನು [ಈಹಾಮೃಗದಲ್ಲಿ] ಯೋಜಿಸಬಾರದು.

ವ್ಯಾಖ್ಯೆ : ಜಿಂಕೆ(ಮೃಗ)ಯಂತೆ ಅಲಭ್ಯಳಾದ ನಾಯಿಕೆಗಾಗಿ ಇಚ್ಛಿಸು(ಈಹಾ)ತ್ತಾನೆ ಎಂಬ ಕಾರಣದಿಂದ 'ಈಹಾಮೃಗ' ಎಂಬ ಹೆಸರು. ಖ್ಯಾತ ಅಖ್ಯಾತವಾದ ಯಾವ ವಸ್ತುವೂ ಆಗಬಹುದು. ಪ್ರತಿನಾಯಕನು ಕೇವಲ ಭ್ರಾಂತಿಯಿಂದ ಕೆಡುಕುಮಾಡುವಂಥವನು.

ಟಿಪ್ಪಣಿ : ವಧೆಯು ರಂಗದ ಮೇಲೆ ನಿಷಿದ್ಧವಾಗಿದೆ. [ನೋಡಿ : ೩-೪೦].

ಹೋಲಿಕೆ = ನಾ.ಶಾ. : ೨೦-೮೨ರಿಂದ ೮೭; ಸಾ.ದ. : ೬-೨೪೫ರಿಂದ ೨೫೦; ಪ್ರತಾಪ : ೩-೫೨, ೫೩.

# ತೃತೀಯ ಪ್ರಕಾಶದ ಉಪಸಂಹಾರ

## ೬೫. ಉಪಸಂಹಾರ :

ಇತ್ಥಂ ವಿಚಿಂತ್ಯ ದಶರೂಪಕಲಕ್ಷ್ಮಮಾರ್ಗ –
ಮಾಲೋಕ್ಯ ವಸ್ತು ಪರಿಭಾವ್ಯ ಕವಿಪ್ರಬಂಧಾನ್ ।
ಕುರ್ಯಾದಯತ್ನವದಲಂಕೃತಿಭಿಃ ಪ್ರಬಂಧಂ
ವಾಕ್ಯೈರುದಾರಮಧುರೈಃ ಸ್ಫುಟಮಂದವೃತ್ತೈಃ ॥ ೬೬ ॥

ಅನು : ಹೀಗೆ, ದಶರೂಪಕದ ಲಕ್ಷಣಮಾರ್ಗಗಳನ್ನು ಚೆನ್ನಾಗಿ ಪರಿಶೀಲಿಸಿ, [ಆಯ್ದುಕೊಳ್ಳುವ] ವಸ್ತುವನ್ನು [ಮತ್ತು ಪ್ರಸಿದ್ಧರಾದ ಹಿಂದಿನ] ಕವಿಗಳ ಪ್ರಬಂಧಗಳನ್ನು ಗಮನಿಸಿ, ಪ್ರಯತ್ನವಿಲ್ಲದೆ ಬಂದ ಅಲಂಕಾರಗಳಿಂದಲೂ ಉದಾರವೂ ಮಧುರವೂ ಆದ ಮಾತುಗಳಿಂದ, ಸ್ಪಷ್ಟವೂ ಸಾವಧಾನವೂ ಆದ ಛಂದಸ್ಸುಗಳಿಂದಲೂ [ರೂಪಕ] ಪ್ರಬಂಧಗಳನ್ನು ರಚಿಸತಕ್ಕದ್ದು.

ವ್ಯಾಖ್ಯೆ : ಇಲ್ಲಿಗೆ ಶ್ರೀ ವಿಷ್ಣುವಿನ ಮಗನಾದ ಧನಿಕನಿಂದ ರಚಿತವಾದ 'ದಶರೂಪಾವಲೋಕ'ದಲ್ಲಿ 'ರೂಪಕಲಕ್ಷಣಪ್ರಕಾಶ'ವೆಂಬ ಹೆಸರಿನ ತೃತೀಯ ಪ್ರಕಾಶ ಮುಗಿಯಿತು.

ಟಿಪ್ಪಣಿ : ಛಂದಸ್ಸು : ವಸಂತತಿಲಕ.

– ಮೂರನೆಯ ಪ್ರಕಾಶ ಮುಗಿಯಿತು –

# ನಾಲ್ಕನೆಯ ಪ್ರಕಾಶ : ರಸ

# ರಸದ ದಿಗ್ದರ್ಶನ

## ೧. ಸಂಕ್ಷಿಪ್ತ ರಸಲಕ್ಷಣ :

**ವಿಭಾವೈರನುಭಾವೈಶ್ಚ ಸಾತ್ತ್ವಿಕೈರ್ವ್ಯಭಿಚಾರಿಭಿಃ ।**

**ಆನೀಯಮಾನಃ ೧ಸ್ವಾದ್ಯತ್ವಂ೧ ಸ್ಥಾಯೀಭಾವೋ ರಸಃ ಸ್ಮೃತಃ ॥ ೧ ॥**

ಅನು : ವಿಭಾವ, ಅನುಭಾವ, ಸಾತ್ತ್ವಿಕ[ಭಾವ], ವ್ಯಭಿಚಾರಿ[ಭಾವ] – ಇವುಗಳಿಂದ [ಕೂಡಿಕೊಂಡದ್ದಾಗಿ] ಸ್ವಾದ್ಯತ್ವವನ್ನು ಉತ್ಪನ್ನಮಾಡುವ ಸ್ಥಾಯಿಭಾವವು 'ರಸ'ವೆಂದು ಸ್ಮೃತವಾಗಿದೆ.

ವ್ಯಾಖ್ಯೆ : ವಿಭಾವ ಅನುಭಾವ ವ್ಯಭಿಚಾರಿ ಸಾತ್ತ್ವಿಕಭಾವಗಳು ಹಾಗೂ ರತ್ಯಾದಿ ಸ್ಥಾಯಿಭಾವಗಳು – ಇವುಗಳ ಲಕ್ಷಣವನ್ನು ಮುಂದೆ ಹೇಳಲಾಗುತ್ತದೆ. ಕಾವ್ಯದಲ್ಲಿ ಪ್ರಯುಕ್ತವಾದ ಅಥವಾ ಅಭಿನಯದ ಮೂಲಕ ಪ್ರದರ್ಶಿತವಾದ ವಿಭಾವ ಅನುಭಾವ ವ್ಯಭಿಚಾರಿಭಾವ ಸಾತ್ತ್ವಿಕಭಾವ – ಇವುಗಳಿಂದ ಶ್ರೋತೃಗಳಿಗೆ ಅಥವಾ ಪ್ರೇಕ್ಷಕರಿಗೆ ಹೃದಯ ಪರಿವರ್ತಕವಾಗುವ ರತ್ಯಾದಿ ಸ್ಥಾಯಿಭಾವವು ಸವಿಯಾದುದಾಗಿ ಅಥವಾ ನಿರ್ಭರ ಆನಂದದ ಜ್ಞಾನಾತ್ಮಕತೆಯನ್ನು ಉಂಟುಮಾಡುವುದಾಗಿ 'ರಸ'ವಾಗುತ್ತದೆ. ಈ ಕಾರಣದಿಂದ ಸಾಮಾಜಿಕರಿಗೆ (ಶ್ರೋತೃ ಅಥವಾ ಪ್ರೇಕ್ಷಕರಿಗೆ) 'ರಸಿಕರು' ಎನ್ನುತ್ತಾರೆ. ಕಾವ್ಯವು ಈ ಬಗೆಯ ಆನಂದಜ್ಞಾನವನ್ನು ಉಕ್ಕಿಸುವ ಕಾರಣದಿಂದ 'ರಸವತ್' ಎನ್ನಿಸಿಕೊಳ್ಳುತ್ತದೆ – ಘೃತವು ಆಯಸ್ಸು ಎಂಬ ಹೇಳಿಕೆಯಂತೆ. [ಘೃತವು ಆಯಸ್ಸನ್ನು ಕೊಡುತ್ತದೆ ಎಂಬುದು ನಂಬಿಕೆ. ಆ ಕಾರಣ ಘೃತದಲ್ಲಿ ಆಯಸ್ಸನ್ನು ಆರೋಪಿಸಿ, ಘೃತವೇ ಆಯಸ್ಸು ಎನ್ನುತ್ತಾರೆ. ಅದರಂತೆಯೇ, ರಸವನ್ನು ಕೊಡುವ ಕಾವ್ಯದಲ್ಲಿ ರಸವನ್ನೆ ಆರೋಪಿಸಿ 'ಕಾವ್ಯವು ರಸವತ್' ಎನ್ನಲಾಗುತ್ತದೆ. – ಇದು ವ್ಯಾಖ್ಯೆಯ ಕೊನೆಯ ಭಾಗದ ತಾತ್ಪರ್ಯ.]

ಟಿಪ್ಪಣಿ : ವಿಭಾಗಾನುಸಾರವಾಗಿ ಈ ಪ್ರಕಾಶದಲ್ಲಿ ರಸವಿಚಾರವನ್ನು ಕುರಿತು ಹೇಳಲಾಗಿದೆ.

ಈ ಮೊದಲ ಕಾರಿಕೆಯಲ್ಲಿ, ದಿಗ್ದರ್ಶನ ಮಾತ್ರವಾಗಿ ರಸದ ಲಕ್ಷಣವನ್ನು ಸಂಕ್ಷೇಪವಾಗಿ ಹೇಳಿದೆ. ೪-೪೭ರಿಂದ ೫೪ರ ವರೆಗಿನ ಖಂಡಗಳಲ್ಲಿ ಪುನಃ ರಸಲಕ್ಷಣ ಹಾಗೂ ವಿವರಣೆ ಬರುತ್ತದೆ. ೪-೫೬ರಿಂದ ೮೭ – ಈ ಭಾಗದಲ್ಲಿ ರಸಭೇದಗಳನ್ನು ಲಕ್ಷಿಸಲಾಗುತ್ತದೆ. ಸ್ಥಾಯಿಭಾವಗಳನ್ನು ೪-೪೩ರಿಂದ ೪೬ರವರೆಗೂ, ವಿಭಾವಲಕ್ಷಣವನ್ನು ೪-೨ರಲ್ಲೂ, ಅನುಭಾವಲಕ್ಷಣವನ್ನು ೪-೩ರಲ್ಲೂ ಲಕ್ಷಿಸಲಾಗುತ್ತದೆ.

ಈ ಭಾಗ ಪ್ರತಾಪ. ೪-೧ರಲ್ಲಿ ಉದ್ಧೃತವಾಗಿದೆ.

ರಸನಿಷ್ಪತ್ತಿಯನ್ನು ಕುರಿತ ವಿವಿಧ ಸಿದ್ಧಾಂತಗಳಿಗೆ 'ಅನುಬಂಧ-೨' ನೋಡಿ.

# ವಿಭಾವಾನುಭಾವಗಳು

## ೨. ವಿಭಾವಲಕ್ಷಣ :

**ಜ್ಞಾಯಮಾನತಯಾ ತತ್ರ, ವಿಭಾವೋ ಭಾವಪೋಷಕೃತ್ ।**

**೨ಆಲಂಬನೋದ್ದೀಪನತ್ವಪ್ರಭೇದೇನ ಸ ಚ ದ್ವಿಧಾ೨ ॥ ೨ ॥**

---

೧ ಪಾಠ : ಸ್ವಾದುತ್ವಂ ।

೨ ಪಾಠ : ಆಲಂಬನೋದ್ದೀಪನಾಭ್ಯಾಂ ಕಾಂತೋದ್ಯಾನಾದಿನಾ ದ್ವಿಧಾ ॥

ಅನು : [ಸಾಮಾಜಿಕರಿಂದ] ತಿಳಿಯಲ್ಪಡುತ್ತದೆಯೆಂದು [ಅಥವಾ ಚೆನ್ನಾಗಿ ಭಾವಿತವಾಗುವುದೆಂದು] 'ವಿಭಾವ' [ಎನ್ನಿಸಿಕೊಳ್ಳುತ್ತದೆ; ಅದು] ಭಾವವನ್ನು ಪೋಷಿಸುವಂಥದು. ಆಲಂಬನಾತ್ಮಕ ಮತ್ತು ಉದ್ದೀಪನಾತ್ಮಕ ಎನ್ನುವ ವಿಶೇಷ ಭೇದದಿಂದ [ಎಂದರೆ, ಆಲಂಬನವಿಭಾವ ಮತ್ತು ಉದ್ದೀಪನವಿಭಾವ – ಹೀಗೆ] ಅದು ಎರಡು ವಿಧ.

ವ್ಯಾಖ್ಯೆ : ಅತಿಶಯೋಕ್ತಿಯ ಮೂಲಕ ವಿಶಿಷ್ಟರೂಪವನ್ನು ವರ್ಣಿಸುವುದು ಕಾವ್ಯ ವ್ಯಾಪಾರ. ಆದರಿಂದಾಗಿ ಸಾಮಾಜಿಕರು 'ಇವನು ಹೀಗಿದ್ದಾನೆ, ಇವಳು ಹೀಗಿದ್ದಾಳೆ' ಎಂಬುದಾಗಿ ಆ ವಿಶಿಷ್ಟರೂಪವನ್ನರಿತುಕೊಳ್ಳುತ್ತಾರೆ, ವಿಭಾವಿಸಿಕೊಳ್ಳುತ್ತಾರೆ. ಈ ಬಗೆಯಲ್ಲಿ, ಯಾವುದೊಂದು ವಿಶಿಷ್ಟರೂಪವನ್ನು ಸಾಮಾಜಿಕರು ಅರಿತುಕೊಳ್ಳಲು, ವಿಭಾವಿಸಿಕೊಳ್ಳಲು ಕಾರಣವಾಗುವಂಥದೇ 'ವಿಭಾವ'. ನಾಯಕಾದಿಗಳು ವಿಭಾವವಾಗಿರುವಾಗ ಅದು 'ಆಲಂಬನವಿಭಾವ'ವಾಗುತ್ತದೆ; ಇಷ್ಟವಾದ ದೇಶಕಾಲಗಳು ವಿಭಾವವಾಗಿರುವಾಗ ಅದು 'ಉದ್ದೀಪನ ವಿಭಾವ'ವಾಗುತ್ತದೆ. 'ವಿಜ್ಞಾತವಾಗುವುದು ವಿಭಾವ' ಎಂದು ಹೇಳಿದೆಯಷ್ಟೆ. [ನೋಡಿ : ನಾ.ಶಾ. : ೭–೩ರ ಅನಂತರದ ಗದ್ಯ] ರಸಗಳನ್ನು ಕುರಿತು ಹೇಳುವಾಗ [ಇದೇ ಪ್ರಕಾಶದಲ್ಲಿ ಮುಂದೆ] ಅದನ್ನು ಯಥಾವತ್ತಾಗಿ ಸಂದರ್ಭಶಃ ವಿವರಿಸುತ್ತೇವೆ.

ಇನ್ನು, ಇಲ್ಲಿ ಒಂದು ಸಂದೇಹ ಬರಬಹುದು : ವಾಸ್ತವವಾಗಿ, ಕಾವ್ಯಗಳಲ್ಲಿ ವಿಭಾವಾದಿಗಳು ಇರುವುದಿಲ್ಲ. ಬದಲು ಅವು ಕೇವಲ ಶಬ್ದಗಳಿಂದ ಸೂಚಿತವಾಗಿ ಸಾಧಿತವಾಗುತ್ತವೆ. [ನಾಟ್ಯದಲ್ಲಿಯೂ, ಎದುರು ಕಾಣುವ ರಾಮಾದಿಗಳು ಕೇವಲ ಪ್ರತೀಕ; ಅವು ನಿಜವಾದುವಲ್ಲ.] ಇದರಿಂದ ಕಾವ್ಯನಾಟ್ಯಗಳಲ್ಲಿ ವಸ್ತುಶೂನ್ಯತೆ ಉಂಟಾಗುವುದಿಲ್ಲವೆ? [ವಸ್ತುವೇ ಇಲ್ಲದಿರುವಾಗ ವಸ್ತುಜನ್ಯವಾದ ವಿಭಾವಗಳು ಹೇಗೆ ಇರುತ್ತವೆ?]

– ಇದಕ್ಕೆ ಸಮಾಧಾನ : ಹಾಗಲ್ಲ. ಇದು ಕಾವ್ಯಸತ್ತೆ. ಲೋಕಸತ್ತೆಯಲ್ಲಿನಂತೆ, ಇಲ್ಲಿ ಬಾಹ್ಯವಸ್ತುಗಳ ಇರುವಿಕೆ ಆವಶ್ಯಕವಲ್ಲ. ಕೇವಲ ಶಬ್ದಗಳ ಮೂಲಕವಾಗಿಯೇ ಕಾವ್ಯದಲ್ಲಿನ ವಿಭಾವವು ಭಾವಿಸಲ್ಪಡುತ್ತದೆ. ಇಲ್ಲಿನ ಜ್ಞಾನ [ಲೌಕಿಕ ಜ್ಞಾನದಂತೆ ವಿಶಿಷ್ಟವಾಗಿರದೆ] ಸಾಮಾನ್ಯವಾದುದಾಗಿರುತ್ತದೆ. [ಎಂದರೆ, ರಾಮಾದಿಗಳ ವಿಶಿಷ್ಟ ಉತ್ಸಾಹ ಕಾವ್ಯದಲ್ಲಿ ಉತ್ಸಾಹ ಸಾಮಾನ್ಯವಾಗಿ ಗೃಹೀತವಾಗುತ್ತದೆ.] ಕಾವ್ಯದಲ್ಲಿನ ಈ ವಿಭಾವಗಳು ತಮ್ಮ ತಮ್ಮ ಸಂಬಂಧದಿಂದಲೇ ಕಲ್ಪಿತವಾಗುತ್ತವೆ; ಹೀಗೆ ಕಲ್ಪಿತವಾದ ವಿಭಾವಗಳು ಭಾವಕರ ಚೇತನಗಳಲ್ಲಿ ವಿಪರಿವರ್ತಿಸುತ್ತ ಸಾಕ್ಷಾತ್ತಾಗಿ ಅರಿಯಲ್ಪಡುತ್ತವೆ. ಹೀಗೆ ಕಾವ್ಯಗಳಲ್ಲಿ ಆಲಂಬನಾದಿ ವಿಭಾವಗಳು ಶಬ್ದದಿಂದ ಸೂಚಿತವಾಗಿ, ಸಹೃದಯರಿಂದ ಕಲ್ಪಿತವಾಗಿ ಸಾಕ್ಷಾತ್ ಅನುಭವಿಸಲ್ಪಡುತ್ತವೆಯಾದಕಾರಣ ವಸ್ತು ಶೂನ್ಯತೆಯನ್ನು ಆರೋಪಿಸುವುದು ಸರಿಯಲ್ಲ. ಅಲ್ಲದೆ, ಈ ಮಾತನ್ನು ಪುಷ್ಟೀಕರಿಸಲು ಭರ್ತೃಹರಿಯ ಶ್ಲೋಕವೊಂದನ್ನು ಉದ್ಧರಿಸಬಹುದು : [ವಾಕ್ಯಪದೀಯ ಕಾರಿಕಾ] :

> 'ಶಬ್ದೋಪಹಿತರೂಪಾಂಸ್ತಾನ್ಬುದ್ಧೇರ್ವಿಷಯತಾಂ ಗತಾನ್ ।
>
> ಪ್ರತ್ಯಕ್ಷಮಿವ ಕಂಸಾದೀನ್ಸಾಧನತ್ವೇನ ಮನ್ಯತೇ ॥'

[ಕಂಸಾದಿಶಬ್ದಗಳಿಂದ ಅಭಿಹಿತವಾಗಿ ಬುದ್ಧಿಗೋಚರವಾಗುವ ರೂಪಗಳು ಕಾರ್ಯಸಾಧನೆಯಲ್ಲಿ ಪ್ರತ್ಯಕ್ಷ ಕಂಸಾದಿಗಳಂತೆ ಭಾವಿತವಾಗುತ್ತವೆ.]

ಷಟ್‌ಸಹಸ್ರೀಕಾರ(ಭರತ)ನೂ ಹೀಗೆ ಹೇಳಿದ್ದಾನೆ : [ನಾ.ಶಾ. : ೭–೬] 'ಏಭ್ಯಶ್ಚ ಸಾಮಾನ್ಯಗುಣಯೋಗೇನ ರಸಾ ನಿಷ್ಪದ್ಯಂತೇ' [ಇವುಗಳ (ಎಂದರೆ, ವಿಭಾವೇತ್ಯಾದಿಗಳ) ಸಾಮಾನ್ಯ ಗುಣಯೋಗದಿಂದ ರಸವು ನಿಷ್ಪನ್ನವಾಗುತ್ತದೆ.]

ಆಲಂಬನ ವಿಭಾವಕ್ಕೆ ಉದಾ:–[ವಿಕ್ರಮೋ. : ೧–೧೦] :

> 'ಅಸ್ಯಾಃ ಸರ್ಗವಿಧೌ ಪ್ರಜಾಪತಿರಭೂಚ್ಚಂದ್ರೋ ನು ಕಾಂತಿಪ್ರದಃ
>
> ಶೃಂಗಾರೈಕನಿಧಿಃ ಸ್ವಯಂ ನು ಮದನೋ ಮಾಸೋ ನು ಪುಷ್ಪಾಕರಃ ।
>
> ವೇದಾಭ್ಯಾಸಜಡಃ ಕಥಂ ನು ವಿಷಯವ್ಯಾವೃತ್ತಕೌತೂಹಲೋ
>
> ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ ॥'

[ಈಕೆಯನ್ನು ಸೃಷ್ಟಿಸುವಲ್ಲಿ ಕಾಂತಿದಾಯಕನಾದ ಚಂದ್ರನೇ ಬ್ರಹ್ಮನಾಗಿರಬೇಕು. ಇಲ್ಲವೆ ಈಕೆಯನ್ನು ಶೃಂಗಾರದ ಏಕೈಕ ನಿಧಿಯಾದ ಮನ್ಮಥನೇ ಸ್ವಯಂ ಸೃಷ್ಟಿಸಿರಬೇಕು. ಅಥವಾ ಪುಷ್ಪಾಕರನಾದ ವಸಂತನು ಈಕೆಯನ್ನು ನಿರ್ಮಿಸಿರಬೇಕು. ಹಾಗಲ್ಲದೆ, ವೇದಾಭ್ಯಾಸಜಡನೂ ವಿಷಯ ಕುತೂಹಲದಿಂದ ಪರಾಙ್ಮುಖನಾದವನೂ ಆದ ಪುರಾತನ (ವೃದ್ಧ) ಮುನಿಯು (ಬ್ರಹ್ಮ) ಇಂತಹ ಮನೋಹರ ರೂಪವನ್ನು ನಿರ್ಮಿಸಲು ಹೇಗೆ ಶಕ್ತನಾದಾನು?]

ಉದ್ದೀಪನ ವಿಭಾವಕ್ಕೆ ಉದಾ:-[ಆಕರ ತಿಳಿಯದು] :

> 'ಅಯಮುದಯತಿ ಚಂದ್ರಶ್ಚಂದ್ರಿಕಾಧೌತವಿಶ್ವಃ
> ಪರಿಣತವಿಮಲಿಮ್ನಿ ವ್ಯೋಮ್ನಿ ಕರ್ಪೂರಗೌರಃ ।
> ಋಜುರಜತಶಲಾಕಾಸ್ಪರ್ಧಿಭಿರ್ಯಸ್ಯ ಪಾದೈ -
> ರ್ಜಗದಮಲಮೃಣಾಲೀಪಂಜರಸ್ಥಂ ವಿಭಾತಿ ॥'

[ಅತಿನಿರ್ಮಲವಾದ ಆಕಾಶದಲ್ಲಿ, ಕರ್ಪೂರಗೌರನೂ, ಚಂದ್ರಿಕೆಯಿಂದ ವಿಶ್ವವನ್ನು ಬೆಳಗುವವನೂ ಆದ ಚಂದ್ರನು ಉದಯಿಸುತ್ತಿದ್ದಾನೆ. ಮೃದುವಾದ ಬೆಳ್ಳಿಯ ಸರಿಗೆಯಂತಿರುವ ಆತನ ಕಿರಣಗಳಿಂದ (ಆವೃತವಾದ) ಜಗತ್ತು ನಿರ್ಮಲಮೃಣಾಲ ಪಂಜರದಲ್ಲಿ ಸೇರಿಕೊಂಡಿರುವಂತೆ ಭಾಸವಾಗುತ್ತದೆ.]

ಟಿಪ್ಪಣಿ : ವಿಭಾವದಲ್ಲಿ ಆಲಂಬನೋದ್ದೀಪನಭೇದವನ್ನು ಭರತಮುನಿ ಹೇಳಿಲ್ಲ. ಅದು ಅನಗತ್ಯವೆಂದೂ ಕಾಲ್ಪನಿಕವೆಂದೂ ಹಲವರ ಮತ. [ನೋಡಿ : ಬ.ನಾ.ಶಾ. (ಅಭಿನವಭಾರತೀ ಭಾಗ) : I-ಪು. ೩೦೫.]

ಹೋಲಿಕೆ = ನಾ.ಶಾ. : ೭-೪; ಸಾ.ದ. : ೩-೨೮, ೨೯, ೧೩೧, ೧೩೨; ಪ್ರತಾಪ : ೪-೧.

## ೩. ಅನುಭಾವಲಕ್ಷಣ :

**ಅನುಭಾವೋವಿಕಾರಸ್ತು ಭಾವಸಂಸೂಚನಾತ್ಮಕಃ ।**

ಅನು : [ಯಾವುದೊಂದು] ಭಾವವನ್ನು ಸ್ಪಷ್ಟವಾಗಿ ಸೂಚಿಸುವಂಥ [ಶಾರೀರಕ] ವಿಕಾರವು (ಚೇಷ್ಟೆ) 'ಅನುಭಾವ'.

ವ್ಯಾಖ್ಯೆ : ಸಾಮಾಜಿಕರಿಗೆ, [ಉದ್ದಿಷ್ಟವಾದ] ಸ್ಥಾಯಿ ಭಾವವನ್ನು ಅನುಭವ ಮಾಡಿಕೊಡುವ ಭ್ರೂವಿಕ್ಷೇಪ ಕಟಾಕ್ಷಾದಿ[ಶಾರೀರಕ ಚೇಷ್ಟೆ]ಗಳು 'ಅನುಭಾವ'. ಅವು ರಸವನ್ನು ಪೋಷಿಸುತ್ತವೆ. ರೂಪಕಕಾವ್ಯದಲ್ಲಿ ಹಾಗೂ ಶ್ರವ್ಯಕಾವ್ಯದಲ್ಲಿ ಕೂಡ, ಭಾವವನ್ನು ಸಾಕ್ಷಾತ್ತಾಗಿ ಅನುಭವಿಸುವ ಸಾಮಾಜಿಕರಿಗೆ ಅನುಭವ ಮಾಡಿಸಿ ಕೊಡುತ್ತದೆಯಾದಕಾರಣ ಅಥವಾ ಅನುಭವಿಸುವಂಥದು ಎಂಬ ಕಾರಣದಿಂದ ಇದಕ್ಕೆ ರಸಿಕರು 'ಅನುಭಾವ' ಎನ್ನುತ್ತಾರೆ. ಕಾರಿಕೆಯಲ್ಲಿ 'ಭಾವಸಂಸೂಚನಾತ್ಮಕ' ಎಂದಿದೆಯಷ್ಟೇ. ಅದು ಲೌಕಿಕರಸವನ್ನು ದೃಷ್ಟಿಯಲ್ಲಿಟ್ಟು ಕೊಂಡು ಹೇಳಿದ್ದು. ಆದರೆ ಕಾವ್ಯಾದಿಗಳಲ್ಲಾದರೋ ಅನುಭಾವಗಳು ರಸಕ್ಕೆ ಕಾರಣಗಳಾಗಿವೆ. [ಧನಿಕ ಲೌಕಿಕಭಾವಕ್ಕೆ 'ಲೌಕಿಕರಸ' ಎಂದಿದ್ದಾನೆ. ಲೋಕಸತ್ತೆಯಲ್ಲಿ, ಭ್ರೂವಿಕ್ಷೇಪಾದಿಗಳು ಯಾವುದೊಂದು ವಿಶಿಷ್ಟ ಭಾವ ಕಾರಣವಾಗಿ ಹುಟ್ಟಿದ ಕಾರ್ಯಗಳು; ಆದರೆ ಕಾವ್ಯಸತ್ತೆಯಲ್ಲಿ ಭ್ರೂವಿಕ್ಷೇಪಾದಿ ಅನುಭಾವಗಳು, ನಿಜ ವಾಗಿಯೂ ಹುಟ್ಟಿದವಲ್ಲ; ಬದಲು ಅವು ರಸನಿಷ್ಪತ್ತಿಗೆ ಒದಗುವ ಕಾರಣಗಳು - ಎಂಬುದು ಧನಿಕನ ಅಭಿಪ್ರಾಯ. ಒಟ್ಟಿನಲ್ಲಿ ತಾತ್ಪರ್ಯ ಇಷ್ಟು : ಲೌಕಿಕ ಚೇಷ್ಟೆಗಳು 'ಕಾರ್ಯ'; ಕಾವ್ಯದಲ್ಲಿನ ಚೇಷ್ಟೆ(ಅನುಭಾವ)ಗಳು) ರಸಕ್ಕೆ 'ಕಾರಣ'.]

ಅನುಭಾವಕ್ಕೆ ಉದಾ:-[ಧನಿಕನದೇ] :

> 'ಉಜ್ಜೃಂಭಾನನಮುಲ್ಲಸತ್ಕುಚತಟಂ ಲೋಲಭ್ರಮದ್ಭ್ರೂಲತಂ
> ಸ್ವೇದಾಂಭಸ್ನಪಿತಾಂಗಯಷ್ಟಿವಿಗಲದ್ವ್ರೀಡಂ ಸರೋಮಾಂಚಯಾ ।
> ಧನ್ಯಃ ಕೋಽಪಿ ಯುವಾ ಸ ಯಸ್ಯ ವದನೇ ವ್ಯಾಪಾರಿತಾಃ ಸಸ್ಪೃಹಂ
> ಮುಗ್ಧೇ ದುಗ್ಧಮಹಾಬ್ಧಿಫೇನಪಟಲಪ್ರಖ್ಯಾಃ ಕಟಾಕ್ಷಚ್ಛಟಾಃ ॥'

[ಎಲ್ಲೆ ಮುಗ್ಧೆ, ಅರಳಿಸುವ ಮೊಗ, ಮೇಲೆದ್ದು ಮಿರುಗುವ ಮೊಲೆ, ಅಡಿ ಕುಣಿಯುವ ಹುಬ್ಬಿನ ಬಳ್ಳಿ, ನಾಚಿಕೆಯುಳಿದು ನವಿರೆದ್ದು ಬೆವರಿನಲ್ಲಿ ಮಿಂದ ದೇಹಕಾಂತಿ-ಇವುಗಳಿಂದ ಯಾವ ಯುವಕನ ಮುಖದಲ್ಲಿ ಹಾಲ್ಗಡಲಿನ ನೊರೆದೆರೆಯಂತಿರುವ ಆಸೆದುಂಬಿದ ನಿನ್ನ ಕಡೆಗಣ್ಣಿನ ಹೊಗರು ನೋಟವನ್ನು ತೊಡರಿಸಿರುವೆಯೋ-ಆ ಯುವಕ ಯಾರೇ ಆಗಿರಲಿ-ಆತ ಧನ್ಯ!]

– ಹೀಗೆಯೇ, ಮುಂದೆ ರಸಪ್ರಸಂಗದಲ್ಲಿ ಉಳಿದುವನ್ನು ಉದಾಹರಿಸುತ್ತೇವೆ.

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೫; ಸಾ.ದ. : ೩-೧೩೨ ಪ್ರತಾಪ : ೪-೧.

## ೪. ವಿಭಾವಾನುಭಾವಗಳ ಸಿದ್ಧಿ :

**ಹೇತುಕಾರ್ಯಾತ್ಮನೋಃ ಸಿದ್ಧಿಸ್ತಯೋಃ ಸಂವ್ಯವಹಾರತಃ ॥ ೩ ॥**

ಅನು : [ವಿಭಾಗವು ಕಾರಣ , ಅನುಭಾವವು ಕಾರ್ಯ ಎಂದು ಹೇಳಿತಷ್ಟೆ. ಹೀಗೆ] ಕಾರಣ ಕಾರ್ಯಗಳಾಗಿರುವಂಥ ಅವುಗಳನ್ನು [ಲೋಕದ] ಸಮಗ್ರವ್ಯವಹಾರವನ್ನನುಸರಿಸಿ ಸಾಧಿಸಬೇಕು.

ವ್ಯಾಖ್ಯೆ : ಲೌಕಿಕರಸಕ್ಕೆ ಕ್ರಮವಾಗಿ ಕಾರಣ ಕಾರ್ಯಗಳಾಗಿರುವ ವಿಭಾವ ಅನುಭಾವಗಳ ಸಿದ್ಧಿಯನ್ನು ಕೇವಲ [ಲೌಕಿಕ]ವ್ಯವಹಾರಗಳಿಂದಲೇ ಪಡೆಯಬೇಕು. ಆದಕಾರಣ ಅವುಗಳಿಗೆ ಬೇರೆಯಾಗಿ ಲಕ್ಷಣಗಳನ್ನು ಹೇಳಿಲ್ಲ. ಇದಕ್ಕೆ ಆಧಾರ : [ನಾ.ಶಾ. : ೭-೫ರ ಅನಂತರದ ಗದ್ಯ(ಅಲ್ಲಿ ಪಾಠಾಂತರ ಉಂಟು) : 'ವಿಭಾವಾನುಭಾವೌ ಲೋಕಸಂಸಿದ್ಧೌ ಲೋಕಯಾತ್ರಾನುಗಾಮಿನೌ ಲೋಕಸ್ವಭಾವೋಪಗತತ್ವಾಚ್ಚ ನ ಪೃಥಗ್ಲಕ್ಷಣಮುಚ್ಯತೇ । (ವಿಭಾವಾನುಭಾವಗಳು ಲೋಕವ್ಯವಹಾರದಿಂದ ಪ್ರಮಾಣಿತವಾಗಿವೆ, ಲೋಕವ್ಯವಹಾರಕ್ಕೆ ಅನುಸಾರವಾಗಿವೆ; ಲೋಕ ಸ್ವಭಾವದಿಂದಲೇ ಕೂಡಿದ್ದಾಗಿರುವ ಕಾರಣ ಇವುಗಳ ಲಕ್ಷಣವನ್ನು ಬೇರೆಯಾಗಿ ಹೇಳಿಲ್ಲ.)'

ಟಿಪ್ಪಣಿ : ಲೋಕದ ನಡತೆಯನ್ನು ಕಂಡು ಅದರಂತೆಯೇ, ಕಾವ್ಯದಲ್ಲಿ ವಿಭಾವಾನುಭಾವಗಳನ್ನು ಚಿತ್ರಿಸಲಾಗುತ್ತದೆ; ಅವುಗಳನ್ನು ಪುನಃ ಕಲ್ಪಿಸಿಕೊಂಡು ಅನುಭವಿಸುವ ರಸಿಕನೂ ಲೌಕಿಕ ವ್ಯವಹಾರಗಳ ಜ್ಞಾನ ದಿಂದಲೇ ಅವುಗಳನ್ನು ಗ್ರಹಿಸುತ್ತಾನೆ; ಆದಕಾರಣ ಅಸಂಖ್ಯವಾಗಿರುವ ಅವುಗಳನ್ನು ಉದ್ದಕ್ಕೆ ಪಟ್ಟಿಮಾಡುತ್ತ ಒಂದೊಂದಕ್ಕೂ ಲಕ್ಷಣ ಹೇಳುತ್ತ ಹೋಗುವ ಆವಶ್ಯಕತೆಯಿಲ್ಲ – ಇದು ಈ ಕಾರಿಕೆಯ ಸಾರಾಂಶ.

ಹೋಲಿಕೆ = ನಾ.ಶಾ. : ೭-೫ರ ಅನಂತರದ ಗದ್ಯ, ೬ ಇ.,

# ಭಾವ ಮತ್ತು ಸಾತ್ತ್ವಿಕಭಾವಗಳು

## ೫. ಭಾವಲಕ್ಷಣ :

**ಸುಖದುಃಖಾದಿಕೈರ್ಭಾವೈರ್ಭಾವಸ್ತದ್ಭಾವಭಾವನಮ್ ।**

ಅನು : [ಕಾವ್ಯಾದಿಗಳಲ್ಲಿ ಅನುಭಾವ ಮೊದಲಾದವುಗಳ ಮೂಲಕ ಸೂಚಿತವಾದ] ಸುಖದುಃಖ ಇತ್ಯಾದಿ ಭಾವಗಳಿಂದ [ರಸಿಕನು] ಆ ಭಾವವನ್ನು [ಎಂದರೆ, ಸೂಚಿತವಾದ ವಿಶಿಷ್ಟಭಾವವನ್ನು] ಭಾವಿಸಿಕೊಳ್ಳುವುದು 'ಭಾವ'.

ವ್ಯಾಖ್ಯೆ : ಅನುಕಾರ್ಯರನ್ನು [ಎಂದರೆ, ಕಾವ್ಯಾದಿಗಳಲ್ಲಿ ಯಾರನ್ನು ಉದ್ದೇಶಿಸಿ ಚಿತ್ರಿಸಿವೆಯೋ ಅಂಥ ರಾಮಾದಿ ಮೂಲ ವ್ಯಕ್ತಿಯನ್ನು] ಆಶ್ರಯಿಸಿರುವ ಸುಖದುಃಖಾದಿ ರೂಪವುಳ್ಳ ಭಾವಗಳು, ಆ ಭಾವಗಳಿರುವ ಭಾವಕರ ಚಿತ್ತದಲ್ಲಿ ಭಾವಿತವಾಗುವುದು ಅಥವಾ ವಾಸಿತವಾಗುವುದು. ಹಾಗೆ ಭಾವಕಚಿತ್ತದಲ್ಲಿ ಭಾವಿತ ವಾಗುವುದು ಅಥವಾ ವಾಸಿತವಾಗುವುದೇ 'ಭಾವ'. ಇದಕ್ಕೆ ಆಧಾರ: [ನಾ.ಶಾ. : ೭, ಆರಂಭದ ಗದ್ಯ] : 'ಅಹೋ

ತ್ಯನೇನ ರಸೇನ ಗಂಧೇನ ವಾ ಸರ್ವಮೇತದ್ಭಾವಿತಂ ವಾಸಿತಮ್ । [ಅಹೋ, ಈ (ಬೇರೊಂದು) ರಸದಿಂದ ಗಂಧದಿಂದ ಸರ್ವವೂ ಭಾವಿತವಾಯಿತು, ವಾಸಿತವಾಯಿತು – ಅಲ್ಲವೇ?]'

ಅಥವಾ–ರಸಗಳನ್ನು ಭಾವಿಸುವಂಥದು 'ಭಾವ' ಎನ್ನಬಹುದು. ಇಲ್ಲವೆ–ಕವಿಯಲ್ಲಿ ಅಂತರ್ಗತವಾಗಿರುವ ಭಾವವನ್ನು ಭಾವಿಸುವ ಕಾರಣ 'ಭಾವ' ಎನ್ನಬಹುದು.

ಭಾವಗಳಲ್ಲಿ 'ಸ್ಥಾಯಿ','ವ್ಯಭಿಚಾರಿ' ಎಂದು ಎರಡು ವಿಧ. ಅವುಗಳನ್ನು ಮುಂದೆ ಹೇಳಲಾಗುತ್ತದೆ.

ಟಿಪ್ಪಣಿ : ವ್ಯಭಿಚಾರಿಭಾವಗಳ ಲಕ್ಷಣ ೪–೮ರಿಂದ ಆರಂಭವಾಗುತ್ತದೆ ಹಾಗೂ ಸ್ಥಾಯಿಭಾವಗಳ ಲಕ್ಷಣ ೪–೪೩ರಿಂದ ಆರಂಭವಾಗುತ್ತದೆ. ವ್ಯಭಿಚಾರಿ ಹಾಗೂ ಸ್ಥಾಯಿಭಾವಗಳಲ್ಲದೆ, ಅನುಭಾವತ್ವವನ್ನು ಹೊಂದಿರುವ 'ಸಾತ್ತ್ವಿಕಭಾವ'ವೆಂಬ ಇನ್ನೊಂದು ವರ್ಗವೂ ಉಂಟು. (ಮುಂದಿನ ಖಂಡ ನೋಡಿ.)

ಧನಿಕ 'ಅನುಕಾರ್ಯ' ಎಂಬ ಮಾತನ್ನು ಬಳಸಿರುವನಷ್ಟೆ. ಕಾವ್ಯ ಯಾರನ್ನು ಉದ್ದೇಶಿಸುತ್ತದೆಯೋ ಅಂಥ ಮೂಲವ್ಯಕ್ತಿಗಳಾದ ರಾಮಾದಿಗಳಿಗೆ 'ಅನುಕಾರ್ಯ'ರು ಎಂದು ಸಂಜ್ಞೆ; ಅನುಕಾರ್ಯರನ್ನು ಅನುಕರಿಸುವ ನಟರಿಗೆ 'ಅನುಕರ್ತ'ರು ಎಂದು ಹೆಸರು.

ಈ ಕಾರಿಕೆಯಲ್ಲಿ ಹೇಳಿರುವ ಭಾವಲಕ್ಷಣ 'ಕಾವ್ಯಭಾವ'ವನ್ನು ಕುರಿತದ್ದು 'ಲೋಕಭಾವ'ವನ್ನಲ್ಲ – ಎಂಬುದನ್ನು ಗಮನಿಸಬೇಕು.

ಹೋಲಿಕೆ = ನಾ.ಶಾ. : ೭–ಆರಂಭದಿಂದ ೩ರ ವರೆಗೆ; ಸಾ.ದ. : ೩–೧೮೧.

## ೬. ಸಾತ್ತ್ವಿಕಭಾವಲಕ್ಷಣ :

**ಪೃಥಗ್ಭಾವಾ ಭವಂತ್ಯನ್ಯೇಽನುಭಾವತ್ವೇಽಪಿ ಸಾತ್ತ್ವಿಕಾಃ ॥ ೪ ॥**
**ಸತ್ತ್ವಾದೇವ ಸಮುತ್ಪತ್ತೇಸ್ತಚ್ಚ ತದ್ಭಾವಭಾವನಮ್ ।**

ಅನು : ಸಾತ್ತ್ವಿಕ [ಭಾವ]ಗಳು 'ಅನುಭಾವತ್ವ'ವನ್ನು ಹೊಂದಿದ್ದರೂ ಕೂಡ, [ಅವು] ಬೇರೆ [ವಿಶಿಷ್ಟವಾದ ] ಭಾವಗಳೇ ಆಗಿರುತ್ತವೆ. [ಅವು] ಕೇವಲ ಸತ್ತ್ವದಿಂದ ಹುಟ್ಟಿಕೊಂಡವು. ['ಭಾವ'ದಂತೆಯೇ] ಇದು [ಎಂದರೆ, ಸಾತ್ತ್ವಿಕಭಾವ ಕೂಡ, ಕಾವ್ಯಾದಿಗಳಿಂದ ಸೂಚಿತವಾದ] ಆ ಭಾವವನ್ನು ಭಾವಿಸುವಂಥದಾಗಿದೆ.

ವ್ಯಾಖ್ಯೆ : ಬೇರೆಯವರಲ್ಲಿರುವ ದುಃಖಹರ್ಷಾದಿಗಳನ್ನು ಭಾವಿಸುವುದಕ್ಕೆ ಅತ್ಯಂತ ಅನುಕೂಲವಾಗಿರುವ ಅಂತಃಕರಣವೇ 'ಸತ್ತ್ವ'. ಇದಕ್ಕೆ ಆಧಾರ : [ನಾ.ಶಾ. : ೭–೯೩ರ ಅನಂತರದ ಗದ್ಯ] : 'ಸತ್ತ್ವಂ ನಾಮ ಮನಃಪ್ರಭವಮ್ । ತಚ್ಚ ಸಮಾಹಿತಮನಸ್ತ್ವಾದುತ್ಪದ್ಯತೇ । [ಮನಸ್ಸಿನಿಂದ ಹುಟ್ಟುವಂಥದು ಸತ್ತ್ವ. ಅದು ಶಾಂತವೂ ಏಕಾಗ್ರವೂ ಆದ ಮನಸ್ಸಿನಿಂದ ಉತ್ಪನ್ನವಾಗುತ್ತದೆ.]'

ಒಬ್ಬನು ದುಃಖಿತನಾದಾಗ ಅಥವಾ ಹರ್ಷಿತನಾದಾಗ ಅವನಲ್ಲಿ ಯಾವ ಅಶ್ರು ರೋಮಾಂಚ ಇ.ಗಳು ಉತ್ಪನ್ನವಾಗುವುವೊ ಅವೇ ಮನಸ್ಸಿನ ಸತ್ತ್ವಗಳಾಗಿವೆ. ಹೀಗೆ ಸತ್ತ್ವದಿಂದ ಉತ್ಪನ್ನವಾಗುವ ಕಾರಣ ಅವಕ್ಕೆ 'ಸಾತ್ತ್ವಿಕಭಾವ'ಗಳೆನ್ನುತ್ತಾರೆ. ಮನಸ್ಸಿನ ಸತ್ತ್ವದಿಂದ ಉತ್ಪನ್ನವಾಗುವ ಕಾರಣ ಅಶ್ರು ರೋಮಾಂಚ ಇ.ಗಳು ಭಾವಗಳೇ ಆಗಿವೆ. ಮತ್ತು, ಈ ಅಶ್ರು ರೋಮಾಂಚ ಇ.ಗಳು ವಿಶಿಷ್ಟಭಾವಗಳನ್ನು ಸೂಚಿಸತಕ್ಕ ವಿಕಾರಗಳೂ ಆಗಿರುವ ಕಾರಣ ಅವು ಅನುಭಾವಗಳೂ ಆಗಿವೆ. ಹೀಗೆ ಅವಕ್ಕೆ ಭಾವರೂಪ ಮತ್ತು ಅನುಭಾವರೂಪ–ಎರಡೂ ಉಂಟು.

ಟಿಪ್ಪಣಿ : ಅಶ್ರುರೋಮಾಂಚ ಮುಂತಾದ ಎಂಟು 'ಸಾತ್ತ್ವಿಕಭಾವ'ಗಳೆಂದು ಹೇಳಲ್ಪಟ್ಟಿವೆ. (ಮುಂದಿನ ಖಂಡ ನೋಡಿ.) ಮನಸ್ಸಿನಿಂದ ನೇರ ಹುಟ್ಟುತ್ತವೆ ಎಂಬ ಕಾರಣದಿಂದ ಇವುಗಳನ್ನು 'ಭಾವವರ್ಗ'ಕ್ಕೆ ಸೇರಿಸುತ್ತಾರೆ; ಹಾಗೆಯೇ, ಅವು ಭಾವಸೂಚಕವಾದ ಶಾರೀರಕ ವಿಕಾರಗಳು ಎಂಬ ಕಾರಣದಿಂದ 'ಅನುಭಾವ ವರ್ಗ'ಕ್ಕೆ ಸೇರಿಸುತ್ತಾರೆ. ಅನುಭಾವತ್ವವನ್ನೂ ಹೊಂದಿರುವ ಈ 'ಭಾವ'ಗಳನ್ನು ಶುದ್ಧಭಾವಗಳಾಗಿ

ಪರಿಗಣಿಸುವಂತಿಲ್ಲವಾದ ಕಾರಣ, ಇವನ್ನು 'ಸಾತ್ತ್ವಿಕಭಾವಗಳು' ಎಂಬ ವಿಶೇಷವರ್ಗದ ಅಡಿಯಲ್ಲಿ ಸೇರಿಸಲಾಗುತ್ತದೆ.

ಹೋಲಿಕೆ = ನಾ.ಶಾ. : ೭-೯೨ರ ಅನಂತರದ ಗದ್ಯ; ಸಾ.ದ. : ೩-೧೩೪, ೧೩೫; ಪ್ರತಾಪ : ೪-೧.

## ೭. ಸಾತ್ತ್ವಿಕಭಾವಗಳು :

**ಸ್ತಂಭಪ್ರಲಯರೋಮಾಂಚಾಃ ಸ್ವೇದೋ ವೈವರ್ಣ್ಯವೇಪಥೂ ॥ ೫ ॥**

**ಅಶ್ರುವೈಸ್ವರ್ಯಮಿತ್ಯಷ್ಟೌ ಸ್ತಂಭೋಽಸ್ಮಿನ್ನಿಷ್ಕ್ರಿಯಾಂಗತಾ ।**
**ಪ್ರಲಯೋ ನಷ್ಟಸಂಜ್ಞತ್ವಂ ಶೇಷಾಃ ಸುವ್ಯಕ್ತಲಕ್ಷಣಾಃ ॥ ೬ ॥**

ಅನು : ಸ್ತಂಭ, ಪ್ರಲಯ, ರೋಮಾಂಚ, ಸ್ವೇದ, ವೈವರ್ಣ್ಯ, ವೇಪಥು, ಅಶ್ರು, ವೈಸ್ವರ್ಯ – ಈ ಎಂಟು [ಸಾತ್ತ್ವಿಕಭಾವಗಳಾಗಿವೆ.] ಅವುಗಳಲ್ಲಿ–[ದೇಹದ]ಅಂಗಗಳು ನಿಶ್ಚೇಷ್ಟಿತವಾಗುವುದು 'ಸ್ತಂಭ'; ಪ್ರಜ್ಞೆ ಕಳೆದುಕೊಳ್ಳುವುದು 'ಪ್ರಲಯ'. ಉಳಿದ [ರೋಮಾಂಚ ಮೊದಲಾದ]ವುಗಳ ಲಕ್ಷಣಗಳು ಸ್ಪಷ್ಟವಾಗಿವೆ.

ವ್ಯಾಖ್ಯೆ : ಉದಾ:–[ಅಪಭ್ರಂಶ ಭಾಷೆಯ ಈ ಶ್ಲೋಕಗಳ ಆಶರ ತಿಳಿಯದು] :

'ವೇವಇ ಸೇಅದವದನೀ ರೋಮಞ್ಚಿಅ ಗತ್ತಿ ಏ ವವಇ ।
ವಿಲಲುಲ್ಲ ತು ವಲಅ ಲಹು ವಾಹೋಅಲ್ಲೀಏ ರಣೇತ್ತಿ ॥
ಮುಹಲಊ ಸಾಮಲಿ ಹೋಈ ಖಣೇ ವಿಮುಚ್ಚಇ ವಿಅಗ್ಗ್ಯೇಣ ।
ಮುದ್ಧಾ ಮುಹಅಲ್ಲೀ ತುಅ ಪೇಮ್ಮೇಣ ಸಾವಿ ಣ ಧಿಜ್ಜಇ ॥'

[ಮುಖ ಬೆವರಿ ಆಕೆ ಕಂಪಿಸುತ್ತಿದ್ದಾಳೆ; ಮೆಯ್ಯಲ್ಲಿ ನವಿರೇಳುತ್ತಿದೆ; ಆಕೆಯ ಬಾಹುಲತೆಗಳಲ್ಲಿ ಆಡುವ ಬಳೆ ಮೆತ್ತಗೆ ಧ್ವನಿಸುತ್ತಿದೆ. ಆಕೆಯ ಮುಖ ಕಪ್ಪಿಡುತ್ತಿದೆ. ಕ್ಷಣದಲ್ಲಿ ಮೂರ್ಛೆಹೋಗುತ್ತಾಳೆ. ಎಲೈ (ಸುಂದರ), ನಿನ್ನ ಪ್ರೇಮದಿಂದಾಗಿ ಆ ಮುಗ್ಧೆಯ ಮುಖಲತೆ ಕೂಡ ಧೈರ್ಯವನ್ನು ತಾಳದು.]

ಟಿಪ್ಪಣಿ : ರೋಮಾಂಚ =ನವಿರೇಳುವುದು; ಸ್ವೇದ =ಬೆವರು ಬರುವುದು; ವೈವರ್ಣ್ಯ = ಬಣ್ಣ ಬಿಳಿಚಿಕೊಳ್ಳುವುದು; ವೇಪಥು=ಮೆಯ್ ನಡುಗುವುದು; ಅಶ್ರು = ಕಂಬನಿ ಸುರಿಸುವುದು; ವೈಸ್ವರ್ಯ= ಗದ್ಗದ ಮುಂತಾಗಿ ಸ್ವರ ವಿಕಾರವಾಗುವುದು.

ಹೋಲಿಕೆ=ನಾ.ಶಾ.: ೬-೨೨ ಮತ್ತು ೭-೯೨ರಿಂದ ೧೦೪; ಸಾ.ದ. : ೩-೧೩೫ರಿಂದ ೧೪೦; ಪ್ರತಾಪ : ೪-೧.

# ವ್ಯಭಿಚಾರಿಭಾವಗಳು

## ೮. ವ್ಯಭಿಚಾರಿಲಕ್ಷಣ :

**ವಿಶೇಷಾದಭಿಮುಖ್ಯೇನ ಚರಂತೋ ವ್ಯಭಿಚಾರಿಣಃ ।**
**ಸ್ಥಾಯಿನ್ಯುನ್ಮಗ್ನನಿರ್ಮಗ್ನಾಃ ಕಲ್ಲೋಲಾ ಇವ ವಾರಿಧೌ ॥ ೭ ॥**

ಅನು : ಸಮುದ್ರದಲ್ಲಿನ ತೆರೆಗಳಂತೆ, ಸ್ಥಾಯಿಭಾವದಲ್ಲಿ ವಿಶೇಷವಾಗಿ ಎದುರು ತೋರುತ್ತ [ಅಥವಾ ಸ್ಥಾಯಿಗೆ ಅನುಕೂಲವಾಗಿರುತ್ತ, ಅದರಲ್ಲಿ ಒಮ್ಮೆ] ಎದ್ದು [ಮತ್ತೊಮ್ಮೆ] ಅಡಗಿ ಸಂಚರಿಸುತ್ತಿರುವಂಥವು 'ವ್ಯಭಿಚಾರಿ[ಭಾವ]ಗಳು.'

ವ್ಯಾಖ್ಯೆ : ಸಮುದ್ರವಿರುವುದರಿಂದಲೇ ಅದರಲ್ಲಿ ತರಗಳು ಮೇಲೆದ್ದು ಮತ್ತ ಲೀನವಾಗುವುವು. ಹಾಗೆಯೇ, ರತ್ಯಾದಿ ಸ್ಥಾಯಿಭಾವಗಳಿರುವುದರಿಂದಲೇ ಆ ಸ್ಥಾಯಿಭಾವಗಳಲ್ಲಿ ಎದುರು ತೋರುತ್ತ, ಒಮ್ಮೆ ಮೇಲಕ್ಕೆದ್ದು ಮತ್ತೊಮ್ಮೆ ಅಡಗುತ್ತ ಸಂಚರಿಸುತ್ತವೆ, ಈ ನಿರ್ವೇದಾದಿ ವ್ಯಭಿಚಾರಿಭಾವಗಳು.

ಟಿಪ್ಪಣಿ : ರತ್ಯಾದಿ ಸ್ಥಾಯಿಭಾವಗಳ ವಿವರಕ್ಕೆ ೪-೪೩ರಿಂದ ಮುಂದೆ ನೋಡಿ. ವ್ಯಭಿಚಾರಿಭಾವಗಳನ್ನು ಕುರಿತ ವಿವರ ಮುಂದಿನ ಖಂಡದಿಂದ ಆರಂಭವಾಗುತ್ತದೆ.'ವ್ಯಭಿಚಾರಿ'ಗಳಿಗೆ 'ಸಂಚಾರಿ'ಗಳೆಂಬ ಹೆಸರೂ ಉಂಟು.

ಅಭಿನವಗುಪ್ತ ಸ್ಥಾಯಿಯನ್ನು ಸೂತ್ರವೆಂದೂ ವ್ಯಭಿಚಾರಿಗಳನ್ನು ಆ ಸೂತ್ರದಲ್ಲಿ ಕೋದಮಣಿಗಳೆಂದೂ ವರ್ಣಿಸುತ್ತಾನೆ. (ನೋಡಿ : ಬ.ನಾ.ಶಾ. : I-ಪು. ೨೮೪) ಸಮುದ್ರದಲ್ಲಿನ ತರಗಳಂತೆ ಎಂಬ ಇಲ್ಲಿನ ಹೋಲಿಕೆ ಬೇರೆಡೆಗಳಲ್ಲಿ ಕೂಡ ಬಂದಿದೆ. ಉದಾಹರಣೆಗೆ : [ರಸಾರ್ಣವ ಸುಧಾಕರ : ೨-೩] :

'ಉನ್ಮಜ್ಜಂತೋ ನಿಮಜ್ಜಂತಃ ಸ್ಥಾಯಿನ್ಯಂಬುನಿಧಾವಿವ ।
ಊರ್ಮಿವದ್ವರ್ಧಯಂತ್ಯೇನ ಯಾಂತಿ ತದ್ರೂಪತಾಂ ಚ ತೇ ॥'

ಹೋಲಿಕೆ = ನಾ.ಶಾ. : ೭-೨೭ರ ಮುಂದಿನ ಗದ್ಯ; ಸಾ.ದ. : ೩-೧೪೦.

## ೯. ವ್ಯಭಿಚಾರಿಭೇದಗಳು :

**ನಿರ್ವೇದಗ್ಲಾನಿಶಂಕಾಶ್ರಮಧೃತಿಜಡತಾಹರ್ಷದೈನ್ಯೌಗ್ರ್ಯಚಿಂತಾ-**
**ಸ್ತ್ರಾಸೇರ್ಷ್ಯಾಮರ್ಷಗರ್ವಾಃ ಸ್ಮೃತಿಮರಣಮದಾಃ ಸುಪ್ತನಿದ್ರಾ ವಿಬೋಧಾಃ ।**
**ವ್ರೀಡಾಪಸ್ಮಾರಮೋಹಾಃ ಸಮತಿರಲಸತಾವೇಗತರ್ಕಾವಹಿತ್ಥಾ**
**ವ್ಯಾಧ್ಯುನ್ಮಾದೌ ವಿಷಾದೋತ್ಸುಕಚಪಲಯುತಾಸ್ತ್ರಿಂಶದೇತೇ ತ್ರಯಶ್ಚ ॥೮॥**

ಅನು : ನಿರ್ವೇದ, ಗ್ಲಾನಿ, ಶಂಕೆ, ಶ್ರಮ, ಧೃತಿ, ಜಡತೆ, ಹರ್ಷ, ದೈನ್ಯ, ಔಗ್ರ್ಯ(ಉಗ್ರತೆ), ಚಿಂತೆ, ತ್ರಾಸ, ಈರ್ಷ್ಯೆ, ಅಮರ್ಷ, ಗರ್ವ, ಸ್ಮೃತಿ, ಮರಣ, ಮದ, ಸುಪ್ತ, ನಿದ್ರೆ, ವಿಬೋಧ, ವ್ರೀಡೆ, ಅಪಸ್ಮಾರ, ಮೋಹ, ಮತಿ, ಅಲಸತೆ, ಆವೇಗ, ತರ್ಕ, ಅವಹಿತ್ಥ, ವ್ಯಾಧಿ, ಉನ್ಮಾದ, ವಿಷಾದ, ಉತ್ಸುಕ (ಔತ್ಸುಕ್ಯ), ಚಪಲ – ಈ ಮೂವತ್ತುಮೂರು [ವ್ಯಭಿಚಾರಿಭಾವಗಳು].

ಟಿಪ್ಪಣಿ : ಈ ಒಂದೊಂದರ ಲಕ್ಷಣವನ್ನೂ ಇನ್ನು ಮುಂದೆ ಹೇಳಲಾಗುತ್ತದೆ. ಛಂದಸ್ಸು : ಸ್ರಗ್ಧರಾ.

ಹೋಲಿಕೆ = ನಾ.ಶಾ. : ೬-೧೮ರಿಂದ ೨೧; ಸಾ.ದ. : ೩-೧೪೧; ಪ್ರತಾಪ : ೪-೧.

## ೧೦. ನಿರ್ವೇದಲಕ್ಷಣ

**ತತ್ತ್ವಜ್ಞಾನಾಪದೀರ್ಷ್ಯಾದೇರ್ನಿರ್ವೇದಃ ಸ್ವಾವಮಾನನಮ್ ।**
**ತತ್ರ ಚಿಂತಾಶ್ರುನಿಃಶ್ವಾಸವೈವರ್ಣ್ಯೋಚ್ಛ್ವಾಸದೀನತಾಃ ॥೯॥**

ಅನು : ತತ್ತ್ವಜ್ಞಾನ, ಆಪತ್ತು, ಈರ್ಷ್ಯೆ ಮೊದಲಾದವುಗಳಿಂದ [ತನ್ನಿಂದಲೆ] ತನಗೆ ಅವಮಾನವುಂಟಾಗುವುದು[ಎಂದರೆ, ಅಹಂಕಾರಭಂಗವಾಗುವುದು] 'ನಿರ್ವೇದ'.

ಅಲ್ಲಿ–ಚಿಂತೆ ಅಶ್ರು ನಿಃಶ್ವಾಸ ವರ್ಣವಿಕಾರ ಉಚ್ಛ್ವಾಸ ದೀನತೆ–ಇವುಗಳು [ಉಂಟಾಗುತ್ತವೆ. ಅವೇ ನಿರ್ವೇದದ ಚಿಹ್ನೆ ಅಥವಾ ಅನುಭಾವಗಳಾಗಿವೆ].

ವ್ಯಾಖ್ಯೆ : ತತ್ತ್ವಜ್ಞಾನದಿಂದ ಉಂಟಾಗುವ ನಿರ್ವೇದಕ್ಕೆ ಉದಾ:–[ಭರ್ತೃ.ವೈ.ಶತ.] :

'ಪ್ರಾಪ್ತಾಃ ಶ್ರಿಯಃ ಸಕಲಕಾಮದುಘಾಸ್ತತಃ ಕಿಂ
ದತ್ತಂ ಪದಂ ಶಿರಸಿ ವಿದ್ವಿಷತಾಂ ತತಃ ಕಿಮ್।
ಸಂಪ್ರೀಣಿತಾಃ ಪ್ರಣಯಿನೋ ವಿಭವೈಸ್ತತಃ ಕಿಂ
ಕಲ್ಪಂ ಸ್ಥಿತಂ ತನುಭೃತಾಂ ತನುಭಿಸ್ತತಃ ಕಿಮ್ ॥'

[ಬೇಕೆನಿಸಿದುದನ್ನೆಲ್ಲ ಕರೆದುಕೊಡುವ ಐಶ್ವರ್ಯ ಪ್ರಾಪ್ತವಾಯಿತು, ಅದರಿಂದೇನು? ವೈರಿಗಳ ತಲೆ ತುಳಿದಾಯಿತು, ಅದರಿಂದೇನು? ವೈಭವದಿಂದ ಒಲವಿನವರನ್ನು ನಲಿಸಿದುದಾಯಿತು, ಅದರಿಂದೇನು? ಮನುಷ್ಯ ಶರೀರವು ಕಲ್ಪಾಂತ ಸ್ಥಾಯಿಯಾಯಿತು, ಅದರಿಂದ ತಾನ ಏನು?]

ಆಪತ್ತಿನಿಂದುಂಟಾಗುವ ನಿರ್ವೇದಕ್ಕೆ ಉದಾ:–[ಆಕರ ತಿಳಿಯದು] :

'ರಾಜ್ಞೋ ವಿಪದ್ಬಂಧುವಿಯೋಗದುಃಖಂ
ದೇಶಚ್ಯುತಿರ್ದುರ್ಗಮಮಾರ್ಗಖೇದಃ।
ಆಸ್ವಾದ್ಯತೇಽಸ್ಯಾಃ ಕಟುನಿಷ್ಫಲಾಯಾಃ
ಫಲಂ ಮಯೈತಚ್ಚಿರಜೀವಿತಾಯಾಃ ॥'

[ತೀರ ನಿಷ್ಫಲವಾದ ಈ ಚಿರಂಜೀವಿತೆಯ ಫಲ ಇದು : ರಾಜನ ವಿಪತ್ತು, ಬಂಧುವಿಯೋಗ ದುಃಖ, ದೇಶಚ್ಯುತಿ, ದುರ್ಗಮವಾದ ಮಾರ್ಗಸಂಕಟ ಎಲ್ಲವನ್ನೂ ನಾನು ಸವಿನೋಡಿದುದಾಯಿತು.]

ಈರ್ಷ್ಯೆಯಿಂದೊದಗುವ ನಿರ್ವೇದಕ್ಕೆ ಉದಾ:–[ಹನು. : ೯–೫೫] : ೧

'ಧಿಗ್ಧಿಕ್‌ಶಕ್ರಜಿತಂ ಪ್ರಬೋಧಿತವತಾ ಕಿಂ ಕುಂಭಕರ್ಣೇನ ವಾ
ಸ್ವರ್ಗಗ್ರಾಮಟಿಕಾವಿಲುಂಠನವೃಥೋಚ್ಛೂನೈಃ ಕಿಮೇಭಿರ್ಭುಜೈಃ।
ನ್ಯಕ್ಕಾರೋ ಹ್ಯಯಮೇವ ಮೇ ಯದರಯಸ್ತತ್ರಾಪ್ಯಸೌ ತಾಪಸಃ
ಸೋಽಪ್ಯತ್ರೈವ ನಿಹಂತಿ ರಾಕ್ಷಸಭಟಾನ್ ಜೀವತ್ಯಹೋ ರಾವಣಃ ॥''

[ಇಂದ್ರನನ್ನೆ ಜಯಿಸಿದವನಿಗೆ (ಮೇಘನಾದನಿಗೆ) ಧಿಕ್ಕಾರ(ವುಂಟಾಯಿತು). ಕುಂಭಕರ್ಣ ಎಚ್ಚತ್ತು ಆದದ್ದೇನು? ಸ್ವರ್ಗಗ್ರಾಮವೆಂಬರ ಭಾಗವನ್ನೆ ಕೊಳ್ಳೆಹೊಡೆದ ಈ ನನ್ನ ಉನ್ನತ ಭುಜಗಳಿಂದ ಏನು ಸಾರ್ಥಕ? – ನನಗೂ ಶತ್ರುಗಳು! ಅದೂ ಒಬ್ಬ ತಾಪಸ ನನ್ನ ಶತ್ರು; ಆ ಶತ್ರುವೂ ಇಲ್ಲಿಗೇ ಬಂದು ರಾಕ್ಷಸಭಟರನ್ನು ತರಿದೊಟ್ಟುತ್ತಿದ್ದಾನೆ. ಅಹೋ, ಇನ್ನೂ ರಾವಣನು ಜೀವಿಸುತ್ತಿರುವಾಗ ಇಷ್ಟೆಲ್ಲ! ಎಂತಹ ಅಪಮಾನವಿದು!]

ವೀರಶೃಂಗಾರರಸಗಳ ವ್ಯಭಿಚಾರೀ ನಿರ್ವೇದಕ್ಕೆ ಉದಾ:– [ಆಕರ ತಿಳಿಯದು] :

'ಯೇ ಬಾಹವೋ ನ ಯುಧಿ ವೈರಿಕಠೋರಕಂಠ –
ಪೀಠೋಚ್ಚಲದ್ರುಧಿರರಾಜಿವಿರಾಜಿತಾಂಸಾಃ।
ನಾಪಿ ಪ್ರಿಯಾಪೃಥುಪಯೋಧರಪತ್ರಭಂಗ –
ಸಂಕ್ರಾಂತಕುಂಕುಮರಸಾಃ ಖಲು ನಿಷ್ಫಲಾಸ್ತೇ ॥'

---

೧ ಹಿಂದೀ ದ.ರೂ. ಅನುವಾದದಲ್ಲಿ ಈ ಶ್ಲೋಕದ ಪಾಠ–ಇಲ್ಲಿನ ಉತ್ತರಾರ್ಧ ಮೊದಲೂ ಇಲ್ಲಿನ ಪೂರ್ವಾರ್ಧ ಅನಂತರವೂ ಆಗಿ ಬಂದಿದೆ.

[ಯಾವ ಬಾಹುಗಳು ಶತ್ರುಗಳ ಕಠೋರ ಕುಂಭತಟದಲ್ಲಿ ಉಕ್ಕಿಬರುವ ರಕ್ತರಾಶಿಯಿಂದ ವಿರಾಜಿತವಾಗುವುದಿಲ್ಲವೊ ಅಥವಾ ಪ್ರಿಯೆಯ ಉನ್ನತ ಕುಚಮಂಡಲದಲ್ಲಿನ ಪತ್ರಭಂಗದ ಕುಂಕುಮ ರಸದಿಂದ ಲೇಪಿತವಾಗುವುದಿಲ್ಲವೊ – ಅಂತಹ ಬಾಹುಗಳು ನಿಶ್ಚಯವಾಗಿಯೂ ವ್ಯರ್ಥ.]

ತನಗೆ ಅನುರೂಪನಾದ ಶತ್ರು ಅಥವಾ ತನಗೆ ಅನುರೂಪಳಾದ ಸ್ತ್ರೀ ದೊರೆಯದಿರುವಾಗ ಹೇಳುವ ಈ ಮೇಲಿನ ಮಾತು ನಿರ್ವೇದಸೂಚಕವಾಗಿದೆ. ಇದರಂತೆಯೇ ಬೇರೆ ರಸಗಳಿಗೆ ಅಂಗರೂಪವಾಗಿ ಬರುವ ನಿರ್ವೇದಗಳನ್ನೂ ಉದಾಹರಿಸಬಹುದು.

ರಸಕ್ಕೆ ಅಂಗವಾಗದೆ ಬರುವ ಸ್ವತಂತ್ರ ನಿರ್ವೇದಕ್ಕೆ ಉದಾ:-[ಸುಭಾಷಿತಾವಲೀ; ಧ್ವನ್ಯಾ.ದ ೩-೪೧ರ ವ್ಯಾಖ್ಯೆಯಲ್ಲಿ ಈ ಪದ್ಯ ಉದಾಹೃತವಾಗಿದೆ] :

> 'ಕಸ್ತ್ವಂ ಭೋಃ ಕಥಯಾಮಿ ದೈವಹತಕಂ ಮಾಂ ವಿದ್ಧಿ ಶಾಖೋಟಕಂ
> ವೈರಾಗ್ಯಾದಿವ ವಕ್ಷಿ ಸಾಧು ವಿದಿತಂ ಕಸ್ಮಾದ್ಯತಃ ಶ್ರೂಯತಾಮ್ ।
> ವಾಮೇನಾತ್ರ ವಟಸ್ತಮಧ್ವಗಜನಃ ಸರ್ವಾತ್ಮನಾ ಸೇವತೇ
> ನ ಚ್ಛಾಯಾಪಿ ಪರೋಪಕಾರಕರಣೇ ಮಾರ್ಗಸ್ಥಿತಸ್ಯಾಪಿ ಮೇ ॥'

['ಅಯ್ಯಾ, ನೀನು ಯಾರು?' 'ಹೇಳುತ್ತೇನೆ ಕೇಳು – ನಾನೊಬ್ಬ ದೈವಹತಕನಾದ ಶಾಖೋಟಕ (ಭೂತಾವಾಸವಾದ ವೃಕ್ಷ).' 'ವೈರಾಗ್ಯದಿಂದೆಂಬಂತೆ ಮಾತನಾಡುತ್ತಿದ್ದೀಯೆ.' 'ಹೌದು, ಸರಿಯಾಗಿ ತಿಳಿದೆ.' 'ಕಾರಣ?' 'ಕೇಳು – ಇಲ್ಲಿ ಎಡಭಾಗದಲ್ಲಿರುವ ವಟವೃಕ್ಷವು ಪಾಂಥಜನರೆಲ್ಲರನ್ನೂ ಸೇವಿಸುತ್ತದೆ. ನಾನೋ, ಹಾದಿಯಲ್ಲೇ ನಿಂತಿದ್ದರೂ, ನೆರಳಿನಿಂದ ಪರರಿಗೆ ಉಪಕಾರ ಮಾಡಲು ಶಕ್ತನಾಗಿಲ್ಲ.']

–ವಿಭಾವ ಅನುಭಾವ ರಸ ಇವುಗಳ ಅಂಗರೂಪವಾಗಿ ಹಾಗೂ ಸ್ವತಂತ್ರವಾಗಿ ಅನೇಕ ರೀತಿಗಳಲ್ಲಿ ನಿರ್ವೇದ ಪ್ರಕಟವಾಗಿರುವುದನ್ನು ಕಾಣಬಹುದು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೨೮ರಿಂದ ೩೦; ಸಾ.ದ. : ೩-೧೪೨; ಪ್ರತಾಪ : ೪-೨೦.

## ೧೧. ಗ್ಲಾನಿಲಕ್ಷಣ :

> **ರತ್ಯಾದ್ಯಾಯಾಸತೃಟ್‌ಕ್ಷುದ್ಭಿರ್ಗ್ಲಾನಿರ್ನಿಷ್ಪ್ರಾಣತೇಹ ಚ ।**
> **ವೈವರ್ಣ್ಯಕಂಪಾನುತ್ಸಾಹಕ್ಷಾಮಾಂಗವಚನಕ್ರಿಯಾಃ ॥ ೧೦ ॥**

ಅನು : ರತಿ ಮುಂತಾದವುಗಳಿಂದ [ಉಂಟಾಗುವ] ಆಯಾಸ [ಮತ್ತು] ಬಾಯಾರಿಕೆ ಹಸಿವುಗಳಿಂದ [ಉಂಟಾಗುವ] ನಿಷ್ಪ್ರಾಣತೆ 'ಗ್ಲಾನಿ'. ಅದರಲ್ಲಿ ವರ್ಣ ವಿಹೀನತೆ, ನಡುಕ, ಅನುತ್ಸಾಹ, ಅಂಗವಚನಕ್ರಿಯೆಗಳ ಸೊರಗುವಿಕೆ [–ಈ ಮೊದಲಾದ ಚಿಹ್ನೆಗಳು ತೋರುತ್ತವೆ].

ವ್ಯಾಖ್ಯೆ : ರತಿ ಕಲಾಭ್ಯಾಸ ಮುಂತಾದುವುಗಳಿಂದ ಉಂಟಾಗುವ ಶ್ರಮ ಹಾಗೂ ಹಸಿವು ಬಾಯಾರಿಕೆ ವಾಂತಿ ಇತ್ಯಾದಿಗಳಿಂದ ಉಂಟಾಗುವ ನಿಷ್ಪ್ರಾಣತೆ 'ಗ್ಲಾನಿ'. ವೈವರ್ಣ್ಯ ಇತ್ಯಾದಿಗಳು ಅಲ್ಲಿನ ಅನುಭಾವಗಳು. ಉದಾ:-[ಮಾಘ : ೧೧-೨೦] :

> 'ಲುಲಿತನಯನತಾರಾಃ ಕ್ಷಾಮವಕ್ತ್ರೇಂದುಬಿಂಬಾ
> ರಜನಯ ಇವ ನಿದ್ರಾಕ್ಲಾಂತನೀಲೋತ್ಪಲಾಕ್ಷ್ಯಃ ।
> ತಿಮಿರಮಿವ ದಧಾನಾಃ ಸ್ರಂಸಿನಃ ಕೇಶಪಾಶಾ-
> ನವನಿಪತಿಗೃಹೇಭ್ಯೋ ಯಾಂತ್ಯಮೂರ್ವಾರವಧ್ವಃ ।'

[ಕಣ್ಣಿನ ತಾರಕೆಗಳು ಬಳಲಿರುವ, ಚಂದ್ರಬಿಂಬದಂಥ ಮುಖಗಳು ಕಾಂತಿಹೀನವಾಗಿರುವ, ಕಾಳ್ಗತ್ತಲೆಯಂತೆ ಇಳಿಬಿದ್ದ ಹೆಳಲು ಹೊತ್ತಿರುವ, ನಿದ್ದೆಯಿಂದ ಸೊರಗಿರುವ ಈ ನೀಲೋತ್ಪಲಾಕ್ಷಿಯರು ಈ ವಾರ ವಧುಗಳು(ತಾರೆಗಳು ಮಸುಕಾಗಿರಲು, ಚಂದ್ರಬಿಂಬ ಕಾಂತಿಗುಂದಿರಲು, ಉತ್ಪಲಗಳು ಸೊರಗಿರಲು, ಅಂಧಕಾರವನ್ನು ಧರಿಸಿದ) ರಾತ್ರಿಗಳೋ ಎಂಬಂತೆ–ರಾಜಗೃಹದಿಂದ ಹೊರ ಹೊರಡುತ್ತಿದ್ದಾರೆ.]

–'ನಿರ್ವೇದ'ದಲ್ಲಿನಂತೆಯೇ, ಉಳಿದ ಉದಾಹರಣೆಗಳನ್ನು ಕಲ್ಪಿಸಿಕೊಳ್ಳತಕ್ಕದ್ದು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೩೦ರ ಅನಂತರದ ಗದ್ಯ ೩೧, ೩೨; ಸಾ.ದ. : ೩–೧೭೦; ಪ್ರತಾಪ : ೪–೨೧.

## ೧೨. ಶಂಕಾಲಕ್ಷಣ :

**ಅನರ್ಥಪ್ರತಿಭಾ ಶಂಕಾ ಪರಕ್ರೌರ್ಯಾತ್ಸ್ವದುರ್ನಯಾತ್ ।**
**ಕಂಪಶೋಷಾಭಿವೀಕ್ಷಾದಿರತ್ರ ವರ್ಣಸ್ವರಾನ್ಯತಾ ॥ ೧೧ ॥**

ಅನು : ಬೇರೆಯವರ ಕ್ರೌರ್ಯದಿಂದ [ಅಥವಾ] ತನ್ನ ದುರ್ವ್ಯಾಪಾರದಿಂದ [ಉಂಟಾಗುವ] ಅನರ್ಥದ ಹೊಳಹು (ಸೂಚನೆ) 'ಶಂಕೆ'. ಅಲ್ಲಿ–ನಡುಕ, ಶೋಷ (ಮೆಯ್ ಒಣಗುವುದು ಅಥವಾ ತಾರುವುದು), ಅತ್ತಿತ್ತ ನೋಡುವಿಕೆ, ಬಣ್ಣ ಬದಲಾಗುವಿಕೆ, ಸ್ವರವ್ಯತ್ಯಾಸ ಮುಂತಾದ [ಚಿಹ್ನೆಗಳು ತೋರುತ್ತವೆ.]

ವ್ಯಾಖ್ಯೆ : ಪರಕ್ರೌರ್ಯದಿಂದುಂಟಾದ ಶಂಕೆ : ಉದಾ:–[ರತ್ನಾ ೩–೪] :

'ಹ್ರಿಯಾ ಸರ್ವಸ್ಯಾಸೌ ಹರತಿ ವಿದಿತಾಸ್ಮೀತಿ ವದನಂ
ದ್ವಯೋರ್ದೃಷ್ಟ್ವಾಽಽಲಾಪಂ ಕಲಯತಿ ಕಥಾಮಾತ್ಮವಿಷಯಾಮ್ ।
ಸಖೀಷು ಸ್ಮೇರಾಸು ಪ್ರಕಟಯತಿ ವೈಲಕ್ಷ್ಯಮಧಿಕಂ
ಪ್ರಿಯಾ ಪ್ರಾಯೇಣಾಸ್ತೇ ಹೃದಯನಿಹಿತಾತಂಕವಿಧುರಾ ॥'

[(ತನ್ನ ಪ್ರಣಯವ್ಯಾಪಾರವನ್ನು) ಅರಿತುಬಿಟ್ಟಿದ್ದಾರೆಂದು ಎಲ್ಲರ ಎದುರಿನಲ್ಲೂ ಈಕೆ ನಾಚಿಕೆಯಿಂದ ಮುಖ ತಿರುಗಿಸುತ್ತಾಳೆ. ಯಾರಿಬ್ಬರು ಮಾತನಾಡುತ್ತಿರುವುದನ್ನು ಕಂಡು ಅವರು ತನ್ನ ವಿಷಯವನ್ನೆ ಆಡುತ್ತಿರುವರೆಂದು ತಿಳಿಯುತ್ತಾಳೆ. ಸಖಿಯರು ನಗಲು (ಅವರು ತನ್ನ ಗುಪ್ತಪ್ರಣಯವನ್ನು ನೆನೆದೇ ನಗುತ್ತಿರುವರೆಂದು ಭಾವಿಸಿ) ತುಂಬ ನಾಚಿಕೆಗೊಳ್ಳುತ್ತಾಳೆ. ಪ್ರಾಯಶಃ, ನನ್ನ ಪ್ರಿಯಳು ಎದೆಯುಂಬಿದ ಆತಂಕದಿಂದ (ಹೀಗೆ ಬಹುರೀತಿಯಲ್ಲಿ) ಖೇದಗೊಳ್ಳುತ್ತಿದ್ದಾಳೆ.]

ತನ್ನ ದುರ್ನಯದಿಂದ ಉಂಟಾದ ಶಂಕೆ : ಉದಾ:–[ಮಹಾ. : ೨–೧] :

'ದೂರಾದ್ದವೀಯೋ ಧರಣೀಧರಾಭಂ ಯಸ್ತಾಟಕೇಯಂ ತೃಣವದ್ವ್ಯಧೂನೋತ್ ।
ಹಂತಾ ಸುಬಾಹೋರಪಿ ತಾಡಕಾರಿಃ ಸ ರಾಜಪುತ್ರೋ ಹೃದಿ ಬಾಧತೇ ಮಾಮ್ ॥'

[ಪರ್ವತೋಪಮನಾದ ತಾಟಕಾಪುತ್ರ(ಮಾರೀಚ)ನನ್ನು ದೂರದಿಂದಲೇ ತೃಣದಂತೆ ಚಿಮ್ಮಿ ಎಸೆದು, ಸುಬಾಹುವನ್ನೂ ಕೊಂದ, ತಾಡಕಾಶತ್ರುವಾದ ಆ ಅಲ್ಪ ರಾಜಪುತ್ರ(ರಾಮನು) ನನ್ನ ಹೃದಯದಲ್ಲಿ ಬಾಧೆಯನ್ನುಂಟುಮಾಡುತ್ತಿದ್ದಾನೆ.]

– ಇದೇ ರೀತಿಯಲ್ಲಿ ಇತರ ಉದಾಹರಣೆಗಳನ್ನೂ ಕಲ್ಪಿಸಿಕೊಳ್ಳಬೇಕು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೩೨ರ ಅನಂತರದ ಗದ್ಯ, ೩೩ರಿಂದ ೩೫; ಸಾ.ದ. : ೩–೧೬೧; ಪ್ರತಾಪ : ೪–೨೨.

---

೧ ಪಾಠ : ಶೋಕಾ ।

## ೧೩. ಶ್ರಮಲಕ್ಷಣ :

**ಶ್ರಮಃ ಖೇದೋಽಧ್ವರತ್ಯಾದೇಃ ಸ್ವೇದೋಽಸ್ಮಿನ್ಮರ್ದನಾದಯಃ ।**

ಅನು : ಮಾರ್ಗಗಮನ (ಪ್ರಯಾಣ) ರತಿ ಮೊದಲಾದವುಗಳಿಂದ [ಉಂಟಾಗುವ] ಖೇದ 'ಶ್ರಮ'. ಅಲ್ಲಿ ಬೆವರುವಿಕೆ, ಮರ್ದನ (ಮೆಯ್ ಉಜ್ಜುವುದು) ಇತ್ಯಾದಿ [ಚಿಹ್ನೆಗಳು ತೋರುತ್ತವೆ.]

ವ್ಯಾಖ್ಯೆ : ಮಾರ್ಗಗಮನದಿಂದ ಶ್ರಮ : ಉದಾ:-[ಉತ್ತರ. : ೧-೨೪] :

'ಅಲಸಲುಲಿತಮುಗ್ಧಾನ್ಯಧ್ವಸಂಜಾತಖೇದಾ-
ದಶಿಥಿಲಪರಿರಂಭೈರ್ದತ್ತಸಂವಾಹನಾನಿ ।
ಪರಿಮೃದಿತಮೃಣಾಲೀದುರ್ಬಲಾನ್ಯಂಗಕಾನಿ
ತ್ವಮುರಸಿ ಮಮ ಕೃತ್ವಾ ಯತ್ರ ನಿದ್ರಾಮವಾಪ್ತಾ ॥'

[ಹಾದಿ ನಡೆದು ಉಂಟಾದ ಆಯಾಸದಿಂದ ಬಳಲಿ ಸೊರಗಿದ, ಸುಂದರವಾಗಿದ್ದೂ ಬಸವಳಿದ ತಾವರೆದಂಟಿನಂತೆ ದುರ್ಬಲವಾದ ನಿನ್ನ ಅಂಗಗಳನ್ನು ನನ್ನ ಎದೆಯ ಮೇಲಿರಿಸಿ ಬಿಗಿಯಪ್ಪುಗೆಯ ಒತ್ತುವಿಕೆಯಿಂದ ನಿದ್ದೆಹೋದ ಜಾಗವಲ್ಲವೆ ಇದು?]

ರತಿಯಿಂದುಂಟಾಗುವ ಶ್ರಮ : ಉದಾ:-[ಮಾಘ. : ೧೦-೮೦] :

'ಪ್ರಾಪ್ಯ ಮನ್ಮಥರಸಾದತಿಭೂಮಿಂ ದುರ್ವಹಸ್ತನಭರಾಃ ಸುರತಸ್ಯ ।
ಶಶ್ರಮುಃ ಶ್ರಮಜಲಾರ್ದ್ರಲಲಾಟಶ್ಲಿಷ್ಟಕೇಶಮಸಿತಾಯತಕೇಶ್ಯಃ ॥'

[ಹೊರಲಾರದ ಮೊಲೆಹೊರೆಯುಳ್ಳ, ಕಪ್ಪಾದ ತುಂಬುಗೂದಲಿನ ರಮಣಿಯರು ಆಸೆಯ ಸವಿಯಿಂದ ರತಿಯ ಕೊನೆಮುಟ್ಟಿ, ಹಣೆಬೆವರಿಗೆ ಕೂದಲಂಟಿರಲು, ಬಳಲಿಹೋದರು.]

– ಹೀಗೆಯೇ ಉಳಿದ ಉದಾಹರಣೆಗಳನ್ನು ಕಲ್ಪಿಸಿಕೊಳ್ಳತಕ್ಕದ್ದು.

ಟಿಪ್ಪಣಿ : ಹೋಲಿಕೆ – ನಾ.ಶಾ. : ೭-೪೬ರ ಮುಂದಿನ ಗದ್ಯ, ೪೭; ಸಾ.ದ. : ೩-೧೪೬; ಪ್ರತಾಪ : ೪-೨೫.

## ೧೪. ಧೃತಿಲಕ್ಷಣ :

**ಸಂತೋಷೋ ಜ್ಞಾನಶಕ್ತ್ಯಾದೇರ್ಧೃತಿರವ್ಯಗ್ರಭೋಗಕೃತ್ ॥ ೧೨ ॥**

ಅನು : ಜ್ಞಾನ ಶಕ್ತಿ ಮೊದಲಾದವುಗಳಿಂದ [ಉಂಟಾಗಿ] ನಿರ್ವ್ಯಾಕುಲವಾದ ಭೋಗಕ್ಕೆ ಕಾರಣವಾಗುವಂಥ ಸಂತೋಷ 'ಧೃತಿ'.

ವ್ಯಾಖ್ಯೆ : ಜ್ಞಾನದಿಂದ ಧೃತಿ : ಉದಾ:-[ಭರ್ತೃ. ವೈ.ಶತ. : ಶ್ಲೋ. ೫೩] :

'ವಯಮಿಹ ಪರಿತುಷ್ಟಾ ವಲ್ಕಲೈಸ್ತ್ವಂ ಚ ಲಕ್ಷ್ಮ್ಯಾ,
ಸಮ ಇಹ ಪರಿತೋಷೋ ನಿರ್ವಿಶೇಷೋ ವಿಶೇಷಃ ।
ಸ ತು ಭವತು ದರಿದ್ರೋ ಯಸ್ಯ ತೃಷ್ಣಾ ವಿಶಾಲಾ
ಮನಸಿ ಚ ಪರಿತುಷ್ಟೇ ಕೋಽರ್ಥವಾನ್ಕೋ ದರಿದ್ರಃ ॥'

[ನಾವು ಈ ವಲ್ಕಲದಿಂದ ಮತ್ತು ನೀನು ಐಶ್ವರ್ಯದಿಂದ-ಹೀಗೆ ನಾವಿಬ್ಬರೂ ಸಂತುಷ್ಟರಾಗಿದ್ದೇವೆ. ನಮ್ಮಿಬ್ಬರಲ್ಲಿನ ಸಂತೋಷ ಸಮಾನವಾದದ್ದು; ಅದರಲ್ಲಿ ಹೆಚ್ಚು ಕಡಿಮೆಯಿಲ್ಲ. ಯಾವನ ಬಯಕೆ ವಿಶಾಲವಾಗಿರುತ್ತದೆಯೋ ಅವನೇ ದರಿದ್ರ, ಮನಸ್ಸು ತೃಪ್ತವಾದಲ್ಲಿ ಐಶ್ವರ್ಯವಂತನಾರು ದರಿದ್ರನಾರು?]

ಶಕ್ತಿಯಿಂದ ಧೃತಿ : ಉದಾ:-[ರತ್ನಾ .: ೧-೯; ೨-೩ರಲ್ಲೂ ಉದ್ಧೃತವಾಗಿದೆ] :

'ರಾಜ್ಯಂ ನಿರ್ಜಿತಶತ್ರು ಯೋಗ್ಯಸಚಿವೇ ನ್ಯಸ್ತಃ ಸಮಸ್ತೋ ಭರಃ
ಸಮ್ಯಕ್ಪಾಲನಪಾಲಿತಾಃ ಪ್ರಶಮಿತಾಶೇಷೋಪಸರ್ಗಾಃ ಪ್ರಜಾಃ।
ಪ್ರದ್ಯೋತಸ್ಯ ಸುತಾ ವಸಂತಸಮಯಸ್ತ್ವಂ ಚೇತಿ ನಾಮ್ನಾ ಧೃತಿಂ
ಕಾಮಃ ಕಾಮಮುಪೈತ್ವಯಂ ಮಮ ಪುನರ್ಮನ್ಯೇ ಮಹಾನುತ್ಸವಃ ॥'

[ರಾಜ್ಯದ ಶತ್ರುಗಳು ಸೋತಿದ್ದಾರೆ; ಎಲ್ಲ ಹೊರೆಯನ್ನೂ ಯೋಗ್ಯನಾದ ಸಚಿವನ ಕೈಯಲ್ಲಿರಿಸಿದ್ದಾಗಿದೆ. ಪ್ರಜೆಗಳ ಕಷ್ಟವೆಲ್ಲ ಪೂರ್ಣ ಶಾಂತವಾಗಿ ಅವರು ಸೌಖ್ಯದಿಂದ ಪಾಲಿತರಾಗುತ್ತಿದ್ದಾರೆ. ವಸಂತಸಮಯ; ಪ್ರದ್ಯೋತನ ಸುತೆಯಾದ ವಾಸವದತ್ತೆ ಮತ್ತು ನೀನು ಇದ್ದೀರಿ-ಇದರಿಂದ ಬಯಕೆ ಯಥೇಚ್ಛವಾಗಿ ಬಲಗೊಳ್ಳಲಿ (ಅಥವಾ ಕಾಮದೇವನಿಗೆ ಬೇಕಾದಷ್ಟು ಬಲ ಬರಲಿ). ನಾನಾದರೋ ಇದನ್ನು ಮಹೋತ್ಸವವೆಂದು ಪರಿಗಣಿಸುತ್ತೇನೆ.]

- ಹೀಗೆಯೇ ಉಳಿದವನ್ನು ಊಹಿಸಿಕೊಳ್ಳಬೇಕು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೫೫ರ ಮುಂದಿನ ಗದ್ಯದಿಂದ ೫೭; ಸಾ.ದ. : ೩-೧೬೮; ಪ್ರತಾಪ : ೪-೩೧.

## ೧೫. ಜಡತಾಲಕ್ಷಣ :

**ಅಪ್ರತಿಪತ್ತಿರ್ಜಡತಾ ಸ್ಯಾದಿಷ್ಟಾನಿಷ್ಟದರ್ಶನಶ್ರುತಿಭಿಃ ।**
**ಅನಿಮಿಷನಯನನಿರೀಕ್ಷಣತೂಷ್ಣೀಂಭಾವಾದಯಸ್ತತ್ರ ॥ ೧೩ ॥**

ಅನು : [ಅನಿರೀಕ್ಷಿತವಾಗಿ] ಪ್ರಿಯವಾದದ್ದನ್ನು [ಅಥವಾ] ಅಪ್ರಿಯವಾದದ್ದನ್ನು ನೋಡುವುದರಿಂದ [ಅಥವಾ] ಕೇಳುವುದರಿಂದ [ಉಂಟಾಗುವ] ಕರ್ತವ್ಯ ಮೂಢತೆ 'ಜಡತಾ'. ಅಲ್ಲಿ-ಎವೆ ಮುಚ್ಚದೆ ನೋಡುತ್ತಿರುವುದು, ಸ್ತಬ್ಧವಾಗಿ ಬಿಡುವುದು ಇತ್ಯಾದಿ [ಚಿಹ್ನೆಗಳು ತೋರುತ್ತವೆ].

ವ್ಯಾಖ್ಯೆ : ಇಷ್ಟದರ್ಶನದಿಂದ ಜಡತೆ : [ಕು.ಸಂ. : ೮-೫] :

'ಏವಮಾಲಿ ನಿಗೃಹೀತಸಾಧ್ವಸಂ ಶಂಕರೋ ರಹಸಿ ಸೇವ್ಯತಾಮಿತಿ।
ಸಾ ಸಖೀಭಿರುಪದಿಷ್ಟಮಾಕುಲಾ ನಾಸ್ಮರತ್ಪ್ರಮುಖವರ್ತಿನಿ ಪ್ರಿಯೇ ॥'

[ಎಲೈ ಸಖಿ, ಭಯವನ್ನು ಬಿದು ಶಂಕರನನ್ನು ಏಕಾಂತದಲ್ಲಿ ಸೇವಿಸು-ಹೀಗೆಂದು ಸಖಿಯರು ಉಪದೇಶಿಸಿದ್ದರೂ, ಪ್ರಿಯನ ಎದುರು ಬಂದಾಗ ಪಾರ್ವತಿ ಆಕುಲೆಯಾಗಿ (ಅವರ ಮಾತನ್ನು) ಮರೆತುಬಿಟ್ಟಳು.]

ಅನಿಷ್ಟ ಶ್ರವಣದಿಂದ ಜಡತೆ : ಉದಾ:-[ಉದಾತ್ತರಾಘವ] :

'ರಾಕ್ಷಸಃ- ತಾವನ್ತಸ್ತೇ ಮಹಾತ್ಮಾನೋ ನಿಹತಾಃ ಕೇನ ರಾಕ್ಷಸಾಃ।
ಯೇಷಾಂ ನಾಯಕತಾಂ ಯಾತಾಸ್ತ್ರಿಶಿರಃಖರದೂಷಣಾಃ ॥

ದ್ವಿತೀಯಃ- ಗೃಹೀತಧನುಷಾ ರಾಮಹತಕೇನ।

ಪ್ರಥಮಃ- ಕಿಮೇಕಾಕಿನೈವ।

ದ್ವಿತೀಯಃ- ಅದೃಷ್ಟ್ವಾ ಕಃ ಪ್ರತ್ಯೇತಿ। ಪಶ್ಯ ತಾವತೋಽಸ್ಮದ್ಬಲಸ್ಯ-
ಸದ್ಯಶ್ಛಿನ್ನಶಿರಃಶ್ವಭ್ರಮಜ್ಜತ್ಕಂಕಕುಲಾಕುಲಾಃ।
ಕಬಂಧಾಃ ಕೇವಲಂ ಜಾತಾಸ್ತಾಲೋತ್ತಾಲಾ ರಣಾಂಗಣೇ ॥

ಪ್ರಥಮಃ- ಸಖೇ, ಯದ್ಯೇವಂ ತದಾಹಮೇವಂ ವಿಧಃ ಕಿಂ ಕರವಾಣಿ।'

[ರಾಕ್ಷಸ-ತ್ರಿಶಿರ ಖರ ದೂಷಣರೇ ನಾಯಕರಾಗಿದ್ದ ಅಂಥ ಮಹಾರಾಕ್ಷಸರನ್ನು ಯಾರು ನಿಗ್ರಹಿಸಿದರು?

ಎರಡನೆಯವ-ಧನುರ್ಧಾರಿಯಾದ ವಾಟ ರಾಮನಿಂದ

ಮೊದಲನೆಯವ-ಏನು, ಅವನೊಬ್ಬನಿಂದಲೆ?

ಎರಡನೆಯವ-ಕಣ್ಣಾರೆ ಕಾಣದೆ ಯಾರು ನಂಬಿಯಾರು? ನೋಡು-ನಮ್ಮ ಬಲವೆಲ್ಲವನ್ನೂ ಒಮ್ಮೆಲೇ ಶಿರಚ್ಛೇದನ ಮಾಡಿರಲು, (ಕೊರಳಿನ) ಆ ಕುಹರದಲ್ಲಿ ಕಂಕಪಕ್ಷಿಗಳು ಮುಳುಗಿ ಹಾವಳಿಮಾಡುತ್ತಿವೆ; ತಾಲವೃಕ್ಷದಂತೆ ಎತ್ತರವಾಗಿರುವ ಅಂಥ ಕೇವಲ ಕಬಂಧಗಳೇ ರಣಾಂಗಣದಲ್ಲಿ ಕುಣಿಯುತ್ತಿವೆ.

ಮೊದಲನೆಯವ – ಮಿತ್ರ, ಹಾಗಿದ್ದರೆ ನನ್ನಂತಹವನು ಮಾಡುವುದಾದರೂ ಏನು?]

ಟಿಪ್ಪಣಿ : 'ಜಡತಾ'ಕ್ಕೆ 'ಜಾಡ್ಯ'ವೆಂಬ ನಾಮಾಂತರವೂ ಉಂಟು.

ಛಂದಸ್ಸು : ಆರ್ಯಾ.

ಹೋಲಿಕೆ = ನಾ.ಶಾ. : ೭-೬೫ರ ಮುಂದಿನ ಗದ್ಯದಿಂದ ೬೬; ಸಾ.ದ. : ೩-೧೪೭; ಪ್ರತಾಪ : ೪-೩೬

## ೧೬. ಹರ್ಷಲಕ್ಷಣ :

ಪ್ರಸತ್ತಿರುತ್ಸವಾದಿಭ್ಯೋ ಹರ್ಷೋಽಶ್ರುಸ್ವೇದಗದ್ಗದಾಃ।

ಅನು : ಉತ್ಸವ ಮೊದಲಾದವುಗಳಿಂದ [ಉಂಟಾಗುವ] ಪ್ರಸನ್ನತೆ 'ಹರ್ಷ'. ಕಣ್ಣೀರು, ಬೆವರು, ಗದ್ಗದ[ಪೂರ್ಣವಾದ ಮಾತು-ಇವು ಹರ್ಷದಲ್ಲಿನ ಅನುಭಾವಗಳು].

ವ್ಯಾಖ್ಯೆ : ಪ್ರಿಯಜನರ ಆಗಮನ, ಪುತ್ರಜನನ, ಉತ್ಸವ ಮೊದಲಾದುವುಗಳಿಂದ ಒದಗುವ ಚೇತನದ ಪ್ರಸನ್ನತೆ 'ಹರ್ಷ'. ಅಲ್ಲಿ ಅಶ್ರು ಇತ್ಯಾದಿ ಅನುಭಾವಗಳು.

ಉದಾ:-[ಅಮರು : ಶ್ಲೋ. ೭೭] :

'ಆಯಾತೇ ದಯಿತೇ ಮರುಸ್ಥಲಭುವಾಮುತ್ಪ್ರೇಕ್ಷ್ಯ ದುರ್ಲಂಘ್ಯತಾಂ
ಗೇಹಿನ್ಯಾ ಪರಿತೋಷಬಾಷ್ಪಕಲಿಲಾಮಾಸಜ್ಯ ದೃಷ್ಟಿಂ ಮುಖೇ ।
ದತ್ವಾ ಪೀಲುಶಮೀಕರೀರಕವಲಾನ್ ಸ್ವೇನಾಂಚಲೇನಾದರಾ –
ದುನ್ಮೃಷ್ಟಂ ಕರಭಸ್ಯ ಕೇಸರಸಟಾಭಾರಾಗ್ರ ಲಗ್ನಂ ರಜಃ ॥'

[(ತನಗೋಸ್ಕರವಾಗಿ ಕಷ್ಟಸಾಧ್ಯವಾದ ಮರುಭೂಮಿಯನ್ನು ದಾಟಿ) ಪ್ರಿಯನು ಬಂದಿರಲು, ಆತ ಕಳೆದು ಬಂದ ಮರುಭೂಮಿಯ ದುರ್ಗಮತೆಯನ್ನು ಊಹಿಸಿ ಆತನ ಮನೆಯಾಕೆ ಆನಂದಬಾಷ್ಪ ತುಂಬಿದ ತನ್ನ ದೃಷ್ಟಿಯನ್ನು ಆತನ ಮುಖದಲ್ಲಿ ತೊಡರಿಸಿದಳು; (ಆತನನ್ನು ಹೊತ್ತು ಬಂದ) ಒಂಟೆಯ ಮರಿಗೆ ಆದರಿಂದ ತನ್ನ ಮಡಿಲಿನಲ್ಲಿ ತಂದ ಪೀಲು, ಶಮೀ, ಕರೀರ ಮುಂತಾದ ಎಲೆಗಳ ತುತ್ತನ್ನು ಕೊಟ್ಟು, ಅದರ ಕೂದಲುರಾಶಿಯ ತುದಿಯಲ್ಲಿ ಅಂಟಿಕೊಂಡ ಧೂಳನ್ನು ಒರೆಸಿದಳು.]

-ಉಳಿದ ಪ್ರಕಾರಗಳನ್ನು ಊಹಿಸಿಕೊಳ್ಳತಕ್ಕದ್ದು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೬೭ರ ಮುಂದಿನ ಗದ್ಯದಿಂದ ೬೨ ; ಸಾ.ದ. : ೩-೧೬೫; ಪ್ರತಾಪ : ೪-೩೪.

## ೧೭. ದೈನ್ಯಲಕ್ಷಣ :

[1]ದೌರ್ಗತ್ಯಾದ್ಯೈರನೌಜಸ್ಯಂ ದೈನ್ಯಂ ಕಾರ್ಷ್ಣ್ಯಮೃಜಾದಿಮತ್ ॥ ೧೪ ॥

---

೧ ಪಾಠ : ದೌರ್ಮತ್ಯಾ(ಹಿಂದೀ ಗ್ರಂಥದಲ್ಲಿ ಈ ಪಾಠವಿದೆ; ಅಲ್ಲಿ ಪಾಠಾಂತರ ಕೊಟ್ಟಿಲ್ಲ; ಮತ್ತೆಲ್ಲೂ ಆ ಪಾಠ ಕಾಣದು.)

ಅನು : ದುರ್ಗತಿಯುಂಟಾಗುವುದು ಮೊದಲಾದವುಗಳಿಂದ [ಬರುವ] ತೇಜೋವಿಹೀನತೆ 'ದೈನ್ಯ'. [ಅಲ್ಲಿ] ಅಂಧಕಾರ ಮಾಲಿನ್ಯ ಇವು [–ಇವು ಅನುಭಾವಗಳು].

ವ್ಯಾಖ್ಯೆ : ದಾರಿದ್ರ್ಯ ತಿರಸ್ಕಾರಗಳಿಂದ ಚೇತನ ಕಾಂತಿಹೀನವಾಗುವುದು ದೈನ್ಯ. ಅಲ್ಲಿ ಮುಂಗಾಣದಿರುವುದು, ಕೊಳೆಗಟ್ಟುವುದು ಮುಂತಾದವು ಅನುಭಾವಗಳು.

ಉದಾ:–[ಭೋಜ : ಶ್ಲೋ. ೨೫೫] :

'ವೃದ್ಧೋಂಧಃ ಪತಿರೇಷ ಮಂಚಕಗತಃ ಸ್ಥೂಣಾವಶೇಷಂ ಗೃಹಂ
ಕಾಲೋಽಭ್ಯರ್ಣಜಲಾಗಮಃ ಕುಶಲಿನೀ ವತ್ಸಸ್ಯ ವಾರ್ತಾಪಿ ನೋ ।
ಯತ್ನಾತ್ಸಂಚಿತತೈಲಬಿಂದುಘಟಿಕಾ ಭಗ್ನೇತಿ ಪರ್ಯಾಕುಲಾ
ದೃಷ್ಟ್ವಾ ಗರ್ಭಭರಾಲಸಾಂ ಸುತವಧೂಂ ಶ್ವಶ್ರೂಶ್ಚಿರಂ ರೋದಿತಿ ॥'

[ಗಂಡ ಮುದುಕ, ಕುರುಡ; (ರೋಗಗ್ರಸ್ತನಾಗಿ) ಮಂಚ ಹಿಡಿದಿದ್ದಾನೆ; ಮನೆಯೋ ಛಾವಣಿ ಬಿದ್ದು ಕಂಬಗಳು ಮಾತ್ರ ಉಳಿದಿವೆ. ಮಳೆಗಾಲ ಬರುತ್ತಿದೆ; (ದೂರದೇಶಸ್ಥನಾದ) ಮಗನ ಕುಶಲವಾರ್ತೆ ಕೂಡ ತಿಳಿಯದು; ಕಷ್ಟಪಟ್ಟು ದೊರಕಿಸಿದ ಹನಿ ಎಣ್ಣೆಯ ಕುಡಿಕೆಯೂ ಒಡೆದು ಹೋಯಿತಲ್ಲ – ಎಂದು ಚಿಂತಾಕ್ರಾಂತಳಾದ ಅತ್ತೆ ಬಸುರಿನ ಭಾರದಿಂದ ಬಸವಳಿದಿರುವ ಸೊಸೆಯನ್ನು ನೋಡುತ್ತ ಒಂದೇ ಸಮ ಅಳುತ್ತಿದ್ದಾಳೆ.]

– ಉಳಿದವನ್ನು ಹಿಂದಿನಂತೆಯೇ ಊಹಿಸಿಕೊಳ್ಳುವುದು.

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೪೮೮ ಗದ್ಯದಿಂದ ೪೯; ಸಾ.ದಾ. : ೩-೧೪೫; ಪ್ರತಾಪ : ೪-೨೭

## ೧೮. ಔಗ್ರ್ಯ(ಉಗ್ರತಾ)ಲಕ್ಷಣ :

**ದುಷ್ಟೇಽಪರಾಧದೌರ್ಮುಖ್ಯ[1]ಕ್ರೌರ್ಯೈಶ್ಚಂಡತ್ವಮುಗ್ರತಾ ।**
**ತತ್ರ ಸ್ವೇದಶಿರಃಕಂಪತರ್ಜನಾತಾಡನಾದಯಃ ॥ ೧೫ ॥**

ಅನು : ಅಪರಾಧ ದುಷ್ಟತ್ವ ಕ್ರೌರ್ಯ ಇವುಗಳಿಂದಾಗಿ [ಅದನ್ನುಂಟುಮಾಡಿದ] ದುಷ್ಟನ ಬಗೆಗೆ [ಹುಟ್ಟುವ] ಕ್ರೋಧ 'ಉಗ್ರತೆ'. ಅಲ್ಲಿ–ಬೆವರು, ತಲೆನಡುಕ, ಬೆದರಿಕೆ, ಹೊಡೆತ ಇತ್ಯಾದಿ [ಚಿಹ್ನೆಗಳು ತೋರುತ್ತವೆ].

ವ್ಯಾಖ್ಯೆ : ಉದಾ:–[ಮಹಾ. : ೨-೪೮] : 'ಜಾಮದಗ್ನ್ಯ:–

ಉತ್ಕೃತ್ಯೋತ್ಕೃತ್ಯ ಗರ್ಭಾನಪಿ ಶಕಲಯತಃ ಕ್ಷತ್ರಸಂತಾನರೋಷಾ –
ದುದ್ದಾಮಸ್ಯೈಕವಿಂಶತ್ಯವಧಿ ವಿಶಸತಃ ಸರ್ವತೋ ರಾಜವಂಶ್ಯಾನ್ ।
ಪಿತ್ರ್ಯಂ ತದ್ರಕ್ತಪೂರ್ಣಹ್ರದಸವನಮಹಾನಂದಮಂದಾಯಮಾನ –
ಕ್ರೋಧಾಗ್ನೇಃ ಕುರ್ವತೋ ಮೇ ನ ಖಲು ನ ವಿದಿತಃ ಸರ್ವಭೂತೈಃ ಸ್ವಭಾವಃ ॥'

[ಕ್ಷತ್ರಿಯಕುಲದ ಮೇಲಿನ ರೋಷದಿಂದ ಗರ್ಭವನ್ನು ಕೂಡ ಸೀಳಿಸೀಳಿ ತುಂಡು ಮಾಡಿದವನಾದ, ಇಪ್ಪತ್ತೊಂದು ಬಾರಿ ರಾಜವಂಶಗಳೆಲ್ಲವನ್ನೂ ನಾಶಗೊಳಿಸಿದ ಉದ್ದಾಮನಾದ, ಅದೇ ಕ್ಷತ್ರಿಯ ರಕ್ತದಿಂದ ಕೂಡಿದ ಕೊಳದಲ್ಲಿ ಪಿತೃಯಜ್ಞ ನಡೆಸಿ ಮಹಾನಂದದಿಂದ ಕ್ರೋಧಾಗ್ನಿಯನ್ನು ತಣಿಸಿಕೊಂಡಿರುವ ನನ್ನ ಸ್ವಭಾವವು ಖಂಡಿತವಾಗಿ ಸರ್ವಭೂತಗಳಿಗೂ ತಿಳಿಯದಿಲ್ಲ.]

---

೧ ಪಾಠ : ಚೌರ್ಯ ।

ಟಿಪ್ಪಣಿ : ಅಮರ್ಷಲಕ್ಷಣದ ಕಾರಿಕೆಯ (೪-೨೨) ದ್ವಿತೀಯಾರ್ಧವೂ ಈ ಕಾರಿಕೆಯ ದ್ವಿತೀಯಾರ್ಧವೂ ಅಕ್ಷರಶಃ ಒಂದೇ ಆಗಿದೆ.

ಹೋಲಿಕೆ = ನಾ.ಶಾ. : ೭-೭೯ ರ ಮುಂದಿನ ಗದ್ಯ, ೮೦ ; ಸಾ.ದ. : ೩-೧೪೯ ; ಪ್ರತಾಪ : ೪-೪೬.

## ೧೯. ಚಿಂತಾಲಕ್ಷಣ :

ಧ್ಯಾನಂ ಚಿಂತೇಹಿತಾನಾಪ್ತೇಃ ಶೂನ್ಯತಾಶ್ವಾಸತಾಪಕೃತ್ ।

ಅನು : ಇಚ್ಛಿಸಿದ್ದು ದೊರಕದಿರುವಾಗ [ಅದನ್ನೇ ಕುರಿತು ಉಂಟಾಗುವ] ಧ್ಯಾನ (ಯೋಚನೆ) 'ಚಿಂತೆ'. [ಅದು] ಶೂನ್ಯತೆ, ನಿಟ್ಟುಸಿರು, ತಾಪ – ಇವುಗಳನ್ನುಂಟು ಮಾಡುತ್ತದೆ.

ವ್ಯಾಖ್ಯೆ : ಉದಾ :- [ ಶಾರ್ಙ್ಗ ಪದ್ಧತಿ ] :

'ಪಕ್ಷ್ಮಾಗ್ರಗ್ರಥಿತಾಶ್ರುಬಿಂದುನಿಕರೈರ್ಮುಕ್ತಾಫಲಸ್ಪರ್ಧಿಭಿಃ
ಕುರ್ವಂತ್ಯಾ ಹರಹಾಸಹಾರಿ ಹೃದಯೇ ಹಾರಾವಲೀಭೂಷಣಮ್ ।
ಬಾಲೇ ಬಾಲಮೃಣಾಲನಾಲವಲಯಾಲಂಕಾರಕಾಂತೇ ಕರೇ
ವಿನ್ಯಸ್ಯಾನನಮಾಯತಾಕ್ಷಿ ಸುಕೃತೀ ಕೋಽಯಂ ತ್ವಯಾ ಸ್ಮರ್ಯತೇ ॥'

[ಎಲೈ ಅಗಲಗಣ್ಣಿನ ಹುಡುಗಿ, ಎಳೆಯ ತಾವರೆ ದಂಟಿನ ಬಳೆಯಿಂದ ಕೈ ಸಿಂಗಾರಗೊಂಡು ಎಸೆಯುತ್ತಿರಲು ಅದರಲ್ಲಿ ಮೊಗವನ್ನಿರಿಸಿ, ದುಂಡುಮುತ್ತುಗಳನ್ನು ಹಳಿಯುವಂತೆ ಎವೆಯಂಚಿನಲ್ಲಿ ಸರಗಟ್ಟಿದ ಕಂಬನಿಗಳಿಂದ ಎದೆಯಲ್ಲಿ ಹರನ ಮೆಲುನಗೆಯನ್ನು ಮೀರಿಸುವ ಹಾರಾವಲಿಯ ಒಡವೆಯನ್ನು ರಚಿಸುತ್ತ ಕುಳಿತು, ಯಾವ ಸೌಭಾಗ್ಯಶಾಲಿಯನ್ನು ಸ್ಮರಿಸುತ್ತಿರುವೆ?]

ಅಥವಾ – [ಗೋವರ್ಧನಕೃತ] :

'ಅಸ್ತಮಿತವಿಷಯಸಂಗಾ ಮುಕುಲಿತನಯನೋತ್ಪಲಾ ಬಹುಶ್ವಸಿತಾ ।
ಧ್ಯಾಯತಿ ಕಿಮಪ್ಯಲಕ್ಷ್ಯಂ ಬಾಲಾ ಯೋಗಾಭಿಯುಕ್ತೇವ ॥'

[ಇಂದ್ರಿಯಗಳ ವಿಷಯಾಸಕ್ತಿ ಅಸ್ತವಾಗಿಹೋಗಿದೆ; ಉತ್ಪಲಾಕ್ಷಿಗಳು ಮುಚ್ಚಿಕೊಂಡಿವೆ; ಒಂದೇ ಸಮನೆ ಉಸಿರಿಡುತ್ತಿದ್ದಾಳೆ – ಈ ಬಾಲೆ ಯೋಗದಲ್ಲಿ ತೊಡಗಿದವಳಂತೆ ಯಾವುದೋ ಕಾಣದ ವಸ್ತುವನ್ನು ಕುರಿತು ಧ್ಯಾನಿಸುತ್ತಿದ್ದಾಳೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೪೯ರ ಮುಂದಿನ ಗದ್ಯದಿಂದ ೫೧; ಸಾ.ದ. : ೩-೧೭೧; ಪ್ರತಾಪ : ೪-೨೮.

## ೨೦. ತ್ರಾಸಲಕ್ಷಣ :

ಗರ್ಜಿತಾದೇರ್ಮನಃಕ್ಷೋಭಸ್ತ್ರಾಸೋಽತ್ರೋತ್ಕಂಪಿತಾದಯಃ ॥ ೧೬ ॥

ಅನು : [ಮೇಘ]ಗರ್ಜನೆ ಮುಂತಾದವುಗಳಿಂದ [ಉಂಟಾಗುವ] ಮನಸ್ಸಿನ ತಳಮಳ 'ತ್ರಾಸಾ'. ಅಲ್ಲಿ–ಬೆಚ್ಚಿಬೀಳುವುದು ಇತ್ಯಾದಿ [ಅನುಭಾವಗಳು].

ವ್ಯಾಖ್ಯೆ : ಉದಾ–[ಮಾಘ. : ೮-೨೪ :

ತ್ರಸ್ಯಂತೀ ಚಲಶಫರೀವಿಘಟ್ಟಿತೋರೂರ್ವಾಮೋರೂರತಿಶಯಮಾಪ ವಿಭ್ರಮಸ್ಯ ।
ಕ್ಷುಭ್ಯಂತಿ ಪ್ರಸಭಮಹೋ ವಿನಾಪಿ ಹೇತೋರ್ಲೀಲಾಭಿಃ ಕಿಮು ಸತಿ ಕಾರಣೇ ರಮಣ್ಯಃ ॥'

[(ಜಲಕೇಳಿಯಲ್ಲಿ ತೊಡಗಿದಾಗ ಒಬ್ಬ) ಚೆಲುದೊಡೆಯಾಕೆ ಚಂಚಲವಾದ ಒಂದು ಮೀನು ತೊಡೆಗೆ ಬಂದು ತಾಗಲು ಬಹುವಾಗಿ ಸಂಭ್ರಮಿಸಿಬಿಟ್ಟಳು. ಅಹೋ, ರಮಣಿಯರು ಕಾರಣವಿಲ್ಲದೆ ಕೇವಲ ವಿಲಾಸಕ್ಕಾಗಿಯೇ ಸಂಭ್ರಮಿಸುವಾಗ, ಇನ್ನು ಕಾರಣವಿದ್ದರೆ ಕೇಳುವುದೇನು?]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೩೫ರ ಮುಂದಿನ ಗದ್ಯದಿಂದ ೩೭ ; ಸಾ.ದ. : ೩–೧೬೬; ಪ್ರತಾಪ ೪– ೫೧.

## ೨೧. ಅಸೂಯಾಲಕ್ಷಣ :

ಪರೋತ್ಕರ್ಷಾಕ್ಷಮಾಽಸೂಯಾ ಗರ್ವದೌರ್ಜನ್ಯಮನ್ಯುಜಾ ।
ದೋಷೋಕ್ತ್ಯವಜ್ಞೇ ಭ್ರುಕುಟಿಮನ್ಯು ಕ್ರೋಧೇಂಗೀತಾನಿ ಚ ॥ ೧೭ ॥

ಅನು : ಗರ್ವ ದೌರ್ಜನ್ಯ ಕ್ರೋಧಗಳೇ ಮೂಲವಾಗಿ, ಇತರರ ಉನ್ನತಿಯನ್ನು ಸಹಿಸದಿರುವುದು 'ಅಸೂಯೆ'. [ಅಲ್ಲಿ] ಕೆಟ್ಟಮಾತು, ಅನಾದರ, ಹುಬ್ಬುಗಂಟಿಕ್ಕುವುದು, ಕೋಪ, ಕ್ರೋಧ [ಮುಂತಾದ] ಇಂಗಿತಗಳು [ತೋರುತ್ತವೆ].

ವ್ಯಾಖ್ಯೆ : ಗರ್ವದಿಂದ ಅಸೂಯೆ : ಉದಾ:–[ಮಹಾ : ೨–೯] :

'ಅರ್ಥಿತ್ವೇ ಪ್ರಕಟೀಕೃತೇಽಪಿ ನ ಫಲಪ್ರಾಪ್ತಿಃ ಪ್ರಭೋಃ ಪ್ರತ್ಯುತ –
ದ್ರುಹ್ಯನ್ ದಾಶರಥಿರ್ವಿರುದ್ಧಚರಿತೋ ಯುಕ್ತಸ್ತಯಾ ಕನ್ಯಯಾ ।
ಉತ್ಕರ್ಷಂ ಚ ಪರಸ್ಯ ಮಾನಯಶಸೋರ್ವಿಸ್ರಂಸನಂ ಚಾತ್ಮನಃ
ಸ್ತ್ರೀರತ್ನಂ ಚ ಜಗತ್ಪತಿರ್ದಶಮುಖೋ ದೃಪ್ತಃ ಕಥಂ ಮೃಷ್ಯತೇ ॥'

[ಪ್ರಭುವಾದ ರಾವಣನು ಬಾಯಿಬಿಟ್ಟು ಕೇಳಿದರೂ (ಸೀತೆಯನ್ನು ವಿವಾಹವಾಗುವ) ಬಯಕೆ ಈಡೇರಲಿಲ್ಲ. ಬದಲಾಗಿ ಆ ಕನ್ಯೆ ದ್ರೋಹಿಯೂ ವಿರೋಧಿಯೂ ಆದ ರಾಮನನ್ನು ಸೇರಿದಳು. (ಇದರಿಂದ) ಬೇರೆಯವನ ಉನ್ನತಿಯಾಯಿತು, ತನ್ನ ಮಾನ ಯಶಸ್ಸುಗಳು ಕುಂದಿದವು. ಮೇಲಾಗಿ (ಆಕೆಯೋ) ಸ್ತ್ರೀರತ್ನ – (ಹೀಗಿರಲು) ಜಗತ್ತಿಗೇ ಒಡೆಯನಾದ ಗರ್ವಿಷ್ಠ ದಶಮುಖನು ಹೇಗೆ ಸಹಿಸಿಯಾನು?]

ದೌರ್ಜನ್ಯದಿಂದ ಅಸೂಯೆ : ಉದಾ:–[ಮಹೇಂದ್ರಕೃತ ] :

'ಯದಿ ಪರಗುಣಾ ನ ಕ್ಷಮ್ಯಂತೇ ಯತಸ್ವ ಗುಣಾರ್ಜನೇ
ನಹಿ ಪರಯಶೋನಿಂದಾವ್ಯಾಜೈರಲಂ ಪರಿಮಾರ್ಜಿತುಮ್ ।
ವಿರಮಸಿ ನ ಚೇದಿಚ್ಛಾದ್ವೇಷಪ್ರಸಕ್ತ ಮನೋರಥೋ
ದಿನಕರಕರಾನ್ಪಾಣಿಚ್ಛತ್ರೈನುರ್ದನ್ ಶ್ರಮಮೇಷ್ಯಸಿ ॥'

[ಬೇರೆಯವರ ಗುಣಗಳಲ್ಲಿ ಸಹನೆಯಿಲ್ಲದಿದ್ದರೆ ನೀನು ಅವನ್ನು ಆರ್ಜಿಸಲು ಯತ್ನಮಾಡು. ಇಲ್ಲವೆಂದರೆ ಪರರ ಯಶಸ್ಸನ್ನು ತೊಡೆಯುವುದಕ್ಕಾಗಿ ಮಾಡುವ ದೂಷಣೆಯನ್ನಾದರೂ ಬಿಡು. ದ್ವೇಷವನ್ನೇ ಬಗೆದು ದೂಷಿಸು ವುದನ್ನು ಬಿಡದಿದ್ದರೆ ಕೈಯ ಕೊಡೆಯಿಂದ ಸೂರ್ಯಕಿರಣಗಳನ್ನು ತಳ್ಳುವ ಪರಿಶ್ರಮಕ್ಕೆ ಗುರಿಯಾಗುವೆ.]

ಕೋಪದಿಂದ ಅಸೂಯೆ : ಉದಾ:–[ಅಮರು : ಶ್ಲೋ. ೪೧–೪೨] :

'ಪುರಸ್ತನ್ವ್ಯಾ ಗೋತ್ರಸ್ಖಲನಚಕಿತೋಽಹಂ ನತಮುಖಃ
ಪ್ರವೃತ್ತೋ ವೈಲಕ್ಷ್ಯಾತ್ಕಿಮಪಿ ಲಿಖಿತುಂ ದೈವಹತಕಃ ।
ಸ್ಫುಟೋ ರೇಖಾನ್ಯಾಸಃ ಕಥಮಪಿ ಸ ತಾದೃಕ್ಪರಿಣತೋ
ಗತಾ ಯೇನ ವ್ಯಕ್ತಿಂ ಪುನರವಯವೈಃ ಸೈವ ತರುಣೀ ॥

ತತಶ್ಚಾಭಿಜ್ಞಾಯ ಸ್ಫುರದರುಣಗಂಡಸ್ಥಲರುಚಾ
ಮನಸ್ವಿನ್ಯಾ ರೋಷಪ್ರಣಯರಭಸಾದ್ಗದ್ಗದಗಿರಾ ।
ಅಹೋ ಚಿತ್ರಂ ಚಿತ್ರಂ ಸ್ಫುಟಮಿತಿ ನಿಗದ್ಯಾಶ್ರುಕಲುಷಂ
ರುಷಾ ಬ್ರಹ್ಮಾಸ್ತ್ರಂ ಮೇ ಶಿರಸಿ ನಿಹಿತೋ ವಾಮಚರಣಃ ॥'

[ಪ್ರಿಯಳ ಎದುರಿನಲ್ಲಿ ಹೆಸರು ತಪ್ಪಿ (ಮತ್ತೊಬ್ಬ ಪ್ರಿಯಳ ಹೆಸರು ಹೇಳಿ) ಚಕಿತನಾದ ನಾನು ತಲೆ ತಗ್ಗಿಸಿದೆ; ನಾಚಿಕೆಯಿಂದ ಏನನ್ನೋ ಬರೆಯಲು ತೊಡಗಿದೆ; ದುರ್ದೈವ! ಸ್ಪಷ್ಟವಾಗಿದ್ದ ಆ ರೇಖಾಚಿತ್ರ ಹೇಗೋ, (ನಾನು ಯಾವ ಬೇರೆ ಹೆಣ್ಣಿನ ಹೆಸರು ಹೇಳಿದ್ದನೋ) ಅದೇ ಹೆಣ್ಣಿನ ಅವಯವಗಳ ರೂಪವನ್ನು ಪಡೆಯಿತು. (ಏನೋ ಬರೆಯಹೊರಟರೂ) ಅದೇ ಅವಸ್ಥೆಯೊದಗಿತು. ಅನಂತರ, ಆ ಮನಸ್ವಿನಿಯು ವಿಷಯವನ್ನು ತಿಳಿದು, ಕಪೋಲಗಳು ಹೊಳೆದು ಬೆಳಗುತ್ತಿರಲು ಪ್ರಣಯರೋಷದ ರಭಸದಿಂದ ಮಾತು ತೊದಲಿಸುತ್ತಿರಲು, 'ಅಹೋ ಆಶ್ಚರ್ಯ, ಚಿತ್ರವು ಸ್ಫುಟವಾಗಿದೆ!' ಎಂದು ಹೇಳುತ್ತ ಕಂಬನಿದುಂಬಿ ರೋಷಗೊಂಡು ಬ್ರಹ್ಮಾಸ್ತ್ರದಂತಿರುವ ತನ್ನ ಎಡಗಾಲನ್ನು ನನ್ನ ತಲೆಗಿಟ್ಟಳು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೩೫ರ ಮುಂದಿನ ಗದ್ಯದಿಂದ ೩೭ ; ಸಾ.ದ. : ೩-೧೬೬ ; ಪ್ರತಾಪ ೪-೨೩.

## ೨೨. ಅಮರ್ಷಲಕ್ಷಣ :

ಅಧಿಕ್ಷೇಪಾಪಮಾನಾದೇರಮರ್ಷೋಽಭಿನಿವಿಷ್ಟತಾ ।
ತತ್ರ ಸ್ವೇದಶಿರಃಕಂಪತರ್ಜನಾತಾಡನಾದಯಃ ॥ ೧೮ ॥

ಅನು : ನಿಂದೆ ಅವಮಾನ ಇತ್ಯಾದಿಗಳು ಕಾರಣವಾಗಿ [ಅಸಹನೆಯಿಂದ ಹುಟ್ಟುವ] ದೃಢನಿಶ್ಚಯ 'ಅಮರ್ಷ'. ಅಲ್ಲಿ ಬೆವರು, ತಲೆನಡುಕ, ಬೆದರಿಕೆ, ಹೊಡೆತ ಮೊದಲಾದ [ಅನುಭಾವಗಳುಂಟಾಗುತ್ತವೆ.]

ವ್ಯಾಖ್ಯೆ : ಉದಾ-[ಮಹಾ. : ೩-೯; ೨-೧ ಮತ್ತು ೨೦ರಲ್ಲಿ ಕೂಡ ಉದ್ಧೃತವಾಗಿದೆ.] :

'ಪ್ರಾಯಶ್ಚಿತ್ತಂ ಚರಿಷ್ಯಾಮಿ ಪೂಜ್ಯಾನಾಂ ವೋ ವ್ಯತಿಕ್ರಮಾತ್ ।
ನ ತ್ವೇವಂ ದೂಷಯಿಷ್ಯಾಮಿ ಶಸ್ತ್ರಗ್ರಹಮಹಾವ್ರತಮ್ ॥'

[ಪೂಜ್ಯರನ್ನು ತಿರಸ್ಕರಿಸಿದ ದೋಷಕ್ಕಾಗಿ ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ಆದರೆ, ಅದಕ್ಕಾಗಿ ನನ್ನ ಶಸ್ತ್ರಗ್ರಹಣಮಹಾವ್ರತವನ್ನು ದೂಷ್ಯಗೊಳಿಸುವುದಿಲ್ಲ.]

ಮತ್ತು – [ವೇಣೀ. : ೧-೧೨] :

'ಯುಷ್ಮಚ್ಛಾಸನಲಂಘನಾಂಭಸಿ ಮಯಾ ಮಗ್ನೇನ ನಾಮ ಸ್ಥಿತಂ
ಪ್ರಾಪ್ತಾ ನಾಮ ವಿಗರ್ಹಣಾ ಸ್ಥಿತಿಮತಾಂ ಮಧ್ಯೇಽನುಜಾನಾಮಪಿ ।
ಕ್ರೋಧೋಲ್ಲಾಸಿತಶೋಣಿತಾರುಣಗದಸ್ಯೋಚ್ಛಿಂದತಃ ಕೌರವಾ –
ನದ್ಯೈಕಂ ದಿವಸಂ ಮಮಾಸಿ ನ ಗುರುರ್ನಾಹಂ ವಿಧೇಯಸ್ತವ ॥'

[ಇಷ್ಟು ದಿನವೂ ನಿನ್ನ ಆಜ್ಞೆಯೆಂಬ ದಾಟುನೀರಿನಲ್ಲಿ ಮುಳುಗಿ ನಿಂತಿದ್ದಾಯಿತು. ಗುಣಶಾಲಿಗಳಾದ ಅನುಜರ ನಡುವೆ ನಾನು ನಿಂದೆ ಪಡೆದದ್ದೂ ಆಯಿತು. ಕ್ರೋಧದಿಂದ ಉಲ್ಲಾಸಗೊಂಡು ಕೌರವನನ್ನು ಚೂರುಚೂರಾಗಿಸಿ ನನ್ನ ಗದೆ ರಕ್ತರಂಜಿತವಾಗುವ ಈ ಒಂದು ದಿನದಲ್ಲಿ ಮಾತ್ರ ನೀನು ನನ್ನ ಗುರುವಲ್ಲ, ನಾನು ನಿನಗೆ ವಿಧೇಯನಲ್ಲ.]

ಟಿಪ್ಪಣಿ : ಈ ಕಾರಿಕೆಯ ದ್ವಿತೀಯಾರ್ಧ ಹಾಗೂ ೪-೧೮ರ (ಉಗ್ರತಾಲಕ್ಷಣ) ಕಾರಿಕೆಯ ದ್ವಿತೀಯಾರ್ಧ ಅಕ್ಷರಶಃ ಒಂದೇ ಆಗಿದೆ.

ಹೋಲಿಕೆ = ನಾ.ಶಾ. ೭-೭೬ರ ಮುಂದಿನ ಗದ್ಯದಿಂದ ೭೮; ಸಾ.ದ. : ೩-೧೫೭; ಪ್ರತಾಪ : ೪-೪೪.

## ೨೩. ಗರ್ವಲಕ್ಷಣ :

ಗರ್ವೋಽಭಿಜನಲಾವಣ್ಯ ಬಲೈಶ್ವರ್ಯಾದಿಭಿರ್ಮದಃ ।
ಕರ್ಮಾಣ್ಯಾಧರ್ಷಣಾವಜ್ಞಾ ಸವಿಲಾಸಾಂಗವೀಕ್ಷಣಮ್ ॥ ೧೯ ॥

ಅನು : ಕುಲ, ಸೌಂದರ್ಯ, ಶಕ್ತಿ, ಐಶ್ವರ್ಯ ಮೊದಲಾದವುಗಳಿಂದ [ಬರುವ] ಮದ 'ಗರ್ವ'. ತಿರಸ್ಕಾರ [ಅಥವಾ ಇನ್ನೊಬ್ಬರನ್ನು ಹತ್ತಿಕ್ಕುವುದು], ಅವಜ್ಞೆ (ಇನ್ನೊಬ್ಬರ ಬಗೆಗೆ ತಿರಸ್ಕಾರ ಸಹಿತವಾದ ಅನಾದರ), ವಿಲಾಸಪೂರ್ಣವಾಗಿ [ತನ್ನ] ಅಂಗಗಳನ್ನು ನೋಡಿಕೊಳ್ಳುವುದು – [ಇವು ಅಲ್ಲಿನ] ಕರ್ಮ(ಅನುಭಾವ)ಗಳು.

ವ್ಯಾಖ್ಯೆ : ಉದಾಃ-[ಮಹಾ. : ೨-೨೭] :

'ಮುನಿರಯಮಥ ವೀರಸ್ತಾದೃಶಸ್ತತ್ಪ್ರಿಯಂ ಮೇ
ವಿರಮತು ಪರಿಕಂಪಃ ಕಾತರೇ ಕ್ಷತ್ರಿಯಾಸಿ ।
ತಪಸಿ ವಿತತಕೀರ್ತೇರ್ದರ್ಪಕಂಡೂಲದೋಷ್ಣಃ
ಪರಿಚರಣಸಮರ್ಥೋ ರಾಘವಃ ಕ್ಷತ್ರಿಯೋಽಹಮ್ ॥'

[ ಈ ಮುನಿಯು (ಪರಶುರಾಮ) ಅಂಥ ವೀರನೆಂದೇ ನನಗೆ ಪ್ರಿಯನಾಗಿದ್ದಾನೆ. ಎಲೈ ಕಾತರೆ (ಸೀತೆ), ಕಂಪಿಸಬೇಡ, ನೀನು ಕ್ಷತ್ರಿಯಳು. ತಪಸ್ಸಿನಲ್ಲಿ ಅಪಾರ ಕೀರ್ತಿ ಪಡೆದ ಹಾಗೂ ತೋಳ ತೀಟೆಯಿಂದ ಗರ್ವಿಷ್ಠನಾದ ಈತನ ಪರಿಚರ್ಯೆ ಮಾಡಲು ಸಮರ್ಥನಾಗಿರುವ ಕ್ಷತ್ರಿಯನಾದ ರಾಘವನು ನಾನು.]

ಮತ್ತು – [ಮಹಾ. : ೨-೧೦; ಇದು ೨-೬ರಲ್ಲೂ ಉದ್ಧೃತವಾಗಿದೆ] :

'ಬ್ರಾಹ್ಮಣಾತಿಕ್ರಮತ್ಯಾಗೋ ಭವತಾಮೇವ ಭೂತಯೇ ।
ಜಾಮದಗ್ನ್ಯಶ್ಚ ವೋ ಮಿತ್ರಮನ್ಯಥಾ ದುರ್ಮನಾಯತೇ ॥'

[ ಬ್ರಾಹ್ಮಣರ ಮೇಲೆ ಅತಿಕ್ರಮಣ ಮಾಡುವುದನ್ನು ಬಿಟ್ಟರೆ ಅದರಿಂದ ನಿಮಗೇ ಕಲ್ಯಾಣ. ಹಾಗಿದ್ದರೆ ಜಾಮದಗ್ನಿಯು ನಿಮ್ಮ ಮಿತ್ರ; ಇಲ್ಲದಿದ್ದಲ್ಲಿ ಆತ ಕ್ರುದ್ಧನಾಗುತ್ತಾನೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೬೬ರ ಮುಂದಿನ ಗದ್ಯ, ೬೭; ಸಾ.ದ. : ೩-೧೫೪; ಪ್ರತಾಪ : ೪-೩೭

## ೨೪. ಸ್ಮೃತಿಲಕ್ಷಣ :

ಸದೃಶಜ್ಞಾನಚಿಂತಾದ್ಯೈಃ ಸಂಸ್ಕಾರಾತ್ಸ್ಮೃತಿರತ್ರ ಚ ।
ಜ್ಞಾತತ್ವೇನಾರ್ಥಭಾಸಿನ್ಯಾಂ ಭ್ರೂಸಮುನ್ನಯನಾದಯಃ ॥ ೨೦ ॥

ಅನು : [ಯಾವುದೊಂದು ವಿಷಯ ಹಿಂದೆ ನಡೆದಿರುತ್ತದೆ. ಪ್ರಸ್ತುತದಲ್ಲಿ ಅದಕ್ಕೆ] ಸದೃಶವಾದ [ಮತ್ತೊಂದನ್ನು] ಅರಿತುಕೊಳ್ಳುವುದು ಯೋಚಿಸುವುದು ಇತ್ಯಾದಿಗಳಿಂದ [ಹಿಂದಿನ ವಿಷಯದ ಬಗ್ಗೆ ಇರುವ] ಜ್ಞಾನದ ಮೂಲಕ [ಹಾಗೂ ಆ ಜ್ಞಾನದ ಮಾನಸಿಕ] ಸಂಸ್ಕಾರದ ಮೂಲಕ [ಹಿಂದಿನ ವಿಷಯದ] ಅರ್ಥ [ಇನ್ನೊಂದು ವಿಷಯದ ದ್ವಾರಾ

ಮತ್ತೆ] ಸ್ಫುರಿಸುವುದು 'ಸ್ಮೃತಿ'. ಹುಬ್ಬನ್ನು ಮೇಲಕ್ಕೆತ್ತುವುದು ಇತ್ಯಾದಿ [ಅನುಭಾವಗಳು ಅಲ್ಲಿ ತೋರುತ್ತವೆ].

ವ್ಯಾಖ್ಯೆ : ಉದಾ-[ಹನು. : ೩-೭೯] :

'ಮೈನಾಕಃ ಕಿಮಯಂ ರುಣದ್ಧಿ ಗಗನೇ ಮನ್ಮಾರ್ಗಮವ್ಯಾಹತಂ
ಶಕ್ತಿಸ್ತಸ್ಯ ಕುತಃ ಸ ವಜ್ರಪತನಾದ್ಭೀತೋ ಮಹೇಂದ್ರಾದಪಿ ।
ತಾರ್ಕ್ಷ್ಯಃ ಸೋಽಪಿ ಸಮಂ ನಿಜೇನ ವಿಭುನಾ ಜಾನಾತಿ ಮಾಂ ರಾವಣ –
ಮಾಃ ಜ್ಞಾತಂ ಸ ಜಟಾಯುರೇಷ ಜರಸಾ ಕ್ಲಿಷ್ಟೋ ವಧಂ ವಾಂಛತಿ ॥'

[ಆಕಾಶದ ನನ್ನ ಅವ್ಯಾಹತಮಾರ್ಗದಲ್ಲಿ ನಡುವೆ ತಡೆಗಟ್ಟುವ ಇವನು ಮೈನಾಕ(ಪರ್ವತ)ನೇನು? – ಅಲ್ಲ. ಮಹೇಂದ್ರನ ವಜ್ರಪತನಕ್ಕೆ ಕೂಡ ಭೀತಿಗೊಂಡಿರುವ ಆತನಿಗೆ ಈ ಶಕ್ತಿಯೆಲ್ಲಿ? ಗರುಡನೆ? – ಅಲ್ಲ. ತನ್ನ ಸ್ವಾಮಿಯಂತೆಯೇ ಆತನಿಗೂ ರಾವಣನಾದ ನನ್ನ ಪರಿಚಯವಿದೆ. ಆಃ! ಈಗ ತಿಳಿಯಿತು; ವಾರ್ಧಕ್ಯದಿಂದ ಸಂಕಟಪಡುತ್ತಿರುವ ಜಟಾಯುವಿವನು, ನನ್ನಿಂದ ವಧೆಯನಿಚ್ಛಿಸಿದ್ದಾನೆ.]

ಮತ್ತು – [ಮಾಮಾ : ೫–೧೦ ಮತ್ತು ಅದರ ಹಿಂದಿನ ಗದ್ಯ; ಇಲ್ಲಿನ ಗದ್ಯಭಾಗ ೪–೪೩ ರಲ್ಲೂ ಉದ್ಧೃತವಾಗಿದೆ] :

'ಮಾಧವಃ–ಮಮ ಹಿ ಪ್ರಾಕ್ತನೋಪಲಂಭಸಂಭಾವಿತಾತ್ಮಜನ್ಮನಃ ಸಂಸ್ಕಾರಸ್ಯಾನವರತ– ಪ್ರಬೋಧಾತ್ಪ್ರತಾಯಮಾನಸ್ತದ್ವಿಸದೃಶೈಃ ಪ್ರತ್ಯಯಾಂತರೈರತಿರಸ್ಕೃತಪ್ರವಾಹಃ ಪ್ರಿಯತಮಾಸ್ಮೃತಿಪ್ರತ್ಯಯೋತ್ಪತ್ತಿ ಸಂತಾನಸ್ತನ್ಮಯಮಿವ ಕರೋತಿ ವೃತ್ತಿಸಾರೂಪ್ಯತಶ್ಚೈತನ್ಯಮ್ ।–,

ಲೀನೇವ ಪ್ರತಿಬಿಂಬಿತೇವ ಲಿಖಿತೇವೋತ್ಕೀರ್ಣರೂಪೇವ ಚ
ಪ್ರತ್ಯುಪ್ತೇವ ಚ ವಜ್ರಸಾರಘಟಿತೇವಾಂತರ್ನಿಖಾತೇವ ಚ ।
ಸಾ ನಶ್ಚೇತಸಿ ಕೀಲಿತೇವ ವಿಶಿಖೈಶ್ಚೇತೋಭುವಃ ಪಂಚಭಿ–
ಶ್ಚಿಂತಾಸಂತತಿತಂತುಜಾಲನಿಬಿಡಸ್ಯೂತೇವ ಲಗ್ನಾ ಪ್ರಿಯಾ ॥'

[ವಿಸದೃಶವಾದ ವಿಷಯಾಂತರಗಳಿಂದ ಸಹ ಮರೆಯಾಗದೆ ಪುರಾತನ ಸಂಸ್ಕಾರಗಳು ಸದಾ ಜಾಗೃತವಾಗಿ ಪ್ರವಹಿಸುವಂತೆ ಪ್ರಿಯತಮೆಯ ಧ್ಯಾನಬಲದಿಂದ ಮೂಡಿಬರುವ (ಸ್ಮೃತಿ) ಪರಂಪರೆಯು ನನ್ನ ಚಿತ್ತವೃತ್ತಿಯನ್ನು ತನ್ಮಯಗೊಳಿಸಿದೆ: ಕರಗಿರುವಳೆಂಬಂತೆ, ಪಡಿಮೂಡಿರುವಳೆಂಬಂತೆ, ಬರೆದಿಟ್ಟಿರುವಳೆಂಬಂತೆ, ಕೆತ್ತಿಟ್ಟ ರೂಪವೆಂಬಂತೆ, ನೆಲೆಗೊಂಡಿರುವಳಂತೆ ಅಥವಾ ವಜ್ರಸಾರದಿಂದ ಸ್ಥಾಪಿಸಲ್ಪಟ್ಟಿರುವಳೆಂಬಂತೆ, ಒಳಗೆ ಹುಗಿದಿಟ್ಟಿರುವಳೆನ್ನುವಂತೆ, ಮನ್ಮಥನ ಪಂಚಬಾಣಗಳಿಂದ ನನ್ನ ಚೇತನದಲ್ಲಿ ಕೀಲಿಸಿಟ್ಟವಳಂತೆ ಅಥವಾ (ಆಕೆಯ) ಚಿಂತನೆಯ ಸಂತತಿಗಳೇ ತಂತುಗಳಾಗಿರುವ ನಿಬಿಡಜಾಲದಲ್ಲಿ ನೆಯ್ದುವಳೆನ್ನುವಂತೆ – ನನ್ನ ಪ್ರಿಯೆ ನನ್ನಲ್ಲಿ ಬೆರತುಹೋಗಿದ್ದಾಳೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೫೩ರ ಮುಂದಿನ ಗದ್ಯದಿಂದ ೫೫; ಸಾ.ದ. : ೩–೧೬೨; ಪ್ರತಾಪ : ೪–೩೦.

## ೨೫. ಮರಣಲಕ್ಷಣ :

**ಮರಣಂ ಸುಪ್ರಸಿದ್ಧತ್ವಾದನರ್ಥತ್ವಾಚ್ಚ ನೋಚ್ಯತೇ ।**

ಅನು : ಸುಪ್ರಸಿದ್ಧವಾಗಿರುವ ಕಾರಣ ಮತ್ತು ಅನರ್ಥಕಾರಿಯಾಗಿರುವ ಪ್ರಯುಕ್ತ 'ಮರಣ' [ಲಕ್ಷಣವನ್ನು] ಹೇಳಿಲ್ಲ.

ವ್ಯಾಖ್ಯೆ : ಉದಾ-[ಆಕರ ತಿಳಿಯದು] :

'ಸಂಪ್ರಾಪ್ತೇಽವಧಿವಾಸರೇ ಕ್ಷಣಮನು ತ್ವದ್ವರ್ತ್ಮವಾತಾಯನಂ
ವಾರಂವಾರಮುಪೇತ್ಯ ನಿಷ್ಕ್ರಿಯತಯಾ ನಿಶ್ಚಿತ್ಯ ಕಿಂಚಿಚ್ಚಿರಮ್ ।
ಸಂಪ್ರತ್ಯೇವ ನಿವೇದ್ಯ ಕೇಲಿಕುರರೀಂ ಸಾಸ್ರಂ ಸಖೀಭ್ಯಃ ಶಿಶೋ-
ರ್ಮಾಧವ್ಯಾಃ ಸಹಕಾರಕೇಣ ಕರುಣಃ ಪಾಣಿಗ್ರಹೋ ನಿರ್ಮಿತಃ ॥'

[(ಪ್ರಿಯೆಯನ್ನು ಬಿಟ್ಟು ದೂರ ಹೋಗಿರುವ ಎಲೈ ಪಾಂಥ,) ನೀನು ಬರಬೇಕಾಗಿದ್ದ ಅವಧಿಯ ದಿನ ಮೂಡಲು (ಆಕೆ) ಕ್ಷಣಕ್ಷಣವೂ ನೀನು ಬರುವ ಹಾದಿಯ ವಾತಾಯನದಲ್ಲಿ ಪುನಃ ಪುನಃ (ನಿನ್ನ ಬರವನ್ನೇ) ನಿರೀಕ್ಷಿಸುತ್ತ (ಕೊನೆಗೂ ನೀನು ಬರದಿರಲು) ನಿಶ್ಚೇತನಳಾಗಿ ಬಹುಕಾಲ ಏನನ್ನೊ (ಆಲೋಚಿಸಿ) ನಿರ್ಧರಿಸಿ, ಆ ಕ್ಷಣದಲ್ಲಿಯೇ ತನ್ನ ಆಟದ ಕುರರೀ ಪಕ್ಷಿಯನ್ನು ಕಣ್ಣೀರುದುಂಬಿ ಸಖಿಯರಿಗೊಪ್ಪಿಸಿ, ಎಳೆಯ ಮಾಧವಿಯನ್ನು ಸಹಕಾರವೃಕ್ಷದೊಂದಿಗೆ ಕರುಣೆಯಿಂದ ಪಾಣಿಗ್ರಹಣ ಮಾಡಿಸಿಬಿಟ್ಟಳು.]

–ಶೃಂಗಾರರಸವನ್ನವಲಂಬಿಸಿದಾಗ ಮೇಲಿನ ಉದಾಹರಣೆಯಂತೆ ಮರಣದ ಪೂರ್ವ ಸೂಚನೆಗಳನ್ನು ಮಾತ್ರ ಕೊಡಬೇಕಲ್ಲದೆ, ಪ್ರತ್ಯಕ್ಷ ಮರಣವನ್ನು ವರ್ಣಿಸಬಾರದು. ಆದರೆ, ಶೃಂಗಾರವಲ್ಲದ ಇತರ ರಸಗಳನ್ನವಲಂಬಿಸಿದಾಗ ಇಚ್ಛೆಯಂತೆ ವರ್ಣಿಸಬಹುದು. ಉದಾ:–[ಮಹಾ : ೧–೩೯] :

'ಪಶ್ಯಂತು ಭವಂತಸ್ತಾಡಕಾಮ್,–
ಹೃನ್ಮರ್ಮಭೇದಿಪತದುತ್ಕಟಕಂಕಪತ್ರಸಂವೇಗತತ್ಕ್ಷಣಕೃತಸ್ಫುರದಂಗಭಂಗಾ ।
ನಾಸಾಕುಟೀರಕುಹರದ್ವಯತುಲ್ಯನಿರ್ಯದ್ಬುದ್ಬುದಧ್ವನದಸೃಕ್ಪ್ರಸರಾ ಮೃತೈವ ॥'

[ಈ ತಾಡಕೆಯನ್ನು ನೋಡಿ : ಹೃದಯಮರ್ಮವನ್ನೇ ಭೇದಿಸಿ ಎರಗಿದ ತೀಕ್ಷ್ಣಬಾಣದ ತೀವ್ರ ವೇಗದಿಂದ ಅದೇ ಕ್ಷಣದಲ್ಲಿ ಅಂಗಚ್ಛೇದನವಾಗಿರಲು, ಎರಡು ಗುಹೆಗಳೆಂಬಂತಿರುವ ನಾಸಾಕುಟೀರದಿಂದ ಬುದ್ಬುದಧ್ವನಿ ಮಾಡುತ್ತ ನೆತ್ತರು ಸುರಿಯುತ್ತಿರಲು ಈಕೆ ಇನ್ನೇನು ಸತ್ತಂತೆಯೇ.]

ಟಿಪ್ಪಣಿ : ರಸರತ್ನಹಾರದಲ್ಲಿ 'ಮರಣ'ಕ್ಕೆ 'ನಿಧನ' ಎಂಬ ಹೆಸರಿದೆ.

ಹೋಲಿಕೆ = ನಾ.ಶಾ. : ೭–೮೪ರ ಮುಂದಿನ ಗದ್ಯದಿಂದ ೮೯; ಸಾ.ದ. : ೩–೧೫೫; ಪ್ರತಾಪ : ೪–೫೦.

## ೨೬. ಮದಲಕ್ಷಣ :

**ಹರ್ಷೋತ್ಕರ್ಷೋ ಮದಃ ಪಾನಾತ್ ಸ್ಖಲದಂಗವಚೋಗತಿಃ ॥ ೨೧ ॥**
**ನಿದ್ರಾ ಹಾಸೋಽತ್ರ ರುದಿತಂ ಜ್ಯೇಷ್ಠಮಧ್ಯಾಧಮಾದಿಷು ।**

ಅನು : [ಮದ್ಯ ಇತ್ಯಾದಿ] ಪಾನದಿಂದ ಅಂಗಗಳಲ್ಲಿ [ಹಾಗೂ] ನಡೆನುಡಿಗಳಲ್ಲಿ ಶೈಥಿಲ್ಯ[ವನ್ನುಂಟುಮಾಡುವ] ಹರ್ಷದ ಹೆಚ್ಚಳ 'ಮದ'. ಆದರಿಂದ–ಉತ್ತಮ ಮಧ್ಯಮ ಅಧಮರಲ್ಲಿ [ಕ್ರಮವಾಗಿ] ನಿದ್ರೆ ನಗು ಅಳು [–ಈ ಅನುಭಾವಗಳು ತೋರುತ್ತವೆ].

ವ್ಯಾಖ್ಯೆ : ಉದಾ:–[ಮಾಘ. : ೧೦–೧೩] :

'ಹಾವಹಾರಿ ಹಸಿತಂ ವಚನಾನಾಂ ಕೌಶಲಂ ದೃಶಿ ವಿಕಾರವಿಶೇಷಾಃ ।
ಚಕ್ರಿರೇ ಭೃಶಮೃಜೋರಪಿ ವಧ್ವಾಃ ಕಾಮಿನೇವ ತರುಣೇನ ಮದೇನ ॥'

[ಹಾವಭಾವಯುಕ್ತವಾದ ಮನೋಹರವಾದ ನಗು, ಮಾತುಗಳಲ್ಲಿ ಕೌಶಲ, ಕಣ್ಣಿನಲ್ಲಿ ವಿಶೇಷವಾದ ವಿಕಾರ – ಹೀಗೆ, ಅತಿಮುಗ್ಧರಾದ ವಧುಗಳು ಕೂಡ ಕಾಮಿಯಾದ ತರುಣನಿಂದೆಂಬಂತೆ – ಪಾನಮತ್ತತೆಯಿಂದ (ಮದಚೇಷ್ಟೆಗಳನ್ನು ) ಆರಂಭಿಸಿದರು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೩೭ರ ಮುಂದಿನ ಗದ್ಯದಿಂದ ೪೬; ಸಾ.ದ. : ೩–೧೪೬, ೧೪೭; ಪ್ರತಾಪ : ೪–೨೪.

## ೨೭. ಸುಪ್ತಲಕ್ಷಣ :

**ಸುಪ್ತಂ ನಿದ್ರೋದ್ಭವಂ ತತ್ರ ಶ್ವಾಸೋಚ್ಛ್ವಾಸಕ್ರಿಯಾ ಪರಮ್ ॥ ೨೨ ॥**

ಅನು : ನಿದ್ರೆಯಿಂದ ಹುಟ್ಟಿದ್ದು [ಎಂದರೆ, ನಿದ್ರೆಯೊಳಗಿನ ಒಂದು ವಿಶಿಷ್ಟ ಅವಸ್ಥೆ] 'ಸುಪ್ತ'. ಅಲ್ಲಿ ವಿಶೇಷವಾದ ಶ್ವಾಸೋಚ್ಛ್ವಾಸಕ್ರಿಯೆ [ಅನುಭಾವ].

ವ್ಯಾಖ್ಯೆ : ಉದಾ–[ಕಮಲಾಯುಧಕೃತ] :

'ಲಘುನಿ ತೃಣಕುಟೀರೇ ಕ್ಷೇತ್ರಕೋಣೇ ಯವಾನಾಂ
ನವಕಲಮಪಲಾಲಸ್ರಸ್ತರೇ ಸೋಪಧಾನೇ ।
ಪರಿಹರತಿ ಸುಷುಪ್ತಂ ಹಾಲಿಕದ್ವಂದ್ವಮಾರಾ –
ತ್ಕುಚಕಲಶಮಹೋಷ್ಮಾಬದ್ಧರೇಖಸ್ತುಷಾರಃ ॥'

[ಗೋದಿಯ ಹೊಲದ ಮೂಲೆಗಿರುವ ಸಣ್ಣ ಹುಲ್ಲುಗುಡಿಸಲಿನಲ್ಲಿ ಹೊಸ ಪಯಿರುಹುಲ್ಲಿನ ಹಾಸಿಗೆಯ ಮೇಲೆ ಅದೇ (ಹುಲ್ಲನ್ನು) ತಲೆಗಿಂಬಿಗಿಟ್ಟು ಕೃಷಿಕದಂಪತಿಗಳು ನಿದ್ದೆಮಾಡುತ್ತಿರಲು, (ಆ ಕೃಷಿಕ ಸುಂದರಿಯ) ಕೊಡಮೊಲೆಯ ಬಿಸಿಗೆ ಅಂಟಿದ ಗೆರೆ ಮಂಜು (ತನ್ನ ಶೈತ್ಯದಿಂದ ಅವರ) ನಿದ್ದೆಯನ್ನು ಪರಿಹರಿಸುತ್ತದೆ.]

ಟಿಪ್ಪಣಿ : ನಾಮಾಂತರಗಳು : ಸುಷುಪ್ತ, ಸ್ವಪ್ನ (ಸಾ.ದ.), ಸುಪ್ತಿ (ಪ್ರತಾಪ).

ಹೋಲಿಕೆ = ನಾ.ಶಾ. : ೭–೭೪ರ ಮುಂದಿನ ಗದ್ಯ, ೭೫; ಸಾ.ದ. : ೩–೧೫೨ ; ಪ್ರತಾಪ : ೪–೪೨.

## ೨೮. ನಿದ್ರಾಲಕ್ಷಣ :

**ಮನಃಸಂಮೀಲನಂ ನಿದ್ರಾ, ಚಿಂತಾಲಸ್ಯಕ್ಲಮಾದಿಭಿಃ ।**
**ತತ್ರ ಜೃಂಭಾಂಗಭಂಗಾಕ್ಷಿಮೀಲನೋತ್ಸ್ವಪ್ನತಾದಯಃ[1] ॥ ೨೩ ॥**

ಅನು : ಚಿಂತೆ ಆಲಸ್ಯ ಗ್ಲಾನಿಗಳಿಂದ [ಉಂಟಾಗುವ] ಮನಸ್ಸಿನ ಸಂಮೀಲನ (ಮುಚ್ಚುವಿಕೆ) 'ನಿದ್ರೆ'. ಅಲ್ಲಿ – ಆಕಳಿಕೆ, ಮೆಯ್ ಮುರಿಯುವುದು, ಕಣ್ಣು ಮುಚ್ಚುವುದು, ನಿದ್ದೆಯೇರುವುದು ಇತ್ಯಾದಿ [ಅನುಭಾವಗಳುಂಟಾಗುತ್ತವೆ].

ವ್ಯಾಖ್ಯೆ : ಉದಾ–[ಬಿಲ್ಹಣಕೃತ] :

'ನಿದ್ರಾರ್ಧಮೀಲಿತದೃಶೋ ಮದಮಂಥರಾಣಿ
ನಾಪ್ಯರ್ಥವಂತಿ ನ ಚ ಯಾನಿ ನಿರರ್ಥಕಾನಿ ।
ಅದ್ಯಾಪಿ ಮೇ ಮೃಗದೃಶೋ ಮಧುರಾಣಿ ತಸ್ಯಾ –
ಸ್ತಾನ್ಯಕ್ಷರಾಣಿ ಹೃದಯೇ ಕಿಮಪಿ ಧ್ವನಂತಿ ॥'

[ನಿದ್ರೆಯಿಂದ ಅರೆಮುಚ್ಚಿದ ಕಣ್ಣುಗಳುಳ್ಳ ಆ ಹರಿಣಾಕ್ಷಿಯ – ಅರ್ಥವಿಲ್ಲದಿದ್ದರೂ ನಿರರ್ಥಕವಲ್ಲದ – ಮಧುರವಾದ ಮದಮೂಢಾಕ್ಷರಗಳು (ನಿದ್ದೆಯಲ್ಲಿ ಆಕೆ ಮಧುರವಾಗಿ ಹುಬ್ಬುವರಿಯುತ್ತಿದ್ದುವು) ಈಗ ಕೂಡ ನನ್ನ ಹೃದಯದಲ್ಲಿ ಏನನ್ನೋ ಧ್ವನಿಸುತ್ತಿದೆ.]

ಮತ್ತು – [ಮಾಘ. : ೧೧–೪] :

---

[1] ಪಾಠ : ಉಚ್ಛ್ವಸನಾದಯಃ ।

'ಪ್ರಹರಕಮಪನೀಯ ಸ್ವಂ ನಿದಿದ್ರಾಸತೋಚ್ಚೈಃ

ಪ್ರತಿಪದಮುಪಹೂತಃ ಕೇನಚಿಜ್ಜಾಗೃಹೀತಿ ।

ಮುಹುರವಿಶದವರ್ಣಾಂ ನಿದ್ರಯಾ ಶೂನ್ಯಶೂನ್ಯಾಂ

ದದದಪಿ ಗಿರಮಂತರ್ಬುಧ್ಯತೇ ನೋ ಮನುಷ್ಯಃ ॥'

[ಯಾವನೋ ಒಬ್ಬ(ಪಹರೆಯವ)ನು ತನ್ನ ಕಾವಲನ್ನು ಮುಗಿಸಿ ನಿದ್ದೆಹೋಗಲಿಚ್ಛಿಸಿ ಮತ್ತೊಬ್ಬನನ್ನು (ಮುಂದಿನ ಪ್ರಹರಿಯನ್ನು) 'ಏದ್ದೇಳು' ಎಂದು ಗಟ್ಟಿಯಾಗಿ ಮತ್ತೆ ಮತ್ತೆ ಕರೆಯುತ್ತಿರಲು, (ಆ ಮತ್ತೊಬ್ಬ) ಮನುಷ್ಯನು ನಿದ್ರೆಯಿಂದ ಅರ್ಥಶೂನ್ಯವಾದ ಅಸ್ಪಷ್ಟಾಕ್ಷರಗಳನ್ನಾಡುತ್ತಾನೆಯೇ ಹೊರತು ಒಳಗೆ ಎಚ್ಚರಗೊಳ್ಳುವುದೇ ಇಲ್ಲ.]

ಟಿಪ್ಪಣಿ : ಹ್ಯಾಸ್ ಅವರು 'ಉತ್ಸ್ವಪ್ನ' ಎಂಬುದಕ್ಕೆ 'ನಿದ್ರೆಯಿಂದೇಳುವುದು' ಎಂದು ಅನುವಾದಿಸಿದ್ದಾರೆ. (ನೋಡಿ : ಹ್ಯಾಸ್ : ೪-೨೮.)

ಹೋಲಿಕೆ = ನಾ.ಶಾ. : ೭-೭೦ರ ಮುಂದಿನ ಗದ್ಯದಿಂದ ೭೨; ಸಾ.ದ. : ೩-೧೫೭; ಪ್ರತಾಪ : ೪-೪೦.

## ೨೯. ವಿಬೋಧಲಕ್ಷಣ :

**ವಿಬೋಧಃ ಪರಿಣಾಮಾದೇಸ್ತತ್ರ ಜೃಂಭಾಕ್ಷಿಮರ್ದನೇ ।**

ಅನು : ಪರಿಣಾಮ [ಎಂದರೆ, ನಿದ್ರೆ ತಿಳಿಯುವುದು] ಇತ್ಯಾದಿಗಳಿಂದ [ಉಂಟಾಗುವ ಮನಃಸ್ಥಿತಿ] 'ವಿಬೋಧ'.ಅಲ್ಲಿ – ಆಕಳಿಕೆ, ಕಣ್ಣುಜ್ಜುವುದು [ಮೊದಲಾದ ಅನುಭಾವಗಳು].

ವ್ಯಾಖ್ಯೆ : ಉದಾ:– [ಮಾಘ. : ೧೧–೧೩] :

'ಚಿರರತಿಪರಿಖೇದಪ್ರಾಪ್ತನಿದ್ರಾಸುಖಾನಾಂ

ಚರಮಮಪಿ ಶಯಿತ್ವಾ ಪೂರ್ವಮೇವ ಪ್ರಬುದ್ಧಾಃ ।

ಅಪರಿಚಲಿತಗಾತ್ರಾಃ ಕುರ್ವತೇ ನ ಪ್ರಿಯಾಣಾ –

ಮಶಿಥಿಲಭುಜಚಕ್ರಾಶ್ಲೇಷಭೇದಂ ತರುಣ್ಯಃ ॥'

[(ಪತಿ ಮಲಗಿದ) ಬಳಿಕ ಮಲಗಿ (ಅವನಿಗಿಂತ) ಮುಂಚೆಯೇ ಎಚ್ಚರಗೊಳ್ಳುವ ತರುಣಿಯರು, ದೀರ್ಘರತಿ ಶ್ರಮದಿಂದ ನಿದ್ರಾಸುಖವುಂಟಾಗಿರುವ ಪ್ರಿಯರನ್ನು (ಬೇಗ ಎಬ್ಬಿಸಲಿಚ್ಛಿಸದೆ) ದೇಹ ಅಲುಗದಂತಿದ್ದು ಬಿಗಿದೋಳ ಬಟ್ಟಪ್ಪುಗೆಯನ್ನು ಕಳಚದೆ (ಹಾಗೆಯೇ ಮಲಗಿಕೊಂಡು) ಇದ್ದುಬಿಡುತ್ತಾರೆ.]

ಟಿಪ್ಪಣಿ : 'ವಿಬೋಧ'ಕ್ಕೆ 'ಪ್ರಬೋಧ' ಎಂಬ ಹೆಸರೂ ಉಂಟು.

ಹೋಲಿಕೆ = ನಾ.ಶಾ. : ೭-೭೫ರ ಮುಂದಿನ ಗದ್ಯ, ೭೬; ಸಾ.ದ. : ೩-೧೫೧; ಪ್ರತಾಪ : ೪-೪೩.

## ೩೦. ವ್ರೀಡಾಲಕ್ಷಣ :

**ದುರಾಚಾರಾದಿಭಿರ್ವ್ರೀಡಾ ಧಾರ್ಷ್ಟ್ಯಾಭಾವಸ್ತಮುನ್ನಯೇತ್ ।**

**ಸಾಚೀಕೃತಾಂಗಾವರಣವೈವರ್ಣ್ಯಾಧೋಮುಖಾದಿಭಿಃ ॥ ೨೪ ॥**

ಅನು : ದುರಾಚಾರ ಮೊದಲಾದವುಗಳಿಂದ [ಉಂಟಾಗುವ] ಧಾರ್ಷ್ಟ್ಯದ ಅಭಾವ [ಅಥವಾ, ಹೇಡಿತನ] 'ವ್ರೀಡೆ'. ಮೆಯ್ ಮುದುಡಿಸಿ ಮುಚ್ಚಿಕೊಳ್ಳುವುದು, ಬಣ್ಣ ಬದಲಾಗುವುದು, ಮುಖ ತಗ್ಗಿಸುವುದು ಇತ್ಯಾದಿ [ಅನುಭಾವ]ಗಳಿಂದ ಅದನ್ನು ತಿಳಿದುಕೊಳ್ಳತಕ್ಕದ್ದು.

ವ್ಯಾಖ್ಯೆ : ಉದಾ:–[ಅಮರು. : ಶ್ಲೋ. ೪೦] :

'ಪಟಾಲಗ್ನೇ ಪತ್ಯೌ ನಮಯತಿ ಮುಖಂ ಜಾತವಿನಯಾ
ಹಠಾಶ್ಲೇಷಂ ವಾಂಛತ್ಯಪಹರತಿ ಗಾತ್ರಾಣಿ ನಿಭೃತಮ್ ।
ನ ಶಕ್ನೋತ್ಯಾಖ್ಯಾತುಂ ಸ್ಮಿತಮುಖಸಖೀದತ್ತನಯನಾ
ಹ್ರಿಯಾ ತಾಮ್ಯತ್ಯಂತಃ ಪ್ರಥಮಪರಿಹಾಸೇ ನವವಧೂಃ ॥'

[ಪತಿ ಸೀರೆಯನ್ನು ಹಿಡಿಯಲು ನಾಚಿಕೆಯುಕ್ಕಿ ಮುಖ ತಗ್ಗಿಸುತ್ತಾಳೆ. ಹಠದಿಂದ ಅಪ್ಪಲೆಳಸಿದಾಗ ಅಂಗಗಳನ್ನಡ್ಡಯಿಸಿ ತಪ್ಪಿಸಿಕೊಳ್ಳುತ್ತಾಳೆ. (ಗಂಡನ ಪರಿಹಾಸದ ಪ್ರಶ್ನೆಗಳಿಗೆ) ಉತ್ತರ ಕೊಡಲಾಗದೆ, ಮುಗುಳು ನಗುವ ಸಖಿಯತ್ತ ಕಣ್ಣಿಡುತ್ತಾಳೆ. ಹೀಗೆ ಮೊದಲ ಪರಿಹಾಸದಲ್ಲಿ ನಾಚಿಕೆಯಿಂದ ಒಳಗೇ ಬಳಲುತ್ತಾಳೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೫೭ರ ಮುಂದಿನ ಗದ್ಯದಿಂದ ೫೯; ಸಾ.ದ. : ೩-೧೬೫; ಪ್ರತಾಪ : ೪-೩೨.

## ೩೧. ಅಪಸ್ಮಾರಲಕ್ಷಣ :

**ಆವೇಶೋ ಗ್ರಹದುಃಖಾದ್ಯೈರಪಸ್ಮಾರೋ ಯಥಾವಿಧಿಃ ।**
**ಭೂಪಾತಕಂಪಪ್ರಸ್ವೇದಲಾಲಾಫೇನೋದ್ಗಮಾದಯಃ ॥ ೨೫ ॥**

ಅನು : [ವಿರುದ್ಧವಾಗಿ ವರ್ತಿಸುವ ಕೆಟ್ಟ] ಗ್ರಹ[ಗಳಿಂದೊದಗುವ] ಸಂಕಟ ಇತ್ಯಾದಿಗಳಿಂದ [ಉಂಟಾಗುವ] ಆವೇಶ (ಹುಚ್ಚು) 'ಅಪಸ್ಮಾರ'. [ಅಲ್ಲಿ] ಯಥಾಪ್ರಕಾರ ನೆಲಕ್ಕೆ ಬೀಳುವುದು, ನಡುಗುವುದು, ಅತಿಯಾಗಿ ಬೆವರುವುದು, [ಬಾಯಿಯಲ್ಲಿ] ಜೊಲ್ಲು ಬುರುಗುಗಳು ಉಕ್ಕುವುದು ಇತ್ಯಾದಿ [ಅನುಭಾವಗಳುಂಟಾಗುತ್ತವೆ].

ವ್ಯಾಖ್ಯೆ : ಉದಾ-[ಮಾಘ. : ೩-೭೨] :

'ಆಶ್ಲಿಷ್ಟಭೂಮಿಂ ರಸಿತಾರಮುಚ್ಚೈರ್ಲೋಲದ್ಭುಜಾಕಾರಬೃಹತ್ತರಂಗಮ್ ।
ಫೇನಾಯಮಾನಂ ಪತಿಮಾಪಗಾನಾಮಸಾವಪಸ್ಮಾರಿಣಮಾಶಶಂಕೇ ॥'

[ನೆಲವನ್ನಪ್ಪಿ ಮೇಲ್ದನಿಯಲ್ಲಿ ಅರಚುತ್ತ ತೋಳುಗಳಂತಿರುವ ಏರುದೆರೆಗಳನ್ನಾಡಿಸುತ್ತ ನೊರೆ ತುಂಬಿಕೊಂಡ ಆ ಸಮುದ್ರವನ್ನು (ನೋಡಿದ ಶ್ರೀಕೃಷ್ಣನು ಅದನ್ನು) ಅಪಸ್ಮಾರರೋಗಿಯೆಂದು ಶಂಕಿಸಿದನು.]

ಟಿಪ್ಪಣಿ : ಗ್ರಹದುಃಖಾದಿಗಳು : ದುಷ್ಟಗ್ರಹಗಳು ಮತ್ತು ಭೂತಪಿಶಾಚಾದಿಗಳು ಮನುಷ್ಯರನ್ನು ಆಕ್ರಮಿಸಿ ಪೀಡಿಸುವುದು.

ಹೋಲಿಕೆ = ನಾ.ಶಾ. : ೭-೭೨ರ ಮುಂದಿನ ಗದ್ಯದಿಂದ ೭೪; ಸಾ.ದ. : ೩-೧೫೩; ಪ್ರತಾಪ : ೪-೪೧.

## ೩೨. ಮೋಹಲಕ್ಷಣ :

**ಮೋಹೋ ವಿಚಿತ್ತತಾ ಭೀತಿದುಃಖಾವೇಶಾನುಚಿಂತನೈಃ ।**
**ತತ್ರಾಜ್ಞಾನಭ್ರಮಾಘಾತಘೂರ್ಣನಾದರ್ಶನಾದಯಃ ॥ ೨೬ ॥**

ಅನು : ಭಯ, ದುಃಖ ಆವೇಶ (ಅಥವಾ ದುಃಖದ ಆವೇಶ), ಚಿಂತಾ ಮಗ್ನತೆ - ಇವುಗಳಿಂದ [ಉಂಟಾಗುವ] ಚಿತ್ತವಿಕಾರ 'ಮೋಹ'. ಅಲ್ಲಿ - ಜ್ಞಾನ ಶೂನ್ಯತೆ, ಭ್ರಮೆ, [ತಲೆ] ತಿರುಗುವಿಕೆ, ದೃಷ್ಟಿಲೋಪ ಇತ್ಯಾದಿ [ಅನುಭಾವಗಳು].

ವ್ಯಾಖ್ಯೆ : ಉದಾ-[ಕುಸಂ. : ೩-೭೩] :

'ತೀವ್ರಾಭಿಷಂಗಪ್ರಭವೇಣ ವೃತ್ತಿಂ ಮೋಹೇನ ಸಂಸ್ತಂಭಯತೇಂದ್ರಿಯಾಣಾಮ್।
ಅಜ್ಞಾತಭರ್ತೃವ್ಯಸನಾ ಮುಹೂರ್ತಂ ಕೃತೋಪಕಾರೇವ ರತಿರ್ಬಭೂವ ॥'

[ತೀವ್ರವಾದ ಹೃದಯಪರಾಭವದಿಂದ ಹುಟ್ಟಿದ ಮೂರ್ಛೆ ಇಂದ್ರಿಯಗಳ ವೃತ್ತಿಯನ್ನು ಸ್ತಬ್ಧಗೊಳಿಸಿ, ಕ್ಷಣಕಾಲ ಪತಿಶೋಕವನ್ನು ಮರೆಯಿಸಿ ರತಿಗೆ ಉಪಕಾರವನ್ನೆಸಗಿದಂತಾಯಿತು.]

ಮತ್ತು – [ಉತ್ತರ. : ೧–೩೫; ೪–೭೬ರಲ್ಲಿ ಪುನಃ ಉದ್ಧೃತವಾಗಿದೆ] :

'ವಿನಿಶ್ಚೇತುಂ ಶಕ್ಯೋ ನ ಸುಖಮಿತಿ ವಾ ದುಃಖಮಿತಿ ವಾ
ಪ್ರಮೋಹೋ ನಿದ್ರಾ ವಾ ಕಿಮು ವಿಷವಿಸರ್ಪಃ ಕಿಮು ಮದಃ।
ತವ ಸ್ಪರ್ಶೇ ಸ್ಪರ್ಶೇ ಮಮ ಹಿ ಪರಿಮೂಢೇಂದ್ರಿಯಗಣೋ
ವಿಕಾರಃ ಕೋಽಪ್ಯಂತರ್ಜಡಯತಿ ಚ ತಾಪಂ ಚ ಕುರುತೇ ॥'

[ಇದು ಸುಖವೆಂದು ಅಥವಾ ದುಃಖವೆಂದು ನಿರ್ಧರಿಸುವುದೇ ಅಸಾಧ್ಯವಾಗಿದೆ; ಅಥವಾ ವಿಶೇಷವಾದ ಮೋಹವೇ? ಅಥವಾ ನಿದ್ರೆಯೆ? ವಿಷಪ್ರಸಾರವೆ? ಮದವೆ? ನಿನ್ನ ದೇಹದ ಸ್ಪರ್ಶಸ್ಪರ್ಶದಲ್ಲಿಯೂ ನನ್ನ ಇಂದ್ರಿಯಗಳು ಪರಿಮೂಢವಾಗುತ್ತವೆ; ಯಾವುದೋ ವಿಕಾರ ಅಂತಃಕರಣವನ್ನು ಸ್ತಬ್ಧಗೊಳಿಸುತ್ತದೆ, ತಾಪವನ್ನುಂಟುಮಾಡುತ್ತದೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೫೧ರ ಮುಂದಿನ ಗದ್ಯದಿಂದ ೫೩; ಸಾ.ದ. : ೩–೧೫೦; ಪ್ರತಾಪ : ೪–೨೯.

## ೩೩. ಮತಿಲಕ್ಷಣ :

**ಭ್ರಾಂತಿಚ್ಛೇದೋಪದೇಶಾಭ್ಯಾಂ ಶಾಸ್ತ್ರಾದೇಸ್ತತ್ತ್ವಧೀರ್ಮತಿಃ।**

ಅನು : ಶಾಸ್ತ್ರ ಮುಂತಾದವುಗಳಿಂದ ತತ್ತ್ವಬುದ್ಧಿ [ಎಂದರೆ, ಸತ್ಯವನ್ನು ಅರಿತುಕೊಳ್ಳುವ ಬುದ್ಧಿಶಕ್ತಿ ಉಂಟಾಗುವುದು] 'ಮತಿ'. ಭ್ರಮೆ ಹರಿಯುವುದು, ಉಪದೇಶ [ಕೊಡುವುದು ಕೊಳ್ಳುವುದು] ಇವುಗಳಿಂದ ['ಮತಿ'ಯನ್ನು ಗುರುತಿಸತಕ್ಕದ್ದು].

ವ್ಯಾಖ್ಯೆ : ಉದಾ:–[ಕಿರಾತ. : ೨–೩೦] :

'ಸಹಸಾ ವಿದಧೀತ ನ ಕ್ರಿಯಾಮವಿವೇಕಃ ಪರಮಾಪದಾಂ ಪದಮ್।
ವೃಣತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಃ ಸ್ವಯಮೇವ ಸಂಪದಃ ॥'

[ಒಡನೆಯೇ (ಆತುರದಿಂದ) ಯಾವುದೊಂದು ಕಾರ್ಯವನ್ನು ಮಾಡಬಾರದು. (ಅಂತಹ) ವಿವೇಕಹೀನತೆ ವಿಶೇಷ ಆಪತ್ತುಗಳಿಗೆ ಹಾದಿಯಾಗುತ್ತದೆ. ಕಾರ್ಯಾಕಾರ್ಯವಿಮರ್ಶೆಯುಳ್ಳವನನ್ನು ಗುಣವನ್ನೆ ಬಯಸುವ ಸಂಪತ್ತುಗಳು ತಾವಾಗಿಯೇ ವರಿಸುತ್ತವೆಯಲ್ಲವೆ?]

ಮತ್ತು–[ಆಕರ ತಿಳಿಯದು] :

'ನ ಪಂಡಿತಾಃ ಸಾಹಸಿಕಾ ಭವಂತಿ ಶ್ರುತ್ವಾಪಿ ತೇ ಸಂತುಲಯಂತಿ ತತ್ತ್ವಮ್।
ತತ್ತ್ವಂ ಸಮಾದಾಯ ಸಮಾಚರಂತಿ ಸ್ವಾರ್ಥಂ ಪ್ರಕುರ್ವಂತಿ ಪರಸ್ಯ ಚಾರ್ಥಮ್ ॥'

[ಪಂಡಿತರು ಸಾಹಸಿಗಳಾಗುವುದಿಲ್ಲ. (ಏನಾದರೊಂದು ವಿಷಯವನ್ನು) ಕೇಳಿದರೂ ಕೂಡ ಅವರು ಅದರ ತತ್ತ್ವವನ್ನು ಪರೀಕ್ಷಿಸುತ್ತಾರೆ. ಹಾಗೆ ತತ್ತ್ವವನ್ನು ಗ್ರಹಿಸಿ ಅನಂತರವೇ ತಮ್ಮ ಅರ್ಥವನ್ನು ಸರಿಯಾಗಿ ಸಾಧಿಸಿಕೊಳ್ಳುತ್ತಾರೆ ಮತ್ತು ಬೇರೆಯವರ ಒಳಿತನ್ನೂ ಚೆನ್ನಾಗಿ ಸಾಧಿಸಿಕೊಡುತ್ತಾರೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೮೦ರ ಮುಂದಿನ ಗದ್ಯ, ೮೧; ಸಾ.ದ. : ೩–೧೬೩; ಪ್ರತಾಪ : ೪–೪೭

## ೩೪. ಆಲಸ್ಯಲಕ್ಷಣ :

**ಆಲಸ್ಯಂ ಶ್ರಮಗರ್ಭಾದೇರ್ಜಾಡ್ಯಂ ಜೃಂಭಾಸಿತಾದಿಮತ್ ॥ ೨೭ ॥**

ಅನು : ಬಸಿರು ಬಳಲಿಕೆ ಮೊದಲಾದವುಗಳಿಂದ [ಉಂಟಾಗುವ] ಜಡತೆ 'ಆಲಸ್ಯ'. ಆಕಳಿಕೆ ಅಚಲತೆ ಇತ್ಯಾದಿಗಳಿಂದ ಕೂಡಿದ [ಅನುಭಾವಗಳು ಅಲ್ಲಿ ತೋರುತ್ತವೆ].

ವ್ಯಾಖ್ಯೆ : ಉದಾ–[ಧನಿಕನದೇ] :

'ಚಲತಿ ಕಥಂಚಿತ್ಪೃಷ್ಟಾ ಯಚ್ಛತಿ ವಚನಂ ಕಥಂಚಿದಾಲೀನಾಮ್ ।
ಆಸಿತುಮೇವ ಹಿ ಮನುತೇ ಗುರುಗರ್ಭಭರಾಲಸಾ ಸುತನುಃ ॥'

[ಬಸಿರ ಹೊರೆಯಿಂದ ಬಳಲಿದ ಚೆಲುವೆ ಹೇಗೋ ಅಡ್ಡಾಡುತ್ತಾಳೆ; ಸಖಿಯರು ಪ್ರಶ್ನಿಸಲು ಹೇಗೋ ಹೊಂದಿಕೆಯಾಗಿ ಮಾತುಗೊಡುತ್ತಾಳೆ; (ನಿಜವಾಗಿ ಹೇಳುವುದಾದರೆ ಆಕೆ ಯಾವಾಗಲೂ ಒಂದೆಡೆಗೇ ಸುಮ್ಮನೆ) ಕುಳಿತುಬಿಡಲು ಇಚ್ಛಿಸುತ್ತಾಳೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೪೭ರ ಮುಂದಿನ ಗದ್ಯ, ೪೮; ಸಾ.ದ. : ೩–೧೫೫; ಪ್ರತಾಪ : ೪–೨೫.

## ೩೫. ಆವೇಗಲಕ್ಷಣ :

**ಆವೇಗಃ ಸಂಭ್ರಮೋಽಸ್ಮಿನ್ನಭಿಸರಜನಿತೇ ಶಸ್ತ್ರನಾಗಾಭಿಯೋಗೋ[೨]**
**ವಾತಾತ್ಪಾಂಸೂಪದಿಗ್ಧಸ್ತ್ವರಿತಪದಗತಿರ್ವರ್ಷಜೇ ಪಿಂಡಿತಾಂಗಃ ।**
**ಉತ್ಪಾತಾತ್ಸ್ರಸ್ತತಾಂಗೇಷ್ವಹಿತಹಿತಕೃತೇ ಶೋಕಹರ್ಷಾನುಭಾವಾ**
**ವಹ್ನೇರ್ಧೂಮಾಕುಲಾಸ್ಯಃ ಕರಿಜಮನು ಭಯಸ್ತಂಭಕಂಪಾಪ**
**ಸಾರಾಃ ॥ ೨೮ ॥**

ಅನು : ಪೂರ್ಣ ಭ್ರಮೆಗೊಳ್ಳುವುದು 'ಆವೇಗ'. ಅವುಗಳಲ್ಲಿ [ಹಲವು ವಿಧಗಳಿವೆ] : [ಮೊದಲನೆಯದಾಗಿ] ರಾಜವಿದ್ರವ(ಅಭಿಸಾರ)ದಿಂದ ಉಂಟಾದ [ಆವೇಗದಲ್ಲಿ] ಶಸ್ತ್ರ ಆನೆ–ಇವುಗಳು ಕೂಡಿರುವುದು [ಮುಂತಾದ ಅನುಭಾವವಿರುತ್ತದೆ]; [ಎರಡನೆಯದಾಗಿ] ಗಾಳಿಯ[ಉತ್ಪಾತದಿಂದ ಉಂಟಾದ ಉದ್ವೇಗದ]ಲ್ಲಿ ಧೂಳಿನಿಂದ ಮುಚ್ಚಿಹೋಗುವುದು, ತ್ವರಿತವಾದ ನಡೆ [ಇತ್ಯಾದಿ ಅನುಭಾವ]; [ಮೂರನೆಯದಾಗಿ] ಮಳೆಯಿಂದುಂಟಾದ [ಆವೇಗದ]ಲ್ಲಿ ಅಂಗ ಸಂಕುಚಿತವಾಗುವುದು [ಮೊದಲಾದ ಅನುಭಾವ]; [ನಾಲ್ಕನೆಯದಾಗಿ] ಉತ್ಪಾತದಿಂದ [ಉಂಟಾದ ಆವೇಗದಲ್ಲಿ] ಅಂಗ ಸೊರಗುವುದು [ಇತ್ಯಾದಿ ಅನುಭಾವ]; [ಐದನೆಯದಾಗಿ] ಇಷ್ಟವೋ ಅಥವಾ ಅನಿಷ್ಟವೋ [ಆದ ಯಾವುದೊಂದರಿಂದ] ಉಂಟಾಗುವ [ಆವೇಗದ]ಲ್ಲಿ ಶೋಕ [ಅಥವಾ] ಹರ್ಷ ಅನುಭಾವ ವಾಗಿರುತ್ತದೆ; [ಆರನೆಯದಾಗಿ] ಅಗ್ನಿಯಿಂದ [ಉಂಟಾಗುವ ಆವೇಗದಲ್ಲಿ] ಹೊಗೆ ತುಂಬಿ ಸಂಕಟಪಡುವ ಮುಖ[ಇತ್ಯಾದಿ ಅನುಭಾವ]; [ಏಳನೆಯದಾಗಿ]

---

೧ ಪಾಠ : ಜೃಂಭ್ಯ ।
೨ ಪಾಠ : ಮಾಯಾಭಿಯೋಗೋ ।

ಆನೆಯಿಂದುಂಟಾಗುವ[ಆವೇಗದ]ಲ್ಲಿ ಭಯ, ಸ್ತಬ್ಧತೆ, ನಡುಕ, ತಪ್ಪಿಸಿಕೊಳ್ಳಲು ಹಿಂದೆ ಸರಿಯುವುದು [ಇತ್ಯಾದಿ ಅನುಭಾವ].

ವ್ಯಾಖ್ಯೆ : ಅಭಿಸರ ಎಂದರೆ, ರಾಜ ವಿದ್ರವಾದಿಗಳಿಂದುಂಟಾಗುವ ಆವೇಗ : ಉದಾ:-[ಧನಿಕನದೇ] :

'ಆಗಚ್ಛಾಗಚ್ಛ ಸಜ್ಜಂ ಕುರು ವರತುರಗಂ ಸಂನಿಧೇಹಿ ದ್ರುತಂ ಮೇ
ಖಡ್ಗಃ ಕ್ವಾಸೌ ಕೃಪಾಣೀಮುಪನಯ ಧನುಷಾ ಕಿಂ ಕಿಮಂಗಪ್ರವಿಷ್ಟಮ್ ।
ಸಂರಂಭೋನ್ನಿದ್ರಿತಾನಾಂ ಕ್ಷಿತಿಭೃತಿ ಗಹನೇಽನ್ಯೋನ್ಯಮೇವಂ ಪ್ರತೀಚ್ಛನ್
ವಾದಃ ಸ್ವಪ್ನಾಭಿದೃಷ್ಟೇ ತ್ವಯಿ ಚಕಿತದೃಶಾಂ ವಿದ್ವಿಷಾಮಾವಿರಾಸೀತ್ ॥'

['ಬಾ. ಬಾ. ಬಲ್‌ಗುದುರೆಯನ್ನು ಅಣಿಗೊಳಿಸು; ಬೇಗ ನನ್ನ ಬಳಿಗೆ ಕೊಂಡು ಬಾ. ನನ್ನ ಕತ್ತಿಯೆಲ್ಲಿ? ಕೃಪಾಣುವನ್ನು ತಾ. ಬಿಲ್ಲು ಕವಚಗಳೇಕೆ?'-ಹೀಗೆ (ಯುದ್ಧದಲ್ಲಿ ಸೋತು) ಗಹನವಾದ ಪರ್ವತಪ್ರಾಂತದಲ್ಲಿ ನಿದ್ರಿಸುತ್ತಿರುವ ನಿನ್ನ ಶತ್ರುಗಳು ನಿನ್ನನ್ನು ಕನಸಿನಲ್ಲಿ ಕಂಡು ಭೀತದೃಷ್ಟಿಯುಳ್ಳವರಾಗಿ ಕನವರಿಸಿ ಮಾತನಾಡಲು ತೊಡಗುತ್ತಾರೆ.]

ಮತ್ತು – [ಆಕರ ತಿಳಿಯದು] :

'ತನುತ್ರಾಣಂ ತನುತ್ರಾಣಂ ಶಸ್ತ್ರಂ ಶಸ್ತ್ರಂ ರಥೋ ರಥಃ ।
ಇತಿ ಶುಶ್ರುವಿರೇ ವಿಷ್ವಗುದ್ಭಟಾಃ ಸುಭಟೋಕ್ತಯಃ ॥'

['ಕವಚ, ಕವಚ! ಶಸ್ತ್ರ, ಶಸ್ತ್ರ! ರಥ, ರಥ!' – ಹೀಗೆ ಪಟುಭಟರ ಸುಭಟವಾಕ್ಯಗಳು ಸರ್ವವ್ಯಾಪಿಯಾಗಿ ಕೇಳುತ್ತಿದ್ದಿತು.]

ಮತ್ತು – [ಆಕರ ತಿಳಿಯದು] :

'ಪ್ರಾರಬ್ಧಾಂ ತರುಪುತ್ರಕೇಷು ಸಹಸಾ ಸಂತ್ಯಜ್ಯ ಸೇಕಕ್ರಿಯಾ –
ಮೇತಾಸ್ತಾಪಸಕನ್ಯಕಾಃ ಕಿಮಿದಮಿತ್ಯಾಲೋಕಯಂತ್ಯಾಕುಲಾಃ ।
ಆರೋಹಂತ್ಯುಟಜದ್ರುಮಾಂಶ್ಚ ಬಟವೋ ವಾಚಂಯಮಾ ಅಪ್ಯಮೀ
ಸದ್ಯೋ ಮುಕ್ತಸಮಾಧಯೋ ನಿಜವೃಷೀಷ್ವೇವೋಚ್ಚಪಾದಂ ಸ್ಥಿತಾಃ ॥'

[(ದೂರದಲ್ಲಿ ಯಾವುದೋ ಸೇನೆಯ ಕೋಲಾಹಲವನ್ನು ಕೇಳಿ) ತಮ್ಮ ಮಕ್ಕಳಂತಿದ್ದ ತರುಲತೆಗಳಿಗೆ ನೀರೆರೆಯಲು ಪ್ರಾರಂಭಿಸಿದ್ದ ಈ ತಾಪಸಕನ್ನಿಕೆಯರು ಒಮ್ಮೆಲೇ ಕೈಬಿಟ್ಟು, 'ಇದೇನು?' ಎಂದು ಆಕುಲೆಯರಾಗಿ ನೋಡುತ್ತಿದ್ದಾರೆ; (ಆಶ್ರಮದ) ವಟುಗಳು ಉಟಜವೃಕ್ಷವನ್ನೇರಿ ನೋಡತೊಡಗಿದ್ದಾರೆ; ಈ ಮಹರ್ಷಿಗಳು ಮೌನವ್ರತಧಾರಿಗಳಾಗಿದ್ದರೂ ಆಗಲೇ ತಮ್ಮ ಸಮಾಧಿಯಿಂದ ಮುಕ್ತರಾಗಿ ತಂತಮ್ಮ ಪೀಠಗಳಲ್ಲೇ ಕಾಲೆತ್ತಿ ನಿಂತು (ಅತ್ತ) ನೋಡಲಾರಂಭಿಸಿದ್ದಾರೆ.]

ವಾತಜವಾದ ಆವೇಗಕ್ಕೆ ಉದಾ:-[ಆಕರ ತಿಳಿಯದು] :

'ವಾತಾಹತಂ ವಸನಮಾಕುಲಮುತ್ತರೀಯಮ್.....' ಇತ್ಯಾದಿ.

[ಗಾಳಿಯ ಹೊಯ್ಲಿನಿಂದ ವಸನ ಉತ್ತರೀಯಗಳು ಅವ್ಯವಸ್ಥಿತವಾಗುತ್ತಿವೆ....]

ವರ್ಷಜವಾದ ಆವೇಗಕ್ಕೆ ಉದಾ:-[ಆಕರ ತಿಳಿಯದು] :

'ದೇವೇ ವರ್ಷತ್ಯಶನಪಚನವ್ಯಾಪೃತಾ ವಹ್ನಿಹೇತೋ –
ರ್ಗೇಹಾದ್ಗೇಹಂ ಫಲಕನಿಚಿತೈಃ ಸೇತುಭಿಃ ಪಂಕಭೀತಾಃ ।
ನೀಧ್ರಪ್ರಾಂತಾನವಿರಲಜಲಾನ್ಪಾಣಿಭಿಸ್ತಾಡಯಿತ್ವಾ
ಶೂರ್ಪಚ್ಛತ್ರಸ್ಥಗಿತಶಿರಸೋ ಯೋಷಿತಃ ಸಂಚರಂತಿ ॥'

[ಮುಗಿಲು ಸುರಿಯುತ್ತಿರಲು–ಅಡುಗೆಗೆ ತೊಡಗುವ ಸ್ತ್ರೀಜನರು ಚಂಕಿಗಾಗಿ ಮನೆಮನೆ ತಿರುಗುವಾಗ ಕೆಸರಿಗೆ ಅಂಜಿ ಹಲಗೆಯ ಸಾರಗಳನ್ನು ಹಾಕಿಕೊಂಡು, ಮೊರಗಳಿಂದ ತಲೆಮುಚ್ಚಿ, ಸೂರಿನಿಂದ ಧಾರಾಕಾರವಾಗಿ ಸುರಿಯುವ ನೀರನ್ನು ಕೈಗಳಿಂದ ನಿವಾರಿಸುತ್ತ ತಿರುಗಾಡುತ್ತಾರೆ.]

ಉತ್ಪಾತಜವಾದ ಆವೇಗಕ್ಕೆ ಉದಾ–[ಆಕರ ತಿಳಿಯದು] :

'ಪೌಲಸ್ತ್ಯಪೀನಭುಜಸಂಪದುದಸ್ಯಮಾನ –
ಕೈಲಾಸಸಂಭ್ರಮವಿಲೋಲದೃಶಃ ಪ್ರಿಯಾಯಾಃ ।
ಶ್ರೇಯಾಂಸಿ ವೋ ದಿಶತು ನಿಹ್ನುತಕೋಪಚಿಹ್ನ –
ಮಾಲಿಂಗನೋತ್ಪುಲಕಮಾಸಿತಮಿಂದುಮೌಲೇಃ ॥'

[ಪೌಲಸ್ತ್ಯ(ರಾವಣ)ನು ಸುಪುಷ್ಟವಾದ ಭುಜಬಲದಿಂದ ಕೈಲಾಸವನ್ನೆತ್ತುತ್ತಿರಲು ಭೀತಳಾದ ಶಿವಪ್ರಿಯೆ ಚಂಚಲದೃಷ್ಟಿಯುಳ್ಳವಳಾಗಿ ಪ್ರಣಯಕೋಪವನ್ನು ಬಿಟ್ಟ ಕುರುಹೆಂಬಂತೆ (ಶಿವನನ್ನು) ಆಲಂಗಿಸುವಾಗ ಉಂಟಾದ ಇಂದುಮೌಲಿಯ ಪುಲಕೋದ್ಗಮ(ರೋಮಾಂಚನ) ನಿಮಗೆ ಕಲ್ಯಾಣವನ್ನುಂಟುಮಾಡಲಿ.]

ಅಹಿತಕೃತವಾದ ಎಂದರೆ, ಅನಿಷ್ಟ ಶ್ರವಣದರ್ಶನಗಳಿಂದುಂಟಾದ ಆವೇಗಕ್ಕೆ ಉದಾ– [ಉದಾತ್ತ ರಾಘವ] : 'ಚಿತ್ರಮಾಯಃ–(ಸಸಂಭ್ರಮಂ) ಭಗವನ್ ಕುಲಪತೇ ರಾಮಭದ್ರ, ಪರಿತ್ರಾಯತಾಮ್ ಪರಿತ್ರಾಯತಾಮ್ । (ಇತ್ಯಾಕುಲಂ ನಾಟಯತಿ) ಇತ್ಯಾದಿ...ಪುನಃ–

ಚಿತ್ರಮಾಯಃ–

'ಮೃಗರೂಪಂ ಪರಿತ್ಯಜ್ಯ ವಿಧಾಯ ವಿಕಟಂ ವಪುಃ ।
ನೀಯತೇ ರಕ್ಷಸಾನೇನ ಲಕ್ಷ್ಮಣೋ ಯುಧಿ ಸಂಶಯಮ್ ॥

ರಾಮಃ–

'ವತ್ಸಸ್ಯಾಭಯವಾರಿಧೇಃ ಪ್ರತಿಭಯಂ ಮನ್ಯೇ ಕಥಂ ರಾಕ್ಷಸಾ–
ತ್ತ್ರಸ್ತಶ್ಚೈಷ ಮುನಿರ್ವಿರೌತಿ ಮನಸಶ್ಚಾಸ್ತ್ಯೇವ ಮೇ ಸಂಭ್ರಮಃ ।
ಮಾಹಾಸೀರ್ಜನಕಾತ್ಮಜಾಮಿತಿ ಮುಹುಃ ಸ್ನೇಹಾದ್ಗುರುರ್ಯಾಚತೇ
ನ ಸ್ಥಾತುಂ ನ ಚ ಗಂತುಮಾಕುಲಮತೇರ್ಮೂಢಸ್ಯ ಮೇ ನಿಶ್ಚಯಃ ॥'

[ಚಿತ್ರಮಾಯ–(ಗಡಿಬಿಡಿಯಿಂದ) ಕುಲಪತಿಯಾದ ಭಗವಾನ್ ರಾಮಭದ್ರ, ರಕ್ಷಿಸು ರಕ್ಷಿಸು. (ಹೀಗೆ ಆಕುಲವನ್ನು ನಟಿಸುತ್ತಾನೆ)–ಇತ್ಯಾದಿ. ಮತ್ತು–

ಚಿತ್ರಮಾಯ–ಜಿಂಕೆಯ ರೂಪವನ್ನು ತ್ಯಜಿಸಿ ವಿಕಾರರೂಪವನ್ನು ಧರಿಸಿದ ಈ ರಾಕ್ಷಸ ಲಕ್ಷ್ಮಣನನ್ನು ಎಳೆದೊಯ್ಯುತ್ತಿದ್ದಾನೆ. (ಲಕ್ಷ್ಮಣನ ಗೆಲುವು) ಸಂದೇಹವಾಗಿದೆ.

ರಾಮ–ನಿರ್ಭಯಸಮುದ್ರನಾದ ವತ್ಸನಿಗೆ ರಾಕ್ಷಸನಿಂದ ಭೀತಿಯುಂಟಾದೀತೆಂದು ಹೇಗೆ ತಿಳಿಯಲಿ? (ಆದರೆ ಆತನನ್ನು ರಕ್ಷಿಸು ಎಂದು) ಈ ಮುನಿ (ಚಿತ್ರಮಾಯ) ತ್ರಸ್ತನಾಗಿ ಕೂಗುತ್ತಿದ್ದಾನೆ. ನನ್ನ ಮನಸ್ಸಿನಲ್ಲಿ ಸಂಭ್ರಾಂತಿಯುಂಟಾಗಿದೆ. ನನ್ನ ಗುರುವೋ, (ನನ್ನಲ್ಲಿರುವ) ವಾತ್ಸಲ್ಯದಿಂದ ಜನಕಾತ್ಮಜೆಯನ್ನು ಬಿಟ್ಟಿರಬೇಡ ಎಂದು ಮತ್ತೆ ಮತ್ತೆ ಉಪದೇಶಿಸಿದ್ದಾನೆ. ವ್ಯಥಿತಮತಿಯೂ ಮೂಢನೂ ಆದ ನಾನು ಹೋಗಲೂ (ನಿಶ್ಚಯಿಸಲಾರೆ, ಇಲ್ಲಿಯೇ) ನಿಲ್ಲಲೂ ನಿರ್ಧರಿಸಲಾರೆ.]

–ಇಲ್ಲಿಯ ವರೆಗಿನ ಅನಿಷ್ಟಪ್ರಾಪ್ತಿಯಿಂದುಂಟಾದ ಸಂಭ್ರಮ 'ಆವೇಗ'. ಇನ್ನು ಹಿತಕೃತವಾದ ಎಂದರೆ, ಇಷ್ಟಪ್ರಾಪ್ತಿಯಿಂದುಂಟಾದ ಆವೇಗಕ್ಕೆ ಉದಾ:–[ಉದಾತ್ತರಾಘವ] :

'ವಾನರಃ–(ಪ್ರವಿಶ್ಯ ಸಂಭ್ರಾಂತೋ) ಮಹಾರಾಅ, ಏದಂ ಖು ಪವಣಣಂದಣಾಗಮಣೇಣ ಪಹರಿಸ' ಇತ್ಯಾದಿ, 'ದೇವಸ್ಸ ಹಿಅಅಣಂದಜಣಣಂ ವಿಅಲಿದಂ ಮುಹುವಣಂ ।' ಇತ್ಯಂತಮ್.

'[ವಾನರ–(ಸಂಭ್ರಾಂತನಾಗಿ ಪ್ರವೇಶಿಸಿ) ಮಹಾರಾಜ, ಪವನತನಯನ ಆಗಮನದಿಂದ ಪ್ರಹರ್ಷಗೊಂಡು...' ಇತ್ಯಾದಿಯಿಂದ 'ಸ್ವಾಮಿಗೆ ಹೃದಯಾನಂದವನ್ನುಂಟುಮಾಡುವ ಮಧುವನವನ್ನು (ಸಂತೋಷಾತಿರೇಕದಿಂದ ಆ ಕಪಿಗಳು) ಧೂಳೆಬ್ಬಿಸಿಬಿಟ್ಟಿದ್ದಾವೆ.]'

ಮತ್ತು – [ಮಹಾ. : ೧–೫೫] :

'ಏಹ್ಯೇಹಿ ವತ್ಸ ರಘುನಂದನ ಪೂರ್ಣಚಂದ್ರ
ಚುಂಬಾಮಿ ಮೂರ್ಧನಿ ಚಿರಸ್ಯ ಪರಿಷ್ವಜೇ ತ್ವಾಮ್ ।
ಆರೋಪ್ಯ ವಾ ಹೃದಿ ದಿವಾನಿಶಮುದ್ವಹಾಮಿ
ವಂದೇಽಥವಾ ಚರಣಪುಷ್ಕರಕದ್ವಯಂ ತೇ ॥'

[ಎಲೈ ಮಗು, ರಘುನಂದನ, ತುಂಬುದಿಂಗಳೇ, ಬಾ ಬಾ. ಬಹುಕಾಲ ನಿನ್ನ ಮುಡಿಯನ್ನು ಮುತ್ತಿಡುತ್ತೇನೆ, ನಿನ್ನನ್ನು ಅಪ್ಪಿಕೊಳ್ಳುತ್ತೇನೆ; ಅಥವಾ ನಿನ್ನನ್ನು ನನ್ನ ಎದೆಯ ಮೇಲಿಟ್ಟುಕೊಂಡು ಹಗಲಿರುಳೂ ಎತ್ತಿ ಮೆರೆಸುತ್ತೇನೆ; ಅಥವಾ ನಿನ್ನ ಅಡಿದಾವರೆಗಳಿಗೆ ಎರಗುತ್ತೇನೆ.]

ವಹ್ನಿಜವಾದ ಆವೇಗಕ್ಕೆ ಉದಾ:–[ಅಮರು. : ಶ್ಲೋ. ೨] :

'ಕ್ಷಿಪ್ತೋ ಹಸ್ತಾವಲಗ್ನಃ ಪ್ರಸಭಮಭಿಹತೋಽಪ್ಯಾದದಾನೋಂಽಶುಕಾಂತಂ
ಗೃಹ್ಣನ್ಕೇಶೇಷ್ವಪಾಸ್ತಶ್ಚರಣನಿಪತಿತೋ ನೇಕ್ಷಿತಃ ಸಂಭ್ರಮೇಣ ।
ಆಲಿಂಗನ್ಯೋಽವಧೂತಸ್ತ್ರಿಪುರಯುವತಿಭಿಃ ಸಾಶ್ರುನೇತ್ರೋತ್ಪಲಾಭಿಃ
ಕಾಮೀವಾರ್ದ್ರಾಪರಾಧಃ ಸ ದಹತು ದುರಿತಂ ಶಾಂಭವೋ ವಃ ಶರಾಗ್ನಿಃ ॥'

[ಕೈಹಿಡಿದರೆ ತಳ್ಳಿಸಿಕೊಳ್ಳುವ, ಹಠದಿಂದ ಉಡುಗೆಯಂಚನ್ನು ಕೊಂಡರೆ ಹೊಡೆಸಿಕೊಳ್ಳುವ, ಕೂದಲನ್ನೆಳೆದರೆ ನೂಕಿಸಿಕೊಳ್ಳುವ, ಸಡಗರದಿಂದ ಕಾಲಿಗೆರಗಿದರೆ ಅಲಕ್ಷಿಸಲ್ಪಡುವ, ಅಪ್ಪಿದರೂ ಕಡೆಗಣಿಸಲ್ಪಡುವ – ಹೀಗೆ ತಪ್ಪಿನಿಂದ ತೊಯ್ದಿರುವ ಕಾಮಿಯಂತೆ, ಅಶ್ರುಪೂರ್ಣವಾದ ಉತ್ಪಲಾಕ್ಷಿಗಳುಳ್ಳ ತ್ರಿಪುರ ಯುವತಿಯರಿಂದ ತಿರಸ್ಕೃತವಾದ ಈಶ್ವರನ ಆ ಶರಾಗ್ನಿಗಳು ನಮ್ಮ ದುರಿತವನ್ನು ದಹಿಸಲಿ.]

ಮತ್ತು – [ರತ್ನಾ. : ೪–೧೬] :

'ವಿರಮ ವಿರಮ ವಹ್ನೇ ಮುಂಚ ಧೂಮಾಕುಲತ್ವಂ
ಪ್ರಸರಯಸಿ ಕಿಮುಚ್ಚೈರರ್ಚಿಷಾಂ ಚಕ್ರವಾಲಂ ।
ವಿರಹಹುತಭುಜಾಽಹಂ ಯೋ ನ ದಗ್ಧಃ ಪ್ರಿಯಾಯಾಃ
ಪ್ರಲಯದಹನಭಾಸಾ ತಸ್ಯ ಕಿಂ ತ್ವಂ ಕರೋಷಿ ॥'

[ಎಲೈ ಅಗ್ನಿ, ನಿಲ್ಲು ನಿಲ್ಲು. ಹೊಗೆ ತುಂಬುವುದನ್ನು ಸಾಕುಮಾಡು. ಸುಳಿ ಸುತ್ತುವ ಜ್ವಾಲೆಗಳನ್ನು ಮೇಲುಮೇಲಕ್ಕೇರಿಸಿ ಹಬ್ಬಿಸುವೆಯೇಕೆ? ಪ್ರಲಯಾಗ್ನಿಯಂತಿರುವ ನನ್ನ ಪ್ರಿಯಳ ವಿರಹವೇ ನನ್ನನ್ನು ಆಹುತಿಗೊಂಡರೂ ದಹಿಸಲಾರದಿರುವಾಗ ನೀನೇನು ಮಾಡಬಲ್ಲೆ?]

ಕರಿಜವಾದ ಆವೇಗಕ್ಕೆ ಉದಾ:–[ರಘು : ೫–೪೯] :

ಸ ಚ್ಛಿನ್ನಬಂಧದ್ರುತಯುಗ್ಯಶೂನ್ಯಂ ಭಗ್ನಾಕ್ಷಪರ್ಯಸ್ತರಥಂ ಕ್ಷಣೇನ ।
ರಾಮಾಪರಿತ್ರಾಣವಿಹಸ್ತಯೋಧಂ ಸೇನಾನಿವೇಶಂ ತುಮುಲಂ ಚಕಾರ ॥'

[ಕಟ್ಟು ಕಳಚಿ ಓಡಿದ ಕುದುರೆಗಳು, ಅಚ್ಚು ಮುರಿದು ಬಿದ್ದಿರುವ ರಥ, ಸ್ತ್ರೀಯರ ರಕ್ಷಣೆಗೆಂದು ವ್ಯಾಕುಲರಾದ ಯೋಧರು – ಹೀಗೆ ಆ (ಆನೆಯು) ಒಂದು ಕ್ಷಣದಲ್ಲಿ ಸೇನಾನಿವೇಶದಲ್ಲಿ ಕೋಲಾಹಲವನ್ನೆಬ್ಬಿಸಿಬಿಟ್ಟಿತು.]

– ಮೇಲೆ ಹೇಳಿರುವ ಕರಿಜವಾದ ಆವೇಗದಲ್ಲಿ, ವ್ಯಾಘ್ರಶೂಕರವಾನರಾದಿ ಪ್ರಾಣಿಗಳಿಂದ ಉಂಟಾಗುವ ಆವೇಗಗಳನ್ನೂ ಲಕ್ಷಿಸಿಕೊಳ್ಳತಕ್ಕದ್ದು.

ಟಿಪ್ಪಣಿ : ಅಗ್ನಿ.ಪು.ವಲ್ಲಿ ಇದಕ್ಕೆ 'ಆವೇಶ'ಎಂಬ ಹೆಸರಿದೆ.

ಛಂದಸ್ಸು : ಸ್ರಗ್ಧರಾ.

ಹೋಲಿಕೆ = ನಾ.ಶಾ. : ೭-೬೨ರ ಮುಂದಿನ ಗದ್ಯದಿಂದ ೬೫; ಸಾ.ದ. : ೩-೧೪೩ರಿಂದ ೧೪೫; ಪ್ರತಾಪ : ೪-೩೫.

## ೩೬. [ವಿ]ತರ್ಕಲಕ್ಷಣ :

**ತರ್ಕೋ ವಿಚಾರಃ ಸಂದೇಹಾದ್ಭ್ರೂ, ಶಿರೋಂಽಗುಲಿನರ್ತಕಃ ।**

ಅನು : ಸಂಶಯದಿಂದ [ಮನಸ್ಸಿನಲ್ಲಿ ಉಂಟಾಗುವ ಬಗೆಬಗೆಯ] ವಿಚಾರ '[ವಿ]ತರ್ಕ'. ಹುಬ್ಬು, ತಲೆ, ಬೆರಳು – ಇವುಗಳನ್ನು ಕುಣಿಸುವುದು [ಅಲ್ಲಿನ ಅನುಭಾವ].

ವ್ಯಾಖ್ಯೆ : ಉದಾ–[ಆಕರ ತಿಳಿಯದು] :

'ಕಿಂ ಲೋಭೇನ ವಿಲಂಘಿತಃ ಸ ಭರತೋ ಯೇನೈತದೇವಂ ಕೃತಂ
ಸದ್ಯಃ ಸ್ತ್ರೀಲಘುತಾಂ ಗತಾ ಕಿಮಥವಾ ಮಾತೈವ ಮೇ ಮಧ್ಯಮಾ ।
ಮಿಥ್ಯೈತನ್ಮಮ ಚಿಂತಿತಂ ದ್ವಿತಯಮಪ್ಯಾರ್ಯಾನುಜೋಽಸೌ ಗುರು -
ರ್ಮಾತಾ ತಾತಕಲತ್ರಮಿತ್ಯನುಚಿತಂ ಮನ್ಯೇ ವಿಧಾತ್ರಾ ಕೃತಮ್ ॥'

[ಲೋಭವಶನಾದ ಭರತನಿಂದ (ರಾಮನ ವನವಾಸದ) ಈ ಕಾರ್ಯ ಉಂಟಾಯಿತೇನು? ಅಥವಾ ಮಾತಾ ಮಧ್ಯಮಳಾದ ಕೈಕೇಯಿ ಈಗ ಸ್ತ್ರೀಸಹಜವಾದ ಲಾಘವಕ್ಕಿಳಿದುಬಿಟ್ಟಳೆ? – ಈ ನನ್ನ ಯೋಚನೆಗಳೆರಡೂ ಮಿಥ್ಯೆ. ಆತನು ಆರ್ಯನ ಸಹೋದರ, ನನಗೆ ಹಿರಿಯನಾದವನು. ಮಾತೆಯಾದ ಕೈಕೇಯಿ ಪೂಜ್ಯನಾದ ತಂದೆಯ ಪತ್ನಿ – ಹೀಗಿರುವಾಗ ನನ್ನ ಯೋಚನೆಯೇ ಅನುಚಿತವಾದದ್ದು. ಇದೆಲ್ಲ ವಿಧಿಯ ಮಾಟವೆಂದೇ ತಿಳಿಯುತ್ತೇನೆ.]

ಮತ್ತು – [ಆಕರ ತಿಳಿಯದು] :

'ಈ ಸಮುಚಿತಾಭಿಷೇಕಾದಾರ್ಯಂ ಪ್ರಚ್ಯಾವಯೇದ್ಗುಣಜ್ಯೇಷ್ಠಮ್ ।
ಮನ್ಯೇ ಮಮೈಷ ಪುಣ್ಯೈಃ ಸೇವಾವಸರಃ ಕೃತೋ ವಿಧಿನಾ ॥'

[ಗುಣದಲ್ಲಿ ಹಿರಿಯನಾದ ಆರ್ಯ ರಾಮಚಂದ್ರನಿಗೆ ಸಂಪೂರ್ಣ ಉಚಿತವಾಗಿದ್ದ ಪಟ್ಟಾಭಿಷೇಕವನ್ನು ತಡೆಗಟ್ಟಲು ಯಾರು ಶಕ್ತರು? (ನಾನು ಹಾಗೆ ತಿಳಿಯಲಾರೆ.) ಕೇವಲ ನನ್ನ ಪುಣ್ಯದಿಂದ ವಿಧಿ ನನಗೆ ಆತನ ಸೇವೆಯನ್ನೊದಗಿಸಿಕೊಟ್ಟಿದೆ ಎಂದು ತಿಳಿಯುತ್ತೇನೆ.]

ಟಿಪ್ಪಣಿ : ಕಾರಿಕೆಯಲ್ಲಿ 'ತರ್ಕ' ಎಂದಿದ್ದರೂ ವ್ಯಾಖ್ಯೆಯ ಆದಿಯಲ್ಲಿ 'ಅಥ ವಿತರ್ಕಃ' ಎಂದಿದೆ. ನಾ. ಶಾ. ಮೊದಲಾದವುಗಳಲ್ಲಿ 'ವಿತರ್ಕ' ಎಂದಿದೆ. ಸಾ.ದ.ದಲ್ಲಿ 'ತರ್ಕ' ಎಂದೇ ಇದೆ.

ಹೋಲಿಕೆ = ನಾ.ಶಾ. : ೭-೯೦ರ ಅನಂತರದ ಗದ್ಯ, ೯೧; ಸಾ.ದ. : ೩-೧೭೧; ಪ್ರತಾಪ : ೪-೫೨.

## ೩೭. ಅವಹಿತ್ಥಲಕ್ಷಣ :

**ಲಜ್ಜಾದ್ಯೈರ್ವಿಕ್ರಿಯಾಗುಪ್ತಾವವಹಿತ್ಥಾಂಗವಿಕ್ರಿಯಾ ।**

ಅನು : ನಾಚಿಕೆ ಮುಂತಾದವುಗಳಿಂದ ಉಂಟಾದ [ಹೃದಯ]ವಿಕಾರವನ್ನು ಅಡಗಿಸುವುದು 'ಅವಹಿತ್ಥ'. ಅಂಗವಿಕಾರ[ದಿಂದ ಅದು ಸೂಚಿತವಾಗತಕ್ಕದ್ದು.]

ವ್ಯಾಖ್ಯೆ : ಉದಾ–[ಕು.ಸಂ. : ೬-೮೪] :

'ಏವಂ ವಾದಿನಿ ದೇವರ್ಷೌ ಪಾರ್ಶ್ವೇ ಪಿತುರಧೋಮುಖೀ ।
ಲೀಲಾಕಮಲಪತ್ರಾಣಿ ಗಣಯಾಮಾಸ ಪಾರ್ವತೀ ॥'

[(ನಾರದ ಹಿಮಾಲಯನ ಬಳಿ ಶಿವಪಾರ್ವತಿಯರ ಭಾವೀ ವಿವಾಹವನ್ನು ಕುರಿತು ಮಾತನಾಡುತ್ತಿದ್ದನು.) ದೇವರ್ಷಿ ಹಾಗೆ ಹೇಳುತ್ತಿರಲು, ತಂದೆಯ ಪಕ್ಕದಲ್ಲಿ ಮುಖತಗ್ಗಿಸಿ ಕುಳಿತಿದ್ದ ಪಾರ್ವತಿಯು ಆಟದಾವರೆಯ ದಳಗಳನ್ನು ಎಣಿಸುತ್ತಿದ್ದಳು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೭೮ರ ಮುಂದಿನ ಗದ್ಯ, ೭೯; ಸಾ.ದ. : ೩-೧೫೮; ಪ್ರತಾಪ : ೪-೪೩.

## ೩೮. ವ್ಯಾಧಿಲಕ್ಷಣ :

ವ್ಯಾಧಯಃ ಸನ್ನಿಪಾತಾದ್ಯಾಸ್ತೇಷಾಮನ್ಯತ್ರ ವಿಸ್ತರಃ ॥ ೨೯ ॥

ಅನು : ಸನ್ನಿಪಾತ ಇತ್ಯಾದಿ [ರೋಗ]ಗಳಿಂದ [ಉಂಟಾಗುವಂಥವು]'ವ್ಯಾಧಿ'ಗಳು. [ಅವುಗಳ]ವಿಸ್ತರ[ವಾದ ವಿವರಣೆ] ಬೇರೆಡೆಯಲ್ಲಿ [ಎಂದರೆ ಆಯುರ್ವೇದದಲ್ಲಿ ದೊರಕುತ್ತದೆ].

ವ್ಯಾಖ್ಯೆ : ದಿಗ್ದರ್ಶನಮಾತ್ರವಾಗಿ ಉದಾ:-[ಅಮರು. : ೭೮] :

'ಅಚ್ಛಿನ್ನಂ ನಯನಾಂಬು ಬಂಧುಷು ಕೃತಂ ಚಿಂತಾ ಗುರುಭ್ಯೋಽರ್ಪಿತಾ
ದತ್ತಂ ದೈನ್ಯಮಶೇಷತಃ ಪರಿಜನೇ ತಾಪಃ ಸಖೀಷ್ವಾಹಿತಃ।
ಅದ್ಯ ಶ್ವಃ ಪರಿನಿರ್ವೃತಿಂ ವ್ರಜತಿ ಸಾ ಶ್ವಾಸೈಃ ಪರಂ ಖಿದ್ಯತೇ
ವಿಶ್ರಬ್ಧೋ ಭವ ವಿಪ್ರಯೋಗಜನಿತಂ ದುಃಖಂ ವಿಭಕ್ತಂ ತಯಾ॥'

[(ಯಾವನೊ ಒಬ್ಬ ತನ್ನ ಪ್ರಿಯೆಯನ್ನು ಬಿಟ್ಟು ಹೋಗಿದ್ದಾನೆ; ಆಕೆ ಅದೇ ನೋವಿನಿಂದ ಈಗ ಸಾಯುವ ಸ್ಥಿತಿಯಲ್ಲಿದ್ದಾಳೆ. ಅಂತಹ ಸಂದರ್ಭದಲ್ಲಿ ಅವಳ ಸಖಿ ಆ ನಿಷ್ಠುರಪ್ರಿಯನ ಬಳಿ ಹೋಗಿ ಹೇಳುವ ವ್ಯಂಗ್ಯವಾದ ಮಾತು ಇದು : ಎಲೈ ನಿಷ್ಠುರ, ನೀನೇಕೆ ಅವಳ ಬಗೆಗೆ ಯೋಚಿಸುವೆ? ಈಗ ಅವಳಿಗೆ ಯಾವ ಸಂಕಟವೂ ಇಲ್ಲ!) ಎಡೆಬಿಡದೆ ಕಂಬನಿ ಸುರಿಸುವುದು ನಂಟರಲ್ಲಾಯಿತು; ಚಿಂತೆಯನ್ನು ಹಿರಿಯರಿಗೆ ಅರ್ಪಿಸಿಬಿಟ್ಟಿದ್ದಾಳೆ; ದೈನ್ಯವನ್ನು ಪರಿಜನರಿಗೆ ಕೊಟ್ಟುಬಿಟ್ಟಳು; ತಾಪವನ್ನು ಸಖಿಯರಿಗೆ ಅಂಟಿಸಿದ್ದಾಳೆ; ಇಂದು ನಾಳೆ ಆಕೆ ಪರಮ ಶಾಂತಿಯನ್ನು ಪಡೆಯುತ್ತಾಳೆ. ಈಗ ಕೇವಲ ಶ್ವಾಸದಿಂದ ಮಾತ್ರ ಸಂಕಟಪಡುತ್ತಿದ್ದಾಳಲ್ಲದೆ ವಿರಹದಿಂದ ಉಂಟಾದ ದುಃಖವೆಲ್ಲವನ್ನೂ ಆಕೆ ಹಂಚಿಬಿಟ್ಟಿದ್ದಾಳೆ. ನೀನಿನ್ನು ಸ್ವಸ್ಥನಾಗು.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭-೮೧ರ ಮುಂದಿನ ಗದ್ಯ, ೮೨; ಸಾ.ದ. : ೩-೧೬೪; ಪ್ರತಾಪ : ೪-೪೮.

## ೩೯. ಉನ್ಮಾದಲಕ್ಷಣ :

ಅಪ್ರೇಕ್ಷ್ಯಾಕಾರಿತೋನ್ಮಾದಃ ಸನ್ನಿಪಾತಗ್ರಹಾದಿಭಿಃ।
[1]ಅಸ್ಮಿನ್ನವಸ್ಥಾ ರುದಿತಗೀತಹಾಸಾಸಿತಾದಯಃ ॥ ೩೦ ॥

ಅನು : ಸನ್ನಿಪಾತ [ಮುಂತಾದ ರೋಗ ಹಾಗೂ] ಗ್ರಹ[ಚೇಷ್ಟೆ] ಇತ್ಯಾದಿಗಳಿಂದ [ಹಿಂದುಮುಂದಿನ ವಿಷಯಗಳನ್ನು ಯೋಚಿಸದೆ ಅಥವಾ] ನೋಡದೆ [ವಿವೇಕ ಶೂನ್ಯವಾಗಿ ಯಾವುದೊಂದು ಕಾರ್ಯವನ್ನು] ಮಾಡತೊಡಗುವುದು 'ಉನ್ಮಾದ'. ಅಲ್ಲಿ-ಅಳುವುದು, ಹಾಡುವುದು, ನಗುವುದು, ಸುಮ್ಮನೆ ಕುಳಿತುಬಿಡುವುದು ಮುಂತಾದ ಅವಸ್ಥೆಗಳು.

---

೧ ಪಾಠ : ಅಸ್ಮಿನ್ನಸ್ಥಾನ

ವ್ಯಾಖ್ಯೆ : ಉದಾ–[ವಿಕ್ರಮೋ. : ೪–೭] 'ಆಃ ಕ್ಷುದ್ರರಾಕ್ಷಸ, ತಿಷ್ಠ ತಿಷ್ಠ। ಕ್ವ ಮೇ ಪ್ರಿಯತಮಾಮಾದಾಯ ಗಚ್ಛಸಿ'–ಇತ್ಯುಪಕ್ರಮೇ, 'ಕಥಮ್–

ನವಜಲಧರಃ ಸನ್ನದ್ಧೋಽಯಂ ನ ದೃಪ್ತನಿಶಾಚರಃ
ಸುರಧನುರಿದಂ ದೂರಾಕೃಷ್ಟಂ ನ ತಸ್ಯ ಶರಾಸನಮ್।
ಅಯಮಪಿ ಪಟುರ್ಧಾರಾಸಾರೋ ನ ಬಾಣಪರಂಪರಾ
ಕನಕನಿಕಷಸ್ನಿಗ್ಧಾ ವಿದ್ಯುತ್ಪ್ರಿಯಾ ನ ಮಮೋರ್ವಶೀ॥'

[ಆಃ ನೀಚ ರಾಕ್ಷಸ, ನಿಲ್ಲು ನಿಲ್ಲು. ನನ್ನ ಪ್ರಿಯತಮೆಯನ್ನು ತೆಗೆದುಕೊಂಡು ಎಲ್ಲಿಗೆ ಹೋಗುತ್ತಿದ್ದೀಯೆ?–ಎಂಬಲ್ಲಿಂದ–ಏನು? ಇದು ಸಜ್ಜುಗೊಂಡು ಬಂದಿರುವ ನೂತನ ಮೇಘವಲ್ಲದೆ ದುಷ್ಟ ನಿಶಾಚರನಲ್ಲ; ಇದು ದೂರದಲ್ಲಿ ಸೆಳೆದು ಹೂಡಿರುವ ಇಂದ್ರಧನು, ಆ ರಾಕ್ಷಸನ ಧನುವಲ್ಲ; ಇದು ಕೂಡ ತೀವ್ರವಾದ ಜಲಧಾರೆಗಳಲ್ಲದೆ ಬಾಣಪರಂಪರೆಯಲ್ಲ. (ನಾನು ನೋಡಿದುದು) ನಿಕಷದಲ್ಲಿನ ಕನಕರೇಖೆಯಂತೆ ಸ್ನಿಗ್ಧವಾದ ವಿದ್ಯುತ್, ನನ್ನ ಪ್ರಿಯೆಯಾದ ಊರ್ವಶಿಯಲ್ಲ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೮೨ರ ಮುಂದಿನ ಗದ್ಯದಿಂದ ೮೪; ಸಾ.ದ. : ೩–೧೬೦; ಪ್ರತಾಪ : ೪–೪೯.

## ೪೦. ವಿಷಾದಲಕ್ಷಣ :

**ಪ್ರಾರಬ್ಧಕಾರ್ಯಾಸಿದ್ಧ್ಯಾದೇರ್ವಿಷಾದಃ ಸತ್ತ್ವಸಂಕ್ಷಯಃ।**
**ನಿಃಶ್ವಾಸೋಚ್ಛ್ವಾಸಹೃತ್ತಾಪಸಹಾಯಾನ್ವೇಷಣಾದಿ ಕೃತ್ ॥ ೩೧ ॥**

ಅನು : ಆರಂಭಿಸಿದ [ಯಾವುದೊಂದು] ಕಾರ್ಯವು ಸಿದ್ಧಿಹೊಂದದಿರುವುದು ಮುಂತಾದವುಗಳಿಂದ [ಬರುವ] ಸತ್ತ್ವಸಂಕ್ಷೀಣತೆ 'ವಿಷಾದ'. [ಅದು] ನಿಃಶ್ವಾಸೋಚ್ಛ್ವಾಸ, ಹೃದಯತಾಪ, ಸಹಾಯಾನ್ವೇಷಣೆ ಇತ್ಯಾದಿ [ಅನುಭಾವಗಳನ್ನು] ಉಂಟುಮಾಡುವಂಥದು.

ವ್ಯಾಖ್ಯೆ : ಉದಾ–[ಮಹಾ. : ಪು. ೨೯, ೧–೪೦] : 'ಹಾ ಆರ್ಯೇ ತಾಡಕೇ, ಕಿಂ ಹಿ ನಾಮೈತತ್। ಅಂಬುನಿ ಮಜ್ಜಂತ್ಯಲಾಬೂನಿ ಗ್ರಾವಾಣಃ ಪ್ಲವಂತೇ।–

ನನ್ವೇಷ ರಾಕ್ಷಸಪತೇಃ ಸ್ಖಲಿತಃ ಪ್ರತಾಪಃ
ಪ್ರಾಪ್ತೋಽದ್ಭುತಃ ಪರಿಭವೋ ಹಿ ಮನುಷ್ಯಪೋತಾತ್।
ದೃಷ್ಟಃ ಸ್ಥಿತೇನ ಚ ಮಯಾ ಸ್ವಜನಪ್ರಮಾಥೋ
ದೈನ್ಯಂ ಜರಾ ಚ ನಿರುಣದ್ಧಿ ಕಥಂ ಕರೋಮಿ॥'

[ಹಾ ಆರ್ಯೆ ತಾಡಕೆ, ಇದೇನಿದು ಸೋರೆ ನೀರಿನಲ್ಲಿ ಮುಳುಗುತ್ತದೆ; ಕಲ್ಲು ತೇಲುತ್ತಿವೆ. ಎಳೆಯ ಹುಡುಗನೊಬ್ಬನಿಂದ ಅದ್ಭುತಪರಿಭವ ಪ್ರಾಪ್ತವಾಗಿ ರಾಕ್ಷಸಪತಿ(ರಾವಣ)ಯ ಶೌರ್ಯವೇ ಸೋರಿಹೋಗಿದೆಯಲ್ಲವೆ? ನಾನು ಇದ್ದೂ ನನ್ನವರ ನಾಶವನ್ನು ನೋಡಿದೆ. ನನ್ನ ಮುಪ್ಪು ದೀನತೆಗಳು ನನಗೆ ಆತಂಕವಾಗಿವೆ; ನಾನೇನು ಮಾಡಲಿ?]

ಟಿಪ್ಪಣಿ : ಹೋಲಿಕೆ =ನಾ.ಶಾ. ೭–೬೭ರ ಮುಂದಿನ ಗದ್ಯದಿಂದ ೬೯; ಸಾ.ದ. : ೩–೧೬೭; ಪ್ರತಾಪ : ೪–೩೮.

## ೪೧. ಔತ್ಸುಕ್ಯಲಕ್ಷಣ :

**ಕಾಲಾಕ್ಷಮತ್ವಮೌತ್ಸುಕ್ಯಂ ರಮ್ಯೇಚ್ಛಾರತಿಸಂಭ್ರಮೈಃ ।**
**ತತ್ರೋಚ್ಛ್ವಾಸಗತ್ವರಾಶ್ವಾಸಗಹೃತ್ತಾಪಸ್ವೇದವಿಭ್ರಮಾಃ ॥ ೩೨ ॥**

ಅನು : ರಮ್ಯವಾದುದರ ಬಯಕೆ, ರತಿ, ಸಂಭ್ರಮ – ಇವು ಕಾರಣವಾಗಿ ವೇಳೆಯ ವಿಲಂಬವನ್ನು ಸಹಿಸದಿರುವುದು 'ಔತ್ಸುಕ್ಯ'. ಅಲ್ಲಿ–ಉಚ್ಛ್ವಾಸ, ಆತುರ, ಉಸಿರು ಬಿಡುವುದು, ಹೃದಯತಾಪ, ಬೆವರುವುದು, ವಿಭ್ರಮಗೊಳ್ಳುವುದು [ಇತ್ಯಾದಿ ಅನುಭಾವಗಳುಂಟಾಗುತ್ತವೆ].

ವ್ಯಾಖ್ಯೆ : ಉದಾ:–[ಕು.ಸಂ. : ೭–೨೨] :

'ಆತ್ಮಾನಮಾಲೋಕ್ಯ ಚ ಶೋಭಮಾನಾಮಾದರ್ಶಬಿಂಬೇ ಸ್ತಿಮಿತಾಯತಾಕ್ಷೀ ।
ಹರೋಪಯಾನೇ ತ್ವರಿತಾ ಬಭೂವ ಸ್ತ್ರೀಣಾಂ ಪ್ರಿಯಾಲೋಕಫಲೋ ಹಿ ವೇಷಃ ॥

[ನೆಟ್ಟನೋಟದ ಆ ಅಗಲಗಣ್ಣಿನವಳು ಕನ್ನಡಿಯಲ್ಲಿ ಮೂಡಿದ್ದ ಸೊಬಗುಗುವ ತನ್ನನ್ನು ನೋಡಿಕೊಂಡು ಹರನತ್ತ ತೆರಳಲು ತ್ವರೆಗೊಂಡಳು. ಹೆಣ್ಣಿನ ಸಿಂಗರಕ್ಕೆ ಇನಿಯರ ನೋಟ–ಫಲ ಅಲ್ಲವೆ?]

ಮತ್ತು – [ಕು.ಸಂ. : ೬–೯೫] :

'ಪಶುಪತಿರಪಿ ತಾನ್ಯಹಾನಿ ಕೃಚ್ಛ್ರಾದನಿನಯದದ್ರಿಸುತಾಸಮಾಗಮೋತ್ಕಃ ।
ಕಮಪರವಶಂ ನ ವಿಪ್ರಕುರ್ಯುರ್ವಿಭುಮಪಿ ತಂ ಯದಮೀ ಸ್ಪೃಶಂತಿ ಭಾವಾಃ ॥'

[ಪರ್ವತಪುತ್ರಿಯ ಸಮಾಗಮೋತ್ಸುಕನಾಗಿ ಪಶುಪತಿಯೂ ಕೂಡ ಆ ದಿನಗಳನ್ನು ಬಹು ಕಷ್ಟದಿಂದ ಕಳೆದನು. ಈ ಭಾವಗಳು ಅಂತಹ ವಿಭುವನ್ನೆ ತಟ್ಟಿ ಅಲುಗಿಸುತ್ತವೆಯೆಂದ ಮೇಲೆ ಇನ್ನಾವ ಜಿತೇಂದ್ರಿಯನನ್ನು ತಾನೆ ವಿಕಾರಗೊಳಿಸುವುದಿಲ್ಲ?]

ಟಿಪ್ಪಣಿ : ಹೋಲಿಕೆ = ನಾ.ಶಾ. : ೭–೬೯ರ ಮುಂದಿನ ಗದ್ಯ, ೭೦; ಸಾ.ದ. : ೩–೧೫೯; ಪ್ರತಾಪ : ೪–೩೯.

## ೪೨. ಚಾಪಲಲಕ್ಷಣ :

**ಮಾತ್ಸರ್ಯದ್ವೇಷರಾಗಾದೇಶ್ಚಾಪಲಂ ತ್ವನವಸ್ಥಿತಿಃ ।**
**ತತ್ರ ಭರ್ತ್ಸನಪಾರುಷ್ಯಸ್ವಚ್ಛಂದಾಚರಣಾದಯಃ ॥ ೩೩ ॥**

ಅನು : ಮಾತ್ಸರ್ಯ, ದ್ವೇಷ, ರಾಗ–ಇತ್ಯಾದಿಗಳಿಂದ [ಉಂಟಾಗುವ] ಅಸ್ಥಿರಸ್ಥಿತಿ 'ಚಾಪಲ'. ಅಲ್ಲಿ–ಭರ್ತ್ಸನೆ (ಕಟುನಿಂದೆ), ಕಠೋರತೆ, ಇಚ್ಛೆ ಬಂದಂತೆ ನಡೆಯುವುದು ಇತ್ಯಾದಿ [ಅನುಭಾವಗಳು ತೋರುತ್ತವೆ.]

ವ್ಯಾಖ್ಯೆ : ಉದಾ:–[ವಿಕಟನಿತಂಬಾ] :

'ಅನ್ಯಾಸು ತಾವದುಪಮರ್ದಸಹಾಸು ಭೃಂಗ
ಲೋಲಂ ವಿನೋದಯ ಮನಃ ಸುಮನೋಲತಾಸು ।
ಬಾಲಾಮಜಾತರಜಸಂ ಕಲಿಕಾಮಕಾಲೇ
ವ್ಯರ್ಥಂ ಕದರ್ಥಯಸಿ ಕಿಂ ನವಮಲ್ಲಿಕಾಯಾಃ ॥'

---

೧ ಪಾಠ : ತ್ವ ನಿಃಶ್ವಾಸ ।

[(ಪುಷ್ಪವತಿಯಾಗದ ಬಾಲೆಯೊಬ್ಬಳನ್ನು ರತಿಗೆಳೆಯುವ ಮೂರ್ಖಕಾಮಿಗೆ ಅನ್ಯೋಕ್ತಿರೂಪವಾಗಿ ಹೇಳುವ ಮಾತು : ) ಎಲೈ ಭೃಂಗ, ನಿನ್ನ ಉಪಮರ್ದನಗಳನ್ನು ಸಹಿಸಬಲ್ಲ ಇನ್ನಿತರ ಪುಷ್ಪಿತ ಲತೆಗಳಲ್ಲಿ ಮನವನ್ನು ತೊಡರಿಸಿ ವಿನೋದಪಡು. ಇನ್ನೂ ರಜೋತ್ಪನ್ನವಾಗದೆ ಎಳೆಯದಾಗಿರುವ ಈ ನೂತನ ಮಲ್ಲಿಕಾಲತೆಯ ಒಗ್ಗನ್ನು ಅಕಾಲದಲ್ಲಿ ವ್ಯರ್ಥವಾಗಿ ನಿರರ್ಥಕಗೊಳಿಸುವೆಯೇಕೆ?]

ಮತ್ತು – [ಆಕರ ತಿಳಿಯದು] :

'ವಿನಿಕಷಣರಣತ್ಕಠೋರದಂಷ್ಟ್ರಾಕ್ರಕಚವಿಶಂಕಟಕಂದರೋದರಾಣಿ ।

ಅಹಮಹಮಿಕಯಾ ಪತಂತು ಕೋಪಾತ್ಸಮಮಧುನೈವ ಕಿಮತ್ರ ಮನ್ಮುಖಾನಿ ॥

ಅಥವಾ, ಪ್ರಸ್ತುತಮೇವ ತಾವತ್ಸುವಿಹಿತಂ ಕರಿಷ್ಯೇ ।'

[(ರಾವಣ) ಉಜ್ಜಿಮೊರೆಯುವ ಕಠೋರವಾದ ಗರಗಸವಲ್ಲುಗಳನ್ನೊಳಗೊಂಡು ದೊಡ್ಡ ಕಂದರದಂತಿರುವ ನನ್ನ ಮುಖಗಳು ಕ್ರೋಧದಿಂದ ನಾನು ಮುಂದೆ ನಾನು ಮುಂದೆ ಎನ್ನುತ್ತ ಈಗ ಒಮ್ಮೆಲೇ ಅಲ್ಲಿ (ಕಪಿಸೈನ್ಯದಲ್ಲಿ) ಎರಗಿಬಿಡುವಂತೆ ಮಾಡಲೆ? ಅಥವಾ–ಈ ಕಾಲಕ್ಕೆ ತಕ್ಕುದಾದುದನ್ನೇ ಮಾಡುತ್ತೇನೆ.]

–ಇನ್ನುಳಿದ ಹಲವು ಚಿತ್ತವೃತ್ತಿವಿಶೇಷಗಳನ್ನು ಇಲ್ಲಿ ಬೇರೆಯಾಗಿ ಕುರಿತು ಹೇಳಿಲ್ಲ. ಕಾರಣ, ಅವು ವಿಭಾವಾನುಭಾವಗಳ ಸ್ವರೂಪವನ್ನ ತಾಳಿ ಬರುತ್ತವೆ.

ಟಿಪ್ಪಣಿ : 'ಚಾಪಲ'ಕ್ಕೆ 'ಚಪಲತಾ' ಎಂದೂ ಹೇಳಲಾಗುತ್ತದೆ. 'ರಸತರಂಗಿಣಿ'ಯಲ್ಲಿ 'ಛಲ' ಎಂಬ ಮೂವತ್ತುನಾಲ್ಕನೆಯ ವ್ಯಭಿಚಾರಿಭಾವವೊಂದನ್ನು ಸೇರಿಸಲಾಗಿದೆ.

ವ್ಯಭಿಚಾರಿಭಾವಗಳ ಸಂಖ್ಯೆಯನ್ನು ಇಷ್ಟೇ ಎಂದು ನಿಯಮನ ಮಾಡುವುದು ಹಾಗೂ ವ್ಯಭಿಚಾರಿಗೂ ವಿಭಾವಾನುಭಾವಗಳಿಗೂ ಮಧ್ಯೆ ನಿಷ್ಕೃಷ್ಟ ಗೆರೆ ಎಳೆಯುವುದು ಸುಲಭವಲ್ಲ. ಇಲ್ಲಿ ಹೇಳಿರುವವುಗಳನ್ನು ವ್ಯಭಿಚಾರಿ ಮುಂತಾದವುಗಳ ಸ್ವರೂಪಲಕ್ಷಣಗಳನ್ನರಿಯಲು ಮಾದರಿಗಳೆಂದು ಗಮನಿಸಿ, ಉಳಿದವನ್ನು ಸಹೃದಯರು ಗ್ರಹಿಸಬೇಕು ಮತ್ತು ಕಾವ್ಯದಲ್ಲಿ ಅವವುಗಳ ದಶೆಯನ್ನು ಕಂಡು ಅವು ವಿಭಾವದಲ್ಲಿ ಸೇರುತ್ತದೆಯೊ ಅನುಭಾವದಲ್ಲಿ ಸೇರುತ್ತದೆಯೊ ಅಥವಾ ವ್ಯಭಿಚಾರಿಯಲ್ಲೊ ಎಂಬುದನ್ನು ನಿರ್ಧರಿಸಿಕೊಳ್ಳತಕ್ಕದ್ದು. ಮೇಲಿನ ವ್ಯಾಖ್ಯೆಯಲ್ಲಿ ಈ ಬಗೆಗೆ ಸೂಚನೆ ಕಾಣಬಹುದು.

ಹೋಲಿಕೆ = ನಾ.ಶಾ. : ೭–೫೯ರ ಮುಂದಿನ ಗದ್ಯ, ೬೦; ಸಾ.ದ. : ೩–೧೭೬; ಪ್ರತಾಪ : ೪–೩೩.

## ಸ್ಥಾಯಿಭಾವಗಳು

### ೪೩. ಸ್ಥಾಯಿಲಕ್ಷಣ :

**ವಿರುದ್ಧೈರವಿರುದ್ಧೈರ್ವಾ ಭಾವೈರ್ವಿಚ್ಛಿದ್ಯತೇ ನ ಯಃ ।**

**ಆತ್ಮಭಾವಂ ನಯತ್ಯನ್ಯಾನ್ ಸ ಸ್ಥಾಯೀ ಲವಣಾಕರಃ ॥ ೩೪ ॥**

ಅನು : [ಯಾವ ಭಾವ, ತನಗೆ] ವಿರುದ್ಧವಾದ ಭಾವಗಳಿಂದ[ಲಾಗಲಿ] ಅಥವಾ ಅವಿರುದ್ಧವಾದ ಭಾವಗಳಿಂದ[ಲಾಗಲಿ] ತುಂಡಾಗದೆ [ಅಖಂಡವಾಗಿ ಮುಂದು ವರಿಯುತ್ತದೆಯೋ ಮತ್ತು] ಉಳಿದ [ಎಲ್ಲಾ ವಿರುದ್ಧಾವಿರುದ್ಧ ಭಾವ]ಗಳನ್ನು ತನ್ನತನಕ್ಕೇ ಸೆಳೆದುಕೊಳ್ಳುತ್ತದೆಯೋ ಅದೇ 'ಸ್ಥಾಯಿ[ಭಾವ]'; ಅದು ಲವಣಾಕರ(ಸಮುದ್ರ)ದಂತೆ [ತನ್ನ ಬಳಿ ಬರುವ ಎಲ್ಲವನ್ನೂ–ಅವು ತನಗೆ ಹೊಂದುವಂಥದಿರಲಿ ಹೊಂದದಿರುವಂಥದಿರಲಿ–ತನ್ನೊಳಗೆ ಮಾಡಿಕೊಂಡು ತಾನೇತಾನಾಗಿ ಮೆರೆಯುತ್ತದೆ].

ವ್ಯಾಖ್ಯೆ : ರತಿಯೇ ಮೊದಲಾಗಿ ಎಂಟು ಭಾವಗಳಿಗೆ ಸ್ಥಾಯಿ ಎನ್ನುತ್ತಾರೆ. [ಅಂಥ ಸ್ಥಾಯಿಭಾವವೊಂದು ಇರುವಾಗ ಅದರ ಮೇಲೆ ಇನ್ನಿತರ ಬೇರೆ ಬೇರೆ ಭಾವಗಳು ಮೂಡಿಬಂದರೂ–ಅವು ಮೂಲಭಾವದ ಜಾತಿಯವಾಗಿರಲಿ ಅಥವಾ ಮೂಲಭಾವಕ್ಕೆ ವಿಜಾತೀಯವಾದವುಗಳಾಗಿರಲಿ–ಮೂಲವಾದ ಸ್ಥಾಯಿ ಅನಂತರ ಬಂದ ಇತರ ಭಾವಗಳಿಂದ ತಿರಸ್ಕೃತವಾಗುವುದಿಲ್ಲ.]ಹಾಗೆ, ತನ್ನ ಅನಂತರದಲ್ಲಿ ಬಂದ ಸಜಾತೀಯ ಅಥವಾ ವಿಜಾತೀಯ ಭಾವಗಳಿಂದ ತಿರಸ್ಕೃತವಾಗದೆ (ಕಡಿದುಹೋಗದೆ) ಯಾವ ಭಾವ ಸ್ಥಿರವೂ ಅಖಂಡವೂ ಆಗಿ ವಿರಾಜಿಸುತ್ತದೆಯೋ ಅದೇ 'ಸ್ಥಾಯಿಭಾವ'.

[ಸಜಾತೀಯ ಭಾವಗಳಿಂದ ಅಖಂಡಿತವಾದ ಸ್ಥಾಯಿಭಾವಕ್ಕೆ] ಉದಾ:–ಬೃಹತ್ಕಥೆಯಲ್ಲಿ ನರವಾಹನ ದತ್ತನಿಗೆ ಮದನಮಂಜೂಷೆಯಲ್ಲಿ ಅನುರಾಗ ವರ್ಣಿತವಾಗಿದೆ; ಅಲ್ಲಿಯೇ ಈ ಅನುರಾಗದ ಜೊತೆಯಲ್ಲಿ ಅನೇಕ ಇನ್ನಿತರ ನಾಯಕನಾಯಿಕೆಯರ ಅನುರಾಗವೂ ವರ್ಣಿತವಾಗಿದೆ; ಹಾಗಿದ್ದರೂ, ಆ ಇತರ ಪ್ರೇಮವ್ಯಾಪಾರಗಳ ವರ್ಣನೆಯಿಂದ ಮದನಮಂಜೂಷೆಯಲ್ಲಿ ನರವಾಹನದತ್ತನಿಗಿದ್ದ ಪ್ರೇಮಭಾವದ ಸ್ರೋತ ಕಥೆಯಲ್ಲಿ ಕಡಿದುಹೋಗಿಲ್ಲ, ತಿರಸ್ಕೃತವಾಗಿಲ್ಲ. ಆದ ಕಾರಣವೇ, ಕಥೆಯಲ್ಲಿ ಪ್ರಧಾನವಾಗಿದ್ದು ಇನ್ನಿತರ ಭಾವಗಳಿಂದ ಅತಿರಸ್ಕೃತವಾದ ನರವಾಹನದತ್ತನ 'ರತಿಭಾವ' 'ಸ್ಥಾಯಿ' ಎನ್ನಿಸಿಕೊಳ್ಳುತ್ತದೆ.

[ವಿಜಾತೀಯಭಾವಗಳಿಂದ ಅಖಂಡಿತವಾದ ಸ್ಥಾಯಿಭಾವಕ್ಕೆ] ಉದಾ:–[ಮಾ.ಮಾ. : ಶ್ಮಶಾನಾಂಕ; ಈ ಉದಾ:–೪–೨೪ರಲ್ಲೂ ಬಂದಿದೆ] : ಈ ಕೃತಿಯಲ್ಲಿ, ಮಾಲತಿಯನ್ನು ಕುರಿತು ಮಾಧವನಿಗಿರುವ 'ರತಿ' ಸ್ಥಾಯಿ; ಅನಂತರ, ಶ್ಮಶಾನಾಂಕದಲ್ಲಿ ಜುಗುಪ್ಸೆ(ಬೀಭತ್ಸ)ಯ ವರ್ಣನೆ ಬಂದಿದೆ. ಆದರೆ, ಕೃತಿಯಲ್ಲಿನ ಪ್ರಧಾನ ಭಾವವಾದ ರತಿ ಅನಂತರ ಬಂದ ಜುಗುಪ್ಸೆಯಿಂದ ಖಂಡಿತವಾಗಿಲ್ಲ. 'ವಿಸದೃಶವಾದ ವಿಷಯಾಂತರಗಳಿಂದ ಸಹ ಮರೆಯಾಗದೆ ಪುರಾತನ ಸಂಸ್ಕಾರಗಳು ಸದಾ ಜಾಗೃತವಾಗಿ ಪ್ರವಹಿಸುವಂತೆ ಪ್ರಿಯತಮೆಯ ಧ್ಯಾನಬಲದಿಂದ ಮೂಡಿಬರುವ (ಸ್ಮೃತಿ) ಪರಂಪರೆಯು ನನ್ನ ಚಿತ್ತವೃತ್ತಿಯನ್ನು ತನ್ಮಯಗೊಳಿಸಿದೆ.'

–ಇತ್ಯಾದಿಯಾದ ಮಾಧವನ ಮಾತು, ಆ ಅಂಕದಲ್ಲಿ ಬರುವ ಬೀಭತ್ಸದ ನಡುವೆ ಕೂಡ, ಪ್ರಧಾನವಾದ 'ರತಿ' ಅಖಂಡಿತವಾಗಿರುವುದನ್ನು ಎತ್ತಿ ತೋರಿಸುತ್ತದೆ.

ಮೇಲೆ ತೋರುವಂತೆ, ಸ್ಥಾಯಿಭಾವದ ಜೊತೆಗೆ ಅದಕ್ಕೆ ಅವಿರೋಧವಾದ ಭಾವ ಬರಲಿ ಅಥವಾ ವಿರೋಧಿಯಾದ ಭಾವವೇ ಬರಲಿ–ಯಾವುದು ಬಂದರೂ ತಪ್ಪಲ್ಲ, ವಿರೋಧವಲ್ಲ. [ವಿರುದ್ಧಾವಿರುದ್ಧವಾದ ಯಾವ ಭಾವ ಬಂದರೂ ಅದು ಸ್ಥಾಯಿಗೆ ವಿರೋಧವನ್ನುಂಟುಮಾಡದು ಎಂಬುದನ್ನು ಇನ್ನು ಸಿದ್ಧಾಂತಿಸಲಾಗುತ್ತದೆ. 'ವಿರುದ್ಧೈರವಿರುದ್ಧೈರ್ವಾ...' ಎಂಬ ಸ್ಥಾಯಿ ಲಕ್ಷಣವನ್ನು ಸಮರ್ಥಿಸುವುದಕ್ಕಾಗಿ ಈ ಸಿದ್ಧಾಂತ ಬಂದಿದೆ].

ಯಾವುದೊಂದು ಕಾವ್ಯದಲ್ಲಿ ಬರುವ ಇನ್ನಿತರ ಭಾವಗಳು ಸ್ಥಾಯಿಭಾವವನ್ನು ವಿರೋಧಿಸುತ್ತವೆಯೆ ಎಂದರೆ, ಇಲ್ಲ ಎಂದೇ ಹೇಳುತ್ತೇವೆ. ಏಕೆಂದರೆ–ವಿರೋಧ ಎಂದರೇನು? ಸಹಾನವಸ್ಥಾನ ಅಥವಾ ಬಾಧ್ಯಬಾಧಕ ಭಾವ. ಎಂದರೆ, ಒಂದರ ಕೂಡ ಇನ್ನೊಂದು ಸೇರಿ ಇರದಂಥ ಸ್ಥಿತಿ ಅಥವಾ ಒಂದರ ಕೂಡ ಇನ್ನೊಂದು ಸೇರಿದಾಗ ಒಂದು ಇನ್ನೊಂದಕ್ಕೆ ಬಾಧೆ ಕೊಡುವ ಸ್ಥಿತಿ–ಹೀಗೆ ವಿರೋಧ ಎರಡು ಬಗೆ. ಸ್ಥಾಯಿ ಹಾಗೂ ಇನ್ನಿತರ ಭಾವಗಳ ನಡುವೆ ಈ ಎರಡು ಬಗೆಯ ವಿರೋಧಗಳಲ್ಲಿ ಯಾವುದಾದರೂ ಇದೆಯೆ? ಮೊತ್ತ ಮೊದಲನೆಯದಾಗಿ, ಸ್ಥಾಯಿಭಾವ ಹಾಗೂ ಇನ್ನಿತರ ಭಾವಗಳು ಒಂದೇ ರೂಪದಿಂದ ಒಂದೇ ಎಡೆಯಲ್ಲಿ ಮೂಡಿಬರುತ್ತವೆಯಾದ ಕಾರಣ (ಅವುಗಳ ಏಕರೂಪತ್ವದ ಆವಿರ್ಭಾವ ಹಾಗೂ ಮಿಶ್ರಣಗಳೇ ಸಾರಿ ಹೇಳುವಂತೆ) ಇಲ್ಲಿ ಒಂದಕ್ಕೊಂದಕ್ಕೆ ಯಾವ ಬಗೆಯ ವಿರೋಧವೂ ಇಲ್ಲ.

ಒಂದು ವೇಳೆ, ಸ್ಥಾಯಿಭಾವಕ್ಕೂ ಇತರ ಭಾವಗಳಿಗೂ ವಿರೋಧವುಂಟಾಗುತ್ತದೆಯೆಂದು ಹೇಳುವು ದಾದರೂ, ಅದು 'ಸಹಾನವಸ್ಥಾನ'ರೂಪವಾದ ವಿರೋಧವಲ್ಲ. ಏಕೆಂದರೆ–ರತ್ಯಾದಿಭಾವಗಳು ಮೂಡಿರುವ ಮನಸ್ಸಿನಲ್ಲಿ [ಚಿಂತೆಯೇ ಮೊದಲಾದ] ವ್ಯಭಿಚಾರಿ ಭಾವಗಳು(ವ್ಯಭಿಚಾರಿ ಲಕ್ಷಣಕ್ಕೆ ೪–೮ ನೋಡಿ; ಅದರ ಅನಂತರವೇ ಅವುಗಳ ವಿವರ ಬಂದಿದೆ.) ಸಹಜವಾಗಿ ಮೂಡುವುದನ್ನು ನಾವು ಕಾಣಬಹುದು. ಇಲ್ಲಿ, ಸ್ಥಾಯಿಯಾದ ರತ್ಯಾದಿ ಭಾವ 'ಸ್ರಕ್‌ಸೂತ್ರನ್ಯಾಯ'ದಂತೆ [ಎಂದರೆ, ಮಾಲೆ ಮತ್ತು ದಾರ ಇರುವಂತೆ;

ಮಾಲೆಯಲ್ಲಿನ ದಾರ ಎಲ್ಲ ಬಿಡಿಹೂವುಗಳಲ್ಲಿಯೂ ಒಳಸೇರಿಕೊಂಡಿರುವುದಷ್ಟೆ] ಇರುತ್ತದೆ. [ಹೀಗೆ ರತ್ಯಾದಿಗಳಲ್ಲಿ ಚಿಂತಾದಿಗಳು ಮೂಡುತ್ತಿರುವುದನ್ನು] ರಸಿಕಸಮಸ್ತರೂ ಸ್ವಾನುಭವದಿಂದ ಸ್ಪಷ್ಟವಾಗಿ ಅರಿತಿದ್ದಾರೆ. ಲೋಕಜೀವನದಲ್ಲಿ ಸ್ವಾನುಭವಸಿದ್ಧವಾದ ಈ ಅಂಶ ಕಾವ್ಯಕ್ಕೂ ಅನ್ವಯಿಸುತ್ತದೆ. ಕಾವ್ಯವ್ಯಾಪಾರವು ಅನುಕಾರ್ಯರಾದ ರಾಮಾದಿಗಳಲ್ಲಿ ಇಂತಹ ಮುಖ್ಯಾಮುಖ್ಯ ಭಾವಗಳ ಮಿಶ್ರಣವನ್ನು ಮೆಯ್ದುಂಬಿಸಿ ತೋರಿಸುತ್ತದೆ; ಅನುಕಾರ್ಯರಲ್ಲಿ ಮೆಯ್ದುಂಬಿದ ಈ ಭಾವಗಳು ನಮ್ಮ (ರಸಿಕರ) ಚೇತನವನ್ನೂ ಭೇದಿಸಿ (ಅನುಕಾರ್ಯ ಹಾಗೂ ರಸಿಕನಲ್ಲಿ ತಾದಾತ್ಮ್ಯ ಕಲ್ಪಿಸಿ) ಕಾವ್ಯಕ್ಕೆ ಸಹಜವಾದ ಆನಂದಜ್ಞಾನವನ್ನುಕ್ಕಿಸಲು ಮೂಲಕಾರಣಗಳಾಗುತ್ತವೆ. ಇದರಿಂದ, ಮೂಲಭಾವ ಹಾಗೂ ಇನ್ನಿತರ ಭಾವಗಳು ಒಂದರ ಕೂಡ ಇನ್ನೊಂದು ಒಟ್ಟಿಗೆ ಇರಲು ಸಾಧ್ಯ ಎಂದಂತಾಯಿತು. ಎಂದರೆ, ಸ್ಥಾಯಿ ಹಾಗೂ ಇತರ ಭಾವಗಳ ನಡುವೆ 'ಸಹಾನವಸ್ಥಾನ'ರೂಪವಾದ ವಿರೋಧ ಇಲ್ಲ ಎಂಬುದು ಸಿದ್ಧವಾಯಿತು.

ಇನ್ನು 'ಬಾಧ್ಯಬಾಧಕ'ರೂಪವಾದ ವಿರೋಧ : ಒಂದು ಭಾವದಿಂದ ಇನ್ನೊಂದು ಭಾವಕ್ಕೆ ತಿರಸ್ಕಾರ ಅಥವಾ ಆತಂಕವುಂಟಾಗುವುದು ಬಾಧ್ಯಬಾಧಕವಿರೋಧ. ಸ್ಥಾಯಿ ಹಾಗೂ ಇತರ ಭಾವಗಳ ನಡುವೆ ಬಾಧ್ಯಬಾಧಕ ವಿರೋಧವೂ ಇರುವುದಿಲ್ಲ. ಏಕೆಂದರೆ–

ಯಾವುದೊಂದು ಸ್ಥಾಯಿಭಾವಕ್ಕೆ ಅದಕ್ಕೆ ಹೊಂದುವಂತಹ ನಿಯತವಾದ ಹಲವು ವ್ಯಭಿಚಾರಿ ಭಾವಗಳಿರುತ್ತವೆ. (ಮುಂದೆ, ಸ್ಥಾಯಿಭಾವಗಳನ್ನು ಒಂದೊಂದಾಗಿ ಲಕ್ಷಿಸುವಾಗ–೪–೫೬ರಿಂದ ಮುಂದೆ–ಆಯಾಯಾ ಸ್ಥಾಯಿಗೆ ನಿಯತವಾಗಿರುವ ವ್ಯಭಿಚಾರಿಗಳಾವುವೆಂಬುದನ್ನು ಹೇಳಿದೆ.) ಹಾಗೆ ಯಾವುದೊಂದು ಸ್ಥಾಯಿಯ ಜೊತೆಗೆ ಅದಕ್ಕೆ ನಿಯತವಾದ ವ್ಯಭಿಚಾರಿ ಬಂದರೆ, ಅಲ್ಲಿ ವಿರೋಧ ಉಂಟಾಗುವುದೇ ಇಲ್ಲ. ಏಕೆಂದರೆ, ಅಲ್ಲಿ ಬರುವ ವ್ಯಭಿಚಾರಿ ಸ್ಥಾಯಿಯ ಅಂಗವಾಗಿರುತ್ತದೆ. ಅಂಗಿಗೆ ಅಂಗದಿಂದ ಬಾಧಕವುಂಟಾಗುವುದು ಅಸಾಧ್ಯ. ಬದಲು, ಸ್ಥಾಯಿಗೆ ಅಂಗವಾಗಿ ಬರುವ ಅದರ ವ್ಯಭಿಚಾರಿಭಾವಗಳು ಸ್ಥಾಯಿಗೆ ಪೋಷಣೆಯನ್ನೇ ಕೊಡುತ್ತವೆ. ಒಂದು ವೇಳೆ, ಪ್ರಧಾನವಾದ ಸ್ಥಾಯಿಯ ಸಂಗಡ ಅದಕ್ಕೆ ವಿರುದ್ಧವಾದ ಯಾವುವಾದರೊಂದು ಭಾವ ಬಂದೀತೆನ್ನೋಣ : ಉದಾಹರಣೆಗೆ, 'ಮಾಲತೀಮಾಧವ'ದಲ್ಲಿ ಶೃಂಗಾರ(ರತಿ)ದ ಅನಂತರ ಬೀಭತ್ಸ(ಜುಗುಪ್ಸೆ) ಬಂದಿದೆಯಷ್ಟೆ. ಶೃಂಗಾರ ಬೀಭತ್ಸಗಳು ಒಂದಕ್ಕೊಂದು ವಿರುದ್ಧವಾದವು; ಅಲ್ಲದೆ, ಅಲ್ಲಿನ ಬೀಭತ್ಸ ಸ್ಥಾಯಿಯಾದ ಶೃಂಗಾರಕ್ಕೆ ಅಂಗವಾಗುವಂತಿಲ್ಲ. ಹಾಗಿದ್ದರೂ ಆ ರೂಪಕದಲ್ಲಿ ಶೃಂಗಾರಾನಂತರ ಬರುವ ಬೀಭತ್ಸ ವೈರಸ್ಯವನ್ನುಂಟುಮಾಡುವುದಿಲ್ಲ. ಅನಂತರ ಬಂದ ವಿರುದ್ಧ ಭಾವ ಮೂಲಸ್ಥಾಯಿಗೆ ಅಂಗವಾಗಿರದಿದ್ದರೂ ವಿರಸಕ್ಕೆ ಕಾರಣವಾಗಲಿಲ್ಲವೇಕೆ? –ಅಲ್ಲಿ ವಿರುದ್ಧರಸಗಳ ಆಲಂಬನೆ ಒಂದೇ ಆಗಿಲ್ಲ. ಎಂದರೆ, ಅಲ್ಲಿ ರತಿಭಾವ ಮಾಲತಿಯನ್ನು ಆಶ್ರಯಿಸಿದೆ; ರತಿಯ ಆಲಂಬನೆ ಮಾಲತಿ. ಆದರೆ ಅನಂತರ ಬಂದ ಜುಗುಪ್ಸೆಯೂ ಮಾಲತಿಯನ್ನೇ ಆಶ್ರಯಿಸಿಲ್ಲ. ಮಾಲತಿಯೊಬ್ಬಳನ್ನೇ ಆಲಂಬನೆಯನ್ನಿಟ್ಟುಕೊಂಡು ರತಿ ಜುಗುಪ್ಸೆಗಳೆರಡೂ ಬಂದಿದ್ದರೆ ವೈರಸ್ಯಕ್ಕೆ ಅವಕಾಶವಾಗಬಹುದಿತ್ತು.

ಇನ್ನು, ಮೇಲೆ ಹೇಳಿದಂತೆ ಯಾವುದಾದರೂ ಒಂದೇ ಆಲಂಬನೆಯನ್ನಿಟ್ಟುಕೊಂಡು ಎರಡು ವಿರುದ್ಧ ಭಾವಗಳು ಬರುವುದಾದರೆ ಆಗ ಏನಾದೀತು ಎಂಬುದು ಪ್ರಶ್ನೆ. ಅಲ್ಲಿಯೂ ವಿರಸ ಉಂಟಾಗದಂತೆ ಮಾಡಬಹುದು ಎಂದರೆ, ಒಂದೇ ವಸ್ತುವನ್ನು ಆಶ್ರಯಿಸಿ ಎರಡು ವಿರುದ್ಧ ಭಾವಗಳನ್ನು ಚಿತ್ರಿಸಬೇಕಾದಲ್ಲಿ, ಅವೆರಡರ ನಡುವೆ ಅವೆರಡಕ್ಕೂ ವಿರುದ್ಧವಲ್ಲದ ಮೂರನೆಯ ರಸವೊಂದನ್ನು ವ್ಯವಧಾನರೂಪವಾಗಿ ತಂದಲ್ಲಿ ವಿರಸವನ್ನು ತೆಗೆದುಹಾಕಬಹುದು. ಉದಾ:–[ಆಕರ ಹಾಗೂ ನಿಷ್ಕೃಷ್ಟ ಅರ್ಥ ತಿಳಿಯದ ಒಂದು ಅಪಭ್ರಂಶ ಗಾಥಾ] :

'ಅಣ್ಣಹುಗಾಹುಮಹೇಲಿಅಹುಜುಹುಪರಿಮಲುಸುಸಲಿಂಧು ।
ಮುಹುಕಾಂತಹ ಅಗತ್ಥಹಅಂಗ ಣ ಛಿಟ್ಟ ಇ ಗಂಧು ॥'

–ಇಲ್ಲಿ ಬೀಭತ್ಸರಸ ಹಾಗೂ ಶೃಂಗಾರರಸಗಳೆರಡೂ ಬಂದಿವೆ; ಅವುಗಳೆರಡರ ನಡುವೆ, ಅವೆರಡಕ್ಕೂ ವಿರುದ್ಧವಲ್ಲದ ಮತ್ತೊಂದು ಮೂರನೆಯ ರಸವೂ ಬಂದಿದೆ. ವಿರುದ್ಧವಾದ ಎರಡರ ನಡುವೆ, ಎರಡಕ್ಕೂ ವಿರುದ್ಧವಲ್ಲದ ಮೂರನೆಯ ರಸವೊಂದು ಬಂದು ಅವೆರಡಕ್ಕೂ ಮಧ್ಯೆ ವ್ಯವಧಾನ ಕಲ್ಪಿಸಿದೆ; ಅಂತೆಯೇ ಇಲ್ಲಿ

ಬೀಭತ್ಸಶೃಂಗಾರಗಳೆರಡೂ ಬಂದಿದ್ದರೂ ವಿರೋಧ ಉಂಟಾಗಲಿಲ್ಲ; ಮತ್ತೊಂದರ ವ್ಯವಧಾನದಿಂದ, ಉಂಟಾಗಲಿದ್ದ ವೈರಸ್ಯ ಹೋಯಿತು. ಹೀಗೆ ತೃತೀಯದ ವ್ಯವಧಾನದಿಂದಲೇ ಅಲ್ಲದೆ ಮತ್ತೂ ಕೆಲವು ಉಪಾಯಗಳಿಂದ ವಿರುದ್ಧ ರಸಗಳ ಏಕಾವಲಂಬನ ವಿರೋಧವನ್ನು ನಿವಾರಿಸಬಹುದಾಗಿದೆ. (ಅಂಥ ಯುಕ್ತಿಗಳನ್ನು ಬೇರೆ ಬೇರೆ ಕಾವ್ಯದಲ್ಲಿನ ಉದಾಹರಣೆಗಳಿಂದ ಅರಿತುಕೊಳ್ಳತಕ್ಕದ್ದು).

ಯಾವುದಾದರೊಂದು ರಸಕ್ಕೆ ಅಂಗಭೂತವಾಗಿ ಇತರ ಭಾವಗಳು ಬಂದಾಗ ಅಥವಾ ತಾತ್ಪರ್ಯದಲ್ಲಿ ಒಂದು ರಸ ಪ್ರಧಾನವಾಗಿದ್ದು ಅದರ ಕೂಡ ಅಪ್ರಧಾನವಾಗಿ ಇತರ ವಿರುದ್ಧಾವಿರುದ್ಧ ಭಾವಗಳು ಬಂದಾಗ ಅವುಗಳ ನಡುವೆ ವಿರಸ ಉಂಟಾಗುವುದಿಲ್ಲ ಎಂಬುದೇನೋ ಸಿದ್ಧವಾಯಿತು. ಆದರೆ, ಒಮ್ಮೆ ಎರಡೂ ಸಮಪ್ರಧಾನವಾಗಿರುವ ರಸಗಳು ಕೂಡುವ ಸಂದರ್ಭದಲ್ಲಿ ಏನು ಹೇಳೋಣ? ವಿರುದ್ಧ ರಸಗಳು ಸಮಪ್ರಧಾನವಾಗಿ ಕೂಡಿ ಬಂದಿರುವುದಕ್ಕೆ ಈ ಕೆಳಗಿನ ಅನೇಕ ಉದಾಹರಣೆಗಳಿವೆ :

ಉದಾ:-[ಆಕರ ತಿಳಿಯದು; ಧ್ವನ್ಯಾ.ದ ೩-೨೪ರ ವೃತ್ತಿಯಲ್ಲಿ ಉದಾಹೃತವಾಗಿದೆ] :

'ಏಕ್ಕತ್ತೋ ರುಅಇ ಪಿಆ ಅಣ್ಣತ್ತೋ ಸಮರತೂರಣಿಗ್ಘೋಸೋ ।
ಪೇಮ್ಮೇಣ ರಣರಸೇಣ ಅ ಭಡಸ್ಸ ಡೋಲಾಇಅಂ ಹಿಅಅಂ ॥'

[ಒಂದೆಡೆ ಪ್ರಿಯೆ ರೋದಿಸುತ್ತಿದ್ದಾಳೆ, ಇನ್ನೊಂದೆಡೆ ಸಮರತೂರ್ಯಗಳ ಘೋಷ ಮೊರೆಯಿಡುತ್ತಿದೆ; ಹೀಗಿರಲು, ಒಂದೆಡೆ ಪ್ರೇಮರಸದಿಂದ ಮತ್ತೊಂದೆಡೆ ರಣರಸದಿಂದ ಭಟನ ಹೃದಯವು ಡೋಲಾಯಮಾನವಾಯಿತು.]

-ಈ ಉದಾಹರಣೆಯಲ್ಲಿ ರತಿ ಉತ್ಸಾಹಗಳೆರಡೂ ಸಮಪ್ರಧಾನವಾಗಿ ಬಂದಿಲ್ಲವೆ?

ಮತ್ತೊಂದು ಉದಾ:-[ಭರ್ತೃ. ಶೃ. : ಶ್ಲೋ. ೩೬] :

'ಮಾತ್ಸರ್ಯಮುತ್ಸಾರ್ಯ ವಿಚಾರ್ಯ ಕಾರ್ಯ-
ಮಾರ್ಯಾಃ ಸಮರ್ಯಾದಮಿದಂ ವದಂತು ।
ಸೇವ್ಯಾ ನಿತಂಬಾಃ ಕಿಮು ಭೂಧರಾಣಾ-
ಮುತ ಸ್ಮರಸ್ಮೇರವಿಲಾಸಿನೀನಾಮ್ ॥'

[ಆರ್ಯರಾದವರು ಮಾತ್ಸರ್ಯ ಬಿಟ್ಟು ನಿಯತವಾದ ಕಾರ್ಯವನ್ನು ವಿಚಾರಮಾಡಿ ಇದರ ನಿರ್ಣಯವನ್ನು ಹೇಳಲಿ : ಪರ್ವತದ ನಿತಂಬ(ಬೆಟ್ಟದ ತಪ್ಪಲು)ಗಳನ್ನು ಸೇವಿಸುವುದೇ ಅಥವಾ ಮನ್ಮಥ ಲೀಲಾವಿಲಾಸಿನಿಯರ ನಿತಂಬಗಳನ್ನು ಸೇವಿಸುವುದೆ?]

-ಈ ಉದಾಹರಣೆಯಲ್ಲಿ ರತಿಶಮಗಳೆರಡೂ ಸಮವಾಗಿ ವರ್ಣಿತವಾಗಿಲ್ಲವೆ?

ಇನ್ನೊಂದು ಉದಾ:-[ಆಕರ ತಿಳಿಯದು]:

'ಇಯಂ ಸಾ ಲೋಲಾಕ್ಷೀ ತ್ರಿಭುವನಲಲಾಮೈಕವಸತಿಃ
ಸ ಚಾಯಂ ದುಷ್ಟಾತ್ಮಾ ಸ್ವಸುರಪಕೃತಂ ಯೇನ ಮಮ ತತ್ ।
ಇತಸ್ತೀವ್ರಃ ಕಾಮೋ ಗುರುರಯಮಿತಃ ಕ್ರೋಧದಹನಃ
ಕೃತೋ ವೇಷಶ್ಚಾಯಂ ಕಥಮಿದಮಿತಿ ಭ್ರಾಮ್ಯತಿ ಮನಃ ॥'

[(ಸೀತಾಪಹರಣಕ್ಕಾಗಿ ಬಂದಾಗ ಸೀತಾಲಕ್ಷ್ಮಣರನ್ನು ಕಂಡು ರಾವಣ ಹೇಳುವ ಮಾತು) : ಇವಳೋ ಮೂರು ಲೋಕಗಳ ಚೆಲುವೆಲ್ಲಕ್ಕೂ ಒಂದೆ ನೆಲೆಯಾದ ತೂಗುಗಣ್ಣಿನ ಚೆನ್ನೆ; ಇವನೋ ನನ್ನ ಸಹೋದರಿಗೆ ಅಪಕಾರ ಮಾಡಿದ ದುರಾತ್ಮ. ಒಂದೆಡೆ ತೀವ್ರವಾದ ಕಾಮ, ಇನ್ನೊಂದೆಡೆ ಮಹತ್ತಾದ ಕ್ರೋಧಾಗ್ನಿ. ಇಷ್ಟೇ ಅಲ್ಲದೆ ನಾನೋ (ಸನ್ಯಾಸಿಯ) ವೇಷಧರಿಸಿ ಬಂದವನು. 'ಇದೇನಿದು' ಎಂದು ನನ್ನ ಮನಸ್ಸು ಭ್ರಮೆಗೊಳ್ಳುತ್ತಿದೆ.]

-ಈ ಉದಾಹರಣೆಯಲ್ಲಿ ರತಿಕ್ರೋಧಗಳ ಸಮಾನಚಿತ್ರಣವಿಲ್ಲವೆ?

ಇನ್ನೂ ಒಂದು ಉದಾ:-[ಮಾ.ಮಾ. : ೫-೧೮] :

'ಅಂತ್ರೈಃ ಕಲ್ಪಿತಮಂಗಲಪ್ರತಿಸರಾಃ ಸ್ತ್ರೀಹಸ್ತರಕ್ತೋತ್ಪಲ-
ವ್ಯಕ್ತೋತ್ತಂಸಭೃತಃ ಪಿನದ್ಧಶಿರಸಾ ಹೃತ್ಪುಂಡರೀಕಸ್ರಜಃ।
ಏತಾಃ ಶೋಣಿತಪಂಕಕುಂಕುಮಜುಷಃ ಸಂಭೂಯ ಕಾಂತೈಃ ಪಿಬ-
ನ್ತ್ಯಸ್ಥಿಸ್ನೇಹಸುರಾಂ ಕಪಾಲಚಷಕೈಃ ಪ್ರೀತಾಃ ಪಿಶಾಚಾಂಗನಾಃ ॥'

[ಕರುಳನ್ನು ಮಂಗಳಸೂತ್ರವಾಗಿ ಮಾಡಿಕೊಂಡು ರಕ್ತೋತ್ಪಲಗಳಂತೆ ವ್ಯಕ್ತವಾದ ಸ್ತ್ರೀಹಸ್ತಗಳನ್ನು ಅವತಂಸವಾಗಿ ಧರಿಸಿ ಕಟ್ಟಿದ ರುಂಡಮಾಲೆಯೊಡನೆ ಹೃತ್ಕಮಲಮಾಲೆಗಳನ್ನು ಮುಡಿದು ರಕ್ತಕರ್ದಮದ ಕುಂಕುಮವನ್ನು ಲೇಪಿಸಿಕೊಂಡ ಈ ಪಿಶಾಚಾಂಗನೆಯರು, ತಮ್ಮ ಪ್ರಿಯರೊಡನೆ ಎಲುಬಿನ ಜಿಡ್ಡಿನಿಂದ ಕೂಡಿದ ಸುರೆಯನ್ನು ಕಪಾಲಪಾತ್ರೆಗಳಲ್ಲಿ ಕುಡಿಯುತ್ತ ಸಂಪ್ರೀತರಾಗಿದ್ದಾರೆ.]

–ಇಲ್ಲಿ ಒಂದೇ ಎಡೆ ರತಿಜುಗುಪ್ಸೆಗಳೆರಡೂ ಸಮನಾಗಿ ವರ್ಣಿತವಾಗಿಲ್ಲವೆ?

ಮತ್ತೂ ಒಂದು ಉದಾಃ–[ಅಮರು.?; ಸಾ.ದ. : ೭–೩೧ರಲ್ಲಿ ಉದ್ಧೃತವಾಗಿದೆ] :

'ಏಕಂ ಧ್ಯಾನನಿಮೀಲನಾನ್ಮುಕುಲಿತಂ ಚಕ್ಷುರ್ದ್ವಿತೀಯಂ ಪುನಃ
ಪಾರ್ವತ್ಯಾ ವದನಾಂಬುಜಸ್ತನತಟೇ ಶೃಂಗಾರಭಾರಾಲಸಮ್ ।
ಅನ್ಯದ್ದೂರವಿಕೃಷ್ಟಚಾಪಮದನಕ್ರೋಧಾನಲೋದ್ದೀಪಿತಂ
ಶಂಭೋರ್ಭಿನ್ನರಸಂ ಸಮಾಧಿಸಮಯೇ ನೇತ್ರತ್ರಯಂ ಪಾತು ವಃ ॥

[ಧ್ಯಾನಸ್ಥವಾದ ಒಂದು ಕಣ್ಣು ಮುಗಿದು ಮೊಗ್ಗೆಯಂತಿರುವ, ಮತ್ತೊಂದು ಪಾರ್ವತಿಯ ತಾವರೆ ಮೊಗದಲ್ಲಿ ಮತ್ತು ಮೊಲೆಗಳ ಅಂಚಿನಲ್ಲಿ ತೊಡರಿ ಶೃಂಗಾರಭಾರದಿಂದ ಅಲಸಗೊಂಡಿರುವ, ಮೂರನೆಯದು ದೂರದಲ್ಲಿ ಬಿಲ್ಲೆಳೆದು ನಿಂತ ಮನ್ಮಥನ ಮೇಲೆ ಕ್ರೋಧಗೊಂಡು ಪ್ರಜ್ವಲಿತಾಗ್ನಿಯಾಗಿರುವ–ಹೀಗೆ ಸಮಾಧಿಸಮಯದಲ್ಲಿ ಭಿನ್ನರಸಗಳನ್ನು ಮೆರೆಯುವ–ಶಂಭುವಿನ ತ್ರಿನೇತ್ರಗಳು ನಿಮ್ಮನ್ನು ಪಾಲಿಸಲಿ.]

–ಇಲ್ಲಿ ಶಮ ರತಿ ಕ್ರೋಧಗಳು ಮೂರೂ ಸಮಪ್ರಧಾನವಾಗಿ ವ್ಯಕ್ತಗೊಂಡಿಲ್ಲವೆ?

ಮತ್ತೂ ಒಂದು ಉದಾಃ–[ಚಂದ್ರಕಕೃತವೆಂದು ಹೇಳಲಾದದ್ದು] :

ಏಕೇನಾಕ್ಷ್ಣಾ ಪ್ರವಿತತರುಷಾ ವೀಕ್ಷತೇ ವ್ಯೋಮಸಂಸ್ಥಂ
ಭಾನೋರ್ಬಿಂಬಂ ಸಜಲಲುಳಿತೇನಾಪರೇಣಾತ್ಮಕಾಂತಮ್ ।
ಅಹ್ನಶ್ಛೇದೇ ದಯಿತವಿರಹಾಶಂಕಿನೀ ಚಕ್ರವಾಕೀ
ದ್ವೌ ಸಂಕೀರ್ಣೌ ರಚಯತಿ ರಸೌ ನರ್ತಕೀವ ಪ್ರಗಲ್ಭಾ ॥'

[ಹಗಲು ಕಡಿಯುವಾಗ, ಕ್ರೋಧ ಹಬ್ಬಿ ಹಲವರಿಯುವ ಒಂದು ಕಣ್ಣಿನಿಂದ ಬಾನೊಳಗಿನ ಬಟ್ಟಲು ನೇಸರನ್ನೂ ನೀರುದುಂಬಿ ಮಸುಕಾದ ಮತ್ತೊಂದರಿಂದ ತನ್ನ ಇನಿಯನನ್ನೂ ನೋಡುತ್ತ ನಲ್ಲನ ಅಗಲಿಕೆಯನ್ನು ಸಂದೇಹಿಸುವ ಚಕ್ರವಾಕಿಯು – ಪ್ರಗಲ್ಭೆಯಾದ ನರ್ತಕಿಯಂತೆ (ಒಮ್ಮೆಲೇ) ಎರಡು ರಸಗಳನ್ನು ಬೆರೆಸಿ ಮೂಡಿಸುತ್ತಿದೆ.]

– ಎನ್ನುವಲ್ಲಿ ರತಿ ಶಮ ಕ್ರೋಧಗಳು ಸಮಸಮನಾಗಿ ಮೇಳಗೊಂಡಿಲ್ಲವೆ? ಹೀಗೆ ಮೇಲಿನ ಉದಾಹರಣೆಗಳಲ್ಲಿ ತೋರುವಂತೆ ಸ್ಥಾಯಿಗಳ ಸಮಪ್ರಧಾನವಾದ ಬೆರಕೆಯಿಂದ ವಿರೋಧ ಹಾಗೂ ವಿರಸ ಉಂಟಾಗುವುದಿಲ್ಲವೆ?

ಮೇಲಿನ ಸಂದೇಹಕ್ಕೆ ಸಮಾಧಾನಃ ಮೇಲಿನ ಎಲ್ಲ ಉದಾಹರಣೆಗಳಲ್ಲಿ, ಒಂದೇ ಕಡೆ ಎರಡು ಮೂರು ಸ್ಥಾಯಿಭಾವಗಳು ಸಮಪ್ರಧಾನವಾಗಿ ಬಂದಿರುವಂತೆ ತೋರಬಹುದಾದರೂ, ವಾಸ್ತವಿಕವಾಗಿ ಅಲ್ಲೆಲ್ಲ ಸ್ಥಾಯಿ ಒಂದೇ ಆಗಿದೆ. ಏಕೆಂದರೆ –

'ಏಕತ್ತೋ ರೋಅಇ......(ಒಂದೆಡೆ ಪ್ರಿಯೆ ರೋದಿಸುತ್ತಿದ್ದಾಳೆ......)' – ಈ ಉದಾ.ಲ್ಲಿ ಯುದ್ಧವನ್ನು ಕುರಿತ 'ಉತ್ಸಾಹ'ವೇ ಸ್ಥಾಯಿ. ಈ ಉತ್ಸಾಹದ ನಡುವೆ ಆತನಲ್ಲಿ ಸಂದೇಹ ಉಂಟಾದದ್ದು ಕಾಣುತ್ತದೆ. ಆ ಸಂದೇಹ 'ವಿತರ್ಕ'ವೆಂಬ ವ್ಯಭಿಚಾರಿಭಾವಕ್ಕೆ (ನೋಡಿ : ೪ – ೩೭) ಕಾರಣವಾಗಿದೆ. ಆದ್ದರಿಂದ ಈ ಉದಾ.ಯಲ್ಲಿ

'ಉತ್ಸಾಹ'ವೇ ಸ್ಥಾಯಿ, ಅದಕ್ಕೆ ಅಂಗವಾಗಿ 'ವಿತರ್ಕ'ವೆಂಬ ವ್ಯಭಿಚಾರಿ ಬಂದಿದೆ. ಇಲ್ಲಿ ಚಿತ್ರಿತವಾದ ಕರುಣ ಹಾಗೂ ಸಂಗ್ರಾಮತೂರ್ಯ ನಿರ್ಘೋಷಗಳೆರಡೂ 'ವೀರ'ವನ್ನೇ ಪೋಷಿಸುತ್ತವೆ ಎಂಬ ಅಂಶ 'ಭಟ' ಎಂಬ ಪದದಿಂದಲೇ ಪ್ರತಿಪಾದಿತವಾಗಿದೆ. ಒಮ್ಮೆ, ಇಲ್ಲಿ ಉತ್ಸಾಹಶೋಕಗಳೆರಡೂ ಸಮಪ್ರಧಾನವಾಗಿವೆ ಯೆನ್ನುವುದಾದರೆ, ಆ ಉತ್ಸಾಹಶೋಕಗಳೂ ಪರಸ್ಪರ ಉಪಕಾರ್ಯೋಪಕಾರಕಗಳಲ್ಲದ ಕಾರಣ, ಇಲ್ಲಿ ಒಂದೇ ಅರ್ಥಬೋಧೆ ಹೊರಡುತ್ತಿರಲಿಲ್ಲ. ಯುದ್ಧ ಆರಂಭವಾಗಿರಲು ಸುಭಟನೊಬ್ಬನು ಯುದ್ಧದಲ್ಲಿ ಉದಾಸೀನನಾಗಿ ಬೇರೆ ಕಾರ್ಯದಲ್ಲಿ ತೊಡಗುವನೆಂಬುದು ಮಹತ್ತಾದ ಅನೌಚಿತ್ಯವೇ ಆಗುತ್ತದೆ. ಆದ್ದರಿಂದ, ಇಲ್ಲಿ ಪತಿಯು (ಆ ಭಟ) ಸಂಗ್ರಾಮವೊಂದರಲ್ಲೆ ಸವಿ ಕಂಡವನಾಗಿ ಶೌರ್ಯವನ್ನ ಪ್ರಕಾಶಿಸುತ್ತಿರಲು, ಆತನ ಪ್ರಿಯತಮೆಯ ಕರುಣವು ಅವನ ಶೌರ್ಯವನ್ನೇ ಪುಷ್ಟಿಗೊಳಿಸುತ್ತದೆ.

ಅದರಂತೆಯೇ, 'ಮಾತ್ಸರ್ಯಮುತ್ಸಾರ್ಯ....(ಆರ್ಯರಾದವರು ಮಾತ್ಸರ್ಯ ಬಿಟ್ಟು....), – ಈ ಉದಾ. ಯಲ್ಲೂ ಶಮೆಯೊಂದನ್ನೇ ಉದ್ದೇಶವಾಗಿಟ್ಟುಕೊಂಡಿದೆ. ಅಲ್ಲಿ, ಅನಾದಿಕಾಲದಿಂದ ಪ್ರವೃತ್ತವಾಗಿರುವ ರತಿವಾಸನೆಯನ್ನು ಹೇಯವಾಗಿ ಕಂಡು ಶಮೆಯೊಂದನ್ನ ಎತ್ತಿ ಹಿಡಿಯಲಾಗಿದೆ. 'ಆರ್ಯಾ ಸಮಾರ್ಯಾದಮ್' (ಆರ್ಯರಾದವರು......ನಿಯತವಾದ) ಎಂಬ ಅಲ್ಲಿನ ಮಾತು ಈ ಅಂಶವನ್ನು ಸ್ಪಷ್ಟಗೊಳಿಸಿದೆ.

ಹಾಗೆಯೇ, 'ಇಯಂ ಸಾ ಲೋಲಾಕ್ಷೀ.....(ಇವಳೋ ಮೂರು ಲೋಕಗಳ ಚೆಲುವೆಲ್ಲಕ್ಕೂ.....)'– ಎಂಬಲ್ಲಿ, ರಾವಣ ಪ್ರತಿನಾಯಕನಾಗಿದ್ದಾನೆ; ಮಾಯಾವಿಯಾದ ನಿಶಾಚರ ಆತ. ಅಲ್ಲಿ ವಿಭಾವವಾದ ಸೀತಾಲಕ್ಷ್ಮಣರನ್ನು ಕುರಿತು 'ವಿತರ್ಕ' ವ್ಯಕ್ತವಾಗಿದೆ; ಆ 'ವಿತರ್ಕ' (ನೋಡಿ : ೪–೩೭)ದಿಂದ ಹುಟ್ಟಿದ 'ವಿಷಾದ'ವೆಂಬ ವ್ಯಭಿಚಾರಿ (ನೋಡಿ : ೪–೪೦) ಅಲ್ಲಿ ಬಂದಿದೆ. ಪ್ರತಿನಾಯಕನೂ ಮಾಯಾವಿಯೂ ನಿಶಾಚರನೂ ಆದ ರಾವಣನ ಸಹಜವಾದ 'ರೌದ್ರ'ಕ್ಕೆ ಅಂಗವಾಗಿ 'ವಿಷಾದ' ಬಂದಿದೆ. ಆದ್ದರಿಂದ, ಇಲ್ಲಿ ಬಂದಿರುವ ರತಿಕ್ರೋಧಗಳು ರೌದ್ರವನ್ನೆ ಪುಷ್ಟೀಕರಿಸುತ್ತವೆ.

'ಅಂತ್ರೈಃ ಕಲ್ಪಿತಮಂಗಲಪ್ರತಿಸರಾಃ....(ಕರುಳುಗಳ ಮಂಗಲಸೂತ್ರವನ್ನು.....)'– ಇಲ್ಲಿ, ಹಾಸ್ಯರಸ ವೊಂದಕ್ಕಾಗಿಯೇ ಉಳಿದವು ಪ್ರತಿಪಾದಿತವಾಗಿವೆ.

'ಏಕಂ ಧ್ಯಾನನಿಮೀಲನಾತ್......(ಧ್ಯಾನಸ್ಥವಾದ ಒಂದು ಕಣ್ಣು....)'– ಈ ಉದಾ.ಲ್ಲಿ, ಶಂಭುವು ಶಮಸ್ಥನಾಗಿದ್ದರೂ ಇತರ ಭಾವಗಳನ್ನು ದೂರೀಕರಿಸಿಲ್ಲವೆಂಬ ಅಂಶ ಪ್ರತಿಪಾದಿತವಾಗಿದೆ. ಇತರ ಸಾಮಾನ್ಯ ಯೋಗಿಗಳಿಗೂ ಆ ಮಹಾಯೋಗಿಗೂ ಇರುವ ವ್ಯತ್ಯಾಸವನ್ನು ಸೂಚಿಸುವ ಸಲುವಾಗಿ ಹಾಗೂ ಆ ಮಹಾಯೋಗಿಯ ಅಲೌಕಿಕ ಯೋಗವನ್ನು ಎತ್ತಿಹಿಡಿಯುವ ಸಲುವಾಗಿ ಈ ಬಗೆಯ ಚಿತ್ರಣ ಬಂದಿದೆ. ಅಲ್ಲದೆ, ಈ ಉದಾ.ಲ್ಲಿ ಶಮೆಯೊಂದನ್ನೆ ಪ್ರಧಾನವಾಗಿಟ್ಟುಕೊಂಡಿದೆಯೆಂಬುದು 'ಸಮಾಧಿಸಮಯೇ (ಸಮಾಧಿ ಸಮಯದಲ್ಲಿ)' ಎಂಬ ಪದದಿಂದ ಸುವ್ಯಕ್ತವಾಗಿದೆ.

'ಏಕೇನಾಕ್ಷ್ಣಾ......(ಹಗಲು ಕಡಿಯುವಾಗ......)'– ಈ ಉದಾ.ಲ್ಲಿ, ವಾಕ್ಯ ಸಮಸ್ತವೂ ಬರಲಿರುವ 'ವಿಪ್ರಲಂಭ' (ವಿರಹ; ಶೃಂಗಾರದ ಒಂದು ಬಗೆ)ದ ವಿಷಯವನ್ನೆ ಹೇಳುತ್ತದೆ. ಹೀಗೆ, ಎಲ್ಲಿಯೂ ಅನೇಕ ತಾತ್ಪರ್ಯವಿಲ್ಲವೆಂಬುದು ಸಿದ್ಧ.

ಇನ್ನು, ಶ್ಲೇಷೆ(ಒಂದೇ ಪದಕ್ಕೆ ಹಲವು ಅರ್ಥ ಬರುವ ಸಂದರ್ಭ) ಮುಂತಾದವು ಇರುವ ವಾಕ್ಯಗಳಲ್ಲಿ, ಅರ್ಥ ಅನೇಕವಾಗಿ ಒಂದೊಂದು ಅರ್ಥದಿಂದ ಒಂದೊಂದು ರಸ ಸೂಚಿತವಾಗಬಹುದಲ್ಲವೆ? ಅಂಥಲ್ಲಿ ಯಾವುದು ರಸ ಎನ್ನೋಣ?– ಎಂಬ ಸಂದೇಹ ಬಂದೀತು. ಉದಾ:–[ಧ್ವನ್ಯಾ. : ೨–೨೫ರ ವ್ಯಾಖ್ಯೆಯಲ್ಲಿ ಉದ್ಧೃತವಾದದ್ದು] :

'ಶ್ಲಾಘ್ಯಾಶೇಷತನುಂ ಸುದರ್ಶನಕರಃ ಸರ್ವಾಂಗಲೀಲಾಜಿತ–
ಸ್ತ್ರೈಲೋಕ್ಯಾಂ ಚರಣಾರವಿಂದಲಲಿತೇನಾಕ್ರಾಂತಲೋಕೋ ಹರಿಃ ।
ಬಿಭ್ರಾಣಾಂ ಮುಖಮಿಂದುಸುಂದರರುಚಂ ಚಂದ್ರಾತ್ಮಚಕ್ಷುರ್ದಧತ್
ಸ್ಥಾನೇ ಯಾಂ ಸ್ವತನೋರಪಶ್ಯದಧಿಕಾಂ ಸಾ ರುಕ್ಮಿಣೀ ಪೋಽವತಾತ್ ॥'

[-ಶ್ರೀಕೃಷ್ಣ ರುಕ್ಮಿಣಿಯಲ್ಲಿ ತನ್ನ ದೇಹಕ್ಕಿಂತ ಮಿಗಿಲಾದ ಚೆಲುವನ್ನು ಕಂಡ : ತಾನೋ ನೋಡಲು ಚಂದವಾದ (ಅಥವಾ ಸುದರ್ಶನ ಚಕ್ರವನ್ನುಳ್ಳ) ಕೈಯುಳ್ಳವನು, ಅಷ್ಟೆ; ಆಕೆಯೋ ಅಡಿಯಿಂದ ಮುಡಿಯವರೆಗೂ ಮೆಚ್ಚುವ ರೂಪುಳ್ಳವಳು. ತಾನು ಲಲಿತವಾದ ಚರಣಾರವಿಂದಗಳಿಂದ ಮಾತ್ರ ಲೋಕವನ್ನು ಆಕರ್ಷಿಸಿದ್ದಾನೆ (ಅಥವಾ ವಾಮನಾವತಾರದಲ್ಲಿ ತನ್ನ ಪಾದಗಳಿಂದ ಮೂರು ಲೋಕವನ್ನು ಗೆದ್ದಿದ್ದಾನೆ); ಆಕೆಯಾದರೋ ತನ್ನ ಸರ್ವಾಂಗಸೌಂದರ್ಯದಿಂದ ಮೂರು ಲೋಕಗಳನ್ನೂ ಜಯಿಸಿಬಿಟ್ಟದ್ದಾಳೆ. ತನ್ನ ಕಣ್ಣು ಮಾತ್ರ ಚಂದ್ರನಂತಿದ್ದರೆ (ಅಥವಾ, ಭಗವಂತನಾಗಿ ತನ್ನ ವಾಮ ನೇತ್ರದಲ್ಲಿ ಚಂದ್ರನನ್ನು ಧರಿಸಿದ್ದರೆ) ಆಕೆಯ ಮುಖ ಸಂಪೂರ್ಣವಾಗಿ ಸುಂದರ ಚಂದ್ರಕಾಂತಿಯನ್ನು ಮೆರೆದಿದೆ – ಹೀಗೆ, ಶ್ರೀಕೃಷ್ಣನು ಯಾರನ್ನು ತನಗಿಂತ ಚೆಲುವೆಯೆಂದು ಕಂಡನೋ ಅಂಥ ರುಕ್ಮಿಣಿ ನಮ್ಮೆಲ್ಲರನ್ನು ಕಾಪಾಡಲಿ.][೧]

– ಈ ಉದಾ.ಲ್ಲಿ, ಶ್ಲೇಷಯಿದೆ. ಹೀಗೆ ಶ್ಲೇಷೆಯಿರುವ ವಾಕ್ಯಗಳಲ್ಲಿ ಅನೇಕ ತಾತ್ಪರ್ಯವಿರುವುದು ಸಹಜ. ಅಲ್ಲಿ ವಾಕ್ಯಕ್ಕೆ ಬೇರೆ ಬೇರೆಯಾದ ಅನೇಕಾರ್ಥಗಳು ಹೊರಡುತ್ತವೆಯಾದ ಕಾರಣ, ಒಂದೊಂದು ಅರ್ಥವೂ ಸ್ವತಂತ್ರವಾಗಿಯೇ ನಿಲ್ಲುವಂತೆ ಒಂದೊಂದು ಅರ್ಥಕ್ಕೂ ಒಂದೊಂದು ಸ್ವತಂತ್ರ ರಸವೇ ಇರಬಹುದಾಗಿದೆ. ಅರ್ಥಗಳೇ ಸ್ವತಂತ್ರವಾಗಿ ಬೇರಾಗುವ ಕಾರಣ, ರಸ ಬೇರಾಗುವುದು ದೋಷವಾಗುವುದಿಲ್ಲ. ಇದನ್ನು ಅನೇಕಸ್ಥಾಯಿತ್ವದೋಷ ಎಂದು ಪರಿಗಣಿಸಬಾರದು.

– ಹೀಗೆ ಮೇಲೆ ಹೇಳಿದ ಪ್ರಕಾರ, ರತ್ಯಾದಿ ಸ್ಥಾಯಿಗಳು ಎಲ್ಲೆಡೆಯಲ್ಲೂ ಅವಿರೋಧಿತವಾಗಿ ಚಿತ್ರಿತವಾಗಬಹುದಾಗಿದೆ.

ಇನ್ನೊಂದು ಅಂಶ : ವಿಶಿಷ್ಟ ವಿಭಾವಾನುಭಾವಗಳಿಂದ ಮಾತ್ರವೇ ರತ್ಯಾದಿಗಳೂ ಚಿತ್ರಿತವಾಗುತ್ತವೆಯಲ್ಲದೆ, ಆಯಾ ಪದಗಳನ್ನು ಹೆಸರಿಸುವುದರಿಂದಲ್ಲ. ಎಂದರೆ, ರತಿ ಎಂಬ ಪದವನ್ನು ಬಳಸಿದ ಮಾತ್ರಕ್ಕೆ ಅಲ್ಲಿ ರತಿ ಭಾವ ವ್ಯಕ್ತವಾಗುವುದು ಸಾಧ್ಯವಿಲ್ಲ. ಆದರೆ ಹಲವೆಡೆ ರತ್ಯಾದಿಗಳ ಚಿತ್ರಣದಲ್ಲಿ ರತಿ ಮುಂತಾದ ಪದಗಳೂ ಬಂದಿರಬಹುದು; ಅಂಥ ಕಡೆಗಳಲ್ಲಿ ಆ ರತ್ಯಾದಿ ಪದಗಳಿಂದಲೇ ಭಾವಬೋಧೆಯಾಗುವುದಿಲ್ಲ, ಬದಲು ಅಲ್ಲಿ ಬಂದಿರುವ ವಿಭಾವಾದಿಗಳಿಂದ ಮಾತ್ರ ಭಾವಬೋಧೆಯಾಗುತ್ತದೆ. ಈ ಅಂಶವನ್ನು ಮುಂದೆ ವಿಸ್ತರಿಸುತ್ತೇವೆ. (ನೋಡಿ : ೪-೪೫, ೪೭ರ ವ್ಯಾಖ್ಯೆ.)

ಟಿಪ್ಪಣಿ : ಕಾರಿಕೆಯಲ್ಲಿರುವ 'ಸ್ಥಾಯೀ ಲವಣಾಕರಃ' (ಸ್ಥಾಯಿಯು ಸಮುದ್ರದಂತೆ) ಎಂಬ ಮಾತನ್ನು ೪-೮ರ ಉಕ್ತಿಯೊಡನೆ ಹೋಲಿಸಿ. ನಾ.ಶಾ.ದಲ್ಲಿ ಸ್ಥಾಯಿಯನ್ನು 'ಪರಿವಾರ ಸಮೇತನಾದ ನೃಪತಿಯಂತೆ' ಎಂದು ವರ್ಣಿಸಲಾಗಿದೆ.

'ಭಾವಲಕ್ಷಣ'ಕ್ಕೆ ೪-೫, ಸ್ಥಾಯಿಭಾವಭೇದಗಳಿಗೆ ೪-೪೪, ಶೃಂಗಾರಾದಿಗಳ ವಿವರಣೆಗೆ ೪-೫೭ರಿಂದ ಮುಂದೆ ನೋಡಿ.

'ವಿರುದ್ಧಾವಿರುದ್ಧಭಾವಗಳಿಂದ ಅವಿಚ್ಛಿನ್ನವಾಗದಿರುವ ಮೂಲಭಾವವೇ ಸ್ಥಾಯಿ' ಎಂಬ ಸ್ಥಾಯಿ ಲಕ್ಷಣವನ್ನು ಸಮರ್ಥಿಸಲು ಧನಿಕನ ವ್ಯಾಖ್ಯೆ ಬೆಳೆದಿದೆ.

ಹೋಲಿಕೆ = ನಾ.ಶಾ. : ೭-೭ರ ಅನಂತರದ ಗದ್ಯ, ೮; ಸಾ.ದ. : ೩-೧೭೪.

## ೪೪. ಸ್ಥಾಯಿಭೇದಗಳು :

**ರತ್ಯುತ್ಸಾಹಜುಗುಪ್ಸಾಃ ಕ್ರೋಧೋ ಹಾಸಃ ಸ್ಮಯೋ ಭಯಂ ಶೋಕಃ ।**
**ಶಮಮಪಿ ಕೇಚಿತ್ಪ್ರಾಹುಃ ಪುಷ್ಟಿರ್ನಾಟ್ಯೇಷು ನೈತಸ್ಯ ॥ ೩೫ ॥**

---

೧ ಇದು ಪದ್ಯದ ತಾತ್ಪರ್ಯ ಮಾತ್ರ

ಅನು : ರತಿ, ಉತ್ಸಾಹ, ಜುಗುಪ್ಸೆ, ಕ್ರೋಧ, ಹಾಸ, [ವಿ]ಸ್ಮಯ, ಭಯ, ಶೋಕ [–ಈ ಎಂಟು ಸ್ಥಾಯಿಭಾವಗಳು]. ಕೆಲವರು [ಅಲಂಕಾರಿಕರು] 'ಶಮ'ವನ್ನು ಕೂಡ [ಈ ಎಂಟರ ಜೊತೆಯಲ್ಲಿ ಸೇರಿಸಿ, ಒಟ್ಟು ಸ್ಥಾಯಿಗಳು ಒಂಬತ್ತು ಎಂದು] ಹೇಳುತ್ತಾರೆ; [ಆದರೆ] ನಾಟ್ಯಗಳಲ್ಲಿ ಅದಕ್ಕೆ [ಎಂದರೆ, ಶಮಕ್ಕೆ] ಪುಷ್ಟಿಯಿಲ್ಲ [ಎಂದರೆ, ಶಮವು ನಾಟ್ಯಾನುಕೂಲವಾದ ಹಾಗೂ ನಾಟ್ಯದಲ್ಲಿ ಪ್ರತಿಪಾದನ ಸಾಧ್ಯವಾದ ಸ್ಥಾಯಿಯಲ್ಲ].

ವ್ಯಾಖ್ಯೆ : [ಕೆಲವು ಅಲಂಕಾರಿಕರು ರತ್ಯಾದಿ ಎಂಟು ಸ್ಥಾಯಿಗಳ ಜೊತೆಯಲ್ಲಿ ಒಂಬತ್ತನೆಯದಾಗಿ 'ಶಮ'ವನ್ನೂ ಕೂಡಿಸುತ್ತಾರೆ. 'ಶಮ'ವು ಸ್ಥಾಯಿಯಾದರೆ ಅದು 'ಶಾಂತರಸ'ದಲ್ಲಿ ಪರ್ಯವಸಾನವಾಗಬೇಕಷ್ಟೆ. ಅಂತೆಯೇ, ಶಮವನ್ನು ವಿರೋಧಿಸುವವರು ಶಾಂತರಸವನ್ನು ವಿರೋಧಿಸುವುದು ಸಹಜ.] ಶಾಂತರಸವನ್ನು ವಿರೋಧಿಸುವವರಲ್ಲಿ ಅನೇಕ ಬಗೆಯ ವಾದವುಂಟು. ಅವರಲ್ಲಿ ಕೆಲವರು ಹೇಳುತ್ತಾರೆ : ಆಚಾರ್ಯ(ಭರತ)ನು ಶಾಂತರಸವನ್ನು ಹೆಸರಿಸಿಲ್ಲ, ಅದರ ಲಕ್ಷಣವನ್ನು ಹೇಳಿಲ್ಲ ಹಾಗೂ ಅದಕ್ಕೆ ಒದಗುವ ವಿಭಾವಾದಿ ವಿವರಗಳನ್ನೂ ತಿಳಿಸಿಲ್ಲ; ಆದಕಾರಣ ಶಾಂತರಸ ಇಲ್ಲ – ಎಂದು. ಇನ್ನು ಕೆಲವರು ಶಾಂತರಸಕ್ಕೆ ವಾಸ್ತವವಾಗಿ ಅಭಾವವನ್ನೆ ಸಾಧಿಸುತ್ತಾರೆ : ರಾಗದ್ವೇಷಗಳು ಅನಾದಿಕಾಲದಿಂದಲೂ ಕಾಲಪ್ರವಾಹದಲ್ಲಿ ಕೂಡಿಕೊಂಡೇ ಬಂದಿವೆ; ಅಂತಹ ಅನಾದಿಯಾದ ರಾಗದ್ವೇಷಗಳನ್ನು ನಾಶಮಾಡುವುದು ಅಸಂಭವ; ರಾಗದ್ವೇಷಗಳು ನಾಶವಾಗದೆ ಶಾಂತ ಆವಿರ್ಭವಿಸದು; ಆದ್ದರಿಂದ ಶಾಂತರಸ ಅಸಂಭವ – ಎಂಬುದು ಎರಡನೆಯ ವಾದ. [ಎಂದರೆ, ಮೊದಲನೆಯ ಪಂಗಡದವರ ಅಭಿಪ್ರಾಯದಂತೆ ಸಲಕ್ಷಣವಾದ ಕಾವ್ಯಾದಿಗಳಲ್ಲಿ ಶಾಂತ ಇಲ್ಲ; ಎರಡನೆಯ ಅಭಿಪ್ರಾಯದಂತೆ, ಜೀವನದಲ್ಲೆ ಶಾಂತ ಅಸಂಭವವಾಗಿರುವ ಕಾರಣ ಕಾವ್ಯಾದಿಗಳಲ್ಲೂ ಅಸಂಭವ.] ಇನ್ನೂ ಕೆಲವರು ಶಾಂತವನ್ನು ವೀರಬೀಭತ್ಸಾದಿ ರಸಗಳಲ್ಲಿ ಅಂತರ್ಭಾವಗೊಳಿಸುತ್ತಾರೆ. (ವೀರಕ್ಕೆ ೪–೭೯, ಬೀಭತ್ಸಕ್ಕೆ ೪–೮೦ ನೋಡಿ.) ಹೀಗೆ ಶಾಂತ ರಸವನ್ನು ವಿರೋಧಿಸುವವರು ಶಮವೆಂಬ ಸ್ಥಾಯಿಯನ್ನು ಒಪ್ಪುವುದಿಲ್ಲ. ಅದು ಹೇಗೇ ಇರಲಿ, ಅಭಿನಯಾತ್ಮಕವಾದ ನಾಟ್ಯಾದಿಗಳಲ್ಲಂತೂ ಶಮವೆಂಬ ಸ್ಥಾಯಿಯನ್ನು ನಾವು ಸರ್ವಥಾ ನಿಷೇಧಿಸುತ್ತೇವೆ. ಎಲ್ಲ ವ್ಯಾಪಾರಗಳೂ ಕರಗಿ ಇಲ್ಲವಾಗಿರುವ ಒಂದು ವಿಶಿಷ್ಟ ಭಾವಸ್ಥಿತಿ ಶಮ; ಅಂಥ ಸ್ಥಿತಿಯನ್ನು [ಚತುರ್ವಿಧಾಭಿನಯಗಳಿಂದ] ಅಭಿನಯಿಸಿ ತೋರಿಸುವುದು ಅಸಾಧ್ಯ; ಅಭಿನಯಕ್ಕೆ ಹೊರಗಾದ ಶಮ, ಸಹಜವಾಗಿ ನಾಟ್ಯಾದಿಗಳಲ್ಲೂ ಹೊರಗಾಗಲೇಬೇಕು.

ಕೆಲವರು ನಾಗಾನಂದಾದಿ ರೂಪಕಗಳಲ್ಲಿ ಶಮವು ಸ್ಥಾಯಿಯಾಗಿರುವುದೆಂದು ಹೇಳುತ್ತಾರಷ್ಟೆ; ಅದು ತಪ್ಪು ಕಲ್ಪನೆ. ಏಕೆಂದರೆ – ನಾಗಾನಂದದ ಆದಿಯಿಂದ ಅಂತ್ಯದವರೆಗೂ ಜೀಮೂತವಾಹನನು ಮಲಯವತಿಯಲ್ಲಿ ಅನುರಾಗವಿಟ್ಟಿರುವುದು ತೋರುತ್ತದೆ; ಅಂತ್ಯದಲ್ಲಿ ಆತನಿಗೆ ವಿದ್ಯಾಧರ ಚಕ್ರವರ್ತಿ ಪದವಿಯೂ ಪ್ರಾಪ್ತವಾಗುತ್ತದೆ. ಈ ಎರಡು ಅಂಶಗಳೂ ಶಮಕ್ಕೆ ವಿರೋಧವಾದವು. ಜೀಮೂತವಾಹನ ಅನುಕಾರ್ಯನಾಗಿರುವಾಗ, ಆ ಒಬ್ಬನೇ ಅನುಕಾರ್ಯನಲ್ಲಿ ವಿಷಯಸುಖಾಸಕ್ತಿ ಹಾಗೂ ಅದಕ್ಕೆ ವಿರುದ್ಧವಾದ ವಿಷಯಸುಖದ ಅನಾಸಕ್ತಿ ಈ ಎರಡೂ ಒಮ್ಮೆಲೇ ಉಂಟಾಗುವುದು ಅಸಾಧ್ಯ. ಆದ್ದರಿಂದ, ಅಲ್ಲಿ 'ದಯಾವೀರ' (ವೀರರಸದ ಒಂದು ಭೇದ)ಕ್ಕೆ ಕಾರಣವಾಗುವ 'ಉತ್ಸಾಹ'ವೇ ಸ್ಥಾಯಿ. ಹೀಗೆ ಅಲ್ಲಿ 'ಉತ್ಸಾಹ'ವೇ ಸ್ಥಾಯಿಯೆಂದು ಪರಿಗಣಿಸಿದರೆ, ಆಗ ಮಲಯವತಿಯ ಅನುರಾಗದ 'ಶೃಂಗಾರ' ಈ 'ಉತ್ಸಾಹ'ದ ಅಂಗವಾಗುತ್ತದೆ; ಕೊನೆಯಲ್ಲಿ ಆತನಿಗೆ ದೊರೆಯುವ ಚಕ್ರವರ್ತಿಪದವಿ 'ಉತ್ಸಾಹ'ಕ್ಕೆ ತಕ್ಕ ಫಲವಾಗುತ್ತದೆ. ಹೀಗೆ ಪರಿಗಣಿಸಿದಾಗ ಸಮಗ್ರರೂಪಕದಲ್ಲಿ ಎಲ್ಲೂ ವಿರೋಧಾಂಶ ತೋರುವುದಿಲ್ಲ; ಎಲ್ಲೆಡೆಯಲ್ಲೂ ಈಪ್ಸಿತವಾದದ್ದ ನಡೆದಿದೆಯೆಂಬುದು ಸ್ಪಷ್ಟವಾಗುತ್ತದೆ. ಮೇಲಾಗಿ, ಪರೋಪಕಾರದಲ್ಲೆ ಪ್ರವೃತ್ತನಾದ ವಿಜಿಗೀಷುವಿಗೆ ಅತ್ಯವಶ್ಯವಾಗಿ ತಕ್ಕ ಫಲ ದೊರೆಯುವುದೆಂಬ ಅಂಶವನ್ನು ಹಿಂದೆಯೇ ಹೇಳಿದ್ದೇವೆ. (ನೋಡಿ : ೨–೫೮ರ ವ್ಯಾಖ್ಯೆ.)

ಆದಕಾರಣ ಸ್ಥಾಯಿಗಳು ಎಂಟೇ ಸರಿ.

ಇಲ್ಲಿ ಮತ್ತೊಂದು ಸಂದೇಹ ಬರಬಹುದು : ಸ್ಥಾಯಿಗಳು ಎಂಟೇ ಎಂದು ಒತ್ತಿ ಹೇಳುತ್ತೀರಿ; ಆದರೆ ಇನ್ನು ಕೆಲವರು ನಿರ್ವೇದಾದಿಗಳೂ ರಸಗಳಾಗಬಲ್ಲವು ಎನ್ನುತ್ತಾರಲ್ಲವೆ? ಉದಾಹರಣೆಗೆ – [ರುದ್ರಟನ ಕಾವ್ಯಾಲಂಕಾರ : ೧೨–೪] :

'ರಸನಾದ್ರಸತ್ವಮೇಷಾಂ ಮಧುರಾದೀನಾಮಿವೋಕ್ತಮಾಚಾರ್ಯೈಃ।
ನಿರ್ವೇದಾದಿಷ್ವಪಿ ತತ್ರ್ಕಾಮಮಸ್ತೀತಿ ತೇಽಪಿ ರಸಾಃ ॥'

[ಮಧುರಾದಿಗಳಂತೆ ಸವಿಯುಳ್ಳುದಾಗಿ 'ರಸ' ಎನ್ನಲಾಗುತ್ತದೆ ಎಂದು ಆಚಾರ್ಯ ಹೇಳಿದ್ದಾನೆ; ನಿರ್ವೇದಾದಿಗಳಲ್ಲೂ ಆ ಸವಿ ವಿಶೇಷವಾಗಿರುವುದರಿಂದ ಅವೂ ರಸಗಳೇ.]

– ಈ ಮೇಲಿನ ಹೇಳಿಕೆಯಂತೆ, ಕೆಲವರ ಅಭಿಪ್ರಾಯದಲ್ಲಿ ರಸಗಳು ಎಂಟು ಮಾತ್ರವಲ್ಲ, ಇನ್ನೂ ಹಲವಿವೆ; ಅವುಗಳಿಗೆ ಸ್ಥಾಯಿಗಳ ಕಲ್ಪನೆಯೂ ಆಗಿದೆ. ಹೀಗಿರುವಾಗ ರಸಗಳು ಎಂಟೇ ಎಂದು ಒತ್ತಿ ಹೇಳಿರುವ ಕಾರಣವೇನು?

– ಈ ಸಂದೇಹವನ್ನು ಮುಂದಿನ ಕಾರಿಕೆಯಲ್ಲಿ ನಿವಾರಿಸಲಾಗುತ್ತದೆ.

ಟಿಪ್ಪಣಿ : ನಾ.ಶಾ.ದ ಪ್ರಕಾರ ರಸಗಳು ಎಂಟು ಮಾತ್ರ. ಶಾಂತರಸದ ಕಲ್ಪನೆ, ಅದರ ಬೆಳವಣಿಗೆ ಹಾಗೂ ಶಾಂತವನ್ನು ಕುರಿತ ವಾದವಿವಾದಗಳ ಪರಿಚಯಕ್ಕೆ ನೋಡಿ : ಭಾರತೀಯ ಕಾವ್ಯಮೀಮಾಂಸೆ – ೨೪ನೆಯ ಅಧ್ಯಾಯ (ಶಾಂತರಸ); ರಸಸಂಖ್ಯೆಯನ್ನು ಕುರಿತ ವಾದವಿವಾದಗಳಿಗೆ : ಅದೇ – ೨೩ನೆಯ ಅಧ್ಯಾಯ (ರಸಪ್ರಭೇದಗಳು).

'ಶಮ'ಕ್ಕೆ ಹಲವರು 'ನಿರ್ವೇದ' ಎನ್ನುತ್ತಾರೆ. ವ್ಯಭಿಚಾರಿಗಳಲ್ಲಿ ಪ್ರಥಮವಾದ 'ನಿರ್ವೇದ'ವೇ (೪–೧೦) 'ಶಾಂತ'ದ ಸ್ಥಾಯಿಯೆಂದು ಹಲವರ ಅಭಿಪ್ರಾಯ.

ಮುಂದಿನ ಕಾರಿಕೆಗೆ ಪ್ರಸ್ತಾವನೆಯಾಗಿ, ಈ ವ್ಯಾಖ್ಯೆಯ ಅಂತ್ಯದಲ್ಲಿ ಧನಿಕ ಒಂದು ಸಂಶಯ ಎತ್ತಿಕೊಂಡಿದ್ದಾನೆ.

ಹೋಲಿಕೆ = ನಾ.ಶಾ. : ೬–೧೭; ಸಾ.ದ. : ೩–೧೮೨; ಪ್ರತಾಪ : ೪–೧.

ಛಂದಸ್ಸು : ಆರ್ಯಾ.

## ೪೫. ನಿರ್ವೇದಾದಿಗಳ ಅಸ್ಥಾಯಿತ್ವ :

ನಿರ್ವೇದಾದಿರತಾದ್ರೂಪ್ಯಾದಸ್ಥಾಯೀ ಸ್ವದತೇ ಕಥಮ್ ।
ವೈರಸ್ಯಾಯೈವ ತತ್ಪೋಷಸ್ತೇನಾಷ್ಟೌ ಸ್ಥಾಯಿನೋ ಮತಾಃ ॥೩೬ ॥

ಅನು : [ವಿರುದ್ಧಾವಿರುದ್ಧ ಭಾವಗಳೆಲ್ಲವನ್ನೂ ತನ್ನೊಳಗೆ ಮಾಡಿಕೊಳ್ಳುವಂಥ ಭಾವವೇ ಸ್ಥಾಯಿ; ಹೀಗಿರುವಾಗ] ಅದರ ರೂಪವನ್ನು ಹೊಂದಿಲ್ಲವಾದ ಕಾರಣ [ಎಂದರೆ, ಉಳಿದ ಭಾವಗಳನ್ನು ತನ್ನೊಳಗೆ ಅಳವಡಿಸಿಕೊಳ್ಳುವ ಶಕ್ತಿಯಿಲ್ಲವಾದ ಕಾರಣ] ನಿರ್ವೇದಾದಿ [ವ್ಯಭಿಚಾರೀಭಾವ]ಗಳು ಸ್ಥಾಯಿಗಳಲ್ಲ; [ಸ್ಥಾಯಿಗಳು ಮಾತ್ರವೇ ಸವಿಯನ್ನು ಕೊಡಬಲ್ಲವು ಹಾಗೂ ರಸತ್ವ ಪಡೆಯಬಲ್ಲವು ಎಂದಾಗ, ಸ್ಥಾಯಿಗಳಲ್ಲದ ನಿರ್ವೇದಾದಿಗಳು] ಹೇಗೆ ಸವಿಯಾಗುತ್ತವೆ? [ಒಮ್ಮೆ, ನಾಟ್ಯಾದಿಗಳಲ್ಲಿ] ಅದನ್ನೇ [ಎಂದರೆ, ನಿರ್ವೇದ ಮುಂತಾದ ಅಸ್ಥಾಯಿಯನ್ನೆ] ಪುಷ್ಟೀಕರಿಸಿದರೆ [ಅಂಥ ಪುಷ್ಟೀಕರಣ] ವಿರಸಕ್ಕೆ ಮಾತ್ರವೇ [ಕಾರಣವಾಗುತ್ತದೆ]. ಆದ್ದರಿಂದ [ಕೇವಲ] ಎಂಟು ಸ್ಥಾಯಿಗಳೆಂದು ಅಭಿಪ್ರಾಯ.

ವ್ಯಾಖ್ಯೆ : [ವಿರುದ್ಧವಾದ ಅಥವಾ ಅವಿರುದ್ಧವಾದ ಇತರ ಭಾವಗಳಿಂದ ಕಡಿದುಹೋಗದಂಥ ಮುಖ್ಯಭಾವವೇ ಸ್ಥಾಯಿ.] ನಿರ್ವೇದಾದಿಗಳು ವಿರುದ್ಧಾವಿರುದ್ಧಗಳಾದ ಇತರ ಭಾವಗಳಿಂದ ಕಡಿದು ಹೋಗುತ್ತವೆಯಲ್ಲದೆ ಅವಕ್ಕೆ ಅಖಂಡವಾಗಿ ಮುಂದುವರಿಯುವ ಶಕ್ತಿಯಿಲ್ಲ. ಆದಕಾರಣ [ಅವು ಸ್ಥಾಯಿಲಕ್ಷಣಕ್ಕೆ ಹೊಂದುವುದಿಲ್ಲವಾಗಿ] ಅವು ಸ್ಥಾಯಿಗಳಲ್ಲ. [ಈ ಅಂಶವೇ ಕಾರಿಕೆಯ 'ಅತಾದ್ರೂಪ್ಯಾತ್' ಎಂಬ ಮಾತಿನಲ್ಲಿ

ಸೂಚಿತವಾಗಿದೆ.] ಅಂತೆಯೇ, ಒಮ್ಮೆ ನಿರ್ವೇದಾದಿಗಳನ್ನು ಅವುಗಳಿಗೆ ಹೊಂದುವ 'ಚಿಂತೆ' (೪–೧೯) ಮುಂತಾದ ವ್ಯಭಿಚಾರಿಗಳಿಂದ ಕೂಡಿದ್ದಾಗಿ [ಸ್ಥಾಯಿಯಂತೆ] ಪುಷ್ಟೀಕರಿಸಿ ಚಿತ್ರಿಸಿದರೆ ಅದರಿಂದ ವಿರಸವೇ ಉಂಟಾಗುತ್ತದೆ.

[ನಿರ್ವೇದಾದಿಗಳು ಸ್ಥಾಯಿಗಳಲ್ಲ ಎನ್ನುವಾಗ ಕೆಲವರು ಹೀಗೂ ವಾದಿಸುತ್ತಾರೆ:] ನಿರ್ವೇದಾದಿಗಳು ನಿಷ್ಫಲಾವಸಾನವುಳ್ಳವು. [ಎಂದರೆ, ನಿರ್ವೇದಾದಿ ಭಾವಗಳಿಂದ ಧರ್ಮಾರ್ಥಕಾಮಾದಿ ಫಲಗಳು ಯಾವುವೂ ಉಂಟಾಗಲಾರವು; ಅವು ನಿಷ್ಫಲವಾಗಿ ಕೊನೆಗೊಳ್ಳುತ್ತವೆ.] ಆದಕಾರಣ ಅವು ಸ್ಥಾಯಿಗಳಲ್ಲ – ಎಂದು. [ಹಾಗೆ ವಾದಿಸುವವರ ದೃಷ್ಟಿಯಲ್ಲಿ, 'ವಿರುದ್ಧಾವಿರುದ್ಧಭಾವಗಳಿಂದ ತಿರಸ್ಕೃತವಾಗದಿರುವುದು' ಸ್ಥಾಯಿಲಕ್ಷಣವಲ್ಲ; ಬದಲು 'ಫಲಾವಸಾನವುಳ್ಳ ಭಾವವೇ ಸ್ಥಾಯಿ' ಎಂಬುದು ಸ್ಥಾಯಿಲಕ್ಷಣವಾಗುತ್ತದೆ.] ಈ ವಾದ ತಪ್ಪು. [ಏಕೆಂದರೆ – ಫಲಾವಸಾನತ್ವವುಳ್ಳುದೇ ಸ್ಥಾಯಿ ಎನ್ನುವುದಾದರೆ] ಹಾಸಾದಿ ಭಾವಗಳೂ ಅಸ್ಥಾಯಿಗಳಾಗುತ್ತವೆ. [ಕಾರಣ: ರತ್ಯಾದಿಗಳಂತೆ ಹಾಸಾದಿಗಳು ಫಲಾವಸಾನವುಳ್ಳವಲ್ಲ; ಹಾಸಭಾವದಿಂದ ಧರ್ಮಾರ್ಥಕಾಮಾದಿ ತ್ರಿವರ್ಗಗಳು ಸಿದ್ಧಿಸುವುದಿಲ್ಲ. (ನೋಡಿ: ೧–೩೭ರ ವ್ಯಾಖ್ಯೆ)] – ಹೀಗೆ, ಸ್ಥಾಯಿಲಕ್ಷಣವನ್ನು ಗುರುತಿಸುವಲ್ಲಿ ಫಲಾವಸಾನತ್ವವನ್ನು ಮಾನವಾಗಿಟ್ಟುಕೊಳ್ಳುವಂತಿಲ್ಲ. ಆ ಮಾನ ಇಲ್ಲಿ ನಿಷ್ಪ್ರಯೋಜಕ. ಇನ್ನೂ ಹೇಳುವುದಾದರೆ – ನಿರ್ವೇದಾದಿಗಳಿಗೆ ಕೂಡ ಪರಂಪರೆಯ ಮೂಲಕ ಫಲತ್ವ ಇರುವುದನ್ನು ಸಿದ್ಧಮಾಡಿಕೊಡಬಹುದು. [ನಿರ್ವೇದಾದಿಗಳು ಯಾವುದಾದರೊಂದು ಸ್ಥಾಯಿಯನ್ನು ಪೋಷಿಸುತ್ತವೆ; ಆ ಸ್ಥಾಯಿಗೆ ಫಲವುಂಟು; ಹೀಗೆ ನಿರ್ವೇದಾದಿಗಳಿಗೆ ಸ್ಥಾಯಿಯ ಮೂಲಕ ಪಾರಂಪರ್ಯವಾಗಿ ಫಲತ್ವ ಹೇಳಬಹುದು.]

ಆದಕಾರಣ, 'ವಿರುದ್ಧಾವಿರುದ್ಧಭಾವಗಳಿಂದ ತಿರಸ್ಕೃತವಾಗದಿರುವುದೇ ಸ್ಥಾಯಿ' ಎಂಬುದು ಸರಿಯಾದ ಲಕ್ಷಣ. ನಿರ್ವೇದಾದಿಗಳು ಆ ಲಕ್ಷಣಕ್ಕೆ ಹೊಂದುವುದಿಲ್ಲ; ಆದ್ದರಿಂದ ಅವು ಸ್ಥಾಯಿಗಳಲ್ಲ. ಸ್ಥಾಯಿಗಳಲ್ಲವಾದ್ದರಿಂದ ನಿರ್ವೇದಾದಿಗಳಿಗೆ ರಸತ್ವವೂ ಇಲ್ಲ. ಅವಕ್ಕೆ 'ಅಸ್ಥಾಯಿತ್ವ'ವಿರುವುದರಿಂದಲೇ 'ಅರಸತೆ'ಯೂ ಸಿದ್ಧವಾಗುತ್ತದೆ. [ಇಲ್ಲಿಗೆ, ಹಿಂದಿನ ವ್ಯಾಖ್ಯೆಯ ಅಂತ್ಯದಲ್ಲಿ ಎತ್ತಿಕೊಂಡ ಸಂದೇಹಕ್ಕೆ – ಸ್ಥಾಯಿಗಳು ಎಂಟೇ ಎನ್ನಲು ಕಾರಣವೇನು ಎಂಬುದಕ್ಕೆ – ಉತ್ತರ ಕೊಟ್ಟಾಯಿತು.]

[ಮೇಲಿನ ಕಾರಿಕೆಯನ್ನು ವಿವರಿಸುವ ವ್ಯಾಖ್ಯಾಭಾಗ ಇಲ್ಲಿಗೆ ಮುಗಿಯಿತು. ಆದರೆ, ಇದೇ ಎಡೆಯಲ್ಲಿ ಧನಿಕ ಮತ್ತೊಂದು ಮೂಲ ಪ್ರಶ್ನೆಯನ್ನೆತ್ತಿಕೊಳ್ಳುತ್ತಾನೆ. ಸ್ಥಾಯಿ ಹಾಗೂ ರಸಗಳನ್ನು ನಿರ್ಧರಿಸುವ ವೇಳೆಯಲ್ಲಿ ಈ ಪ್ರಶ್ನೆ ಸಹಜವಾಗಿ ಏಳುತ್ತದೆ : ಕಾವ್ಯವು ಭಾವವನ್ನು ಹೇಗೆ ಹೊರಡಿಸುತ್ತದೆ? (ಎಂದರೆ, ಕಾವ್ಯದಲ್ಲಿ ಭಾವ ಹೇಗೆ ಪ್ರತೀತವಾಗುತ್ತದೆ – ಅಥವಾ, ಅದನ್ನೆ ಬೇರೆ ಮಾತಿನಲ್ಲಿ ಹೇಳುವುದಾದರೆ, ಭಾವಾದಿಗಳಿಗೂ ಕಾವ್ಯಕ್ಕೂ ಇರುವ ಸಂಬಂಧ ಯಾವುದು?) – ಎಂಬುದೇ ಆ ಪ್ರಶ್ನೆ. ಅದಕ್ಕೆ ಉತ್ತರ ಕೊಡುವ ಆಲಂಕಾರಿಕರಲ್ಲಿ ಭಿನ್ನಾಭಿಪ್ರಾಯವುಂಟು.

ಭಾಷೆಯೇ ಕಾವ್ಯದ ಮಾಧ್ಯಮ. ಕಾವ್ಯವು ಭಾಷೆಯ ಮೂಲಕ ಭಾವವನ್ನು ಹೊರಡಿಸುತ್ತದೆ. ಭಾಷೆಯಲ್ಲಿ ಶಬ್ದವೇ ಅರ್ಥದ ಮೂಲಮಾನ. ಶಬ್ದದಿಂದ ಅರ್ಥ ಹೊರಡುತ್ತದೆ. ಎಂದರೆ, ಯಾವುದೊಂದು ಶಬ್ದಕ್ಕೆ ಸಂಕೇತಬಲದಿಂದ ಒಂದು ವಿಶಿಷ್ಟ ಅರ್ಥವನ್ನು ಸ್ಫುರಿಸುವ ಶಕ್ತಿಯಿರುತ್ತದೆ. ಈ 'ಶಬ್ದಶಕ್ತಿ'ಗೆ 'ಶಬ್ದವೃತ್ತಿ' ಎನ್ನುತ್ತಾರೆ. ಒಂದು ಶಬ್ದಕ್ಕೆ ಇಂಥ 'ಶಕ್ತಿ' ಅಥವಾ 'ವೃತ್ತಿ' ಹಲವು ಇರುತ್ತದೆಂದು ಅಭಿಪ್ರಾಯವುಂಟು. ಅವುಗಳಲ್ಲಿ –

೧. ಅಭಿಧಾವೃತ್ತಿ : 'ಹಸು' ಎಂಬ ಒಂದು ಶಬ್ದವನ್ನು ಉಚ್ಚರಿಸಿದಾಗ ಅದರಿಂದ ಒಂದು ವಿಶಿಷ್ಟಪ್ರಾಣಿಯ ಅರ್ಥ ಸ್ಫುರಿಸುತ್ತದೆ. ಹೀಗೆ ಭಾಷೆಯ ಎಲ್ಲ ಶಬ್ದಗಳಿಗೂ ಸಂಕೇತದಿಂದ ಬಂದಿರುವ ಒಂದೊಂದು ಅರ್ಥವುಂಟು. ಆಯಾ ಭಾಷೆಯ ಕೋಶಗಳಿಂದ, ಒಂದೊಂದು ಶಬ್ದಕ್ಕಿರುವ ಅಂಥ ಅರ್ಥಗಳನ್ನು ನಾವು ತಿಳಿದುಕೊಳ್ಳಬಹುದು. ಭಾಷೆ ಬಲ್ಲವನಿಗೆ ಒಂದು ಶಬ್ದವನ್ನು ಕೇಳಿದೊಡನೆ ಥಟ್ಟನೆ ಹೊಳೆಯುವ ಇಂಥ ಅರ್ಥಕ್ಕೆ 'ಮುಖ್ಯಾರ್ಥ' ಅಥವಾ 'ವಾಚ್ಯಾರ್ಥ' ಅಥವಾ 'ಅಭಿಧೇಯಾರ್ಥ' ಎನ್ನುತ್ತಾರೆ. ಇಲ್ಲಿ, ಶಬ್ದ 'ವಾಚಕ'ವೂ ಅರ್ಥ 'ವಾಚ್ಯ'ವೂ ಆಗಿರುತ್ತದೆ. ಅಂತೆಯೇ, ಇಲ್ಲಿನ ಶಬ್ದಗಳ ಸಂಬಂಧಕ್ಕೆ 'ವಾಚ್ಯವಾಚಕ' ಸಂಬಂಧ ಎನ್ನುತ್ತಾರೆ. (ಇನ್ನು ವಾಕ್ಯ : ಹಲವು ಪದಗಳು ಕೂಡಿ ವಾಕ್ಯವಾಗುತ್ತದೆ. ಆ ಪದಗಳ ಅನ್ವಯ ಅಥವಾ ಸಂಸರ್ಗದಿಂದ ವಾಕ್ಯದ ಅರ್ಥ

ಹೊರಡುತ್ತವೆ. ಶಬ್ದಕ್ಕೆ ಅರ್ಥ ಕೊಡುವ ಶಕ್ತಿಯೊಂದಿರುವಂತೆ ವಾಕ್ಯಕ್ಕೂ ಒಂದು ಶಕ್ತಿ ಅಥವಾ ವೃತ್ತಿ ಇರುತ್ತದೆ. ಅದೇ 'ತಾತ್ಪರ್ಯವೃತ್ತಿ'; ಒಟ್ಟಿನ ಅರ್ಥ ಹೊರಡಿಸುವ ಶಕ್ತಿ.)೧

೨. ಲಕ್ಷಣಾವೃತ್ತಿ : 'ಊರಿಗೆ ಊರೇ ಜಾತ್ರೆಗೆ ಹೊರಟಿತ್ತು' ಎಂಬ ಒಂದು ಮಾತನ್ನು ನೋಡಬಹುದು. ಊರು ಜಾತ್ರೆಗೆ ಹೊರಡುವುದು ಅಸಾಧ್ಯ. ಆದಕಾರಣ 'ಊರು' ಎಂಬ ಮಾತಿಗೆ ನಾವು 'ಊರಿನ ಜನ' ಎಂದು ಅರ್ಥಯಿಸುತ್ತೇವೆ. ಇಲ್ಲಿ, 'ಊರು' ಎಂಬ ಪದದ ವಾಚ್ಯಾರ್ಥ (ಮುಖ್ಯಾರ್ಥ, ಅಭಿಧೇಯಾರ್ಥ) ತಿರಸ್ಕೃತವಾಯಿತು; ವಾಚ್ಯಾರ್ಥಕ್ಕಿಂತ ಬೇರೆಯಾದ ಮತ್ತೊಂದು ಅರ್ಥ ಅಂಗೀಕೃತವಾಯಿತು. ಆದರೆ ಅಂಗೀಕೃತವಾದ ಮತ್ತೊಂದು ಅರ್ಥಕ್ಕೂ ಪದದ ವಾಚ್ಯಾರ್ಥಕ್ಕೂ ಸಮೀಪದ ಸಂಬಂಧವಿರುತ್ತದೆ, ಊರಿಗೂ ಊರಿನಲ್ಲಿರುವ ಜನಕ್ಕೂ ಸಮೀಪದ ಸಂಬಂಧವಿರುವಂತೆ. ಹೀಗೆ, ಸಕಾರಣವಾಗಿ ತನ್ನ ಮುಖ್ಯಾರ್ಥಕ್ಕಿಂತ ಬೇರೆಯಾದ ಮತ್ತೊಂದು ಅರ್ಥವನ್ನು ಸ್ಫುರಿಸುವ ಶಕ್ತಿಯೂ ಪದಕ್ಕಿದೆ. ಇಂಥ ಶಕ್ತಿಯನ್ನೆ 'ಲಕ್ಷಣಾವೃತ್ತಿ' ಎನ್ನುತ್ತಾರೆ. ಇಂಥಲ್ಲಿ ಅರ್ಥಕ್ಕೂ ಪದಕ್ಕೂ ಇರುವ ಸಂಬಂಧ 'ಲಕ್ಷ್ಯಲಕ್ಷಕ'. ಮೇಲಿನ ಉದಾಹರಣೆಯಲ್ಲಿ ಪದದ ವಾಚ್ಯಾರ್ಥಕ್ಕೂ ಹಾಗೂ ಲಕ್ಷ್ಯಾರ್ಥಕ್ಕೂ (ಊರು ಹಾಗೂ ಊರಿನ ಜನ) ಸಂಬಂಧವುಂಟು; ಇಂಥ ಲಕ್ಷಣೆಗೆ 'ಸಂಬಂಧಮೂಲಾಲಕ್ಷಣಾ' ಅಥವಾ 'ಶುದ್ಧಾ' ಎನ್ನುತ್ತಾರೆ. ಅದೇ 'ಅವನ ಬುದ್ಧಿ ಪಾದರಸ' ಎಂಬಂತಹ ಲಕ್ಷಣೆಯಲ್ಲಿ 'ಪಾದರಸ'ದ ವಾಚ್ಯಾರ್ಥಕ್ಕೂ ಲಕ್ಷ್ಯಾರ್ಥಕ್ಕೂ ಗುಣಸಾದೃಶ್ಯವಿರುತ್ತವೆ. ಇಂಥದನ್ನು 'ಸಾದೃಶ್ಯಮೂಲಾಲಕ್ಷಣಾ' ಅಥವಾ 'ಗೌಣೀ' ಎನ್ನುತ್ತಾರೆ. ಸಂಬಂಧಮೂಲವಾದ ಲಕ್ಷಣೆಯಲ್ಲಿ ಎರಡು ಮುಖ್ಯ ಭೇದಗಳಿವೆ : ಒಂದು ಜಹಲ್ಲಕ್ಷಣಾ, ಇನ್ನೊಂದು ಅಜಹಲ್ಲಕ್ಷಣಾ. 'ಊರು' ಎಂಬ ಪದಕ್ಕೆ 'ಊರಿನ ಜನ' ಎಂದು ಅರ್ಥಮಾಡಬೇಕಾದ ಮೇಲಿನ ಪ್ರಸಂಗದಲ್ಲಿ ಪದದ ವಾಚ್ಯಾರ್ಥ ಸಂಪೂರ್ಣ ತಿರಸ್ಕೃತವಾಗಿದೆ; ಇದು 'ಜಹಲ್ಲಕ್ಷಣಾ'. 'ಗಾಡಿ ಸಾಗಿತು' ಎಂಬ ಮಾತನ್ನು ನೋಡಬಹುದು. ಇಲ್ಲಿ ಸಾಗಿದುದು ಗಾಡಿಯನ್ನು ಹೊತ್ತ ಎತ್ತು. ಆದರೆ ಎತ್ತಿನ ಮೂಲಕವಾಗಿ ಗಾಡಿಯೂ ಸಾಗಿದ್ದು ನಿಜ. ಇಂಥಲ್ಲಿ ವಾಚ್ಯಾರ್ಥ ಪೂರ್ಣ ತಿರಸ್ಕೃತವಾಗುವುದಿಲ್ಲ; ಇದು 'ಅಜಹಲ್ಲಕ್ಷಣಾ'. ಪುನಃ ಈ ಒಂದೊಂದರಲ್ಲೂ ಭೇದ ಒಳಭೇದಗಳನ್ನು ಗುರುತಿಸುತ್ತಾರೆ. ಪ್ರಸ್ತುತದಲ್ಲಿ ನಮಗೆ ಇಷ್ಟು ಸಾಕು.

೩. ವ್ಯಂಜನಾವೃತ್ತಿ : 'ಅವನೊಂದು ಸಿಂಹ' ಎಂಬ ಮಾತನ್ನು ನೋಡೋಣ. ಇಲ್ಲಿ ವಾಚ್ಯಾರ್ಥಕ್ಕೆ ಬಾಧೆ ಬರುವುದರಿಂದ ನಾವು 'ಸಿಂಹ' ಎಂಬ ಪದಕ್ಕೆ ಲಕ್ಷಣಾವೃತ್ತಿಯ ಬಲದಿಂದ 'ವೀರ' ಎಂದು ಅರ್ಥಮಾಡುತ್ತೇವೆ. 'ಸಿಂಹ' ಎಂಬುದಕ್ಕೆ 'ವೀರ' ಎಂಬ ಅರ್ಥ ಕೊಟ್ಟೊಡನೆಯೇ ಲಕ್ಷಣೆಯ ಕಾರ್ಯ ಮುಗಿಯಿತು. ಆದರೆ, 'ಸಿಂಹ' ಎಂಬ ಪದ 'ವೀರ' ಎಂಬುದನ್ನಷ್ಟೆ ತಿಳಿಸಿ ವಿಶ್ರಾಂತವಾಗುವುದಿಲ್ಲ. ಅದು ಸಿಂಹದ ಗಾಂಭೀರ್ಯ ಪರಾಕ್ರಮ ಗಳೆಲ್ಲವುದರ ಸಮಗ್ರ ಚಿತ್ರವನ್ನು ತಂದುಕೊಟ್ಟು, ಕೇಳುವವನ ಅನುಭವ ಹಾಗೂ ಕಲ್ಪನೆಗಳ ವಿಸ್ತಾರಕ್ಕೆ ತಕ್ಕಂತೆ, ತನ್ನ ಅರ್ಥವನ್ನು ಪ್ರಸರಿಸುತ್ತ ಹೋಗುತ್ತದೆ. ವಾಚ್ಯಾರ್ಥವಲ್ಲದ ಬೇರೊಂದು ಅರ್ಥವನ್ನು ಸ್ಫುರಿಸುವ ಶಕ್ತಿ 'ಲಕ್ಷಣೆ'ಯಾದರೆ, ಆ ಅನ್ಯಾರ್ಥದ ಯಥೋಚಿತ ವಿಸ್ತಾರಕ್ಕೆ ಕಾರಣವಾಗುವ ಮತ್ತೊಂದು ಶಕ್ತಿ 'ವ್ಯಂಜನೆ'. ಅದನ್ನೆ 'ವ್ಯಂಜನಾವೃತ್ತಿ' ಎನ್ನುತ್ತಾರೆ. ಇಲ್ಲಿ ವ್ಯಂಜಿತವಾದ ಅರ್ಥಕ್ಕೂ ಮೂಲಪದಕ್ಕೂ ಇರುವ ಸಂಬಂಧ 'ವ್ಯಂಗ್ಯವ್ಯಂಜಕ'. ಈ ವ್ಯಂಗ್ಯಾರ್ಥವುಳ್ಳುದಕ್ಕೇ 'ಧ್ವನಿ' ಎನ್ನುತ್ತಾರೆ.

---

೧ ವಾಕ್ಯಾರ್ಥ ಸಿದ್ಧಿಯನ್ನು ಹೇಳುವ ಮೀಮಾಂಸಕರಲ್ಲಿ ಎರಡು ಮತವಿದೆ : ಕುಮಾರಿಲಭಟ್ಟ ಮೊದಲಾದವರ ಮತದಂತೆ – ಶಬ್ದದ ಅಭಿಧಾಶಕ್ತಿ ತನ್ನ ಸಂಕೇತಿತಾರ್ಥವನ್ನು ಬೋಧಿಸಿ ವಿಶ್ರಮಿಸುತ್ತದೆ; ಅನಂತರ ಆಕಾಂಕ್ಷೆ ಯೋಗ್ಯತೆ ಹಾಗೂ ಸನ್ನಿಧಿಗಳ ಬಲದ ಮೇಲೆ ಶಬ್ದಾರ್ಥದಿಂದ ವಾಕ್ಯಾರ್ಥ ಹುಟ್ಟುತ್ತದೆ; ಈ ವಾಕ್ಯಾರ್ಥ ಶಬ್ದಾರ್ಥಶಕ್ತಿಯಿಂದ ಹುಟ್ಟಲಾರದು; ವಾಕ್ಯಾರ್ಥ ಹುಟ್ಟಲು ಬೇರೊಂದು ಶಕ್ತಿಯೇ ಬೇಕು; ಅದೇ 'ತಾತ್ಪರ್ಯಶಕ್ತಿ'. ಈ ಮತದವರಿಗೆ 'ಅಭಿಹಿತಾನ್ವಯವಾದಿ'ಗಳೆಂದು ಹೆಸರು. ಆನಂದವರ್ಧನಾದಿಗಳು ಈ ಮತವನ್ನೆ ಒಪ್ಪುತ್ತಾರೆ. ಪ್ರಭಾಕರಭಟ್ಟ ಮೊದಲಾದವರ ಮತದಂತೆ – ವಾಕ್ಯಪ್ರೂಂದರ ಪದಗಳು ಅನ್ವಯಗೂಡಿಯೇ ಅರ್ಥಯಿಸಲ್ಪಡುತ್ತವೆ; ಆದಕಾರಣ ಪದಗಳ ಅರ್ಥವೇ ವಾಕ್ಯದ ಅರ್ಥ, ವಾಕ್ಯಾರ್ಥಸ್ಫುರಣೆಗೆ ಬೇರೊಂದು ಶಕ್ತಿಯ ಅಗತ್ಯವಿಲ್ಲ. ಈ ಮತದವರಿಗೆ 'ಅನ್ವಿತಾಭಿಧಾನವಾದಿ'ಗಳೆಂದು ಹೆಸರು. ಧನಂಜಯಧನಿಕರು ಈ ಮತದವರು.

– ಧ್ವನಿವಾದಿಗಳಾದ ಆನಂದವರ್ಧನ ಮುಂತಾದವರು ಮೇಲ್ಕಂಡ ಶಬ್ದಶಕ್ತಿಗಳನ್ನು ಗುರುತಿಸಿ ಭಾವಕ್ಕೂ (ಅಥವಾ ರಸಕ್ಕೂ) ಕಾವ್ಯಕ್ಕೂ ಇರುವ ಸಂಬಂಧ 'ವ್ಯಂಗ್ಯವ್ಯಂಜಕ' ಎನ್ನುತ್ತಾರೆ. ಇನ್ನು ಕೆಲವರು ಈ ಸಿದ್ಧಾಂತವನ್ನು ಖಂಡಿಸುತ್ತಾರೆ. 'ದಶರೂಪಕ'ದ ಗ್ರಂಥಕಾರನಾದ ಧನಂಜಯ ಹಾಗೂ ವ್ಯಾಖ್ಯಾಕಾರನಾದ ಧನಿಕ ಇಬ್ಬರೂ ಧ್ವನಿವಾದಿಗಳ ಸಿದ್ಧಾಂತವನ್ನು ಖಂಡಿಸುವವರೇ. 'ವ್ಯಾಖ್ಯಾ ಪ್ರಕರಣಾದಿಭ್ಯೋ......' ಎಂಬ ಮುಂದಿನ ಕಾರಿಕೆಯಲ್ಲಿ ಹಾಗೂ ಅದರ ವ್ಯಾಖ್ಯೆಯಲ್ಲಿ ಈ ಖಂಡನೆ ಬರುತ್ತದೆ. ಅದಕ್ಕೆ ಮುನ್ನವೇ, ಇದೇ ಕಾರಿಕೆಯ ವ್ಯಾಖ್ಯಾಭಾಗದಲ್ಲಿಯೇ (ಇನ್ನು ಮುಂದಕ್ಕೆ) ಧನಿಕ ಧ್ವನಿವಾದಿಗಳ ವಾದವನ್ನು ಮಂಡಿಸಿ ತನ್ನ ಖಂಡನೆಗೆ ಸಿದ್ಧತೆ ಮಾಡಿಕೊಳ್ಳುತ್ತಾನೆ :]

ವ್ಯಾಖ್ಯೆ (ಉತ್ತರಾರ್ಧ) : [ಸ್ಥಾಯಿ ಹಾಗೂ ರಸ] ಇವುಗಳಿಗೂ ಕಾವ್ಯಕ್ಕೂ ಇರುವ ಸಂಬಂಧ ಯಾವ ರೀತಿಯದು? ಅದು 'ವಾಚ್ಯವಾಚಕ' ಭಾವವೆ? ['ಆಕಳು' ಎಂಬ ಪದ ವಿಶಿಷ್ಟಪ್ರಾಣಿಯೊಂದರ ಅರ್ಥವನ್ನು ಹೊರಡಿಸುವಂತೆ, ಕಾವ್ಯವು ಯಾವುದೊ ಒಂದು ಭಾವದ ಹೆಸರು ಹೇಳಿ ಆ ಭಾವದ ಪ್ರತೀತಿಯನ್ನುಂಟುಮಾಡುತ್ತದೆಯೆ?] – ಇಲ್ಲ. ಏಕೆಂದರೆ : ಕಾವ್ಯವು ತಾನು ಹೊರಡಿಸಬೇಕಾದ ಭಾವದ ಹೆಸರನ್ನು ಹೇಳಿ ಆ ಭಾವವನ್ನು ಉಂಟುಮಾಡುವುದಿಲ್ಲ. ಪ್ರತೀತವಾಗಬೇಕಾದ ಭಾವದ ಹೆಸರೇ ಕಾವ್ಯದಲ್ಲಿ ಇಲ್ಲದಿರಬಹುದು. ಎಂದರೆ, ಶೃಂಗಾರಾದಿ ರಸಗಳ ಕಾವ್ಯಗಳಲ್ಲಿ, 'ಶೃಂಗಾರ' ಎಂಬ ಪದವಾಗಲಿ 'ರತಿ' ಎಂಬ ಪದವಾಗಲಿ ಬಂದಿದ್ದು ಆ ಹೆಸರಿನಿಂದ ಆ ಭಾವದ ಪುಷ್ಟಿಯಾಗುವುದಿಲ್ಲ. ಒಮ್ಮೆ, ಶೃಂಗಾರಾದಿ ಕಾವ್ಯದಲ್ಲಿ 'ಶೃಂಗಾರ' ಅಥವಾ 'ರತಿ' ಮುಂತಾದ ಪದಗಳೇ ಬಂದಿದ್ದರೂ, ಅಲ್ಲಿ ಆ ಪದದ ಹೆಸರಿಸುವಿಕೆಯಿಂದ ಎಂದೆಂದೂ ರಸಪ್ರತೀತಿಯಾಗದು; ವಿಭಾವಾದಿಗಳ ದ್ವಾರದಿಂದ ಮಾತ್ರವೇ ರಸಪ್ರತೀತಿಯಾಗುತ್ತದೆ. (ಎಂದರೆ, ಭಾವಾದಿಗಳಿಗೂ ಕಾವ್ಯಕ್ಕೂ ನಡುವೆ ಇರುವ ಸಂಬಂಧ 'ವಾಚ್ಯವಾಚಕ'ವಲ್ಲ ಎಂಬುದು ಸಿದ್ಧವಾದಂತಾಯಿತು.)

ಹಾಗಾದರೆ, ಅಲ್ಲಿರುವ ಸಂಬಂಧ 'ಲಕ್ಷ್ಯಲಕ್ಷಕ'ವೆ? – ಅದೂ ಅಲ್ಲ. ಏಕೆಂದರೆ : ಲಕ್ಷ್ಯವಾದ ಬೇರೊಂದು ಅರ್ಥವನ್ನು ಹೇಳುವ ಸಾಮಾನ್ಯ ಲಕ್ಷಕ ಪದದ ಪ್ರಯೋಗವು ಕಾವ್ಯದಲ್ಲಿ ಇರುವುದಿಲ್ಲ. [ಇಲ್ಲಿ ಮತ್ತೊಂದು ಸಂದೇಹ ಬರಬಹುದು : ವಾಚ್ಯಾರ್ಥ ಪೂರ್ಣ ತಿರಸ್ಕೃತವಾಗಿ ಲಕ್ಷ್ಯಾರ್ಥ ಸ್ಫುರಿಸುವ 'ಜಹಲ್ಲಕ್ಷಣೆ' (ಲಕ್ಷಣಾಲಕ್ಷಣೆ) ಕಾವ್ಯದಲ್ಲಿಲ್ಲದಿದ್ದರೂ, ವಾಚ್ಯಾರ್ಥ ಪೂರ್ಣ ತಿರಸ್ಕೃತವಾಗದೆಯೇ ಲಕ್ಷ್ಯಾರ್ಥ ಹೊಳೆಯುವ 'ಅಜಹಲ್ಲಕ್ಷಣೆ' (ಲಕ್ಷಿತಲಕ್ಷಣೆ) ಇರಬಹುದಲ್ಲವೇ – ಎಂದು. ಆದರೆ ಲಕ್ಷಕ ಪದದ ಪ್ರಯೋಗವಾಗುವುದಿಲ್ಲವೆಂದಮೇಲೆ ಅಲ್ಲಿ ಲಕ್ಷಿತಲಕ್ಷಣೆ ಅಥವಾ ಅಜಹಲ್ಲಕ್ಷಣೆಯನ್ನೂ ಹೇಳುವಂತಿಲ್ಲ.] ಅಂತೆಯೇ ಕಾವ್ಯದಲ್ಲಿ ಲಕ್ಷಿತಲಕ್ಷಣೆಯ ಮೂಲಕ ರಸ ಹೊರಡುತ್ತದೆಯೆಂದೂ ಹೇಳಲಾಗುವುದಿಲ್ಲ.

ಮೇಲಿನ ಮಾತನ್ನು ಉದಾಹರಣೆಯ ಸಹಿತವಾಗಿ ನೋಡಬಹುದು : 'ಗಂಗಾಯಾಂಘೋಷಃ' (ಗಂಗೆಯಲ್ಲಿ ಗೊಲ್ಲರ ಕೇರಿ) ಎಂಬ ಮಾತನ್ನು ನೋಡೋಣ. ಇಲ್ಲಿ 'ಗಂಗಾ' ಎಂಬ ಪದದ ಮುಖ್ಯಾರ್ಥ 'ಗಂಗಾಪ್ರವಾಹ' ಎಂಬುದು. ಪ್ರವಾಹದಲ್ಲಿ ಗೊಲ್ಲರ ಕೇರಿ ಇರುವುದು ಅಸಂಭವ. ಆದಕಾರಣ 'ಗಂಗಾ' ಎಂಬ ಪದದ ಮುಖ್ಯಾರ್ಥಕ್ಕೆ ಬಾಧೆ ಬಂದಿತು; ವಾಚ್ಯಾರ್ಥ ಸೋತಿತು. ಅಂತೆಯೇ, ಅಲ್ಲಿ 'ಗಂಗಾ' ಎಂಬ ಪದಕ್ಕೆ ಅದರ ಮುಖ್ಯಾರ್ಥಕ್ಕೆ ಹೊಂದಿಕೊಂಡ (ಅವಿನಾಭೂತ) 'ಗಂಗಾತೀರ' ಎಂಬ ಬೇರೊಂದು ಅರ್ಥ ಲಕ್ಷಿತವಾಗುತ್ತದೆ. ಆದರೆ ಕಾವ್ಯಾದಿಗಳಲ್ಲಿಯಾದರೋ, ನಾಯಕಾದಿಗಳ ಹಾಗೂ ಅವರ ವಿಭಾವಾದಿಗಳಿಂದ ರಸ ಹೊರಡಬೇಕು. ನಾಯಕಾದಿ ಶಬ್ದಗಳ ಮುಖ್ಯಾರ್ಥಕ್ಕೆಬಾಧೆ ಬಂದಾಗ, ಅಲ್ಲಿ ಲಕ್ಷಣಾರ್ಥ ಹೊರಡಬೇಕು. ಆದರೆ ನಾಯಕಾದಿ ಶಬ್ದಗಳ ಮುಖ್ಯಾರ್ಥಕ್ಕೆ ಎಲ್ಲಿ ಬಾಧೆ ಬರುತ್ತದೆ? ಆ ಪದಗಳ ಗತಿ ಎಲ್ಲಿ ಕುಂಟುತ್ತದೆ? ನಾಯಕಾದಿ ಪದಗಳ ಮುಖ್ಯಾರ್ಥ ಕುಂಟದೆ ಅದಕ್ಕೆ ಬೇರೆ ಲಕ್ಷಣಾರ್ಥವನ್ನು ಹೇಗೆ ಕಲ್ಪಿಸಬೇಕು ಮತ್ತು ಏಕೆ ಕಲ್ಪಿಸಬೇಕು?

[ಸಂಬಂಧಮೂಲಾ ಅಥವಾ ಶುದ್ಧಲಕ್ಷಣೆಯ ಮಾರ್ಗದಿಂದ ರಸ ಹೊರಡುವುದಿಲ್ಲ ಎಂದು ಸಿದ್ಧವಾಯಿತು. ಇನ್ನು ಸಾದೃಶ್ಯಲಕ್ಷಣೆ(ಗೌಣಿ)ಯ ಮೂಲಕ ರಸ ಹೊರಡಬಾರದೇಕೆ ಎಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ಉತ್ತರ :] 'ಸಿಂಹೋ ಮಾಣವಕಃ' (ಈ ಹುಡುಗ ಒಂದು ಸಿಂಹ) ಎಂಬಂಥ ಮಾತಿನಲ್ಲಿ ಸಾದೃಶ್ಯಲಕ್ಷಣೆ ಕಾಣುತ್ತೇವೆ; ಅಲ್ಲಿ ಸಿಂಹದ ಶೌರ್ಯವನ್ನು ಹುಡುಗನಲ್ಲಿ ಆರೋಪಿಸುವ ಸಲುವಾಗಿ 'ಹುಡುಗನೇ ಸಿಂಹ' ಎಂಬ ಮಾತು ಬಂದಿದೆ. ಆದರೆ ಕಾವ್ಯದಲ್ಲಿಯಾದರೋ, ಮೇಲೆ ಹೇಳಿದಂತೆ, ನಾಯಕಾದಿ ಶಬ್ದಗಳು ತಮ್ಮ ಮುಖ್ಯಾರ್ಥದಿಂದಲೇ ಸಂಬದ್ಧವಾಗಿರುವಾಗ ಅಲ್ಲಿ ನಿಮಿತ್ತ ಅಥವಾ ಪ್ರಯೋಜನವಿಲ್ಲದೆ 'ಗೌಣಿ'ಯನ್ನು ಹೇಗೆ

ಆರೋಪಿಸುವುದು? [ಈ ಹುಡುಗ ಸಿಂಹ ಎಂಬಲ್ಲಿ 'ಸಿಂಹ' ಎಂಬ ಪದದ ವಾಚ್ಯಾರ್ಥಕ್ಕೆ ಬಾಧೆ ಬಂದು, ಶೌರ್ಯಶಾಲಿ ಎಂಬ ಅರ್ಥ ಲಕ್ಷಿತವಾಗುತ್ತದೆಯಷ್ಟೆ] ಈ ಕಾರಣದಿಂದ ಗುಣವೃತ್ತಿ(ಗೌಣೀ)ಯಿಂದಲೂ ರಸಪ್ರತೀತಿಯಾಗದು.

ಇನ್ನೂ ಒಂದು ರೀತಿಯಿಂದ ಹೇಳುವುದಾದರೆ :

ಒಮ್ಮೆ ಕಾವ್ಯದ ವಾಚ್ಯಾರ್ಥದಿಂದಲೇ ರಸ ಪ್ರತಿಪಾದಿತವಾಗುತ್ತದೆ ಎನ್ನೋಣ. ಆಗ, ಭಾಷೆಯನ್ನು ಬಲ್ಲ ಹಾಗೂ ಪದಗಳ ವಾಚ್ಯಾರ್ಥ ತಿಳಿದಿರುವ ಅರಸಿಕರಿಗೂ ಕಾವ್ಯದ ರಸಾಸ್ವಾದವಾಗಬೇಕು. ಈ ಮಾತು ನಮ್ಮ ಅನುಭವಕ್ಕೆ ವಿರೋಧ. ಅಲ್ಲದೆ, ಸಹೃದಯರೆಲ್ಲರೂ (ಪರಸ್ಪರ) ವಿಸಂಗತಿಯಿಲ್ಲದಂತೆ ಕಾವ್ಯರಸಾಸ್ವಾದವನ್ನು ಪಡೆಯುವುದರಿಂದ ಇಲ್ಲಿ ಕಾಲ್ಪನಿಕತ್ವವನ್ನೂ ಹೇಳುವಂತಿಲ್ಲ.

ಆದ್ದರಿಂದ ಕೆಲವರು ( ಧ್ವನಿವಾದಿಗಳು) ಹೀಗೆನ್ನುತ್ತಾರೆ : ಶಬ್ದದ ಅರ್ಥಭಿನ್ನತೆಯಿಂದ ಪರಿಕಲ್ಪಿತವಾದ ಅಭಿಧಾ ಲಕ್ಷಣಾ ಗೌಣೀ – ಈ ಶಬ್ದಶಕ್ತಿಗಳಿಂದ ಬೇರೆಯಾದ 'ವ್ಯಂಜಕತ್ವ'ವೆಂಬ ಮತ್ತೊಂದು ಶಕ್ತಿಯುಂಟು. ಅದೇ ಕಾವ್ಯದಲ್ಲಿ ಬಳಕೆಯಾಗುತ್ತದೆ. ಕಾವ್ಯದಲ್ಲಿರುವ ವಸ್ತು ಅಥವಾ ಅಲಂಕಾರ ಅಥವಾ ರಸ ಪ್ರತೀತವಾಗುವುದು ಈ ಶಬ್ದಶಕ್ತಿಯಿಂದಲೇ. [ಎಂದರೆ, ವಸ್ತು ಅಲಂಕಾರ ರಸಗಳು ವ್ಯಂಗ್ಯವೂ ಕಾವ್ಯ ವ್ಯಂಜಕವೂ ಆಗಿದೆ ಎಂಬುದು ಧ್ವನಿವಾದಿಗಳ ಅಭಿಪ್ರಾಯ.]

ಅವರ ಸಮರ್ಥನೆ ಹೀಗೆ : ಮೊದಲು [ಶೃಂಗಾರಾದಿ] 'ರಸ'ಗಳ ಪ್ರತೀತಿಯನ್ನು ನೋಡೋಣ. ವಿಭಾವಾನುಭಾವವ್ಯಭಿಚಾರಿಗಳ ಮುಖೇನ ರಸಾದಿಗಳ ಪ್ರತೀತಿಯುಂಟಾಗುತ್ತದೆಯೆಂದು ಮೇಲೆ ನೋಡಿದ್ದೇವೆ. ಅದು ಹೇಗೆ ತಾನೆ ವಾಚ್ಯವಾದೀತು? ಉದಾಹರಣೆಗೆ – [ಕು.ಸಂ. : ೩–೬೮] :

> 'ವಿವೃಣ್ವತೀ ಶೈಲಸುತಾಪಿ ಭಾವ-
>
> ಮಂಗೈಃ ಸ್ಫುರದ್ಬಾಲಕದಂಬಕಲ್ಪೈಃ।
>
> ಸಾಚೀಕೃತಾ ಚಾರುತರೇಣ ತಸ್ಥೌ
>
> ಮುಖೇನ ಪರ್ಯಸ್ತವಿಲೋಚನೇನ॥'

[ಶೈಲಸುತೆ ಕೂಡ ಹೊಳೆಯುವ ಎಳೆಬಾಳೆಯಂಥ ಅಂಗಗಳಿಂದ ತನ್ನ ಭಾವವನ್ನು ಹೊರಸುತ್ತ ಕಣ್ಣುಗಳು ಹಲವರಿಯುತ್ತಿರಲು ಕೆಳಮೊಗಳಾಗಿ ನಿಂತುಬಿಟ್ಟಳು.]

– ಇಲ್ಲಿ ಶೈಲಸುತೆ ವಿಭಾವವಾಗಿದ್ದಾಳೆ; ಅನುರಾಗಜನ್ಯವಾದ ಅವಳ ವಿಶಿಷ್ಟ ಅವಸ್ಥೆ ಅನುಭಾವವಾಗಿ ವರ್ಣಿತವಾಗಿದೆ. [ಈ ಮೊದಲಿಗೆ ಕಾಮ ಬಿಲ್ಲನ್ನು ಹೆದೆಯೇರಿಸಿದುದು ಮತ್ತು ಹರನೂ ಕಿಂಚಿದಸ್ಥಿರನಾದುದು ಇವುಗಳ ವರ್ಣನೆ ಬಂದಿದ್ದು] ಇಲ್ಲಿ 'ಅಪಿ' (ಶೈಲಸುತೆ ಕೂಡ) ಎಂಬ ಪದ ಪ್ರಯೋಗವಾಗಿದೆ. ಇವುಗಳಿಂದ ಇಲ್ಲಿ [ಶೃಂಗಾರ ಅಥವಾ ರತಿ ಮುಂತಾದ ತದ್ಭಾವವಾಚಕ ಪದವಿಲ್ಲದಿದ್ದರೂ] ಶೃಂಗಾರರಸದ ಪ್ರತೀತಿಯಾಗುತ್ತದೆ. ಶೃಂಗಾರರಸವನ್ನು ಇಲ್ಲಿ ಪರಿಶೀಲಿಸಿದೆವು. ಶೃಂಗಾರ ಮಾತ್ರವಲ್ಲ, ಉಳಿದ ರಸಗಳ ಪ್ರತೀತಿ ಕೂಡ ಹೀಗೆಯೇ ಆಗುತ್ತದೆ.

[ರಸಪ್ರತೀತಿ ವಾಚ್ಯಮಾರ್ಗದಿಂದ ಉಂಟಾಗುವುದಿಲ್ಲ ಎಂಬುದನ್ನು ನೋಡಿದೆವು. ಆದರೆ ಕಾವ್ಯದಲ್ಲಿ ರಸವೊಂದೇ ಇರುತ್ತದೆಯೆ? ಅಲ್ಲಿ 'ವಸ್ತು' ಇರುತ್ತವೆ, 'ಅಲಂಕಾರ' ಇರುತ್ತದೆ. ರಸವನ್ನು ಕುರಿತು ಮೇಲಿನ ನ್ಯಾಯ ಒಪ್ಪುತ್ತದೆ ಎಂಬುದು ಸರಿ; ಆದರೆ ವಸ್ತು ಅಲಂಕಾರಗಳನ್ನು ಕುರಿತು ಆ ನ್ಯಾಯ ಹೊಂದುವುದೆ – ಎಂದು ಪ್ರಶ್ನಿಸಿದರೆ – ಹೌದು.] ವಸ್ತುವಿನ ಬಗೆಗೂ ಅದೇ ನ್ಯಾಯ. ಉದಾಹರಣೆಗೆ – [ಗಾಥಾ. : ೨–೭೫] :

> 'ಭಮ ಧಮ್ಮಿಅ ವೀಸದ್ಧೋ ಸೋ ಸುಣಹೋ ಅಜ್ಜ ಮಾರಿಓ ತೇಣ।
>
> ಗೋಲಾಣಇಕಚ್ಛಕುಡಂಗವಾಸಿಣಾ ದರಿಅಸೀಹೇಣ॥'

[ಎಲೈ ಧಾರ್ಮಿಕನೆ, ಇನ್ನು ನೀನಿಲ್ಲಿ ಸ್ವೇಚ್ಛೆಯಾಗಿ ವಿಹರಿಸು. ಈ ಗೋದಾವರೀ ತೀರದ ಪೊದೆಗಳಲ್ಲಿ ವಾಸಿಸುವ ದೃಪ್ತ ಸಿಂಹವೊಂದು, ಈ ದಿನ ಇಲ್ಲಿದ್ದ ನಾಯಿಯನ್ನು ಕೊಂದುಬಿಟ್ಟಿತು.]

- ಇಲ್ಲಿ [ಆತನಿಗೆ ಸಿಂಹವುಂಟೆಂಬುದನ್ನು ಸೂಚಿಸಿ ಆತ ಇನ್ನು ಆ ಪ್ರದೇಶದಲ್ಲಿ ತಿರುಗಬಾರದೆಂದು ಹೆದರಿಸುವುದು ಉದ್ದೇಶ. ಹಾಗೆ ಆತನ ಭ್ರಮಣವನ್ನು] ನಿಷೇಧಿಸುವ ಶಬ್ದ ಈ ಪದ್ಯದಲ್ಲಿಲ್ಲ. ಆದರೂ ಇಲ್ಲಿ [ಬಂದಿರುವ ವಿಧಿ] ವ್ಯಂಜಕಶಕ್ತಿಯಿಂದಲೇ ನಿಷೇಧವನ್ನು ಸೂಚಿಸುತ್ತದೆ.

ಇದರಂತೆಯೇ ಅಲಂಕಾರಗಳಲ್ಲಿ ಕೂಡ ವ್ಯಂಜಕಶಕ್ತಿಯೇ ಬಳಕೆಯಾಗುತ್ತದೆ. ಉದಾಹರಣೆಗೆ – [ಆನಂದವರ್ಧನವಿರಚಿತ; ಧ್ವನ್ಯಾ. : ೨–೨೭ ರ ವ್ಯಾಖ್ಯೆಯಲ್ಲಿ ಬಂದಿದೆ] :

'ಲಾವಣ್ಯಕಾಂತಿಪರಿಪೂರಿತದಿಙ್ಮುಖೇಽಸ್ಮಿನ್
ಸ್ಮೇರೇಽಧುನಾ ತವ ಮುಖೇ ತರಲಾಯತಾಕ್ಷಿ ।
ಕ್ಷೋಭಂ ಯದೇತಿ ನ ಮನಾಗಪಿ ತೇನ ಮನ್ಯೇ
ಸುವ್ಯಕ್ತಮೇವ ಜಲರಾಶಿರಯಂ ಪಯೋಧಿಃ ॥'

[ ಎಲೈ ನೆಲೆನಿಲ್ಲದ ಅಗಲಗಣ್ಣಿನವಳೆ, ಮಿದುನಗೆಯ ನಿನ್ನ ಮೊಗ ಚೆಲುವಿನ ಹೊಗರಿನಿಂದ ದೆಸೆದೆಸೆಗಳನ್ನೂ ಹಬ್ಬಿ ಬೆಳಗುತ್ತಿದೆಯಾದರೂ ಕಡಲು ಕೊಂಚ ಕೂಡ ತಲ್ಲಣಗೊಳ್ಳದಿದೆ. ಹೀಗೆ ತೋರುತ್ತದೆ : ಎಷ್ಟಾದರೂ ಅದು ನಿಚ್ಚಳವಾಗಿ ಜಲ(ಜಡ)ರಾಶಿಯೇ ಅಲ್ಲವೆ?]

- ಇಲ್ಲಿ 'ಈಕೆಯ ಮುಖ ಚಂದ್ರನಂತಿದೆ' ಎಂಬ ಉಪಮೆಯ ಅರ್ಥ ಹೊರಡುತ್ತದೆ. ಆದರೆ ಈ ಅರ್ಥ ಪದ್ಯದ ಯಾವ ಪದಸಮೂಹದಿಂದಲೂ ವಾಚ್ಯವಾಗಿಲ್ಲ. ಅಂತೆಯೇ, ಇಲ್ಲಿನ ಉಪಮಾಲಂಕಾರ ಹೊರಡುವುದು ಕೂಡ ವ್ಯಂಜಕತ್ವಶಕ್ತಿಯಿಂದ.

[ಇನ್ನು – ಇಲ್ಲೆಲ್ಲ ಅರ್ಥಾಪತ್ತಿಯಿದ್ದು ಅದರಿಂದ ವಾಚ್ಯಾರ್ಥಕ್ಕಿಂತ ಬೇರೆಯಾದ ಮತ್ತೊಂದು ಅರ್ಥ ಹೊರಡುತ್ತದೆ ಎಂದು ಯಾರಾದರೂ ವಾದಿಸಬಹುದು. ಎಂದರೆ – 'ಪುಷ್ಟನಾದ ದೇವದತ್ತ ಹಗಲು ಉಣ್ಣುವುದಿಲ್ಲ' ಎಂಬಂಥ ಮಾತನ್ನು ನೋಡಬಹುದು : ದೇವದತ್ತ ಯಾವಾಗಲೂ ಉಣ್ಣುವುದಿಲ್ಲ ಎಂದು ಹೇಳಿಲ್ಲ; ಆತ ಪುಷ್ಟವಾಗಿದ್ದಾನೆ ಎಂದು ಬೇರೆ ಹೇಳಿದೆ. ಅವನು ಪುಷ್ಟನಾಗಿರುವುದರಿಂದ ಊಟ ಮಾಡುತ್ತಾನೆ ಎಂದು ಊಹಿಸಬಹುದು. ಆತ ಹಗಲು ಉಣ್ಣುವುದಿಲ್ಲ ಎಂದು ಹೇಳಿರುವುದರಿಂದ, ರಾತ್ರಿ ಊಟ ಮಾಡುತ್ತಾನೆ ಎಂಬ ಅರ್ಥ ಹೊರಡುತ್ತದೆ. ಈ ಅರ್ಥ ಅರ್ಥಾಪತ್ತಿಯಿಂದ ಜನ್ಯವಾದದ್ದು; ಎಂದರೆ, ಆತ ಪುಷ್ಟನಾಗಿದ್ದಾನೆ ಎಂಬುದಕ್ಕೆ ಉಣ್ಣುವುದಿಲ್ಲ ಎಂಬುದು ಕೂಡದಿದ್ದುದರಿಂದ, ಅಲ್ಲಿ ವಾಚ್ಯಾರ್ಥಕ್ಕೆ ಬಾಧೆ ಬಂದುದರಿಂದ ವಾಚ್ಯಾರ್ಥಕ್ಕೆ ವಿರುದ್ಧವಲ್ಲದಂತೆ ಬೇರೆ ಅರ್ಥವನ್ನು ಕಲ್ಪಿಸಿಕೊಳ್ಳಲಾಗುತ್ತದೆ. ಆದರೆ ಕಾವ್ಯದಲ್ಲಿ ವಾಚ್ಯಾರ್ಥ ತಿರಸ್ಕೃತವಾಗುವುದಿಲ್ಲ. ಇರುವಂತೆಯೇ ಇಲ್ಲಿನ ಅರ್ಥ ಪೂರ್ಣವಾಗದೆ ಬೇರೊಂದು ಕಲ್ಪನೆ ಮಾಡಬೇಕಾದ ಸಂದರ್ಭವಿರುವುದಿಲ್ಲ.] ಅಂತೆಯೇ – ಕಾವ್ಯದಲ್ಲಿ ವಾಚ್ಯಾರ್ಥವೇ ಸರಿಯಾಗಿ ಹೊಂದಿ ಪೂರ್ಣ ಅರ್ಥ ಕೊಡುತ್ತದೆಯಾದ ಕಾರಣ, ಇಲ್ಲಿನ ಅರ್ಥ ತನ್ನ ಪೂರ್ಣತೆಗಾಗಿ ಬೇರೊಂದನ್ನು ಹೊಂದಲು ಅಪೇಕ್ಷಿಸುವುದಿಲ್ಲವಾದ ಕಾರಣ ಇಲ್ಲಿ ಅರ್ಥಾಪತ್ತಿಯಿಂದ ಅನ್ಯಾರ್ಥ ಹೊಳೆಯುತ್ತದೆಂದು ಹೇಳುವಂತಿಲ್ಲ.

ಇನ್ನು – ಈ ವ್ಯಂಗ್ಯತ್ವ ಅಥವಾ ವ್ಯಂಜಕ ಶಕ್ತಿಯು 'ವಾಕ್ಯಾರ್ಥಶಕ್ತಿ'ಯೊಳಗೇ ಬರುತ್ತದೆ ಎಂದು ಯಾರಾದರೂ ಅಭಿಪ್ರಾಯಪಡಬಹುದು. ಅದು ತಪ್ಪು. ಏಕೆಂದರೆ – [ಒಂದು ವಾಕ್ಯದಲ್ಲಿ ಬಿಡಿಯಾದ ಪದಗಳೊಂದೊಂದರ ಅರ್ಥ ಮೊದಲು ಸ್ಫುರಿಸುತ್ತವೆ; ಹೀಗೆ ಮೊದಲ ಮೆಟ್ಟಿಲಲ್ಲಿ ಅಥವಾ ಮೊದಲ ಕಕ್ಷೆಯಲ್ಲಿ ಪದಾರ್ಥಜ್ಞಾನವಾಗುತ್ತದೆ. ಅನಂತರ ಬಿಡಿ ಪದಗಳ ಅರ್ಥ ಹೊಂದಿಕೊಂಡು ವಾಕ್ಯಾರ್ಥ ಸ್ಫುರಿಸುತ್ತದೆ. ಹೀಗೆ ವಾಕ್ಯಾರ್ಥಸ್ಫುರಣೆಯಾಗುವುದು ದ್ವಿತೀಯ ಕಕ್ಷೆಯಲ್ಲಿ.] ವ್ಯಂಗ್ಯಾರ್ಥ ಹೊರಡುವುದು ವಾಕ್ಯಾರ್ಥಸ್ಫುರಣೆಯ ಅನಂತರದಲ್ಲಿ, ಎಂದರೆ ತೃತೀಯ ಕಕ್ಷೆಯಲ್ಲಿ. ತೃತೀಯ ಕಕ್ಷೆಯಲ್ಲಿ ಭಾಸವಾಗುವ ವ್ಯಂಗ್ಯಾರ್ಥವನ್ನು ದ್ವಿತೀಯ ಕಕ್ಷೆಯ ವಾಕ್ಯಾರ್ಥದಲ್ಲಿ ಹೇಗೆ ಕಾಣಲಾದೀತು? ಮೇಲೆ ಉದಾಹರಿಸಿದ 'ಭಮ ಧಮ್ಮಿಅ.....' (ಎಲೈ ಧಾರ್ಮಿಕನೆ......) ಎಂಬ ಉದಾಹರಣೆಯನ್ನಿಟ್ಟುಕೊಂಡೇ ಈ ಮಾತನ್ನು ಸಮರ್ಥಿಸಬಹುದು. ಇಲ್ಲಿ ಮೊದಲು ಅಭಿಧಾಶಕ್ತಿಯಿಂದ ಒಂದೊಂದೇ ಪದಗಳ ಅರ್ಥ ಸ್ಫುರಿಸುತ್ತವೆ; ಹೀಗೆ ಪದಾರ್ಥ ಸ್ಫುರಣೆಯಾಗುವುದು ಪ್ರಥಮ ಕಕ್ಷೆಯಲ್ಲಿ. ಅನಂತರ ಕ್ರಿಯೆ ಹಾಗೂ ಕಾರಕ ಇವುಗಳ ಸಂಸರ್ಗ ಅಥವಾ ಅನ್ವಯದಿಂದ ಸಂಪೂರ್ಣವಾದ ವಾಕ್ಯಾರ್ಥ ಹೊಳೆಯುತ್ತದೆ. ['ಇನ್ನು ನೀನಿಲ್ಲಿ ಸ್ವೇಚ್ಛೆಯಾಗಿ ವಿಹರಿಸು' ಎಂಬ 'ವಿಧಿ'ಯನ್ನು

ಹೇಳುವ ಅರ್ಥ ಇಲ್ಲಿ ಹೊಳೆಯುತ್ತವೆ.] ಹೀಗೆ ವಿಧಿಯನ್ನು ಹೇಳುವ ವಾಕ್ಯಾರ್ಥ ಭಾಸವಾಗುವುದು ದ್ವಿತೀಯ ಕಕ್ಷೆಯಲ್ಲಿ. ಎಂದರೆ, ಅರ್ಥ ತನ್ನ ಸಿದ್ಧಿಗಾಗಿ ಪ್ರಥಮ ಕಕ್ಷೆಯನ್ನು ಅತಿಕ್ರಮಿಸಿ ದ್ವಿತೀಯ ಕಕ್ಷೆಗೆ ಬಂದಿತು. ಅಲ್ಲಿಯೂ ಆಕಾಂಕ್ಷೆ ಸಿದ್ಧಿಸಲಿಲ್ಲವಾಗಿ ಅದು ದ್ವಿತೀಯ ಕಕ್ಷೆಯನ್ನೂ ದಾಟಿ ಮುಂದಕ್ಕೆ ತೃತೀಯ ಕಕ್ಷೆಗೆ ಹೋಗಿ ವ್ಯಾಪಿಸುತ್ತದೆ. ದ್ವಿತೀಯ ಕಕ್ಷೆಯಲ್ಲಿ 'ವಿಧಿ'ಯ ('ವಿಹರಿಸು' ಎನ್ನುವ) ಅರ್ಥ ಹೊರಟರೆ ತೃತೀಯ ಕಕ್ಷೆಯಲ್ಲಿ 'ನಿಷೇಧ'ದ ('ವಿಹರಿಸಬೇಡ' ಎಂಬ) ಅರ್ಥ ಭಾಸವಾಗುತ್ತವೆ. ಅದೇ ವ್ಯಂಗ್ಯಾರ್ಥ. ಈ ವ್ಯಂಗ್ಯಾರ್ಥಕ್ಕೆ ಮೂಲವಾದ ಶಕ್ತಿಯೇ 'ವ್ಯಂಜಕಶಕ್ತಿ'. ಹೀಗೆ 'ಭಮ ಧಮ್ಮಿಅ.....' ಎಂಬಲ್ಲಿ ನಾವು ಅರ್ಥಸಿದ್ಧಿಗಾಗಿ ಎರಡು ಕಕ್ಷೆಗಳನ್ನು ದಾಟಿ ಮೂರನೆಯ ಕಕ್ಷೆಗೆ ಹೋಗುತ್ತೇವೆ; ಉದ್ದೇಶಿತವಾದ ಅರ್ಥ ನಮಗೆ ಮೂರನೆಯ ಕಕ್ಷೆಯಲ್ಲೆ ಸ್ಫುಟವಾಗಿ ಭಾಸವಾಗುತ್ತವೆ. ಆದಕಾರಣ, ಕಾವ್ಯದಲ್ಲಿ ರಸಾದಿಗಳು ವಾಕ್ಯಾರ್ಥಶಕ್ತಿಯಿಂದಲೂ ಸ್ಫುರಿಸುವುದಿಲ್ಲ, ಕೇವಲ ವ್ಯಂಜಕ ಶಕ್ತಿಯಿಂದಲೇ ಎಂದು ತಿಳಿಯತಕ್ಕದ್ದು.

ಇಲ್ಲಿ ಒಂದು ಪ್ರತಿವಾದ ಏಳಬಹುದು : 'ವಿಷಂ ಭುಂಕ್ಷ್ವ ಮಾ ಚಾಸ್ಯ ಗೃಹೇ ಭುಜ್ಞ್ಥಾಃ' (ಅವನ ಮನೆಯಲ್ಲಿ ಉಣ್ಣಬೇಡ, ಬದಲು ವಿಷ ತಿನ್ನು) – ಇಂಥ ಒಂದು ವಾಕ್ಯವನ್ನು ನೋಡಿದರೆ, ಅಲ್ಲಿ ಪ್ರಥಮ ಕಕ್ಷೆಯಲ್ಲಿ ಪದಾರ್ಥವೂ ದ್ವಿತೀಯ ಕಕ್ಷೆಯಲ್ಲಿ 'ವಿಷ ತಿನ್ನು' ಎಂಬ ವಿಧಿಯೂ ಸ್ಫುರಿಸಿ ಅನಂತರ ತೃತೀಯ ಕಕ್ಷೆಯಲ್ಲಿಯೇ 'ಅವನ ಮನೆಯಲ್ಲಿ ಎಂದೆಂದೂ ಊಟಮಾಡಬೇಡ' ಎನ್ನುವ ನಿಷೇಧಾರ್ಥ ಹೊರಡುತ್ತದೆ. ['ವಿಷ ತಿನ್ನು' ಎಂಬ ವಿಧಿ ತಿರಸ್ಕೃತವಾಗಿ ಅದು 'ಅವನ ಮನೆಯಲ್ಲಿ ಉಣ್ಣಬೇಡ' ಎಂಬ ನಿಷೇಧಕ್ಕೆ ಅವಧಾರಣೆ ಕೊಡುತ್ತದೆ.] ಇಲ್ಲಿ ತಾತ್ಪರ್ಯರೂಪವಾದ ವಾಕ್ಯಾರ್ಥ ತೃತೀಯ ಕಕ್ಷೆಯಲ್ಲಿಯೇ ಹೊಳೆಯಿತಲ್ಲವೆ? ಹೀಗೆ ತೃತೀಯ ಕಕ್ಷೆಯಲ್ಲಿ ಸ್ಫುರಿಸುವ ಈ ಅರ್ಥ ವಾಕ್ಯಾರ್ಥವಲ್ಲ ಎನ್ನೋಣವೇ? ಅದನ್ನು ವ್ಯಂಜಕತ್ವವಾದಿಗಳೂ ಒಪ್ಪುವುದಿಲ್ಲ. ಅವರೂ ಕೂಡ ಇಲ್ಲಿ ಹೊರಟ ಅರ್ಥ ತಾತ್ಪರ್ಯಾರ್ಥ ಎಂದು ಒಪ್ಪುತ್ತಾರೆ ಮತ್ತು ತಾತ್ಪರ್ಯ ಬೇರೆ ಧ್ವನಿ ಬೇರೆ ಎನ್ನುತ್ತಾರೆ. ಆದಕಾರಣ ಮೇಲಿನ ಅರ್ಥ ಧ್ವನಿಯಲ್ಲ, ಅದು ತಾತ್ಪರ್ಯವೇ ಸರಿ. ಇದರಿಂದ ತಾತ್ಪರ್ಯ ಕೂಡ, ವ್ಯಂಜಕಶಕ್ತಿಯ ಕ್ಷೇತ್ರವಾದ ತೃತೀಯ ಕಕ್ಷೆಯಲ್ಲೆ ಹೊಳೆಯುವುದು ಸಾಧ್ಯ ಎಂದಾಗುವುದಿಲ್ಲವೆ? ಮೇಲೆ ಹೇಳಿದಿರಿ, 'ವಾಕ್ಯಾರ್ಥದ ದ್ವಿತೀಯ ಕಕ್ಷೆಯನ್ನು ದಾಟಿ ತೃತೀಯ ಕಕ್ಷೆಯಲ್ಲಿ ಸ್ಫುರಿಸುವ ಅರ್ಥವಾದ್ದರಿಂದ ಅದು ವಾಕ್ಯಾರ್ಥಕ್ಕಿಂತ ಬೇರೆಯಾದ ವ್ಯಂಗ್ಯಾರ್ಥ' ಎಂದು. 'ವಿಷಂ ಭುಂಕ್ಷ್ವ.....' ಎಂಬ ಉದಾ.ಯಲ್ಲಿ ವಾಕ್ಯಾರ್ಥವೂ ತೃತೀಯ ಕಕ್ಷೆಯಲ್ಲೆ ಭಾಸವಾಯಿತೆಂದಮೇಲೆ ತೃತೀಯ ಕಕ್ಷೆಯಲ್ಲಿ ವ್ಯಂಗ್ಯವೇ ಸ್ಫುರಿಸುತ್ತದೆಂಬ ನಿಮ್ಮ ಮಾತು ತಪ್ಪಾಗಲಿಲ್ಲವೆ?

ಮೇಲಿನ ವಾದಕ್ಕೆ ಸಮಾಧಾನ : 'ವಿಷಂ ಭುಂಕ್ಷ್ವ....' ಈ ಉದಾ.ಯಲ್ಲಿ ಪದಾರ್ಥ ಸ್ಫುರಣೆಯ ಪ್ರಥಮ ಕಕ್ಷೆಯ ಅನಂತರ ವಿಧಿಯನ್ನು (ವಿಷ ತಿನ್ನು ಎಂದು) ಹೇಳುವ ದ್ವಿತೀಯ ಕಕ್ಷೆ ಆರಂಭವಾಗುತ್ತದೆ. ಆದರೆ ಆ ವಿಧ್ಯರ್ಥವನ್ನೆ ಇಟ್ಟುಕೊಂಡರೆ, ತಂದೆಯಾದವನು ಮಗನಿಗೆ 'ವಿಷ ತಿನ್ನು' ಎಂದು ಯಾವಾಗಲೂ ಹೇಳುವುದಿಲ್ಲವಾದ್ದರಿಂದ, ಅಲ್ಲಿ ಕ್ರಿಯೆ ಹಾಗೂ ಕಾರಕ ಇವುಗಳಿಗೆ ಹೊಂದಿಕೆಯಾಗುವುದಿಲ್ಲ. ದ್ವಿತೀಯ ಕಕ್ಷೆಯಲ್ಲಿ ಕ್ರಿಯಾಕಾರಕ ಸಂಯೋಗವಾಗಿದ್ದು ಹೊಂದಿಕೆಯ ಅರ್ಥ ಸ್ಫುರಿಸಿದ್ದರೆ ಆ ಕಕ್ಷೆಯ ಕೆಲಸ ಮುಗಿದಂತಾಗಿ ಆಮೇಲೆ ಅಗತ್ಯವಿದ್ದರೆ ತೃತೀಯ ಕಕ್ಷೆಗೆ ಹೋಗಬಹುದಿತ್ತು. ಆದರೆ ಕ್ರಿಯಾಕಾರಕ ಸಂಯೋಗವಾಗದ್ದರಿಂದ ಆ ಹೊಂದಿಕೆಯನ್ನು ಪಡೆಯುವವರೆಗೂ ದ್ವಿತೀಯ ಕಕ್ಷೆಯ ಕಾರ್ಯ ಮುಗಿಯುವುದಿಲ್ಲ. 'ಏನೇ ಆಗಲಿ ಅವನ ಮನೆಯಲ್ಲಿ ಉಣ್ಣಬೇಡ' ಎಂಬ ಅರ್ಥ ಹೊರಟಾಗಲೇ, ಆ ಹೊಂದಿಕೆ ಬಂದಾಗಲೇ ದ್ವಿತೀಯ ಕಕ್ಷೆಯ ಕೆಲಸ ಮುಗಿಯುವುದು. ಹೀಗಿರುವಾಗ ದ್ವಿತೀಯ ಕಕ್ಷೆಯ ಕಾರ್ಯ ಮುಗಿಯುವ ಮೊದಲೇ ತೃತೀಯ ಕಕ್ಷೆ ಬಂದಿತೆಂದು ಹೇಳುವುದು ತಪ್ಪು. 'ವಿಷಂ ಭುಂಕ್ಷ್ವ...' ಎಂಬ ಉದಾಹರಣೆಯಲ್ಲಿ ಸಂಪೂರ್ಣ ಅರ್ಥವೂ ದ್ವಿತೀಯ ಕಕ್ಷೆಯಲ್ಲೆ ಹೊರಡುತ್ತದೆ. ಅಲ್ಲಿ ತೃತೀಯ ಕಕ್ಷೆಯ ಆವಶ್ಯಕತೆಯೇ ಇರುವುದಿಲ್ಲ.

ಇನ್ನು–ರಸವನ್ನುಳ್ಳ (ರಸವತ್) ವಾಕ್ಯಗಳಲ್ಲಿ [ಎಂದರೆ, ಕಾವ್ಯದಲ್ಲಿ] ನೋಡುವುದಾದರೆ, ಪ್ರಥಮ ಕಕ್ಷೆಯಲ್ಲಿ ಪದಗಳ ಅರ್ಥ ಸ್ಫುರಿಸುತ್ತವೆ. ದ್ವಿತೀಯ ಕಕ್ಷೆಯಲ್ಲಿ ವಿಭಾವಾದಿಗಳ ಅರಿವು ಉಂಟಾಗುತ್ತವೆ. ವಿಭಾವಾದಿಗಳ ಅರಿವಿನ ಜೊತೆಯಲ್ಲೆ ರಸವೂ ನಿಷ್ಪನ್ನವಾಗುವುದಿಲ್ಲ. ಬದಲು ವಿಭಾವಾದಿಗಳ ಅರಿವಿನ ಅನಂತರ, ಎಂದರೆ ತೃತೀಯ ಕಕ್ಷೆಯಲ್ಲಿ ಮಾತ್ರವೇ ರಸನಿಷ್ಪತ್ತಿಯಾಗುತ್ತವೆ. ಅದನ್ನೆ ಹೀಗೆ ಹೇಳಿದೆ : [ಅವರ ತಿಳಿಯದು] :

'ಅಪ್ರತಿಷ್ಠಮವಿಶ್ರಾಂತಂ ಸ್ವಾರ್ಥೇ ಯತ್ಪರತಾಮಿದಮ್।
ವಾಕ್ಯಂ ವಿಗಾಹತೇ ತತ್ರ ನ್ಯಾಯ್ಯಾ ತತ್ಪರತಾಸ್ಯ ಸಾ ॥
ಯತ್ರ ತು ಸ್ವಾರ್ಥವಿಶ್ರಾಂತಂ ಪ್ರತಿಷ್ಠಾಂ ತಾವದಾಗತಮ್।
ತತ್ಪ್ರಸರ್ಪತಿ ತತ್ರ ಸ್ಯಾತ್ಸರ್ವತ್ರ ಧ್ವನಿನಾ ಸ್ಥಿತಿಃ ॥'

ಅನು : ವಾಕ್ಯ ತನ್ನ ಅರ್ಥದಲ್ಲಿ [ಎಂದರೆ, ವಾಚ್ಯಾರ್ಥದಲ್ಲಿ] ಹೊಂದದೆ, ಕುಂಠಿತ ವಾಗದೆ ನಡೆದು ಯಾವ [ಅರ್ಥ] ಪರತೆಯನ್ನು ಪಡೆಯುವುದೋ ಅಲ್ಲಿ ಅದು ಅದರ [ಎಂದರೆ, ವಾಚ್ಯಾರ್ಥದ] ಪರತೆಯನ್ನೆ ಹೊಂದಿರುತ್ತದೆ. [ತಾತ್ಪರ್ಯ ಇಷ್ಟು : ವಾಕ್ಯದ ಅರ್ಥ ಅಭಿಧೆಯ ಮೂಲಕ ಮೊದಲು ಹೊರಡುತ್ತದೆಯಷ್ಟೆ, ಅದು ಹೊರಡುವುದಕ್ಕೆ ಪದಾರ್ಥಗಳು ಹೊಂದಿಕೊಳ್ಳಬೇಕು. ಮತ್ತು ಅಭಿಧಾಶಕ್ತಿಯಿಂದ ಸ್ಫುರಿಸುವ ಅರ್ಥ ಪೂರ್ಣವಾಗಿ, ಅಭಿಧೆಗೆ ವಿಶ್ರಾಂತಿ ದೊರಕಬೇಕು. ಹೀಗೆ ಪದಗಳ ಅರ್ಥ ಹೊಂದಿ ವಾಕ್ಯಾರ್ಥವಾಗಿ ನೆಲೆನಿಲ್ಲುವವರೆಗೆ 'ವಾಕ್ಯಾರ್ಥ' (ವಾಚ್ಯಾರ್ಥ) ಎಂದು ಪರಿಗಣಿಸತಕ್ಕದ್ದು.]

ಹಾಗಲ್ಲದೆ, ಎಲ್ಲಿ [ವಾಕ್ಯವು] ತನ್ನ ಅರ್ಥದಲ್ಲಿ [ಎಂದರೆ, ವಾಚ್ಯಾರ್ಥದಲ್ಲಿ] ನೆಲೆನಿಂತು ಹೊಂದಿಕೊಳ್ಳುವುದೋ ಮತ್ತು [ಅನಂತರ] ಅದು [ಬೇರೊಂದು ಅರ್ಥಕ್ಷೇತ್ರದಲ್ಲಿ] ಹರಡುತ್ತ ಹೋಗುವುದೋ ಅಲ್ಲಿ ಸರ್ವತ್ರವಾಗಿ 'ಧ್ವನಿ' ಇರುತ್ತದೆ. [ಎಂದರೆ, ಒಮ್ಮೆ ಒಂದು ವಾಕ್ಯದಲ್ಲಿ ಪದಾರ್ಥಗಳು ಹೊಂದಿಕೊಂಡು ಅಭಿಧೇಯಾರ್ಥವನ್ನು ಪ್ರಕಟಿಸಿ ವಿಶ್ರಾಂತವಾದ ಅನಂತರ, ಮತ್ತೊಮ್ಮೆ ಬೇರೆ ವ್ಯಂಗ್ಯಾರ್ಥ ಹೊರಟು ಹಬ್ಬುವುದಾದರೆ, ಅಂಥ ವಾಕ್ಯದಲ್ಲಿ ಅಪವಾದವಿಲ್ಲದೆ – 'ಧ್ವನಿ' ಇದೆಯೆಂದು ತಿಳಿಯಬೇಕು.]

ಹೀಗೆ ಎಲ್ಲೆಡೆಗಳಲ್ಲಿಯೂ ರಸಗಳಿಗೆ ವ್ಯಂಗ್ಯತ್ವವೇ ಇರುತ್ತದೆ.[ಎಂದರೆ, ರಸಗಳಿಗೂ ಕಾವ್ಯಕ್ಕೂ ಇರುವ ಸಂಬಂಧ 'ವ್ಯಂಗ್ಯ–ವ್ಯಂಜಕ'ವೇ ಸರಿ.] ಇನ್ನು ವಸ್ತು ಮತ್ತು ಅಲಂಕಾರಗಳ ವಿಷಯ : (ರಸವನ್ನು ಉದ್ದೇಶಿಸುವುದಕ್ಕೆ ಉದಾಹರಣೆಯಾಗಿ 'ವಿವೃಣ್ವತೀ ಶೈಲಸುತಾಪಿ....' ಎಂಬುದನ್ನೂ, ವಸ್ತುವನ್ನು ಉದ್ದೇಶಿಸಿದುದಕ್ಕೆ ಉದಾ.ಯಾಗಿ 'ಭಮ ಧಮ್ಮಿಅ....' ಎಂಬುದನ್ನೂ, ಅಲಂಕಾರ ಉದ್ದೇಶಿತವಾಗಿರುವುದಕ್ಕೆ 'ಲಾವಣ್ಯಕಾಂತಿಪರಿಪೂರಿತ....' ಎಂಬುದನ್ನೂ ಈ ವ್ಯಾಖ್ಯೆಯಲ್ಲೆ ಹಿಂದೆ ಸೂಚಿಸಿದೆ.) ವಸ್ತು ಮತ್ತು ಅಲಂಕಾರಗಳು ಕಾವ್ಯದಲ್ಲಿ ಕೆಲವೆಡೆ (ರಸದಂತೆ) ವ್ಯಂಗ್ಯವೇ ಆಗಿದ್ದಿರಬಹುದು, ಕೆಲವೆಡೆ ವಾಚ್ಯವಾಗಿರಬಹುದು. ಯಾವ ವಸ್ತು ಅಲಂಕಾರಗಳಲ್ಲಿ ವ್ಯಂಗ್ಯಕ್ಕೆ ಪ್ರಾಧಾನ್ಯವಿರುತ್ತದೆಯೋ ಅಲ್ಲಿ (ರಸದಲ್ಲಿರುವಂತೆ) 'ಧ್ವನಿ' ಇರುತ್ತದೆ. ಉಳಿದೆಡೆಗಳಲ್ಲಿ [ಎಂದರೆ, ವಸ್ತ್ವಲಂಕಾರಗಳು 'ಕೇವಲ ವಾಚ್ಯ'ವಾಗಿರದೆ ವಾಚ್ಯಪ್ರಧಾನವೂ ವ್ಯಂಗ್ಯಮಿಶ್ರಿತವೂ ಆಗಿದ್ದರೆ ಅಲ್ಲಿ] 'ಗುಣೀಭೂತವ್ಯಂಗ್ಯತ್ವ' (ಗೌಣವಾದ ವ್ಯಂಗ್ಯ) ಇರುತ್ತದೆ.೧ ಅದನ್ನು ಹೀಗೆ ಹೇಳಲಾಗಿದೆ : [ಧ್ವನ್ಯಾ : ೧–೧೭ ಮತ್ತು ೨–೫ ] :

'ಯತ್ರಾರ್ಥಃ ಶಬ್ದೋ ವಾ ಯಮರ್ಥಮುಪಸರ್ಜನೀಕೃತಸ್ವಾರ್ಥೌ।
ವ್ಯಙ್ಕ್ತಃ ಕಾವ್ಯವಿಶೇಷಃ ಸ ಧ್ವನಿರಿತಿ ಸೂರಿಭಿಃ ಕಥಿತಃ ॥
ಪ್ರಧಾನೇಽನ್ಯತ್ರ ವಾಕ್ಯಾರ್ಥೇ ಯತ್ರಾಂಗಂ ತು ರಸಾದಯಃ।
ಕಾವ್ಯೇ ತಸ್ಮಿನ್ನಲಂಕಾರೋ ರಸಾದಿರಿತಿ ಮೇ ಮತಿಃ ॥'

[ ಯಾವುದೊಂದು 'ಅರ್ಥ' ಅಥವಾ ಯಾವುದೊಂದು 'ಶಬ್ದ' ತನ್ನನ್ನು ಅಥವಾ ತನ್ನ ಅರ್ಥವನ್ನು ಬಿಟ್ಟುಕೊಟ್ಟು ಬೇರೆ ವ್ಯಂಗ್ಯಾರ್ಥವನ್ನು ಸೂಚಿಸುವಲ್ಲಿ ತೋರುವ ಕಾವ್ಯವಿಶೇಷವನ್ನು ಪಂಡಿತರು 'ಧ್ವನಿ' ಎನ್ನುತ್ತಾರೆ. (ಎಂದರೆ–'ವಾಚ್ಯಾರ್ಥ'ತನ್ನ ಸಹಜವಾದ ಅರ್ಥವನ್ನು ಬಿಟ್ಟುಕೊಟ್ಟು ವ್ಯಂಗ್ಯಾರ್ಥವನ್ನು ಸೂಚಿಸುವಲ್ಲಿ

---

೧ ಧ್ವನಿವಾದಿಗಳು ಕಾವ್ಯದಲ್ಲಿ ಮೂರು ಭೇದ ಗುರುತಿಸುತ್ತಾರೆ : ೧. ಧ್ವನಿಯುಳ್ಳ ಕಾವ್ಯ; ಇದು ಉತ್ತಮ. ೨. ಗುಣೀಭೂತವ್ಯಂಗ್ಯವುಳ್ಳ ಕಾವ್ಯ; ಇದು ಮಧ್ಯಮ. ೩. ಚಿತ್ರಕಾವ್ಯ; ಇದು ಅಧಮ. ವ್ಯಂಗ್ಯಾರ್ಥದ ಪ್ರಾಧಾನ್ಯ ಅಪ್ರಾಧಾನ್ಯಗಳನ್ನವಲಂಬಿಸಿ ಈ ಭೇದಗಳು ಸಿದ್ಧವಾಗುತ್ತವೆ.

ಅಥವಾ 'ಶಬ್ದ'ವೇ ತನ್ನ 'ವಾಚ್ಯಾರ್ಥ'ವನ್ನು ಗೌಣವಾಗಿಟ್ಟುಕೊಂಡು ವ್ಯಂಗ್ಯಾರ್ಥ ಹೊಳೆಸುವಲ್ಲಿ ತೋರುವ ಕಾವ್ಯವಿಶೇಷ 'ಧ್ವನಿ'.)

'ವಾಕ್ಯಾರ್ಥ' (ವಾಚ್ಯಾರ್ಥ)ವೇ ಪ್ರಧಾನವಾಗಿದ್ದು ರಸಾದಿಗಳು ಎಲ್ಲಿ ಅಂಗವಾಗಿ ಬರುವುವೋ ಅಂಥ ಕಾವ್ಯದಲ್ಲಿ, (ಹಾಗೆ ಅಂಗವಾಗಿ ಬಂದ) ರಸಾದಿಗಳು ಅಲಂಕಾರಗಳೆಂದೇ ನಾನು ಭಾವಿಸುತ್ತೇನೆ. (ಹೀಗೆ ಅಲಂಕಾರಮಾತ್ರವಾಗಿ ಬಂದ ರಸಕ್ಕೆ 'ರಸವದಲಂಕಾರ' ಎನ್ನುತ್ತಾರೆ.)೧

ಇದಕ್ಕೆ (ರಸದ ಅಪ್ರಧಾನವ್ಯಂಗ್ಯತ್ವಕ್ಕೆ) ಉದಾಹರಣೆ– [ಧ್ವನ್ಯಾ. : ೧–೧೩ರ ವ್ಯಾಖ್ಯೆಯಲ್ಲಿ ಬಂದದ್ದು] :

'ಉಪೋಢರಾಗೇಣ ವಿಲೋಲತಾರಕಂ
 ತಥಾ ಗೃಹೀತಂ ಶಶಿನಾ ನಿಶಾಮುಖಂ ।
ಯಥಾ ಸಮಸ್ತಂ ತಿಮಿರಾಂಶುಕಂ ತಯಾ
 ಪುರೋಽಪಿ ರಾಗಾದ್ಗಲಿತಂ ನ ಲಕ್ಷಿತಂ ॥'

[ರಾಗ ಮಿಗಿಲ್ವರಿದ ಚಂದ್ರ ಚಂಚಲ ತಾರಕೆಗಳಿರುವ ಇರುಳ ಮೊಗವನ್ನು ಕೊಳ್ಳಲು, ಅದಕ್ಕೆ ಮೊದಲೇ ಸರಾಗಳಾದ ಆಕೆಯ ಕತ್ತಲುಡಿಗೆ ಕಾಣದೆ ಕಳಚಿಹೋಗಿದ್ದಿತು.]

(–ಈ ಸಮಾಸೋಕ್ತ್ಯಲಂಕಾರದಲ್ಲಿನ ವ್ಯಂಗ್ಯ ಅಪ್ರಧಾನವಾದದ್ದು. ಅಲಂಕಾರಿಕವಾದ ಚಂದ್ರೋದಯ ವರ್ಣನೆಯೇ ಇಲ್ಲಿ ವಿವಕ್ಷಿತವಾಗಿದ್ದು, ನಾಯಕನಾಯಿಕಾಶೃಂಗಾರರೂಪವಾದ ರಸದ ವ್ಯಂಗ್ಯ ಗೌಣವಾಗಿದೆ. ಅಂತೆಯೇ ಇದು 'ಗುಣೀಭೂತವ್ಯಂಗ್ಯ'.)

[–ಧ್ವನಿಯ ಸ್ವರೂಪವನ್ನು ಹೇಳಿದಂತಾಯಿತು. ಇನ್ನು ಅದರಲ್ಲಿನ ಮುಖ್ಯ ಭೇದಗಳನ್ನು ಗಮನಿಸಬಹುದು : ]'ಧ್ವನಿ'ಯಲ್ಲಿ 'ವಿವಕ್ಷಿತವಾಚ್ಯ' ಮತ್ತು 'ಅವಿವಕ್ಷಿತವಾಚ್ಯ' ಎಂದು ಎರಡು ವಿಧ. ಪುನಃ, 'ಅವಿವಕ್ಷಿತವಾಚ್ಯ'ದಲ್ಲಿ 'ಅತ್ಯಂತತಿರಸ್ಕೃತಸ್ವಾರ್ಥ' ಮತ್ತು 'ಅರ್ಥಾಂತರಸಂಕ್ರಮಿತವಾಚ್ಯ' ಎಂಬ ಎರಡು ಉಪಭೇದಗಳೂ, 'ವಿವಕ್ಷಿತವಾಚ್ಯ'ದಲ್ಲಿ 'ಅಸಂಲಕ್ಷಿತಕ್ರಮ' ಮತ್ತು 'ಕ್ರಮದ್ಯೋತ್ಯ' ಎಂಬ ಎರಡು ಉಪಭೇದಗಳೂ ಇವೆ.

[ಧ್ವನಿಯ ಎರಡು ಮುಖ್ಯಭೇದಗಳಲ್ಲಿ ಮೊದಲನೆಯದಾದ ಅವಿವಕ್ಷಿತವಾಚ್ಯ : ಇದು ಲಕ್ಷಣಾವೃತ್ತಿಯನ್ನು ಆಶ್ರಯಿಸಿದ್ದು. ಇದರಲ್ಲಿ ವಾಚ್ಯಾರ್ಥ (ಮುಖ್ಯಾರ್ಥ) ವಿವಕ್ಷಿತವಲ್ಲ ಎಂದರೆ ಪ್ರಧಾನವಾಗಿರುವುದಿಲ್ಲ. ಇನ್ನು ಸಂಬಂಧಮೂಲವಾದ ಲಕ್ಷಣಾವೃತ್ತಿಯಲ್ಲಿ ಅಜಹಲ್ಲಕ್ಷಣಾ (ವಾಚ್ಯಾರ್ಥ ಪೂರ್ಣ ತಿರಸ್ಕೃತವಾಗದ ಲಕ್ಷಣೆ) ಮತ್ತು ಜಹಲ್ಲಕ್ಷಣಾ (ವಾಚ್ಯಾರ್ಥ ಪೂರ್ಣ ತಿರಸ್ಕೃತವಾದ ಲಕ್ಷಣೆ) ಎಂಬ ಎರಡು ಭೇದಗಳಿವೆಯಷ್ಟೆ. ಅದಕ್ಕೆ ಅನುಸಾರವಾಗಿ 'ಅವಿವಕ್ಷಿತ ವಾಚ್ಯಧ್ವನಿ'ಯಲ್ಲೂ ಎರಡು ಉಪಭೇದಗಳುಂಟಾಗುತ್ತವೆ : ೧. ಅರ್ಥಾಂತರ ಸಂಕ್ರಮಿತ ವಾಚ್ಯ (ಇಲ್ಲಿ ವಾಚ್ಯಾರ್ಥಕ್ಕೆ ಬಾಧೆ ಬರುವುದಾದರೂ ವಾಚ್ಯಾರ್ಥ ಸಂಪೂರ್ಣ ತಿರಸ್ಕೃತವಾಗುವುದಿಲ್ಲ; ಉದಾ:–ಗಾಡಿ ಸಾಗಿತು.); ೨. ಅತ್ಯಂತತಿರಸ್ಕೃತಸ್ವಾರ್ಥ (ಇಲ್ಲಿ ವಾಚ್ಯಾರ್ಥ ಸಂಪೂರ್ಣ ತಿರಸ್ಕೃತವಾಗುವುದು; ಉದಾ:–ಕೇರಿಯೇ ಜಾತ್ರೆಗೆ ಹೋಗಿತ್ತು.) ಇನ್ನು, ಸಾದೃಶ್ಯಮೂಲವಾದ ಲಕ್ಷಣೆ– (ಇದಕ್ಕೆ ಗೌಣೀಲಕ್ಷಣೆ ಎಂಬ ಹೆಸರೂ ಉಂಟು; ಇದಕ್ಕೆ ಉದಾ:–ಅವನ ಬುದ್ಧಿ ಪಾದರಸ.) – ಅಲ್ಲಿಯೂ ವಾಚ್ಯಾರ್ಥ ಸಂಪೂರ್ಣ ತಿರಸ್ಕೃತವಾಗುವುದರಿಂದ ಅದೂ 'ಅತ್ಯಂತತಿರಸ್ಕೃತಸ್ವಾರ್ಥ'ದೊಳಕ್ಕೇ ಬರುತ್ತದೆ.

ಎರಡನೆಯ ಮುಖ್ಯಭೇದವಾದ 'ವಿವಕ್ಷಿತವಾಚ್ಯ' (ಅಥವಾ ವಿವಕ್ಷಿತಾನ್ಯಪರವಾಚ್ಯ) – ಇದು ಅಭಿಧಾಮೂಲವಾದದ್ದು. ಇಲ್ಲಿ ವಾಚ್ಯಾರ್ಥ ಪೂರ್ಣತಿರಸ್ಕೃತವಾಗಿರುವುದಿಲ್ಲ, ಬದಲು 'ವಿವಕ್ಷಿತ'ವೇ ಆಗಿರುತ್ತದೆ; ಆದರೆ ಆ ವಾಚ್ಯಾರ್ಥ ತನ್ನಲ್ಲೆ ವಿಶ್ರಾಂತವಾಗದೆ ಧ್ವನಿ ಹೊರಡಿಸುತ್ತದೆ; ಅಂತೆಯೇ ಅದು 'ವಿವಕ್ಷಿತ'ವಾಗಿದ್ದರೂ 'ಅನ್ಯಪರ'. ಇದರಲ್ಲಿ ಎರಡು ಉಪಭೇದಗಳು : ಅಸಂಲಕ್ಷ್ಯಕ್ರಮ ಮತ್ತು ಕ್ರಮದ್ಯೋತ್ಯ.

---

೧. ಆನಂದವರ್ಧನನಿಗಿಂತ ಹಿಂದಿನ ಕೆಲವು ಆಲಂಕಾರಿಕರು ಅಲಂಕಾರವೇ ಕಾವ್ಯದ ತಿರುಳೆಂದು ಹೇಳಿ, ಕಾವ್ಯದಲ್ಲಿ ರಸಪ್ರತೀತಿಯಿರುವಲ್ಲೆಲ್ಲ 'ರಸವದಲಂಕಾರ'ವನ್ನು ಹೇಳುತ್ತಾರೆ.

೧. ಅಸಂಲಕ್ಷ್ಯ ಕ್ರಮ : ವಿಭಾವಾದಿಗಳ ಅರಿವಿನ ಜೊತೆಯಲ್ಲೆ ರಸಪ್ರತೀತಿಯುಂಟಾಗುತ್ತದೆಯಷ್ಟೆ. ಇಲ್ಲಿ ಆ ಅರಿವಿಗೂ ಈ ಪ್ರತೀತಿಗೂ ನಡುವೆ ಇರುವ ಕಾಲಕ್ರಮ ಗುರುತಿಸಲಾಗದಷ್ಟು ಅಲ್ಪ. ಹೀಗೆ ವಿಭಾವಾದಿಗಳ ಅರಿವಿನ ಜೊತೆಯಲ್ಲೆ ಪ್ರತೀತವಾದಂತೆ ತೋರಿ ರಸಾದಿಗಳು ನಿಷ್ಪನ್ನವಾಗುತ್ತವೆಯಾದ್ದರಿಂದ, ಅದರ ನಡುವೆ ಲಕ್ಷ್ಯಕ್ಕೆ ಸಿಗದಷ್ಟು ಅಲ್ಪ ಕಾಲಕ್ರಮ ಇರುತ್ತದೆಯಾದ ಕಾರಣ ಅಂಥ ಧ್ವನಿ 'ಅಸಂಲಕ್ಷ್ಯ ಕ್ರಮಧ್ವನಿ'. ೨. ಕ್ರಮದ್ಯೋತ್ಯ (ಅಥವಾ ಸಂಲಕ್ಷ್ಯ ಕ್ರಮ ಅಥವಾ ಅನುರಣನ ಧ್ವನಿ) : ಇಲ್ಲಿ ಯಾವುದೊಂದು ವಾಚ್ಯಾರ್ಥ ಕ್ರಮಕ್ರಮವಾಗಿ ಒಂದಾದ ಅನಂತರ ಒಂದರಂತೆ ಧ್ವನಿಯನ್ನು ಹೊರಡಿಸುತ್ತದೆ. ಇಲ್ಲಿ ವಾಚ್ಯಾರ್ಥಕ್ಕೂ ವ್ಯಂಗ್ಯಾರ್ಥಕ್ಕೂ ನಡುವಿನ ಮೆಟ್ಟಲನ್ನು ಗುರುತಿಸಬಹುದಾಗಿದೆ. ಅಂತೆಯೇ ಇದಕ್ಕೆ 'ಕ್ರಮದ್ಯೋತ್ಯ' ಎಂಬ ಹೆಸರು.

ಇನ್ನು ಈ ಉಪಭೇದಗಳೊಳಗೂ ಉಪಭೇದಗಳನ್ನು ಕಲ್ಪಿಸುತ್ತ ಹೋಗಿದ್ದಾರೆ; ಕೊನೆಯಲ್ಲಿ, ಅಂಥ ಸೂಕ್ಷ್ಮಭೇದಗಳು ಅಗಣಿತ ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ.]

(ಇನ್ನು, ರಸಾದಿಗಳಿಗೂ ಕಾವ್ಯಕ್ಕೂ ಇರುವ ಸಂಬಂಧ ಯಾವುದು ಎಂಬ ಮೂಲಪ್ರಶ್ನೆಗೆ, ಮೇಲಿನ ವಾದದಂತೆ ಉತ್ತರ ಕೊಡುವುದಾದರೆ : ರಸಾದಿಗಳಿಗೂ ಕಾವ್ಯಕ್ಕೂ ಇರುವ ಸಂಬಂಧ 'ವ್ಯಂಗ್ಯವ್ಯಂಜಕ' ರೂಪವಾದದ್ದೇ ಸರಿ.) ಅಸಂಲಕ್ಷ್ಯಕ್ರಮದಿಂದ ನಿಷ್ಪನ್ನವಾಗುವ ರಸಾದಿಗಳು ತಾವೇ ಪ್ರಧಾನವಾಗಿ ಪ್ರತೀತವಾಗುತ್ತಿದ್ದರೆ ಅಲ್ಲಿ ಆ ರಸಾದಿಗಳಿಗೆ 'ಧ್ವನಿತ್ವ'ವನ್ನೇ ಹೇಳಬೇಕು. ಹಾಗಲ್ಲದೆ (ಉಪೋಢ ರಾಗೇಣ....ಇ.,ಯಂತೆ) ರಸಾದಿಗಳಿಗೆ ಕೇವಲ ಅಂಗತ್ವವಿದ್ದರೆ ಅಲ್ಲಿ 'ರಸವದಲಂಕಾರ' ಎನ್ನತಕ್ಕದ್ದು.

[ಇಲ್ಲಿಗೆ, ಧ್ವನಿವಾದಿಗಳ ಪೂರ್ವಪಕ್ಷವನ್ನು ವಿವರವಾಗಿ ಮಂಡಿಸುವ ಧನಿಕನ ಕೆಲಸ ಮುಗಿಯಿತು. ಇನ್ನು ಇದನ್ನು ಖಂಡಿಸಿ ತಮ್ಮ ಸಿದ್ಧಾಂತವನ್ನು ಮಂಡಿಸುವ ಕಾರ್ಯವನ್ನು ಧನಿಕ ಮುಂದಿನ ಕಾರಿಕೆಯ ವ್ಯಾಖ್ಯೆಯಲ್ಲಿ ಕೈಗೊಳ್ಳುತ್ತಾನೆ.]

ಟಿಪ್ಪಣಿ : ಅಗತ್ಯವಾದ ಟಿಪ್ಪಣಿಗಳನ್ನು ವ್ಯಾಖ್ಯೆಯ ಜೊತೆಯಲ್ಲೆ ಕೊಟ್ಟಿದೆ. ಧ್ವನಿ ಸಿದ್ಧಾಂತದ ವಿವರವಾದ ಪರಿಚಯವಿಲ್ಲದೆ ಈ ಭಾಗವನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಅಂಥ ಪರಿಚಯಕ್ಕೆ : ಪ್ರೊ॥ ತೀ.ನಂ.ಶ್ರೀಕಂಠಯ್ಯನವರ 'ಭಾರತೀಯ ಕಾವ್ಯಮೀಮಾಂಸೆ' (ಮುಖ್ಯವಾಗಿ ೪,೫,೧೫ರಿಂದ ೧೯ ಇ. ಅಧ್ಯಾಯಗಳು), ಡಾ॥ ಕೆ. ಕೃಷ್ಣಮೂರ್ತಿ ಅವರ 'ಆನಂದವರ್ಧನನ ಕಾವ್ಯಮೀಮಾಂಸೆ ಮತ್ತು ಕನ್ನಡ ಧ್ವನ್ಯಾಲೋಕ' ಹಾಗೂ 'ಕನ್ನಡ ಕಾವ್ಯಪ್ರಕಾಶ'ದಲ್ಲಿನ ೪, ೫ ಇತ್ಯಾದಿ ಉಲ್ಲಾಸಗಳು – ಇವನ್ನು ನೋಡಬೇಕು.

## ೪೭. ಸ್ಥಾಯಿಪ್ರತೀತಿ :

> ವಾಚ್ಯಾ ಪ್ರಕರಣಾದಿಭ್ಯೋ ಬುದ್ಧಿಸ್ಥಾ ವಾ ಯಥಾ ಕ್ರಿಯಾ ।
> ವಾಕ್ಯಾರ್ಥಃ ಕಾರಕೈರ್ಯುಕ್ತಾ ಸ್ಥಾಯೀಭಾವಸ್ತಥೇತರೈಃ ॥ ೩೭ ॥

ಅನು: [ಯಾವುದೊಂದು ವಾಕ್ಯದ ಅರ್ಥಸಿದ್ಧಿಗಾಗಿ ಅಲ್ಲಿ ಒಂದು ಕ್ರಿಯಾಪದವಿರುತ್ತದೆ. ಕಾರಕಾದಿಗಳೊಡನೆ ಹೊಂದಿದ ಆ 'ಕ್ರಿಯಾಪದ'ವೇ 'ವಾಕ್ಯಾರ್ಥ'ವಾಗುತ್ತದೆ. ಕ್ರಿಯಾಪದ ವಾಕ್ಯದಲ್ಲಿ ಉಕ್ತವಾಗಿರಬಹುದು ಇಲ್ಲವೆ ಬುದ್ಧಿಸ್ಥವಾಗಿದ್ದು ಎಂದರೆ ಅಧ್ಯಾಹೃತವಾಗಿದ್ದು ಅನುಕ್ತವಾಗಿರಬಹುದು. ಅಂಥ] ಉಕ್ತವಾದ ಅಥವಾ ಬುದ್ಧಿಸ್ಥ(ಅಧ್ಯಾಹೃತ)ವಾದ ಕ್ರಿಯಾ[ಪದ]ವು ಕಾರಕದ ಜೊತೆಗೂಡಿ ಪ್ರಕರಣಾದಿಗಳಿಂದ [ಎಂದರೆ, ಹೇಳುವಾತ ಕೇಳುವಾತ ಕಾಲ ಸನ್ನಿವೇಶ ಮೊದಲಾದವುಗಳ ನೆರವಿನಿಂದ] ವಾಕ್ಯಾರ್ಥವಾಗುತ್ತದೆ. [ಅದು] ಹೇಗೋ ಹಾಗೆ, [ಕಾವ್ಯದಲ್ಲಿ, ವಿಭಾವವೇ ಮೊದಲಾದ] ಇತರವುಗಳ ಜೊತೆ ಗೂಡಿ ಸ್ಥಾಯಿಭಾವ [ಇದ್ದಿರುತ್ತದೆ]. [ಎಂದರೆ, ಕ್ರಿಯಾಪದವೇ ಹೇಗೆ ವಾಕ್ಯದಲ್ಲಿ ಅರ್ಥ (ತಾತ್ಪರ್ಯ)ವೋ ಅದರಂತೆಯೇ ಕಾವ್ಯದಲ್ಲಿ ಸ್ಥಾಯಿಭಾವವೇ 'ಅರ್ಥ'ವಾಗಿರುತ್ತದೆ;

ಮತ್ತು, ಕ್ರಿಯೆಯು ಅನುಕ್ತವಾದರೂ ಪ್ರಕರಣವಶದಿಂದ ಪ್ರತೀತವಾಗುವಂತೆ ಕಾವ್ಯದಲ್ಲಿ ಸ್ಥಾಯಿಭಾವ ವಾಚ್ಯವಲ್ಲದಿದ್ದರೂ ವಿಭಾವಾದಿ ಪ್ರಕರಣವಶದಿಂದ ಪ್ರತೀತವಾಗುತ್ತದೆ.]

ವ್ಯಾಖ್ಯೆ : [ಧ್ವನಿವಾದಿಗಳ ಮತವನ್ನು ಹಿಂದೆ ಪರಿಶೀಲಿಸಿದೆವು. ಇನ್ನು ನಮ್ಮ ಸಿದ್ಧಾಂತವನ್ನು] ಇಲ್ಲಿ ಹೇಳಲಾಗುತ್ತದೆ :

[ವಾಕ್ಯದಲ್ಲಿ ಕಾರಕಪದ ಹಾಗೂ ಕ್ರಿಯಾಪದ ಇರುವುವಷ್ಟೆ. ಇದರಲ್ಲಿ ಕಾರಕವನ್ನು 'ಸಿದ್ಧ'ಪದವೆಂದೂ ಕ್ರಿಯೆಯನ್ನು 'ಸಾಧ್ಯ'ಪದವೆಂದೂ ಹೇಳುತ್ತಾರೆ. ವಾಕ್ಯದ ತಾತ್ಪರ್ಯ ಇರುವುದು 'ಸಾಧ್ಯ'ವಾದ ಕ್ರಿಯಾಪದದಲ್ಲಿ, 'ಸಿದ್ಧ'ವಾದ ಕಾರಕದಲ್ಲಲ್ಲ. 'ರಾಮನು ಮನೆಗೆ ಹೋದನು' ಎಂಬ ಒಂದು ವಾಕ್ಯ ನೋಡಿ : ಇಲ್ಲಿ 'ಹೋದನು' ಎಂಬುದೇ ವಾಕ್ಯದ ತಾತ್ಪರ್ಯ; ಅದೇ ವಾಕ್ಯದ ಗತಿ. ಉಳಿದ ಪದಗಳು ಕ್ರಿಯೆಗೆ ಪುಷ್ಟಿಕೊಡುತ್ತವೆ; ತಾತ್ಪರ್ಯವನ್ನು ನಿಷ್ಕೃಷ್ಟವಾಗಿಸುತ್ತವೆ. ಅಂತೆಯೇ ಎಲ್ಲ ವಾಕ್ಯಗಳಲ್ಲೂ ಕ್ರಿಯಾರೂಪವಾದ ವಾಕ್ಯಾರ್ಥ (ತಾತ್ಪರ್ಯ) ಇದ್ದೇ ಇರುತ್ತದೆ.] ಇಲ್ಲಿ ಎರಡು ಲೌಕಿಕ ವಾಕ್ಯಗಳನ್ನು ಪರಿಶೀಲಿಸಬಹುದು : ಮೊದಲನೆಯದಾಗಿ, 'ಹಸುವನ್ನು ತೆಗೆದುಕೊಂಡು ಬಾ' (ಗಾಮಭ್ಯಾಜ) ಎಂಬ ವಾಕ್ಯ; ಇಲ್ಲಿ ಕ್ರಿಯೆ (ತೆಗೆದುಕೊಂಡು ಬಾ) ಉಕ್ತವಾಗಿದೆ. ಎರಡನೆಯದಾಗಿ, 'ಬಾಗಿಲು ಬಾಗಿಲು' (ದ್ವಾರಂ ದ್ವಾರಮ್) ಎಂಬ ವಾಕ್ಯ; ಇಲ್ಲಿ ಕ್ರಿಯೆ ('ತೆರೆ' ಎಂಬುದು) ಅನುಕ್ತವಾಗಿದೆ, ಬುದ್ಧಿಸ್ಥವಾಗಿದ್ದು ಪ್ರಕರಣ (ಸಂದರ್ಭ) ವಶದಿಂದ ಪ್ರತೀತವಾಗುವಂಥದಾಗಿದೆ. ಒಂದರಲ್ಲಿ ಕ್ರಿಯೆ ಉಕ್ತವಾಗಿದ್ದು ಇನ್ನೊಂದರಲ್ಲಿ ಅದು ಪ್ರಕರಣವಶದಿಂದ ಪ್ರತೀತವಾಗುವಂತೆ ಬುದ್ಧಿಸ್ಥವಾಗಿದ್ದರೂ, ಈ ಎರಡೂ ವಾಕ್ಯಗಳಲ್ಲೂ ಕಾರಕದಿಂದ ಪುಷ್ಟವಾದ 'ಕ್ರಿಯೆ'ಯೇ ವಾಕ್ಯಾರ್ಥವಾಗಿದೆ, ವಾಕ್ಯದ ತಾತ್ಪರ್ಯವಾಗಿದೆ.

ಕಾವ್ಯವ್ಯಾಪಾರವಾದರೂ ಇದರಂತೆಯೇ ಇರುತ್ತದೆ. ಅಲ್ಲಿಯೂ ಕೆಲವೆಡೆ ರತ್ಯಾದಿ ಸ್ಥಾಯಿಗಳು ಉಕ್ತ(ವಾಚ್ಯ)ವಾಗಿರುತ್ತದೆ. ಉದಾಹರಣೆಗೆ–'ಪ್ರೀತಿಗಾಗಿ ಹೊಸದಾಗಿ ಮದುವೆಯಾದ ಮಡದಿ...' (ಪ್ರೀತ್ಯೈ ನವೋಢಾ ಪ್ರಿಯಾ....) ಇತ್ಯಾದಿಯಲ್ಲಿ 'ಪ್ರೀತಿಗಾಗಿ' ಎಂಬ ರತಿವಾಚಕ ಶಬ್ದವನ್ನು ಬಳಸಿ, ಸ್ವಶಬ್ದೋಪಾದಾನದಿಂದ, ರತಿ ನೇರವಾಗಿ ಸೂಚಿತವಾಗಿದೆ. ಇನ್ನು ಕೆಲವೆಡೆಗಳಲ್ಲಿ ಹೀಗೆ ರತ್ಯಾದಿ ಸ್ಥಾಯಿವಾಚಕ ಶಬ್ದ ಇರುವುದಿಲ್ಲ. ಎಂದರೆ, ಅಂಥ ಕಡೆ ರತ್ಯಾದಿ ಸ್ಥಾಯಿಗಳು ಸ್ವಶಬ್ದೋಪಾದಾನದಿಂದ ಸೂಚಿತವಾಗುವುದಿಲ್ಲ. ಆದರೆ ಅಲ್ಲಿ ಪ್ರಕರಣಾದಿಗಳ ವಶದಿಂದ ಹಾಗೂ ನಿಯತವಾಗಿ ವಾಚ್ಯರೂಪದಲ್ಲಿಯೇ [ಎಂದರೆ ಸ್ವಶಬ್ದೋಪಾದಾನದಿಂದಲೇ] ಉಪಾತ್ತವಾಗಿರುವ ವಿಭಾವಾನುಭಾವವ್ಯಭಿಚಾರಿಭಾವಗಳಿಂದ ಸ್ಥಾಯಿಯ ಬೋಧವಾಗುತ್ತದೆ. ವಿಭಾವಾದಿಗಳಿಂದ ಸ್ಥಾಯಿಯ ಬೋಧ ಉಂಟಾಗುವುದು ಹೇಗೆ ಎಂದು ಪ್ರಶ್ನಿಸಿದರೆ ಅದಕ್ಕೆ ಉತ್ತರ : ವಿಭಾವಾದಿಗಳಿಗೂ ಸ್ಥಾಯಿಗೂ 'ಅವಿನಾಭಾವ'ವಿರುವ ಕಾರಣ ವಿಭಾವಾದಿಗಳಿಂದ ಸ್ಥಾಯಿಯ ಬೋಧ ಆಗಲೇಬೇಕು. [ಎಂದರೆ – ವಿಭಾವಾನುಭಾವವ್ಯಭಿಚಾರಿಗಳು ಹುಟ್ಟುವುದು ಯಾವುವಾದರೂ ಸ್ಥಾಯಿಯಿಂದ. ವಿಭಾವಾದಿಗಳಿಗೆ ಸ್ಥಾಯಿಯೇ ಮೂಲ. ಇಂಥ ಸ್ಥಾಯಿಯಿಂದ ಇಂಥ ರೀತಿಯ ವಿಭಾವಾದಿಗಳು ಹುಟ್ಟುತ್ತವೆ ಎಂಬುದು ಸಹೃದಯನಿಗೆ ಸಂಸ್ಕಾರಬಲದಿಂದ ಮನಗೊಂಡು ಹೋಗಿರುತ್ತದೆ. ಅಂತೆಯೇ ವಿಭಾವಾದಿಗಳನ್ನು ನೋಡಿದೊಡನೆಯೇ ಅದಕ್ಕೆ ಮೂಲವಾದ ಸ್ಥಾಯಿಯ ಬೋಧ ಸಹೃದಯನಲ್ಲಿ ಉಂಟಾಗುತ್ತದೆ. 'ಸ್ಥಾಯಿಯ ವಿನಾ ವಿಭಾವಾದಿಗಳು ಇರಲಾರವು ಹಾಗೂ ವಿಭಾವಾದಿಗಳ ವಿನಾ ಸ್ಥಾಯಿಯು ಪ್ರಕಟವಾಗಲಾರದು' ಎಂಬುದೇ ಸ್ಥಾಯಿ ಹಾಗೂ ವಿಭಾವಾದಿಗಳ ನಡುವಣ 'ಅವಿನಾಭಾವ'.] ಪ್ರಕರಣದ ದೆಸೆಯಿಂದ ಹಾಗೂ ವಿಭಾವಾದಿಗಳ ದೆಸೆಯಿಂದ ಆಯಾ ಸ್ಥಾಯಿಭಾವ ಭಾವಕರ ಚೇತನದಲ್ಲಿ ಸಾಕ್ಷಾತ್ತಾಗಿ ವಿಪರಿವರ್ತಿಸುತ್ತದೆ, ಭಾವಕನ ಚೇತನವನ್ನು ವ್ಯಾಪಿಸಿ ಅಲ್ಲೆ ಸುತ್ತುತ್ತದೆ. ಯಾವುದೊಂದು ಸ್ಥಾಯಿಗೆ ನಿಯತವಾದ ವಿಭಾವ ಅನುಭಾವ ವ್ಯಭಿಚಾರಿಭಾವ ಇವು ಇರುತ್ತವಷ್ಟೆ. ಕಾವ್ಯದಲ್ಲಿ ಆ ವಿಭಾವಾದಿಗಳು ತಂತಮ್ಮ ಶಬ್ದಗಳಿಂದ [ಎಂದರೆ, ವಿಭಾವಾನುಭಾವವ್ಯಭಿಚಾರಿವಾಚಕ ಶಬ್ದಗಳಿಂದ] ವಾಚ್ಯವಾಗಿರುತ್ತವೆ. ಅಂಥ ವಾಚ್ಯ ಶಬ್ದಗಳಿಂದ ಸಹೃದಯನಲ್ಲಿ ಆಯಾ ವಿಭಾವಾದಿಗಳ ಅರಿವುಂಟಾಗುತ್ತದೆ; ಸಂಸ್ಕಾರಬಲದಿಂದ (ಹಿಂದಿನ ತನ್ನ ಅನುಭವ ಪರಂಪರೆಗಳಿಂದ) ಆತನಲ್ಲಿ ಉಂಟಾದ ವಿಭಾವಾದಿಗಳ ಜ್ಞಾನ ಪ್ರೌಢಿಮೆಯನ್ನು ಹೊಂದಿ, [ಆ ವಿಭಾವಾದಿಗಳಿಗೆ ಮೂಲವಾದ] ಸ್ಥಾಯಿಯ ಪ್ರತೀತಿಗೆ ಕಾರಣವಾಗುತ್ತದೆ. ವಾಕ್ಯದಲ್ಲಿ ಕ್ರಿಯೆ ಉಕ್ತವಾಗಿರಬಹುದು ಅಥವಾ ಬುದ್ಧಿಸ್ಥವಾಗಿರಬಹುದು; ಹೇಗಿದ್ದರೂ 'ಕ್ರಿಯೆ'ಯೇ ಅಲ್ಲಿನ ತಾತ್ಪರ್ಯ ಅಥವಾ ಅರ್ಥ. ಹಾಗೆಯೇ ಕಾವ್ಯದಲ್ಲಿ

ಸ್ಥಾಯಿ ಉಕ್ತವಾಗಿ ಇಲ್ಲವೆ ಅನುಕ್ತವಾಗಿದ್ದರೂ ವಿಭಾವಾದಿಗಳಿಂದ ಪ್ರತೀತವಾಗಿ ಸಹೃದಯನ ಹೃದಯದಲ್ಲಿ ವಿಪರಿವರ್ತಿಸುತ್ತದೆ; ಮತ್ತು ಹೇಗೇ ಇರಲಿ ಕಾವ್ಯದಲ್ಲಿ ಸ್ಥಾಯಿಯೇ ತಾತ್ಪರ್ಯ, ಅದೇ ಅರ್ಥ.

ಇಲ್ಲಿ ಪೂರ್ವಪಕ್ಷದವರು ಒಂದು ಸಂದೇಹವನ್ನೆತ್ತಬಹುದು : ವಾಕ್ಯಾರ್ಥ ಸಿದ್ಧವಾಗುವುದು ಪದಾರ್ಥ (ಪದಗಳ ಅರ್ಥ)ಗಳನ್ನು ಅವಲಂಬಿಸಿ. ಪದವೇ ಇಲ್ಲದಾಗ ಪದಾರ್ಥವೂ ಇರಲಾರದು. ಹೀಗಿರುವಾಗ, ಕಾವ್ಯದಲ್ಲಿ ಸ್ಥಾಯಿವಾಚಕ ಪದಗಳೇ ಇಲ್ಲದಿರುವಾಗ [ಎಂದರೆ, ಸ್ಥಾಯಿ ವಾಚ್ಯವಲ್ಲದಿರುವಾಗ] ಅಲ್ಲಿ 'ಪದಾರ್ಥ'ವೂ ಇಲ್ಲ. ಪದಾರ್ಥಗಳೇ ಇಲ್ಲವಾದಾಗ ವಾಕ್ಯಾರ್ಥ ಹೇಗೂ ಇಲ್ಲ. ಆದಕಾರಣ, ಕಾವ್ಯದಲ್ಲಿ ಸ್ಥಾಯಿಯೇ ವಾಕ್ಯಾರ್ಥ ಅಥವಾ ತಾತ್ಪರ್ಯ ಎಂದು ಹೇಗೆ ಒಪ್ಪಿಕೊಳ್ಳೋಣ?

ಈ ಸಂಶಯಕ್ಕೆ ಉತ್ತರ : ಮೂಲತಃ ಪರೀಕ್ಷಿಸಿದರೆ ವಾಕ್ಯಾರ್ಥಶಕ್ತಿ ಅಥವಾ ತಾತ್ಪರ್ಯ ಶಕ್ತಿ ತನ್ನ ಉದ್ದಿಷ್ಟ ಕಾರ್ಯ(ಪ್ರಯೋಜನ)ವನ್ನು ಸಾಧಿಸಿದಲ್ಲದೆ ನಿಲ್ಲುವುದಿಲ್ಲ. ಎಂದರೆ, ಹೇಳುವಾತ ಉದ್ದೇಶಿಸಿರುವ ಪ್ರಯೋಜನ ಸಿದ್ಧಿಸುವತನಕ ಅದು ಪ್ರಸಾರವಾಗುತ್ತದೆ. ಅದನ್ನ ಬೇರೆ ಮಾತಿನಲ್ಲಿ ಹೇಳುವುದಾದರೆ – ತಾತ್ಪರ್ಯಶಕ್ತಿ ಕಾರ್ಯಪರ್ಯಾವಸಾಯಿತ್ವ ಉಳ್ಳದು. ಸಮರ್ಥನೆಗೆ ಬೇಕಿದ್ದರೆ ಯಾವ ಪೌರುಷೇಯ (ಲೌಕಿಕ) ವಾಕ್ಯವನ್ನೆ ತೆಗೆದುಕೊಳ್ಳಬಹುದು ಅಥವಾ ಯಾವ ಅಪೌರುಷೇಯ (ವೈದಿಕ) ವಾಕ್ಯವನ್ನೆ ತೆಗೆದುಕೊಳ್ಳಬಹುದು. ಪೌರುಷೇಯವಿರಲಿ ಅಪೌರುಷೇಯವಿರಲಿ ವಾಕ್ಯಗಳು ಕಾರ್ಯಪರವಾದವು. ಎಲ್ಲ ವಾಕ್ಯಕ್ಕೂ ಯಾವುದಾದ ರೊಂದು ಕಾರ್ಯ (ಪ್ರಯೋಜನ) ಲಕ್ಷ್ಯವಾಗಿರುತ್ತದೆ. ಆ ಪ್ರಯೋಜನವನ್ನು ಸಾಧಿಸದಿದ್ದರೆ ವಾಕ್ಯ ಸಾರ್ಥಕವಾಗುವುದಿಲ್ಲ. ಅಂಥ ಅಸಾರ್ಥಕ ವಾಕ್ಯ ಹುಚ್ಚರ ಮಾತಿನಂತಿರುತ್ತದೆ; ಅರ್ಥರಹಿತವಾದ ಶಬ್ದಸಮೂಹವಾಗುತ್ತದೆ. ಅಂಥದನ್ನು ಯಾರೂ ಸ್ವೀಕರಿಸುವುದಿಲ್ಲ.

ಕಾವ್ಯಶಬ್ದಗಳಿಗೆ [ಎಂದರೆ, ಕಾವ್ಯವಾಕ್ಯಕ್ಕೆ] ಕೂಡ ಇಂಥದೊಂದು ಕಾರ್ಯ ಅಥವಾ ಪ್ರಯೋಜನವಿದೆ. ಇನ್ನಿತರ ವಾಕ್ಯಗಳಿಗೂ ಅವುಗಳ ಕಾರ್ಯಗಳಿಗೂ ಹೇಗೆ ಹೊಂದಾಣಿಕೆಯುಂಟೋ ಅದೇ ಬಗೆಯ ಹೊಂದಾಣಿಕೆ ಕಾವ್ಯವಾಕ್ಯಕ್ಕೂ ಕಾವ್ಯಪ್ರಯೋಜನಕ್ಕೂ ನಡುವೆ ಇದೆ. ಈ ಹೊಂದಾಣಿಕೆಯನ್ನ 'ಅನ್ವಯವ್ಯತಿರೇಕಸಂಬಂಧ' ಎನ್ನುತ್ತಾರೆ [ಎಂದರೆ–ಕಾವ್ಯವಾಕ್ಯವಿರುವಲ್ಲಿ ಅದರ ಪ್ರಯೋಜನವೂ ಇರಲೇ ಬೇಕು; ಇದು ಅನ್ವಯ. ಪ್ರಯೋಜನವಿಲ್ಲದಲ್ಲಿ ಕಾವ್ಯವಾಕ್ಯವೂ ಇರಲಾರದು; ಇದು ವ್ಯತಿರೇಕ. ಅದು ಇದ್ದಲ್ಲಿ ಇದಿರುತ್ತದೆ, ಅದು ಇಲ್ಲದಲ್ಲಿ ಇದೂ ಇರುವುದಿಲ್ಲ– 'ತತ್ಸತ್ತ್ವೇ ತತ್ಸತ್ತ್ವಂ ಅನ್ವಯಃ ತದಭಾವೇ ತದಭಾವಃ ವ್ಯತಿರೇಕಃ'– ಎಂಬುದೇ ಅನ್ವಯವ್ಯತಿರೇಕಸಂಬಂಧ.] ಇನ್ನು ಕಾವ್ಯವಾಕ್ಯದ ಕಾರ್ಯ ಅಥವಾ ಪ್ರಯೋಜನ ಯಾವುದು? ನಿರತಿಶಯವಾದ ಸುಖದ ಆಸ್ವಾದವೇ ಕಾವ್ಯವಾಕ್ಯದ ಪ್ರಯೋಜನ. ಅದನ್ನು ಬಿಟ್ಟು ಬೇರೆ ಪ್ರಯೋಜನ ಕಾವ್ಯಕ್ಕಿಲ್ಲ. ಅಂತೆಯೇ, ಅನ್ವಯವ್ಯತಿರೇಕಸಂಬಂಧದಿಂದ, ಕಾವ್ಯವಾಕ್ಯವಿದ್ದಲ್ಲಿ ಅದಕ್ಕೆ ನಿರತಿಶಯಸುಖಾಸ್ವಾದವೆಂಬ ಪ್ರಯೋಜನ ಇರಲೇಬೇಕು. ಪ್ರತಿಪಾದಕ ಹಾಗೂ ಪ್ರತಿಪಾದ್ಯ ಇವೆರಡರ ಪ್ರವೃತ್ತಿಯೂ ಅಂಥ ನಿರತಿಶಯಸುಖವನ್ನೆ ಕುರಿತಿದೆ. ಆದಕಾರಣ, ಕೇವಲ ಆನಂದವನ್ನು ಹುಟ್ಟಿಸುವುದೇ ಕಾವ್ಯವಾಕ್ಯದ ಪ್ರಯೋಜನವೆಂಬುದು ನಿಶ್ಚಯ. ರಸಾನುಭವವೇ ಕಾವ್ಯದ ಆನಂದ; ರಸಾನುಭವ ಉಂಟಾಗುವುದು ಸ್ಥಾಯಿಭಾವದ ಉದ್ಬೋಧದಿಂದಲೇ. ವಿಭಾವಾದಿಗಳಿಂದ ಪುಷ್ಟವಾದ ಸ್ಥಾಯಿಯೇ ರಸಕ್ಕೆ ಹಾಗೂ ಆನಂದಕ್ಕೆ ಕಾರಣೀಭೂತವಾಗಿದೆ. [ಎಂದಾಗ, ಇತರ ವಾಕ್ಯ ಹೇಗೆ ತನ್ನ ಪ್ರಯೋಜನವನ್ನು ಸಾಧಿಸಿಕೊಳ್ಳದೆ ವಿಶ್ರಾಂತಿಹೊಂದುವುದಿಲ್ಲವೊ ಹಾಗೆ ಕಾವ್ಯವಾಕ್ಯವೂ ತನ್ನ ಪ್ರಯೋಜನವಾದ ರಸವನ್ನು ಅಥವಾ ರಸಕ್ಕೆ ಮೂಲವಾದ ಸ್ಥಾಯಿಯನ್ನು ಸಾಧಿಸಿಕೊಳ್ಳದೆ ವಿಶ್ರಾಂತಿಹೊಂದುವುದಿಲ್ಲ.] ಸ್ಥಾಯಿ ಪ್ರತೀತವಾಗುವವರೆಗೂ ಕಾವ್ಯವಾಕ್ಯ ಮುಂದುವರಿಯುತ್ತದೆ.

ವಾಕ್ಯದ [ಎಂದರೆ, ಕಾವ್ಯವಾಕ್ಯದ] ಅಭಿಧಾಶಕ್ತಿಯೊಂದಿರುತ್ತದೆಯಷ್ಟೆ; ಮತ್ತು ಆ ವಾಕ್ಯದ ಪ್ರಯೋಜನವಾದ ಒಂದು ರಸ [ಹಾಗೂ ಅದಕ್ಕೆ ಮೂಲವಾಗಿ ಒಂದು ಸ್ಥಾಯಿ] ಇರುತ್ತದೆಯಷ್ಟೆ. ಕಾವ್ಯವಾಕ್ಯದ ಪ್ರಯೋಜನವಾದ ರಸವೇ[ಅಥವಾ ಸ್ಥಾಯಿಯೇ] ವಾಕ್ಯದ ಅಭಿಧಾಶಕ್ತಿಯನ್ನು ತನ್ನವರೆಗೂ ಆಕರ್ಷಣೆ ಮಾಡಿಕೊಳ್ಳುತ್ತದೆ. [ಎಂದರೆ, ವಾಕ್ಯದ ಅಭಿಧಾಶಕ್ತಿಯೇ ರಸ ಅಥವಾ ಸ್ಥಾಯಿ ಸಿದ್ಧಿಸುವವರೆಗೆ ವಿಶ್ರಾಂತವಾಗದೆ ತಾನೇ ಸಾಗುತ್ತದೆ.] ಮತ್ತು, ರಸ ಅಥವಾ ಸ್ಥಾಯಿ ತನ್ನ ಸಿದ್ಧಿಗಾಗಿ ಬೇಕಾಗುವ ಬೇರೆ ಬೇರೆ ವಿಭಾವಗಳ (ವಿಭಾವಪ್ರತಿಪಾದನೆಗಳ) ದ್ವಾರದಿಂದ ಅಭಿಧಾಶಕ್ತಿಯನ್ನು ತನ್ನವರೆಗೆ ಸೆಳೆದುಕೊಳ್ಳುತ್ತದೆ. ಆದ್ದರಿಂದ ಇಲ್ಲಿ ವಿಭಾವಾದಿಗಳೇ 'ಪದಾರ್ಥ'ಗಳೆಂದೂ, ಅವುಗಳಿಂದ ಪುಷ್ಟವಾದ ರತ್ಯಾದಿ ಸ್ಥಾಯಿಭಾವಗಳೇ

'ವಾಕ್ಯಾರ್ಥ'ವೆಂದೂ ತಿಳಿಯತಕ್ಕದ್ದು. ಹೀಗೆ ವಿಭಾವಾದಿಗಳನ್ನು 'ಪದಾರ್ಥ'ಗಳನ್ನಾಗಿ ಮತ್ತು ಸ್ಥಾಯಿ ಅಥವಾ ರಸವನ್ನು 'ವಾಕ್ಯಾರ್ಥ' ಅಥವಾ ತಾತ್ಪರ್ಯವನ್ನಾಗಿ ಯಾವ ವಾಕ್ಯ ಹೊಂದಿರುತ್ತವೆಯೋ ಅದೇ ಕಾವ್ಯವಾಕ್ಯ. [ಸ್ಥಾಯಿ ಅಥವಾ ರಸ ಎಂಬುದು ಕಾವ್ಯವಾಕ್ಯದ ವಾಕ್ಯಾರ್ಥವೇ ಆಗಿದ್ದು ಅದು ಕಾವ್ಯವಾಕ್ಯದ ತಾತ್ಪರ್ಯಶಕ್ತಿಯಿಂದಲೇ ಪ್ರತೀತವಾಗುತ್ತದೆಯೆಂಬುದು ಇಲ್ಲಿ ಸಿದ್ಧವಾಯಿತು. ಇಷ್ಟಾದಮೇಲೆ ಸ್ಥಾಯಿಯ ಅಥವಾ ರಸದ ಬೋಧೆಗೆ ಅಭಿಧಾ ಲಕ್ಷಣಾ ತಾತ್ಪರ್ಯ – ಈ ವೃತ್ತಿಗಳಲ್ಲದೆ ವ್ಯಂಜನ ಮುಂತಾದ ಬೇರೆ ವೃತ್ತಿಗಳು ಬೇಕಿಲ್ಲವೆಂಬುದು ಸ್ಪಷ್ಟ. ]

ಗೀತ (ಹಾಡು) ಮುಂತಾದವುಗಳಲ್ಲಿ ವಾಚ್ಯವಾಚಕಭಾವವಿಲ್ಲದೆಯೇ [ಎಂದರೆ, ಅರ್ಥಾಪೇಕ್ಷೆಯಿಲ್ಲದೆಯೇ] ಸುಖ ಹುಟ್ಟುತ್ತದೆಯಷ್ಟೆ, ಹಾಗೆಯೇ ಕಾವ್ಯದಲ್ಲಿ ವಾಚ್ಯವಾಚಕಭಾವವಿಲ್ಲದೆಯೇ ಸುಖ ಹುಟ್ಟುತ್ತದೆ–ಎಂದು ಪೂರ್ವಪಕ್ಷದವರು ವಾದಿಸಬಹುದು. ಅದು ತಪ್ಪು. ಏಕೆಂದರೆ, ಕಾವ್ಯದಲ್ಲಿ ಬರುವ ವಿಶಿಷ್ಟವಾದ ವಿಭಾವ ಅನುಭಾವ ವ್ಯಭಿಚಾರಿಭಾವ–ಈ ಉಪಕರಣಗಳನ್ನು ಚೆನ್ನಾಗಿ ತಿಳಿದುಕೊಳ್ಳದೆ ಆನಂದ ಹುಟ್ಟುವುದಿಲ್ಲ; ಮತ್ತು ಆ ವಿಶಿಷ್ಟ ವಿಭಾವಾದಿಗಳಿಗೆ ಹೊಂದುವ ರತ್ಯಾದಿ ಸ್ಥಾಯಿಗಳನ್ನು ಭಾವಿಸಿಕೊಳ್ಳದವರಿಗೆ ಆನಂದ ಹುಟ್ಟುವುದಿಲ್ಲ. [ಎಂದರೆ, ವಾಚ್ಯವಾಚಕ ಸಂಬಂಧವನ್ನು ತಿರಸ್ಕರಿಸಿ ಕಾವ್ಯದ ಪ್ರಯೋಜನ ಸಿದ್ಧಿಸುವುದಿಲ್ಲ.]

ನಾವು ಇಲ್ಲಿ ಮಾಡಿರುವ ಸಿದ್ಧಾಂತದಿಂದಾಗಿ [ರಸ ಹಾಗೂ ಕಾವ್ಯಗಳ ನಡುವೆ ವಾಚ್ಯವಾಚಕ ಭಾವವನ್ನು ಬಿಟ್ಟು ಬೇರೆ ಸಂಬಂಧವನ್ನು ಕಲ್ಪಿಸುವ ಹಲವು ಆಲಂಕಾರಿಕರ] 'ಅತಿಪ್ರಸಂಗ'ವೂ ತಾನಾಗಿಯೇ ಬಿದ್ದುಹೋಗುತ್ತದೆ. ವಾಕ್ಯಾರ್ಥವನ್ನು ನಿರೂಪಿಸುವಲ್ಲಿ ಅಭಿಧಾ ಮುಂತಾದ ಶಕ್ತಿಗಳನ್ನು (ಅಭಿಧಾ, ಲಕ್ಷಣಾ ಮತ್ತು ತಾತ್ಪರ್ಯಶಕ್ತಿ ) [ಹಿಂದಿನವರೇ] ಕಲ್ಪಿಸಿದ್ದಾರೆ. ಅಂಥ ಅಭಿಧಾದಿ ಶಕ್ತಿಗಳಿಂದಲೇ ಸಮಸ್ತ ವಾಕ್ಯಾರ್ಥವೂ ತಿಳಿಯುತ್ತವೆ. (ಲೋಕವಾಕ್ಯದಲ್ಲೂ ಹಾಗೆ, ಕಾವ್ಯ ವಾಕ್ಯದಲ್ಲೂ ಹಾಗೆ.) ಅಭಿಧಾದಿಶಕ್ತಿಗಳೇ ಕಾವ್ಯಾರ್ಥ ನಿರ್ಣಯಕ್ಕೂ ಸಾಲುತ್ತಿರುವಾಗ ಮತ್ತೆ [ವ್ಯಂಜನ (ಧ್ವನಿ) ಮುಂತಾದ] ಬೇರೊಂದು ಶಕ್ತಿಯನ್ನು ಕಲ್ಪಿಸುವುದು ಕೇವಲ ಪ್ರಯಾಸ. ಅದರಿಂದ ಯಾವ ಸಾರ್ಥಕವೂ ಇಲ್ಲ. 'ಕಾವ್ಯನಿರ್ಣಯ' [ಎಂಬ ನಮ್ಮ ಬೇರೊಂದು ಗ್ರಂಥ]ದಲ್ಲಿ ನಾವು [ಅದನ್ನೆ ಹೀಗೆ] ಹೇಳಿದ್ದೇವೆ : [ಆಕರ : ಅನುಪಲಬ್ಧವಾಗಿದ್ದು ಇಲ್ಲಿನ ಉದ್ಧೃತಿಯಿಂದ ಮಾತ್ರವೇ ತಿಳಿಯುವ ಧನಿಕನ ಕಾವ್ಯಶಾಸ್ತ್ರಗ್ರಂಥವಾದ 'ಕಾವ್ಯನಿರ್ಣಯ'.]

'ತಾತ್ಪರ್ಯಾನತಿರೇಕಾಚ್ಚ ವ್ಯಂಜಕತ್ವಸ್ಯ ನ ಧ್ವನಿಃ।
ಕಿಮುಕ್ತಂ ಸ್ಯಾದಶ್ರುತಾರ್ಥತಾತ್ಪರ್ಯೇಽನ್ಯೋಕ್ತಿರೂಪಿಣಿ ॥ ೧ ॥

ವಿಷಂ ಭಕ್ಷಯ ಪೂರ್ವೋ ಯಶ್ಚೈವಂ ಪರಸುತಾದಿಷು।
ಪ್ರಸಜ್ಯತೇ ಪ್ರಧಾನತ್ವಾದ್ಧ್ವನಿತ್ವಂ ಕೇನ ವಾರ್ಯತೇ ॥ ೨ ॥

ಧ್ವನಿಶ್ಚೇತ್ಸ್ವಾರ್ಥವಿಶ್ರಾಂತಂ ವಾಕ್ಯಮರ್ಥಾಂತರಾಶ್ರಯಮ್।
ತತ್ಪರತ್ವಂ ತ್ವವಿಶ್ರಾಂತೌ ತನ್ನ ವಿಶ್ರಾಂತ್ಯಸಂಭವಾತ್ ॥ ೩ ॥

ಏತಾವತ್ಯೇವ ವಿಶ್ರಾಂತಿಸ್ತಾತ್ಪರ್ಯಸ್ಯೇತಿ ಕಿಂ ಕೃತಮ್।
ಯಾವತ್ಕಾರ್ಯಪ್ರಸಾರಿತ್ವಾತ್ತಾತ್ಪರ್ಯಂ ನ ತುಲಾಧೃತಮ್ ॥ ೪ ॥

ಭ್ರಮ ಧಾರ್ಮಿಕ ವಿಶ್ರಬ್ಧಮಿತಿ ಭ್ರಮಿಕೃತಾಸ್ಪದಮ್।
ನಿರ್ವ್ಯಾವೃತ್ತಿ ಕಥಂ ವಾಕ್ಯಂ ನಿಷೇಧಮುಪಸರ್ಪತಿ ॥ ೫ ॥

ಪ್ರತಿಪಾದ್ಯಸ್ಯ ವಿಶ್ರಾಂತಿರಪೇಕ್ಷಾಪೂರಣಾದ್ಯದಿ।
ವಕ್ತುರ್ವಿವಕ್ಷಿತಾಪ್ರಾಪ್ತೇರವಿಶ್ರಾಂತಿರ್ನ ವಾ ಕಥಮ್ ॥ ೬ ॥

ಪೌರುಷೇಯಸ್ಯ ವಾಕ್ಯಸ್ಯ ವಿವಕ್ಷಾಪರತಂತ್ರತಾ।
ವಕ್ತ್ರಭಿಪ್ರೇತತಾತ್ಪರ್ಯಮತಃ ಕಾವ್ಯಸ್ಯ ಯುಜ್ಯತೇ' ॥ ೭ ॥

[ಹಿಂದೆ ವ್ಯಾಖ್ಯಾನವಲ್ಲೆಂತೂ ಅಂತೆಯೇ ಇಲ್ಲಿನ ಮೊದಲ ಕಾರಿಕೆಗಳಲ್ಲಿ ಪೂರ್ವಪಕ್ಷವನ್ನು ಮಂಡಿಸಲಾಗಿದೆ; ಅನಂತರದ ಕಾರಿಕೆಗಳಲ್ಲಿ ಪೂರ್ವಪಕ್ಷದ ಖಂಡನೆ ಹಾಗೂ ಸಿದ್ಧಾಂತಪಕ್ಷದ ಮಂಡನೆ ಬಂದಿದೆ.]

ಮೇಲಿನ ಶ್ಲೋ.ಸಿ.ದ ಕಾರಿಕೆಗಳ ಅನುವಾದ :

೧. ತಾತ್ಪರ್ಯ(ವಾಕ್ಯಾರ್ಥ)ವನ್ನು ಮೀರಿ, ವ್ಯಂಜಕತ್ವವುಳ್ಳ [ಮತ್ತೊಂದು ಶಕ್ತಿಮೂಲವಾದ] 'ಧ್ವನಿ' ಇಲ್ಲ ಎಂದು ಹೇಗೆ ಹೇಳುತ್ತೀರಿ? ಅನ್ಯೋಕ್ತಿರೂಪವುಳ್ಳ [ಕಾವ್ಯದಲ್ಲಿ] ಅರ್ಥ ತಾತ್ಪರ್ಯ(ಪದಾರ್ಥವಾಕ್ಯಾರ್ಥ)ಗಳು ಅಶ್ರುತವಾಗಿರಲು [ಅಶ್ರುತವಾದುದನ್ನು ವ್ಯಂಜಿಸುವ ಸಲುವಾಗಿ ತಾತ್ಪರ್ಯಶಕ್ತಿಯನ್ನು ಮೀರಿದ ಮತ್ತೊಂದು ಶಕ್ತಿ–ವ್ಯಂಜನ–ಇರಲೇಬೇಕಲ್ಲವೆ?]

[ಉದಾಹರಣೆಗೆ– 'ಕಸ್ತ್ವಂ ಭೋಃ ಕಥಯಾಮಿ ದೈವಹತಕಂ....' (೪-೧೦ರಲ್ಲಿ ಬಂದದ್ದು) ಎಂಬ ಅನ್ಯೋಕ್ತಿಯಲ್ಲಿ ವಿವಕ್ಷಿತವಾದದ್ದು ಶಾಖೋಟಕದ ನಿರ್ವೇದವಲ್ಲ. ಬದಲು, ಶಾಖೋಟಕದ ನೆಪದಲ್ಲಿ ಮನುಷ್ಯನಿರ್ವೇದವೇ ಅಲ್ಲಿ ವಿವಕ್ಷಿತವಾಗಿದೆ. ಆದರೆ ಅಲ್ಲಿ ಉಕ್ತವಾಗಿರುವ ಪದಾರ್ಥಗಳಿಂದ ಹೊರಡುವ ತಾತ್ಪರ್ಯ ಈ ವಿವಕ್ಷಿತಾರ್ಥವನ್ನು ಹೊರಡಿಸಲು ಅಸಮರ್ಥವಾಗಿದೆ. ಆದಕಾರಣ ಅಂಥಲ್ಲಿ ವಿವಕ್ಷಿತಾರ್ಥವನ್ನು ಹೊರಡಿಸುವ ಸಲುವಾಗಿ ತಾತ್ಪರ್ಯಶಕ್ತಿಯನ್ನು ಮೀರಿದ ವ್ಯಂಜನ ಉಂಟೆಂದೂ, ಆದ್ದರಿಂದಲೇ ಅಲ್ಲಿ 'ಧ್ವನಿ'ಯನ್ನು ಹೇಳಲಾಗಿದೆಯೆಂದೂ ಧ್ವನಿವಾದಿಗಳು ವಾದಿಸುತ್ತಾರೆ. ಹೀಗಿರುವಾಗ ನಾವು ಧ್ವನಿಯನ್ನು ಏಕೆ ವಿರೋಧಿಸಬೇಕು?] (ಇಲ್ಲಿ ಪೂರ್ವಪಕ್ಷವಾದ ಧ್ವನಿಪಕ್ಷವನ್ನು ಮಂಡಿಸಲಾಗಿದೆ.)

೨. 'ವಿಷವನ್ನು ತಿನ್ನು' ಎಂದು ಮೊದಲಾಗಿ ಹೇಳುವ ಮಾತು [ಪ್ರಕರಣಾನುಸಾರ ಹೇಳುವವನು ತಂದೆಯೆಂದು ತಿಳಿದಮೇಲೆ] ಸುತಾದಿಗಳ ಪರವಾಗಿ ಮುಖ್ಯತೆಯಿಂದ ಅನ್ವಯಿಸುತ್ತದೆ. [ಅಲ್ಲಿ] 'ಧ್ವನಿತ್ವ'ವನ್ನು ನಿವಾರಿಸಲು (ತಿರಸ್ಕರಿಸಲು) ಯಾರಿಗೆ ಸಾಧ್ಯ? ೧

[ಅಂಥ ಪ್ರಯೋಗದ ತಾತ್ಪರ್ಯ 'ವಿಷವನ್ನು ತಿನ್ನು' ಎಂಬ ವಿಧಿಯನ್ನೇ ಹೇಳುತ್ತದೆ. ಆದರೆ ಆ ವಿಧ್ಯರ್ಥ ಅಲ್ಲಿ ವಿವಕ್ಷಿತವಾದುದಲ್ಲ. ಅಲ್ಲಿ ವಿವಕ್ಷಿತವಾದದ್ದು ವಿಧ್ಯರ್ಥಕ್ಕೆ ವಿರುದ್ಧವಾದ ನಿಷೇಧಾರ್ಥ. ಆ ನಿಷೇಧಾರ್ಥ ಹೊರಡುವುದಿದ್ದರೆ ಅದು ತಾತ್ಪರ್ಯದಿಂದ ಬೇರೆಯಾದ ವ್ಯಂಜನದಿಂದ. ಹೀಗೆ ಅಂಥಲ್ಲಿ ವ್ಯಂಗ್ಯವೇ.]

(ಇಲ್ಲಿಯೂ ಧ್ವನಿಪಕ್ಷದ ಮಂಡನೆಯೇ ಇದೆ.)

೩. "[ವಾಕ್ಯವು, ವಿವಕ್ಷಿತಾರ್ಥ ಸಂಪೂರ್ಣವಾಗಿ ಪ್ರಕಟವಾಗುವ ಪರ್ಯಂತ] ನಿಲುಗಡೆ ಹೊಂದದಿರುವಲ್ಲಿ ಅದರ ಪರತ್ವ [ಎಂದರೆ, ವಾಚ್ಯಾರ್ಥಪರತ್ವವುಳ್ಳುದೆಂದೂ] ಹಾಗಲ್ಲದೆ ವಾಕ್ಯ ತನ್ನ ಅರ್ಥ(ವಾಚ್ಯಾರ್ಥ)ದಲ್ಲಿ ನಿಲುಗಡೆಹೊಂದಿ ಬೇರೆ ಅರ್ಥ(ವ್ಯಂಗ್ಯಾರ್ಥ)ವನ್ನು ಆಶ್ರಯಿಸುವಾಗ 'ಧ್ವನಿ' [ಎಂದೂ ತಿಳಿಯತಕ್ಕದ್ದು]" [–ಹೀಗೆಂದು ಪೂರ್ವಪಕ್ಷದವರಾದ ಧ್ವನಿವಾದಿಗಳು ವಾದಿಸುವುದಾದರೆ ಅದಕ್ಕೆ ನಾವು ಹೀಗೆ ಉತ್ತರಿಸುತ್ತೇವೆ : ] ಅದು ತಪ್ಪು; [ಯಾವುದೊಂದು ವಾಕ್ಯಕ್ಕೆ ವಿವಕ್ಷಿತಾರ್ಥಪ್ರಕಟನೆಯ ಪರ್ಯಂತ ] ವಿಶ್ರಾಂತಿ [ದೊರೆಯುವುದು] ಅಸಂಭವವಾಗಿರುವ ಕಾರಣ [ವಾಕ್ಯ ಮೊದಲೇ ಒಮ್ಮೆ ವಿಶ್ರಾಂತಿಹೊಂದಿ ಅನಂತರ ವ್ಯಂಗ್ಯಾರ್ಥಕ್ಷೇತ್ರದಲ್ಲಿ ಮುಂದುವರಿಯುತ್ತದೆ ಎಂಬ ಧ್ವನಿವಾದಿಗಳ ವಾದ ತಪ್ಪಾಗುತ್ತದೆ.]

(ವಿವಕ್ಷಿತವಾದ ಅರ್ಥ ಪ್ರಕಟವಾಗುವ ಪರ್ಯಂತ ವಾಕ್ಯದಲ್ಲಿ ತಾತ್ಪರ್ಯಶಕ್ತಿಯೇ ಪ್ರಸಾರವಾಗುತ್ತಿರುತ್ತದೆಯಾದ ಕಾರಣ ನಡುವೆ ಬೇರೊಂದು ಶಕ್ತಿಯನ್ನು ಕಲ್ಪಿಸಬೇಕಿಲ್ಲ ಎಂಬುದು ಈ ಕಾರಿಕೆಯ ಒಟ್ಟಿನ ಅಭಿಪ್ರಾಯ. ಕಾರಿಕೆಯ ಪ್ರಥಮ ಪಾದ ಹಾಗೂ ದ್ವಿತೀಯ ಪಾದದ ಪೂರ್ವಾರ್ಧಗಳಲ್ಲಿ ಧ್ವನಿಪಕ್ಷ

---

೧ ಧ್ವನಿಪಕ್ಷವನ್ನು ಮಂಡಿಸುವಲ್ಲಿ ಧನಿಕ 'ವಿಷಂ ಭುಂಕ್ಷ್ವ....' ಎಂಬ ಉದಾ. ಕೊಟ್ಟಿದ್ದಾನಷ್ಟೆ. ಆದರೆ ಧ್ವನಿವಾದಿಯಾದ ಮಮ್ಮಟನೇ ಈ ಉದಾ.ನ್ನು ತಿರಸ್ಕರಿಸಿದ್ದಾನೆ. ಮಮ್ಮಟನ ಅಭಿಪ್ರಾಯದಂತೆ – 'ವಿಷಂ ಭುಂಕ್ಷ್ವ ಮಾ ಚಾಸ್ಯ ಗೃಹೇ ಭುಂಜ್ಥಾಃ' ಎಂಬ ವಾಕ್ಯದಲ್ಲಿನ 'ಚ' (ಆದರೆ) ಎಂಬುದು ವಿವಕ್ಷಿತವಾದ ನಿಷೇಧಾರ್ಥವನ್ನು ನೇರವಾಗಿಯೇ ಹೇಳುತ್ತದೆ; ಆದಕಾರಣ ಅಲ್ಲಿ 'ಧ್ವನಿ'ಯನ್ನು ಆರೋಪಿಸಬೇಕಿಲ್ಲ. (ನೋಡಿ : ಕಾ.ಪ್ರ. : ೫–೩ರ ವ್ಯಾಖ್ಯೆ.)

ಮಂಡನೆಯೂ, ದ್ವಿತೀಯ ಪಾದದ ಉತ್ತರಾರ್ಧದಲ್ಲಿ 'ತತ್ ನ' ಎಂದು ಆರಂಭವಾಗಿ ಧ್ವನಿಪಕ್ಷಖಂಡನೆಯೂ ಬಂದಿದೆ.)

೪. [ಹಿಂದಿನ ಕಾರಿಕೆಯಲ್ಲಿ ಗಮನಿಸಿದಂತೆ, ವಾಚ್ಯಾರ್ಥ ಹೊರಡಿಸುವ ತಾತ್ಪರ್ಯಶಕ್ತಿ ವಿಶ್ರಾಂತಿಹೊಂದಿ ಅನಂತರ ವ್ಯಂಜನ ಆರಂಭವಾಗುತ್ತದೆಂದು ಧ್ವನಿವಾದಿಗಳು ಹೇಳುತ್ತಾರಷ್ಟೆ . ಆದರೆ] ತಾತ್ಪರ್ಯಶಕ್ತಿಗೆ ಇಂಥಲ್ಲಿಯೇ ನಿಲುಗಡೆಯೆಂದು ಯಾರು ಮಾಡಿಟ್ಟಿದ್ದಾರೆ? ತಾತ್ಪರ್ಯವು ಯಾವತ್ಕಾರ್ಯ [ಎಂದರೆ, ಹೇಳುವಾತ ಉದ್ದೇಶಿಸಿರುವ ಪ್ರಯೋಜನ ಸಂಪೂರ್ಣ ಸಿದ್ಧಿಸುವ ಪರ್ಯಂತ] ಹರಡಿರುವುದರಿಂದ [ಅದಕ್ಕೆ ಇಂಥಲ್ಲಿಯೇ ನಿಲುಗಡೆ ಎಂದು] ತಕ್ಕಡಿಯಲ್ಲಿ ತೂಗಿ [ನಿಶ್ಚಿತಗೊಳಿಸಿ ಯಾರೂ] ಹೇಳಿಲ್ಲ.

(ಇದು ಧ್ವನಿಪಕ್ಷವನ್ನು ಖಂಡಿಸಿ ಸ್ವಪಕ್ಷವನ್ನು ಮಂಡಿಸುವ ಕಾರಿಕೆಯಾಗಿದೆ.)

೫. 'ಎಲೈ ಧಾರ್ಮಿಕನೆ, ಸ್ವೇಚ್ಛೆಯಿಂದ ವಿಹರಿಸು' – ಎಂದು ವ್ಯಾವೃತ್ತಿ(ನಿವೃತ್ತಿ)ಯಿಲ್ಲದೆ ವಿಹಾರಕ್ಕೆ ಆಸ್ಪದ ಮಾಡಿಕೊಡುವ ವಾಕ್ಯ [ವ್ಯಂಗ್ಯವಾಗಿಯಲ್ಲದೆ, ವಾಚ್ಯದಲ್ಲಿ] ನಿಷೇಧಾರ್ಥವನ್ನು ಹೇಗೆ ಹೊಂದುತ್ತದೆ? [–ಎಂದು ಧ್ವನಿವಾದಿಗಳು ತಮ್ಮ ಪಕ್ಷದ ಮಂಡನೆಗೆ ಪ್ರಶ್ನೆ ಹಾಕುತ್ತಾರೆ.]

(ಇಲ್ಲಿ ಪುನಃ ಧ್ವನಿಪಕ್ಷವನ್ನು ಮಂಡಿಸಲಾಗಿದೆ.)

೬. [ ಒಬ್ಬ ತನ್ನ ಅಭಿಪ್ರಾಯವನ್ನು ಇನ್ನೊಬ್ಬನಿಗೆ ತಿಳಿಸುವ ಸಲುವಾಗಿ ಅದನ್ನು ಪ್ರತಿಪಾದಿಸುತ್ತಾನೆ. ಆತ ತನ್ನ ಪ್ರತಿಪಾದನೆಗೆ ಬಳಸಿಕೊಳ್ಳುವ ವಾಕ್ಯವನ್ನೆ 'ಪ್ರತಿಪಾದ್ಯ' ಎನ್ನುತ್ತೇವೆ. ಆದ್ದರಿಂದ, ಪ್ರತಿಪಾದಕನ] ಅಪೇಕ್ಷೆ ಪೂರೈಸಿದಾಗ [ಮಾತ್ರವೇ] ಪ್ರತಿಪಾದ್ಯದ [ಎಂದರೆ, ಪ್ರತಿಪಾದಿತವಾದ ವಾಕ್ಯದ] ನಿಲುಗಡೆ; [ಸಂಬದ್ಧವಾದ ಯಾವ ವಾಕ್ಯವೇ ಆಗಲಿ ಅದು ಹೇಳುವಾತನ ಅಪೇಕ್ಷೆ ಪೂರೈಸದೆ ನಿಲ್ಲುವುದಿಲ್ಲ] – ಹಾಗೆ ಒಪ್ಪಿದರೆ, [ಕಾವ್ಯದಲ್ಲಿ ಕೂಡ ಅದೇ ನ್ಯಾಯವನ್ನನು ಸರಿಸಿ,] ಹೇಳುವಾತನ (ಕವಿಯ) ವಿವಕ್ಷಿತ[ವಾದ ಅರ್ಥ] ಸಿದ್ಧಿಸದಿರುವಾಗಲೇ [ಕಾವ್ಯವಾಕ್ಯಕ್ಕೆ] ನಿಲುಗಡೆ ಬರುವುದಾದರೂ ಹೇಗೆ? [ಆದಕಾರಣ, ಕವಿಯ ಆಶಯವನ್ನು ಪೂರ್ಣಗೊಳಿಸುವ ಪರ್ಯಂತ ಕಾವ್ಯವಾಕ್ಯದಲ್ಲಿ ವಾಕ್ಯಾರ್ಥವೇ ಪ್ರವಹಿಸುತ್ತದೆಯಲ್ಲದೆ, ಅದು ಮಧ್ಯದಲ್ಲಿ ನಿಂತು ಬಿಡುವುದಿಲ್ಲ.]

(ಇಲ್ಲಿ ಸ್ವಪಕ್ಷಮಂಡನೆಯಿದೆ.)

೭. [ವೈದಿಕ ವಾಕ್ಯಗಳ ಮಾತು ಬೇರೆ. ಆದರೆ] ಪೌರುಷೇಯ (ಲೌಕಿಕ) ವಾಕ್ಯ [ಮತ್ತು ಪೌರುಷೇಯ ವಾಕ್ಯವೇ ಆದ] ಕಾವ್ಯ [ವಾಕ್ಯ] ವಿವಕ್ಷಾಪರತಂತ್ರವುಳ್ಳದ್ದು [ಎಂದರೆ, ಹೇಳುವವನ ಉದ್ದೇಶಕ್ಕೇ ಕಟ್ಟುಬಿದ್ದದ್ದು]. ಆದಕಾರಣ [ಲೌಕಿಕವಾಕ್ಯದಲ್ಲಿ ಅಥವಾ ಕಾವ್ಯ ವಾಕ್ಯದಲ್ಲಿ ] ಹೇಳುವಾತ ಉದ್ದೇಶಿಸಿದ ತಾತ್ಪರ್ಯವೇ ಹೊಂದುತ್ತದೆ.

(ಇಲ್ಲಿ ಸ್ವಪಕ್ಷಸಿದ್ಧಾಂತವನ್ನು ಪ್ರತಿಷ್ಠಾಪಿಸಿದೆ.)

–ಆದ್ದರಿಂದ, ರಸಾದಿಗಳಿಗೂ ಕಾವ್ಯಕ್ಕೂ ನಡುವೆ ಇರುವುದು ವ್ಯಂಗ್ಯವ್ಯಂಜಕ ಭಾವವಲ್ಲವೆಂಬುದು ಸಿದ್ಧವಾಯಿತು. ಹಾಗಿದ್ದರೆ, ರಸಾದಿಗಳಿಗೂ ಕಾವ್ಯಕ್ಕೂ ನಡುವೆ ಮತ್ತಾವುದಾದರೂ ಸಂಬಂಧವಿದೆಯೇನು? ಹೌದು. ಅದೇ 'ಭಾವ್ಯಭಾವಕ' ಸಂಬಂಧ. ಕಾವ್ಯವು [ರಸಾದಿಗಳನ್ನು ಭಾವಿಸುವ] 'ಭಾವಕ' ಮತ್ತು ರಸಾದಿಗಳು [ಕಾವ್ಯದಿಂದ ಭಾವ್ಯವಾಗುವ] 'ಭಾವ್ಯ'ಗಳು, ತತ್ತದನುಕೂಲವಾದ ವಿಶಿಷ್ಟ ವಿಭಾವಾದಿಗಳಿರುವ ಕಾವ್ಯದಿಂದ ರಸಾದಿಗಳು ಸಹೃದಯನ ಹೃದಯದಲ್ಲಿ ತಾವೇ ಸ್ವತಃ ಉಂಟಾಗುವುವು ಅಥವಾ ಆವಿರ್ಭವಿಸುವುವು.

ಇಲ್ಲಿ ಒಂದು ಸಂದೇಹ ಬರಬಹುದು : ಬೇರೆ ಇನ್ನಿತರ ಶಬ್ದಗಳಲ್ಲಿ ಭಾವ್ಯಭಾವಕಲಕ್ಷಣವುಳ್ಳ ಸಂಬಂಧ ಇರುವುದಿಲ್ಲ; ಆ ಇತರ ಶಬ್ದಗಳಂತೆ ಕಾವ್ಯಶಬ್ದಗಳಲ್ಲಾದರೂ ಭಾವ್ಯಭಾವಕ ಲಕ್ಷಣ ಇರುವುದಿಲ್ಲವೆಂದೇ ಹೇಳಬಹುದಲ್ಲವೆ? ಈ ಸಂದೇಹಕ್ಕೆ ಉತ್ತರ : ಹಾಗೆ ತಿಳಿಯಬಾರದು. ಏಕೆಂದರೆ, [ಎಲ್ಲ ಶಬ್ದಗಳಲ್ಲಿ ಅಲ್ಲದಿದ್ದರೂ ಕೆಲವು ಶಬ್ದಗಳಲ್ಲಿ ಭಾವ್ಯಭಾವಕಸಂಬಂಧ ಇದ್ದೇ ಇರುತ್ತದೆ.] ಹಾಗೆಂದು [ಶಬ್ದಗಳಲ್ಲಿ 'ಭಾವನಾ' ಎಂಬ ವಿಶಿಷ್ಟ ಕ್ರಿಯೆಯನ್ನು ಗುರುತಿಸುವ] 'ಭಾವನಾಕ್ರಿಯಾವಾದಿ'ಗಳು ಒಪ್ಪಿಕೊಂಡಿದ್ದಾರೆ. [ಭಾವನಾಕ್ರಿಯಾವಾದಿಗಳಾದ ಮೀಮಾಂಸಕರು ಶಬ್ದಗಳಲ್ಲಿ ತಾವು ಗುರುತಿಸುವ 'ಭಾವನಾ' ಎಂಬ ಕ್ರಿಯೆಯ ಸಂಗಡ 'ಭಾವ್ಯಭಾವಕ' ಸಂಬಂಧವುಂಟೆಂದು ಹೇಳುತ್ತಾರೆ. ಅವರ ಅಭಿಪ್ರಾಯದಂತೆ – 'ಸ್ವರ್ಗಕಾಮೋ ಯಜೇತ', 'ಪುತ್ರಕಾಮೋ ಯಜೇತ' ಮೊದಲಾದ ಶ್ರುತಿಸಂಚೋದಿತವಾಕ್ಯಗಳಲ್ಲಿ ಅಂಥ 'ಭಾವನಾ' ಕ್ರಿಯೆಯೂ 'ಭಾವ್ಯಭಾವಕ'

ಸಂಬಂಧವೂ ಇದೆ; ಯಾಗಾದಿ ಕ್ರಿಯೆಗಳಿಂದ ಸ್ವರ್ಗಾದಿ ಫಲಗಳು ಲಭಿಸುತ್ತವೆ; ಯಾಗಾದಿಕ್ರಿಯಾರೂಪದ ಕಾರಣದಿಂದ ಸ್ವರ್ಗಪ್ರಾಪ್ತಿರೂಪವಾದ ಕಾರ್ಯ ನಿಷ್ಪನ್ನವಾಗುತ್ತವೆ; ಅಂತೆಯೇ ಅಲ್ಲಿ ಯಾಗಾದಿಕ್ರಿಯೆ 'ಭಾವಕ'ವೂ ಸ್ವರ್ಗಪ್ರಾಪ್ತ್ಯಾದಿ ಫಲ 'ಭಾವ್ಯ'ವೂ ಆಗಿರುತ್ತದೆ. ಮೀಮಾಂಸಕರ ಈ ಸಿದ್ಧಾಂತದಿಂದ, ಶಬ್ದಗಳಲ್ಲಿ ಭಾವ್ಯಭಾವಕ ಸಂಬಂಧವನ್ನು ಕಲ್ಪಿಸುವುದು ಶಾಸ್ತ್ರಸಮ್ಮತವಾದುದೆಂದು ಸ್ಪಷ್ಟವಾಗುತ್ತದೆ.] ಇನ್ನೊಂದೆಡೆ [ಎಂದರೆ, ಇತರ ಲೌಕಿಕ ಶಬ್ದಗಳಲ್ಲಿ ಇಂಥ ಭಾವ್ಯಭಾವಕ ಸಂಬಂಧ] ಇಲ್ಲದಿದ್ದರೂ, [ಕಾವ್ಯಗಳಲ್ಲಿ] ಅನ್ವಯವ್ಯತಿರೇಕಗಳೆರಡರಿಂದಲೂ ಈ ಸಂಬಂಧವು ಸಿದ್ಧವಾಗುತ್ತದೆ. [ಎಂದರೆ, ಕಾವ್ಯದಲ್ಲಿ ರಸಾದಿಗಳನ್ನು ಭಾವಿಸುವಂಥ ಭಾವಕಶಬ್ದ ಪ್ರಯೋಗವಾಗಿಲ್ಲದಿದ್ದರೆ, ಅಂಥಲ್ಲಿ ರಸ ಭಾವ್ಯವಾಗುವುದಿಲ್ಲ; ಅಲ್ಲಿ ರಸದ ಭಾವನೆ (ಚರ್ವಣ) ಅಸಂಭವ. ಹಾಗೂ ಕಾವ್ಯದಲ್ಲಿ ರಸಾದಿಗಳನ್ನು ಭಾವಿಸಬಲ್ಲ ಭಾವಕ ಶಬ್ದ ಇದ್ದಿತೆಂದರೆ, ಸಹೃದಯರಲ್ಲಿ ರಸ ಅವಶ್ಯವಾಗಿ ಭಾವಿತವಾಗಿಯೇ ತೀರುತ್ತದೆ – ಹೀಗೆ ಅನ್ವಯವ್ಯತಿರೇಕಗಳೆರಡರಿಂದಲೂ, ರಸಾದಿಗಳಿಗೂ ಕಾವ್ಯಕ್ಕೂ ನಡುವೆ 'ಭಾವ್ಯಭಾವಕ' ಸಂಬಂಧ ಉಂಟೆಂಬುದು ಸ್ಪಷ್ಟವಾಗುತ್ತದೆ.]

ಈ ಹೇಳಿಕೆಗೆ ಆಧಾರ : [ನಾ.ಶಾ. : ೭–೩] :

'ಭಾವಾಭಿನಯಸಂಬಂಧಾನ್ಭಾವಯಂತಿ ರಸಾನಿಮಾನ್।

ಯಸ್ಮಾತ್ತಸ್ಮಾದಮೀ ಭಾವಾ ವಿಜ್ಞೇಯಾ ನಾಟ್ಯಯೋಕ್ತೃಭಿಃ॥'

[ಭಾವಗಳನ್ನು ಅಭಿನಯಿಸುವ ಸಂಬಂಧದಿಂದ ಯಾವುವು ಈ ರಸಗಳನ್ನು ಭಾವಿಸುತ್ತವೆಯೋ ಅವೇ ಭಾವಗಳೆಂದು ನಾಟ್ಯಯೋಕ್ತೃಗಳು ತಿಳಿಯಬೇಕು.]

ಪುನಃ– [ಕಾವ್ಯದಲ್ಲಿ ಸ್ಥಾಯ್ಯಾದಿಗಳು ವಾಚ್ಯವಲ್ಲದಿರಬಹುದೆಂಬುದನ್ನು ಹಿಂದೆ ನೋಡಿದೆವಷ್ಟೆ. ಹೀಗೆ ಕಾವ್ಯೋಪಾತ್ತ] ಶಬ್ದಗಳಿಗೆ ಸ್ಥಾಯ್ಯಾದಿಗಳ ಸಂಬಂಧವಿಲ್ಲದಿರುವಾಗ [ಎಂದರೆ, ಶಬ್ದಗಳು ಸ್ಥಾಯ್ಯಾದಿಗಳ ವಾಚಕವಾಗಿಲ್ಲದಿರುವಾಗ] ಸ್ಥಾಯ್ಯಾದಿಗಳ ಪ್ರತಿಪತ್ತಿ ಹೇಗೆ? – ಅದಕ್ಕೆ ಉತ್ತರ : ಲೋಕದಲ್ಲಿನ ಸ್ತ್ರೀಪುರುಷಾದಿಗಳ ಚೇಷ್ಟೆಗಳನ್ನು ಕಂಡು ನಾವು ಅಲ್ಲಿ ರತ್ಯಾದಿ ಸ್ಥಾಯಿಗಳ ವ್ಯಾಪ್ತಿಯನ್ನು ಗುರುತಿಸುತ್ತೇವೆ. ಹಾಗೂ ಅಲ್ಲಿ ಆಯಾ ಚೇಷ್ಟೆಗಳಿಗೂ ಮತ್ತು ಅವುಗಳಿಗೆ ಕಾರಣವಾದ ರತ್ಯಾದಿಗೂ ನಡುವೆ 'ಅವಿನಾಭಾವ' (ಒಂದನ್ನು ಬಿಟ್ಟು ಒಂದಿಲ್ಲದಿರುವುದು)ವನ್ನು ಕಾಣುತ್ತೇವೆ. ಕಾವ್ಯದಲ್ಲಾದರೂ ಹಾಗೆಯೇ : ಕಾವ್ಯದಲ್ಲಿನ ಶಬ್ದಗಳು ನಮ್ಮ ಕಿವಿಗೆ ಬಿದ್ದಾಗ, ಶಬ್ದಗಳ ಅಭಿಧಾಶಕ್ತಿಯಿಂದ ಅವು ಪ್ರತಿಪಾದಿಸುವ ವಿಶಿಷ್ಟ ಚೇಷ್ಟೆಗಳನ್ನು ನಾವು ಅರಿತುಕೊಳ್ಳುತ್ತೇವೆ. ಈ ಚೇಷ್ಟೆಗಳಿಗೂ ರತ್ಯಾದಿಗಳಿಗೂ ಅವಿನಾಭಾವವಿರುವುದರಿಂದ ಆ ಚೇಷ್ಟೆಗಳನ್ನು ಅರಿತುಕೊಳ್ಳುವ ಜೊತೆಜೊತೆಯಲ್ಲೆ ನಮಗೆ ಆ ಚೇಷ್ಟೆಗಳಿಗೆ ಮೂಲವಾದ ರತ್ಯಾದಿ ಭಾವದ ಬೋಧೆಯಾಗುತ್ತದೆ. ಹೀಗೆ ರತ್ಯಾದಿಪ್ರತೀತಿಯು ಲಕ್ಷಣಶಕ್ತಿಯಿಂದ ಗಮ್ಯವಾಗುವಂಥದು.

ಇನ್ನು, ಕಾವ್ಯದ ಅರ್ಥವು ರಸವನ್ನು ಹೇಗೆ ಭಾವಿಸುತ್ತದೆಂಬ ವಿಷಯವನ್ನು ಮುಂದೆ (ಮುಂದಿನ ಕಾರಿಕೆಯಲ್ಲಿ ಮತ್ತು ವ್ಯಾಖ್ಯೆಯಲ್ಲಿ) ವಿವರಿಸುತ್ತೇವೆ.

ಟಿಪ್ಪಣಿ : ಕಾವ್ಯಾದಿಗಳಿಂದ ರಸ ಹೇಗೆ ನಿಷ್ಪನ್ನವಾಗುವುದೆಂಬುದನ್ನು ಹೇಳುವ ಹಲವು ಸಿದ್ಧಾಂತಗಳಿಗೆ ಹಾಗೂ ಈ ಕುರಿತು ಧನಂಜಯಧನಿಕರ ಅಭಿಪ್ರಾಯಸಂಗ್ರಹಕ್ಕೆ 'ಅನುಬಂಧ–೨' ನೋಡಿ.

ಈ ಕಾರಿಕೆ ಮತ್ತು ಹಿಂದಿನ (೪–೪೫) ಕಾರಿಕೆಗಳು ಹಾಗೂ ಅವುಗಳ ವ್ಯಾಖ್ಯೆಗಳು ಸ್ಥಾಯಿಯ ಪ್ರಾಮುಖ್ಯವನ್ನು ಹೇಳುವುದಕ್ಕೆ ಮತ್ತು ಕಾವ್ಯಾದಿಗಳಲ್ಲಿ ಯಾವುದಾದರೊಂದು ಸ್ಥಾಯಿ ನಿಯತವಾಗಿರಬೇಕೆಂಬುದನ್ನು ತಿಳಿಸುವುದಕ್ಕೆ ಮೀಸಲಾಗಿವೆ – ಎಂದು ಟಿಪ್ಪಣಿಸುವ ಹ್ಯಾಸ್, ಧ್ವನಿ ಪಕ್ಷ ಖಂಡನೆ ಹಾಗೂ ನೂತನಪಕ್ಷಮಂಡನೆ ಇ.ಗಳನ್ನು ಗಮನಿಸಿದಂತೆ ತೋರುವುದಿಲ್ಲ [ನೋಡಿ : ಹ್ಯಾಸ್ : ೪–೪೫, ೪೬.]

# ರಸದ ವಿವರಣೆ

## ೪೭. ರಸದ ರಸಿಕವರ್ತಿತ್ವ :

ರಸಃ ಸ ಏವ ಸ್ವಾದ್ಯತ್ವಾದ್ರಸಿಕಸ್ಯೈವ ವರ್ತನಾತ್ ।
ನಾನುಕಾರ್ಯಸ್ಯ ವೃತ್ತತ್ವಾತ್ಕಾವ್ಯಸ್ಯಾತತ್ಪರತ್ವತಃ ॥ ೩೮ ॥

ದ್ರಷ್ಟುಃ ಪ್ರತೀತಿರ್ವ್ರೀಡೇರ್ಷ್ಯಾರಾಗದ್ವೇಷಪ್ರಸಂಗತಃ ।
ಲೌಕಿಕಸ್ಯ ಸ್ವರಮಣೀಸಂಯುಕ್ತಸ್ಯೇವ ದರ್ಶನಾತ್ ॥ ೩೯ ॥

ಅನು : ಕೇವಲ ರಸಿಕನಲ್ಲಿರುವ ಅದು [ಎಂದರೆ, ಸ್ಥಾಯಿಭಾವ] ಮಾತ್ರವೇ, [ಈ ವರ್ತಮಾನಕಾಲದಲ್ಲಿ] ವರ್ತಿಸುತ್ತಿರುವುದಾಗಿ [ಹಾಗೂ] ಸವಿಯನ್ನುಂಟುಮಾಡುವುದಾಗಿ 'ರಸ' [ಎನ್ನಿಸಿಕೊಳ್ಳುತ್ತದೆ]; [ರಸಿಕರ ಸ್ಥಾಯಿಭಾವ ಮಾತ್ರವೇ ರಸವಾಗಬಲ್ಲುದು ಎಂದಾಗ, ಅನುಕಾರ್ಯರಾದ ರಾಮಾದಿಗಳ ಸ್ಥಾಯಿಭಾವ ರಸವಾಗುವುದಿಲ್ಲವೇ – ಎಂಬ ಪ್ರಶ್ನೆ ಬರಬಹುದು. ಇಲ್ಲ. ಅನುಕಾರ್ಯರಾದ ರಾಮಾದಿಗಳ ಸ್ಥಾಯಿಭಾವ ಹಿಂದೊಮ್ಮೆ – ಭೂತಕಾಲದಲ್ಲಿ – ] ವರ್ತಿಸುತ್ತಿದ್ದಿತು [ಮತ್ತು ಈಗ ವರ್ತಿಸುತ್ತಿಲ್ಲ] – ಆದ್ದರಿಂದ, ಅನುಕಾರ್ಯನ [ಸ್ಥಾಯಿಭಾವವು ರಸವಾಗುವುದು ಸಾಧ್ಯವೇ] ಇಲ್ಲ. ಕಾವ್ಯದ ಅತತ್ಪರತ್ವದಿಂದ೧ [ಎಂದರೆ, ಕಾವ್ಯವು ರಸಿಕರ ಸ್ಥಾಯಿಯನ್ನು ಉದ್ಬೋಧಗೊಳಿಸುವುದಲ್ಲದೆ ಒಂದು ವೇಳೆ ಅನುಕಾರ್ಯ ರಾಮಾದಿಗಳ ಸ್ಥಾಯಿಯನ್ನೆ ಪ್ರಕಟಿಸುವುದಾದರೆ, ಅದರಿಂದ] ತನ್ನ ಹೆಣ್ಣಿನೊಡನಿರುವ ಲೌಕಿಕ [ವ್ಯಕ್ತಿಯೊಬ್ಬ]ನನ್ನು ನೋಡಿದಾಗ ಹೇಗೋ ಹಾಗೆ, ನೋಡುವ[ರಸಿಕ ಸಾಮಾಜಿಕ]ನಲ್ಲಿ ಪ್ರಸಂಗಾನುಸಾರವಾಗಿ ವ್ರೀಡೆ (ನಾಚಿಕೆ), ಈರ್ಷ್ಯೆ, ರಾಗ, ದ್ವೇಷ – ಇವುಗಳೇ ಪ್ರತೀತವಾಗುತ್ತವೆ. [ತಾತ್ಪರ್ಯ ಇಷ್ಟು : ಸವಿಕೊಡುವ ಸ್ಥಾಯಿಯೇ ರಸ. ಕಾವ್ಯದಲ್ಲಿ ರಸಿಕನ ಸ್ಥಾಯಿಯೇ ಉದ್ಬೋಧವಾಗುತ್ತದೆ. ಹಾಗೆ ಉದ್ಬೋಧವಾದ ರಸಿಕನ ಸ್ಥಾಯಿಯೇ ರಸವಾಗುತ್ತದೆ. ಕಾವ್ಯದಲ್ಲಿ ರಾಮಾದಿಗಳ ಸ್ಥಾಯಿಯೇ ರಸವಾಗುತ್ತದೆ ಎಂದು ತಿಳಿಯಬಾರದೇಕೆ –ಎಂಬ ಪ್ರಶ್ನೆ ಏಳಬಹುದು. ಅದಕ್ಕೆ ಉತ್ತರ : ಕಾವ್ಯದಲ್ಲಿ ವಾಸ್ತವವಾಗಿ ರಾಮಾದಿಗಳ ಸ್ಥಾಯಿ ಇರುವುದಿಲ್ಲ. ರಾಮಾದಿಗಳ ಸ್ಥಾಯಿ ಭೂತಕಾಲದಲ್ಲಿ ಇತ್ತು, ಈಗ ಇಲ್ಲ. ಯಾವಾಗಲೋ ಇದ್ದ ಅವರ ಸ್ಥಾಯಿಯನ್ನು ಈಗ ಕಾವ್ಯ ಸೂಚಿಸುತ್ತದೆ. ಅದೇ ನೆಪವಾಗಿ, ಆ ಕಾವ್ಯವನ್ನು ಪರಿಶೀಲಿಸುವ ರಸಿಕನ ಸ್ಥಾಯಿ ಉದ್ಬೋಧವಾಗುತ್ತದೆ; ಅನಂತರ ರಸತ್ವವನ್ನು ಹೊಂದುತ್ತದೆ. ಲೋಕದಲ್ಲಿ ಯಾವುದಾದರೂ ಗಂಡುಹೆಣ್ಣಿಗೆ ರತಿ ಉದ್ಬೋಧವಾದುದನ್ನು ಕಂಡರೆ, ಅದನ್ನು ನೋಡಿದವರಿಗೆ ನಾಚಿಕೆಯೋ ಅಸೂಯೆಯೋ ಉಂಟಾದೀತಲ್ಲದೆ ರಸೋತ್ಪತ್ತಿಯಾಗುವುದಿಲ್ಲ. ಕಾವ್ಯದಲ್ಲಿ ಒಂದು ವೇಳೆ ರಾಮಾದಿಗಳ ಸ್ಥಾಯಿಭಾವವನ್ನೆ ರಸಿಕರು ಕಾಣುವುದಾದರೆ ಲೋಕದಲ್ಲಿ ಹೇಗೋ ಹಾಗೆ ಇಲ್ಲಿಯೂ ಬೇರೊಂದು ಭಾವ

---

೧ ತತ್ಪರತ್ವ = ರಸಿಕಸ್ಥಾಯಿಪರತ್ವ

ಹುಟ್ಟಬಲ್ಲುದಲ್ಲದೆ ರಸಾನುಭವ ಹೇಗೆ ಆದೀತು? ಆದ್ದರಿಂದ ಕಾವ್ಯದಲ್ಲಿ ರಸಿಕರ ಸ್ಥಾಯಿಯೇ ರಸವಾಗುತ್ತದೆಯಲ್ಲದೆ ಅನುಕಾರ್ಯರ ಸ್ಥಾಯಿಯಲ್ಲ.]

ವ್ಯಾಖ್ಯೆ : ['ಸ ಏವ ರಸಃ' ಎಂದು ಕಾರಿಕೆಯಲ್ಲಿ ಹೇಳಿದೆಯಷ್ಟೆ; ಅದರ ಅರ್ಥ ಹೀಗೆ :] ಕಾವ್ಯದ ಅರ್ಥದಿಂದ ಉಪ್ಪಾವಿತವಾಗಿ, ರಸಿಕನಲ್ಲಿ ವರ್ತಿಸುವ ಸ್ಥಾಯಿಭಾವವೇ ರಸ ಎಂದು ನಿರ್ದೇಶಿತವಾಗಿದೆ. ಅದು ಸವಿಯನ್ನು ಕೊಡುತ್ತದೆ; ನಿರ್ಭರವಾದ ಆನಂದಜ್ಞಾನಾತ್ಮತೆಯನ್ನು ಒದಗಿಸುತ್ತದೆ. ಅದೇ ರಸ. ವರ್ತಮಾನಕಾಲದಲ್ಲಿ ಅದು ರಸಿಕನಲ್ಲೆ ಇರುವ ಕಾರಣ ಅದು 'ರಸಿಕವರ್ತೀ' ಎನ್ನಿಸಿಕೊಳ್ಳುತ್ತದೆ. ಮತ್ತು, ರಸ ಅನುಕಾರ್ಯ ರಾಮಾದಿಗಳಲ್ಲಿ ವರ್ತಿಸಲಾರದು. ಏಕೆಂದರೆ, ಅವರ ಸ್ಥಾಯಿಯು ಹಿಂದೆ ಇತ್ತು, ಈಗ ಇಲ್ಲ.

ಇನ್ನು – ರೂಪಕ ಹಾಗೂ ಕಾವ್ಯಾದಿಗಳಲ್ಲಿ ಅಲ್ಲಿನ ಶಬ್ದಗಳಿಗೆ ಹೊಂದಿ ರಾಮಾದಿಗಳ ರೂಪವು ವ್ಯಕ್ತವಾಗುವುದರಿಂದ ಸ್ಥಾಯಿಭಾವ ಇಲ್ಲದಂಥ ರಾಮಾದಿಗಳಲ್ಲೂ ಅದು ಇದ್ದಂತೆಯೇ ಭಾಸವಾಗುತ್ತದೆ. ಅಲ್ಲಿರುವ ಅಂಥ 'ತೋರಿಕೆ' ರಸಿಕನ ರಸಾನುಭವಕ್ಕೆ ಅಗತ್ಯವಾದದ್ದು. ಹಾಗಿದ್ದರೂ, ರಾಮಾದಿಗಳಿಗೆ ಆಸ್ವಾದವನ್ನು ನಾವು ಒಪ್ಪುವುದಿಲ್ಲ. ಏಕೆಂದರೆ, ನಾವು ಆ ಅವಭಾಸ(ತೋರಿಕೆ)ಯನ್ನು [ಇಚ್ಛಾಪೂರ್ವಕವಾಗಿ ಒಪ್ಪಿಕೊಳ್ಳುವೆವಾದರೂ ಅದನ್ನು] ಸಾಕ್ಷಾತ್ತಾಗಿ ಅನುಭವಿಸುವುದಿಲ್ಲ. ಆದಕಾರಣ, [ಭಾವಬೋಧೆಗೆ ಸಪವಾಗಿ ಅದನ್ನು ನಾವು ಅವಲಂಬಿಸಿದರೂ ಮತ್ತೊಂದು ದೃಷ್ಟಿಯಿಂದ] ಅದು 'ಅಸತ್ಯ'ವೇ ಸರಿ. ಒಟ್ಟಿನಲ್ಲಿ, [ನಮ್ಮ ಸ್ಥಾಯಿ ಉದ್ಬೋಧಗೊಳ್ಳುವುದಕ್ಕೆ] 'ವಿಭಾವ'ವಾಗಿ ರಾಮಾದಿಗಳಲ್ಲಿ ಆ ಸ್ಥಾಯಿ ಈಗ ವರ್ತಿಸುತ್ತಿದೆ ಯೆಂಬಂತೆಯೇ ಭಾಸಮಾಡಿಕೊಳ್ಳುತ್ತೇವೆ. ವಿಭಾವತ್ವವುಳ್ಳ ಈ ತೋರಿಕೆ ಕಾವ್ಯಾಸ್ವಾದದಲ್ಲಿ ಅಗತ್ಯವೇ ಆಗಿದೆ. ಮತ್ತು ಸಹೃದಯರಲ್ಲಿ ಆನಂದವನ್ನುಂಟುಮಾಡಬೇಕೆಂಬ ಇಚ್ಛೆಯಿಂದ ಕವಿಗಳು ಕಾವ್ಯವನ್ನು ರಚಿಸುವರಲ್ಲದೆ ರಾಮಾದಿಗಳ ರಸಾನುಭವಕ್ಕಾಗಿ ಅಲ್ಲ. ಈ ಅಂಶ ಎಲ್ಲ ಭಾವಕರಿಗೂ ಸ್ವಸಂವೇದ್ಯವೇ ಆಗಿದೆ.

ಒಂದು ವೇಳೆ, ಅನುಕಾರ್ಯರಾದ ರಾಮಾದಿಗಳಲ್ಲೆ ಶೃಂಗಾರಾದಿ ರಸಗಳು ಹುಟ್ಟುತ್ತವೆ ಎಂದಿಟ್ಟುಕೊಳ್ಳೋಣ. ಆಗ ನಾಟಕಾದಿಗಳಲ್ಲಿ, ತನ್ನ ರಮಣಿಯೊಡನೆ ಕೂಡಿ ತೋರುವ ಶೃಂಗಾರ ನಾಯಕನನ್ನು ನೋಡಿದರೆ, ಲೌಕಿಕದಲ್ಲಂತೋ ಅಂತೆಯೇ, ಪ್ರೇಕ್ಷಕರಿಗೆ 'ಇವನು ಶೃಂಗಾರ ನಾಯಕ' ಎಂಬ ಪ್ರತೀತಿ ಮಾತ್ರ ಉಂಟಾದೀತಲ್ಲದೆ ರಸಗಳ ಸವಿ ದೊರಕಲಾರದು. ಹಾಗೂ ಅನುಕಾರ್ಯರಲ್ಲೆ ಶೃಂಗಾರಾದಿಗಳಿದ್ದು ಪ್ರೇಕ್ಷಕರು ಅದನ್ನು ಬರಿದೆ ನೋಡುವುದಾದರೆ ಅವರಲ್ಲಿ ಸತ್ಪುರುಷರಿಗೆ ಲಜ್ಜೆಯೂ, ಇತರರಿಗೆ ಅಸೂಯೆ ಅನುರಾಗ ಅಪಹಾರೇಚ್ಛೆ ಮೊದಲಾದವುಗಳೂ ಹುಟ್ಟೀತು. ಆದ್ದರಿಂದ, ಅನುಕಾರ್ಯರಲ್ಲಿ ಸ್ಥಾಯಿಯೇ ಇಲ್ಲದಿದ್ದು ಕೇವಲ ರಸಿಕರ ಸ್ಥಾಯಿಯೇ ರಸತ್ವವನ್ನು ಹೊಂದುತ್ತದೆ ಎಂಬುದು ನಿರ್ವಿವಾದ.

ಈ ಮೇಲಿನ ಅಂಶದ ಮೂಲಕವಾಗಿ ಕೂಡ ನಾವು ಕಾವ್ಯದ ವ್ಯಂಜಕತ್ವವನ್ನು ಖಂಡಿಸಬಹುದು. ಯಾವುದಾದರೊಂದು ವಸ್ತು ಮೂಲತಃ ಇದ್ದು ಅದು ಮತ್ತೊಂದು ವಸ್ತುವಿನ ನೆರವಿನಿಂದ ವ್ಯಕ್ತವಾಗುವುದಾದರೆ ಅಲ್ಲಿ ಮೊದಲನೆಯದು ಎರಡನೆಯದರಿಂದ ವ್ಯಂಜಿತವಾಯಿತು ಎನ್ನುತ್ತೇವೆ. ಕತ್ತಲಲ್ಲಿರುವ ಘಟ (ಮಡಕೆ) ದೀಪದಿಂದ ವ್ಯಂಜಿತವಾಗುತ್ತದೆ. ಒಂದು ವೇಳೆ ರಸ ಮೊದಲೇ ಸಾಕ್ಷಾತ್ತಾಗಿ ಇದ್ದಿದ್ದರೆ ಹಾಗೂ ಅದು ಅವ್ಯಕ್ತಮಾತ್ರವಾಗಿದ್ದರೆ ಕಾವ್ಯಾರ್ಥವು ಅದನ್ನು ಅಭಿವ್ಯಂಜಿಸಬಹುದಿತ್ತು. ವಾಸ್ತವವಾಗಿ ರಸ ಮೊದಲೇ ಇದ್ದುದಲ್ಲ. ಅದು ವಿಭಾವಾದಿಗಳಿಂದ ಪ್ರೇಕ್ಷಕರಲ್ಲಿ ಭಾವಿತವಾಗುತ್ತದೆ. ಈ ವಿಷಯವನ್ನು ಹಿಂದೆಯೇ (ಇದೇ ಖಂಡದ ವ್ಯಾಖ್ಯೆಯಲ್ಲಿ) ಹೇಳಿದ್ದೇವೆ.

ಇನ್ನು – ಇಲ್ಲಿ ಮತ್ತೊಂದು ಪ್ರಶ್ನೆ ಏಳಬಹುದು : ರಸವು ಸಾಮಾಜಿಕ(ರಸಿಕ)ರನ್ನೆ ಆಶ್ರಯಿಸಿದ್ದು ಎಂದಮೇಲೆ ಇಲ್ಲಿ 'ವಿಭಾವ' ಯಾವುದು? ದೇವಿಯರಾದ ಸೀತೆ ಮೊದಲಾದವರೇ ವಿಭಾವ ಎನ್ನುವುದಾದರೆ, ಅಂಥ ಪೂಜ್ಯರಾದ ದೇವಿಯರು ಶೃಂಗಾರಾದಿಗಳಿಗೆ ವಿಭಾವವಾಗುವುದು ವಿರೋಧವಲ್ಲವೆ? – ಈ ಪ್ರಶ್ನೆಗೆ ಮುಂದಿನ ಕಾರಿಕೆಯಲ್ಲಿ [೪–೪೮] ಉತ್ತರಿಸಲಾಗಿದೆ.

ಟಿಪ್ಪಣಿ : ೪–೧ರ ವ್ಯಾಖ್ಯೆಯಲ್ಲಿ 'ರಸಿಕ' ಎಂಬ ಪದದ ವಿವರಣೆ ಬಂದಿದೆ.

ಕಾರಿಕಾಭಾಗವನ್ನು ಹ್ಯಾಸ್ ಅವರು ಹೀಗೆ ತಪ್ಪಾಗಿ ಅನುವಾದಿಸಿದ್ದಾರೆ : 'ಆ ಸ್ಥಾಯಿಭಾವವೇ ರಸಿಕನ ರಸಾಸ್ವಾದಸಾಮರ್ಥ್ಯದಿಂದಾಗಿ ಮತ್ತು ಆತನ ವರ್ತನೆಯಿಂದಾಗಿ ರಸವಾಗುತ್ತದೆಯಲ್ಲದೆ, ಅನುಕಾರ್ಯನ

ವರ್ಣನದಿಂದಾಗಲಿ ಅಥವಾ ರಸೋದ್ದೇಶವುಳ್ಳ ಕೃತಿಯ ಲಕ್ಷ್ಯದಿಂದಾಗಲೀ ಅಲ್ಲ. ನಿತ್ಯಜೀವನದಲ್ಲಿ ತನ್ನ ಪ್ರೇಯಸಿಯನ್ನೊಡಗೂಡಿರುವ ಒಬ್ಬಾತನನ್ನು ನೋಡಿದಾಗ ಹೇಗೋ ಹಾಗೆಯೇ ಸಾಮಾಜಿಕನಿಗೆ ವ್ರೀಡೆ, ಈರ್ಷ್ಯೆ, ರಾಗ, ದ್ವೇಷ – ಇವುಗಳನ್ನು ಕುರಿತು ಪ್ರತೀತಿಯುಂಟಾಗುತ್ತದೆ.'

## ೪೮. ಅನುಕಾರ್ಯರು – ೧ :

**ಧೀರೋದಾತ್ತಾದ್ಯವಸ್ಥಾನಾಂ ರಾಮಾದಿಃ ಪ್ರತಿಪಾದಕಃ ।**
**ವಿಭಾವಯತಿ ರತ್ಯಾದೀನ್ಸ್ವದಂತೇ ರಸಿಕಸ್ಯ ತೇ ॥ ೪೦ ॥**

ಅನು : [ನಾಟಕಾದಿಗಳಲ್ಲಿ ಚಿತ್ರಿತರಾದ ಅನುಕಾರ್ಯ] ರಾಮಾದಿಗಳು [ತದನುಕೂಲವಾದ] ಧೀರೋದಾತ್ತ ಮುಂತಾದ ಅವಸ್ಥೆಗಳನ್ನು ಪ್ರತಿಪಾದಿಸುವವರು. [ಕೇವಲ ವಿವಿಧ ಅವಸ್ಥೆಗಳನ್ನು ಪ್ರತಿಪಾದಿಸುವ ಸಲುವಾಗಿ, ಈ ಪ್ರತಿಪಾದನೆಗೆ ಕೇವಲ ಆಶ್ರಯವಾಗಿ ಚಿತ್ರಿತರಾದ] ಅವರು [ಸಾಮಾಜಿಕರಲ್ಲಿ] ರತ್ಯಾದಿಗಳು ವಿಭಾವವಾಗುವಂತೆ ಮಾಡುತ್ತಾರೆ. [ಹಾಗೆ ವಿಭಾವಿತವಾದ] ರಸಿಕನ ಅವೇ [ಸ್ಥಾಯಿಭಾವಗಳೇ ಆತನಿಗೆ] ಸವಿಯನ್ನುಂಟುಮಾಡುತ್ತವೆ.

ವ್ಯಾಖ್ಯೆ : [ಪೂಜ್ಯರಾದ ಸೀತಾದಿಗಳೋ ರಾಮಾದಿಗಳೋ ರಸಿಕನ ಶೃಂಗಾರಾದಿಗಳಿಗೆ ವಿಭಾವವಾಗುವುದು ತಪ್ಪಲ್ಲವೆ – ಎಂಬ ಹಿಂದಿನ ವ್ಯಾಖ್ಯಾಂತ್ಯದಲ್ಲಿ ಬಂದ ಪ್ರಶ್ನೆಗೆ ಇಲ್ಲಿ ಉತ್ತರವಿದೆ :] ಕವಿಗಳು ಯೋಗಿಗಳಂತೆ ಧ್ಯಾನಮಾಡಿ ಆ ಧ್ಯಾನಚಕ್ಷುವಿನಿಂದ ಹಿಂದೆ ಆಗಿಹೋದ ರಾಮಾದಿಗಳ ಅವಸ್ಥೆಗಳನ್ನು ಕಂಡು ಅದನ್ನು ಇತಿಹಾಸದಂತೆ ಪುನರ್ರಚಿಸುವುದಿಲ್ಲ. ಹಾಗಾದರೆ ಕವಿಗಳು ಏನು ಮಾಡುತ್ತಾರೆ? ಅವರು ಸರ್ವಲೋಕ ಸಾಧಾರಣವಾದ ಎಂದರೆ, ಲೋಕಸಹಜವಾದ, ಧೀರೋದಾತ್ತಾದಿ ಕೆಲವು ಅವಸ್ಥೆಗಳಿಗೆ ಕೇವಲ ಆಶ್ರಯವಾಗಿ ರಾಮಾದಿಗಳನ್ನು ಚಿತ್ರಿಸುತ್ತಾರೆ. ತಮ್ಮ 'ಉತ್-ಪ್ರೇಕ್ಷೆ'ಯಿಂದ [ಆ ಅವಸ್ಥೆಗಳಿಗೂ ಅವುಗಳ ಆಶ್ರಯವಾದ ರಾಮಾದಿಗಳಿಗೂ] ಸಾಮೀಪ್ಯವನ್ನು ಕಲ್ಪಿಸಿಕೊಡುತ್ತಾರೆ. [ಎಂದರೆ – ಕವಿಗಳು ತಮ್ಮ ಲೋಕಾನುಭವದಿಂದ ಲೋಕಸಹಜವಾದ ಅವಸ್ಥೆಗಳನ್ನು ಚಿತ್ರಿಸುತ್ತಾರೆ; ಈ ಅವಸ್ಥೆಗಳ ಚಿತ್ರಣಕ್ಕೆ ಆಶ್ರಯವಾಗಿ, ಮೂಲಭಿತ್ತಿಯಾಗಿ ರಾಮಾದಿಗಳ ಚರಿತ್ರೆಯನ್ನು ಬಳಸಿಕೊಳ್ಳುತ್ತಾರೆ. ಇತಿಹಾಸಕಾರರಿಗೆ ಬೇಕಾದಂತೆ ರಾಮಾದಿಗಳ ವಾಸ್ತವಚರಿತ್ರೆ ಅವರಿಗೆ ಬೇಕಿಲ್ಲ. ತಾವು ಚಿತ್ರಿಸುವ ಅವಸ್ಥೆಗೂ ಅದಕ್ಕೆ ಆಶ್ರಯವಾಗಿ ಬಳಸಿಕೊಂಡ ರಾಮಾದಿಗಳ ಚರಿತ್ರೆಗೂ ಸ್ವಲ್ಪವೆ ಹೊಂದಿಕೆ ಇದ್ದರೆ ಸಾಕು. ಈ ಹೊಂದಿಕೆಯನ್ನು ಅವರು ತಮ್ಮ ಉತ್ಪ್ರೇಕ್ಷಾಶಕ್ತಿಯಿಂದ ಸಾಧಿಸುತ್ತಾರೆ. ಸಾಮಾಜಿಕರ ಭಾವೋದ್ಬೋಧನಕ್ಕೆ ಪೂಜ್ಯರಾದ ಮೂಲರಾಮಾದಿಗಳು 'ವಿಭಾವ'ವಾಗುವುದಿಲ್ಲ; ಬದಲು, ಕೇವಲ ವಿಶಿಷ್ಟ ಅವಸ್ಥೆಗಳನ್ನು ಪ್ರತಿಪಾದಿಸುವ ಸಲುವಾಗಿ ಆ ಅವಸ್ಥೆಗಳಿಗೆ ಆಶ್ರಯಭಿತ್ತಿಯಾಗಿ ಚಿತ್ರಿತವಾಗಿರುವ ರಾಮಾದಿಗಳು 'ವಿಭಾವ'ವಾಗುತ್ತಾರೆ. ಇವರು ಕವಿಯ ಕಲ್ಪನಾಶಕ್ತಿಯಿಂದ ಮೂಡಿಬಂದವರು. ಆದ್ದರಿಂದಲೇ, ಪೂಜ್ಯರಾಮಾದಿಗಳು ಸಾಮಾಜಿಕರ ಶೃಂಗಾರಾದಿಬೋಧೆಗೆ 'ವಿಭಾವ'ವಾಗುವುದು ತಪ್ಪು ಎಂಬ ಪೂರ್ವಪಕ್ಷ ಬಿದ್ದುಹೋಗುತ್ತದೆ.]

ಟಿಪ್ಪಣಿ : ಹೋಲಿಸಿ : ೧–೬

ಈ ವಿಷಯವನ್ನು ಮುಂದಿನ ಎರಡು ಖಂಡಗಳಲ್ಲಿ [೪–೪೯, ೫೦] ವಿಶದಗೊಳಿಸಲಾಗಿದೆ.

## ೪೯. ಅನುಕಾರ್ಯರು – ೨ (ರಸಹೇತುಗಳು) :

**ತಾ ಏವ ಚ ಪರಿತ್ಯಕ್ತವಿಶೇಷಾ ರಸಹೇತವಃ ।**

ಅನು : ಕೇವಲ ಇವೇ [ಎಂದರೆ] ಬಿಟ್ಟುಕೊಟ್ಟ ವಿಶೇಷಗಳೇ ರಸಕ್ಕೆ ಕಾರಣಗಳು.

ವ್ಯಾಖ್ಯೆ : ಮೇಲೆ ಕಾರಿಕೆಯಲ್ಲಿ ಹೇಳಿದಂತೆ ಕಾವ್ಯದಲ್ಲಿನ ಸೀತಾದಿಶಬ್ದಗಳು, ಮೂಲಳಾದ 'ಜನಕತನಯೆ ಸೀತಾದೇವಿ' ಎಂಬಂಥ ವಿಶೇಷಗಳನ್ನು ಬಿಟ್ಟುಕೊಟ್ಟು ಸ್ತ್ರೀಮಾತ್ರವನ್ನು ಹೇಳುವಂಥವು. ಎಂದರೆ, ಮೂಲದ ವಿಶೇಷಗಳು ಕಾವ್ಯದಲ್ಲಿ ಸಾಧಾರಣೀಕೃತವಾಗಿ ಚಿತ್ರಿತವಾಗಿರುತ್ತವೆ. ಆದಕಾರಣ, ಹಿಂದೆ ಸಂದೇಹಿಸಿದಂತೆ, ಕಾವ್ಯದಲ್ಲಿ ಸೀತಾದಿಗಳನ್ನು ವಿಭಾವವಾಗಿಟ್ಟುಕೊಂಡು ಸಾಮಾಜಿಕರು ಶೃಂಗಾರಾದಿಗಳನ್ನು ಆಸ್ವಾದಿಸುವುದರಿಂದ ಮೂಲ ಸೀತಾದೇವಿಯೇ ಮೊದಲಾದವರ ಪೂಜ್ಯತೆ ಊನವಾಗದು. ಅದೇನೋ ಸರಿ. ಆದರೆ ಸೀತಾದಿಗಳನ್ನು ಪರಿತ್ಯಕ್ತವಿಶೇಷರನ್ನಾಗಿ ಕಾವ್ಯದಲ್ಲಿ ಚಿತ್ರಿಸುವುದಾದರೂ ಏಕೆ? [ಎಂದರೆ, ಕೇವಲ ಸ್ತ್ರೀಪುರುಷವಾಚಕ ಶಬ್ದಗಳೇ ಸಾಕೆಂದಾಗ ಸೀತಾದಿನಾಮಕ ಸ್ತ್ರೀಪುರುಷರ ಚಿತ್ರಣವಾದರೂ ಕಾವ್ಯದಲ್ಲಿ ಏಕೆ ಬರಬೇಕು? ಮತ್ತು ಪರಿತ್ಯಕ್ತವಿಶೇಷವುಳ್ಳ ಪಾತ್ರಗಳನ್ನು ಕಂಡ ಸಾಮಾಜಿಕರಿಗೆ ಭಾವಬೋಧೆಯಾಗಲಿ ರಸಾಸ್ವಾದವಾಗಲಿ ಹೇಗಾಗುತ್ತದೆ?] – ಈ ಪ್ರಶ್ನೆಗೆ ಮುಂದಿನ ಕಾರಿಕೆಯಲ್ಲಿ ಉತ್ತರ ಹೇಳಿದೆ.

ಟಿಪ್ಪಣಿ : 'ವಿಶೇಷಗಳನ್ನು ಕಳೆದು' ಮೂಲಪಾತ್ರಗಳ ಚಿತ್ರಣವನ್ನು ಕೊಡುವುದೇ ಕಾವ್ಯದ ಕಾರ್ಯ ಮತ್ತು ಹಾಗೆ ಮಾಡುವುದರಿಂದಲೇ ರಸನಿಷ್ಪತ್ತಿ ಸಾಧ್ಯವಾಗುತ್ತದೆ ಎಂಬ ಈ ಕಾರಿಕೆಯ ವಿವರಣೆ : ರೂಪಕವೊಂದರಲ್ಲಿ ರಾಮನ ಪಾತ್ರಬರುತ್ತದೆಯೆನ್ನೋಣ. ಅದನ್ನು ನೋಡಿದ ಪ್ರೇಕ್ಷಕನಿಗೆ ತ್ರೇತಾಯುಗದ ದಶರಥ ಮಹಾರಾಜನ ಪುತ್ರ, ಶ್ರೀರಾಮನೇ ಇವನು ಎಂಬ ಭ್ರಾಂತಿ ಉಂಟಾದರೆ, ಹಾಗೆ ತೋರುವಂತೆ ಆತ 'ವಿಶಿಷ್ಟ'ನಾಗಿಯೇ ಚಿತ್ರಿತಗೊಂಡಿದ್ದರೆ, ಅದರಿಂದ ಪ್ರೇಕ್ಷಕನಿಗೂ ಆತನಿಗೂ ಒಂದು ನಿಯತವಾದ ಸಂಬಂಧ ಕಲ್ಪಿತವಾಗುತ್ತದೆ. ಅಂಥ ಪೂಜ್ಯನ ಕಷ್ಟವನ್ನು ಪ್ರೇಕ್ಷಕ ತಟಸ್ಥನಾಗಿ ನೋಡುತ್ತ ಕುಳಿತಿರುವುದು ಅಸಾಧ್ಯ. ವಾಸ್ತವವಾಗಿ ರೂಪಕಾದಿಗಳಲ್ಲಿ ಅಂಥ ಚಿತ್ರಣವಿರುವುದಿಲ್ಲ. ಅಲ್ಲಿ ಬರುವ ರಾಮ ಧೀರೋದಾತ್ತತೆಗೆ ಆಶ್ರಯಮಾತ್ರನಾಗಿ ಬಂದ ಪುರುಷಸಾಮಾನ್ಯ. ಆತನ ಶೋಕ ಕೇವಲ ದಶರಥಪುತ್ರನ ಶೋಕವಾಗಿರದೆ ಅದು ಶೋಕಸಾಮಾನ್ಯವಾಗಿರುತ್ತದೆ. ಹೀಗೆ ನೆಪಮಾತ್ರಕ್ಕೆ, ಕೇವಲ ಅವಸ್ಥೆಗಳ ಆಶ್ರಯಕ್ಕೆ ರಾಮಾದಿಗಳನ್ನು ಆಯ್ದುಕೊಂಡು ಅವರ ವಿಶಿಷ್ಟತೆಯನ್ನು ಕಳೆದು ಅವರನ್ನು 'ಸಾಧಾರಣೀಕೃತ'ವನ್ನಾಗಿಸಿ ಕೊಡುವುದೇ ಕವಿಯ ಕೌಶಲ. ಇಂಥ 'ಪರಿತ್ಯಕ್ತವಿಶೇಷ'ವೇ ರಸಕ್ಕೆ ಕಾರಣವಾಗುತ್ತದೆ ಎಂದು ಇಲ್ಲಿ ಹೇಳಲಾಯಿತು. ಅದು ಹೇಗೆಂಬುದನ್ನು ಮುಂದಿನ ಕಾರಿಕಾಖಂಡದಲ್ಲಿ ವಿವರಿಸಲಾಗಿದೆ.

ಹಿಂದಿನ ಕಾರಿಕಾಖಂಡದ ಅನುವಾದದಲ್ಲೆ ದಾರಿತಪ್ಪಿದಂತೆ ತೋರುವ ಹ್ಯಾಸ್ ಅವರು ಈ ಕಾರಿಕಾಖಂಡದ ಅನುವಾದದಲ್ಲಿ ಸ್ಪಷ್ಟವಾಗಿ ಅಡ್ಡದಾರಿ ಹಿಡಿದಿದ್ದಾರೆ : [ನೋಡಿ : ಹ್ಯಾಸ್ : ೪-೪೮, ೪೯] : 'ಧೀರೋದಾತ್ತಾದ್ಯವಸ್ಥೆಗಳನ್ನು ಪ್ರತಿಪಾದಿಸುವ ರಾಮಾದಿ ನಾಯಕನು ರತ್ಯಾದಿ ಸ್ಥಾಯಿಗಳನ್ನು ವಿಭಾವಿಸಲು, ಅವು ಪ್ರೇಕ್ಷಕನಿಗೆ ಸವಿಕೊಡುತ್ತವೆ' ಎಂಬುದು ಹಿಂದಿನ ಖಂಡದ ಅವರ ಅನುವಾದ; ಈ ಖಂಡದ ಅವರ ಅನುವಾದ : 'ಬದಲು, ನಾಯಿಕೆಯರು ಸ್ವವೈಶಿಷ್ಟ್ಯದ ಗಣನೆಯಿಲ್ಲದೆ ರಸಕ್ಕೆ ಕಾರಣರಾಗಿದ್ದಾರೆ.'

ಕಾರಿಕೆಗೆ ಸಂಬಂಧಿಸಿದಂತೆ 'ಅನುಬಂಧ–೨' ನೋಡಿ.

## ೫೦. ಕಾವ್ಯ – ಕ್ರೀಡೆ :

**ಕ್ರೀಡತಾಂ ಮೃಣ್ಮಯೈರ್ಯದ್ವದ್ಬಾಲಾನಾಂ ದ್ವಿರದಾದಿಭಿಃ ॥ ೪೧ ॥**
**ಸ್ವೋತ್ಸಾಹಃ ಸ್ವದತೇ ತದ್ವಚ್ಛ್ರೋತೄಣಾಮರ್ಜುನಾದಿಭಿಃ ।**

ಅನು : ಮಣ್ಣಿನ ಆನೆಯೇ ಮೊದಲಾದ [ಆಟಿಗೆ]ಗಳಿಂದ ಆಡುವ ಬಾಲಕರ ಸ್ವಂತ ಉತ್ಸಾಹವೇ ಹೇಗೆ [ಆ ಬಾಲಕರಿಗೆ] ಸವಿ ಕೊಡುವುದೊ ಹಾಗೆಯೇ ಅರ್ಜುನಾದಿ[ಪಾತ್ರಗಳ ಪರಿಶೀಲನೆ]ಯಿಂದ [ಪ್ರೇಕ್ಷಕರ ಸ್ವ–ಉತ್ಸಾಹವೇ ಅಥವಾ ಸ್ವ–ಭಾವಾದಿಗಳೇ ಅವರಿಗೆ ಸವಿ ಕೊಡುತ್ತವೆ].

ವ್ಯಾಖ್ಯೆ : ಇಷ್ಟು ಹೇಳಬೇಕು : ಕಾವ್ಯದಲ್ಲಿನ ಶೃಂಗಾರಾದಿಗಳು ಲೋಕದಲ್ಲಿನ ಶೃಂಗಾರಾದಿಗಳಂತೆ ಇರುವುದಿಲ್ಲ. ಲೌಕಿಕ ಶೃಂಗಾರದಲ್ಲಿ ಸ್ತ್ರೀ ಮೊದಲಾದ ವಿಭಾವಾದಿಗಳಿಂದ ಯಾವ ಉಪಯೋಗ

ದೊರೆಯುವುದೋ ಅಂಥ ಉಪಯೋಗ ಕಾವ್ಯದಲ್ಲಿ ದೊರೆಯುವುದಿಲ್ಲ. ಹೀಗೆ ಹೇಳಿದ್ದರಿಂದ ನಾಟ್ಯರಸ(ಕಾವ್ಯರಸ)ಗಳಿಗೂ ಲೌಕಿಕರಸಗಳಿಗೂ ಭೇದ ಕಲ್ಪಿಸಿದಂತಾಯಿತಲ್ಲವೆ ಎಂದರೆ – ಹೌದು; ನಾಟ್ಯ ರಸವೇ ಬೇರೆ ಲೌಕಿಕರಸವೇ ಬೇರೆ; [ಲೌಕಿಕರಸಗಳೆಲ್ಲವೂ ನಾಟ್ಯರಸಗಳಾಗಲಾರವು] ಆದಕಾರಣವೇ 'ಅಷ್ಟೌ ನಾಟ್ಯರಸಾಃ ಸ್ಮೃತಾಃ' (ನಾಟ್ಯರಸಗಳು ಎಂಟು ಎಂದು ನಿರ್ಧರವಾಗಿವೆ) – ಎಂದು ಹೇಳಲಾಗಿದೆ. [ನಾ.ಶಾ. : ೬-೧೫]

ಟಿಪ್ಪಣಿ : ಮಕ್ಕಳು ಮಣ್ಣಿನ ಆನೆಯನ್ನಿಟ್ಟುಕೊಂಡು ಆಡಿ ಸಂತೋಷಹೊಂದುತ್ತಾರೆ. ಆನೆ ಕೇವಲ ನೆಪ. ಆನೆಯ ನೆಪದಲ್ಲಿ ತಮ್ಮ ಸ್ವಂತ ಉತ್ಸಾಹವೇ ಅವರಿಗೆ ಸಂತೋಷ ಕೊಡುತ್ತದೆ. ಹಾಗೆಯೇ, ಕಾವ್ಯದಲ್ಲಿನ ಅರ್ಜುನಾದಿ ಪಾತ್ರಗಳನ್ನು ನೆಪವಾಗಿಟ್ಟುಕೊಂಡು ನೋಡುವ ಪ್ರೇಕ್ಷಕರಲ್ಲಿ ತಮ್ಮ ಸ್ವಂತ ಸ್ಥಾಯಿಭಾವವೇ ಉದ್ಬೋಧವಾಗುತ್ತದೆ ಹಾಗೂ ಆನಂದ ಕೊಡುತ್ತದೆ – ಇದು ಕಾರಿಕೆಯ ತಾತ್ಪರ್ಯ.

## ೫೧. ನರ್ತಕ(ನಟ)ನಿಗೆ ರಸಾಸ್ವಾದ :

**ಕಾವ್ಯಾರ್ಥಭಾವನಾಸ್ವಾದೋ ನರ್ತಕಸ್ಯ ನ ವಾರ್ಯತೇ ॥ ೪೨ ॥**

ಅನು : ನರ್ತಕ (ನಟ) ಕಾವ್ಯಾರ್ಥವನ್ನು ಭಾವಿಸಿ ಸವಿಯುವುದನ್ನು ತಿರಸ್ಕರಿಸಲಾಗುವುದಿಲ್ಲ. [ಎಂದರೆ, ನಟನೂ ತಾನು ನಟಿಸಿ ತೋರಿಸುತ್ತಿರುವ ಕಾವ್ಯದ ಅರ್ಥವನ್ನು ಭಾವಿಸುತ್ತಾನೆ; ಮತ್ತು ಆತ ರಸಿಕರಂತೆಯೇ ಆಸ್ವಾದ ಪಡೆಯುತ್ತಾನೆ.]

ವ್ಯಾಖ್ಯೆ : [ರಸಾಸ್ವಾದವು ರಸಿಕರಿಗೆ ಒದಗುತ್ತದಲ್ಲದೆ ಅನುಕಾರ್ಯರಾದ ರಾಮಾದಿಗಳಿಗೆ ಒದಗದು ಎಂದು ಹಿಂದೆ ಹೇಳಲಾಯಿತಷ್ಟೆ. ಇನ್ನು, ಅನುಕರ್ತರಾದ ನಟರಿಗೆ ರಸಾಸ್ವಾದ ಉಂಟೇ ಅಥವಾ ಇಲ್ಲವೆ – ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಹೇಳಿದೆ :] ನರ್ತಕ(ನಟ)ನಾದರೂ ಲೌಕಿಕ ರಸದಿಂದ ರಸವಂತನಾಗದೆ, ಸಾಮಾಜಿಕರಂತೆ ಕಾವ್ಯರಸದಿಂದಲೇ ರಸವಂತನಾಗುತ್ತಾನೆ. ಏಕೆಂದರೆ – ಆತ [ತನ್ನ ಕೂಡ ನಟಿಸುವ ಹೆಣ್ಣನ್ನು] ತನ್ನ ಹೆಣ್ಣೆಂಬಂತೆ ಭೋಗ್ಯರೂಪದಲ್ಲಿ ಗ್ರಹಿಸುವುದಿಲ್ಲ. ಆತನೂ ಕಾವ್ಯದ ಅರ್ಥವನ್ನು 'ಭಾವಿಸು'ತ್ತಾನೆಯಾದಕಾರಣ ನಮ್ಮಂತೆ(ರಸಿಕರಂತೆ)ಯೇ ಕಾವ್ಯ ರಸಾಸ್ವಾದವನ್ನು ಪಡೆಯುತ್ತಾನೆ. ಈ ಮಾತನ್ನು ತಿರಸ್ಕರಿಸುವಂತಿಲ್ಲ.

ಟಿಪ್ಪಣಿ : ನಟ 'ನಟಿಸುತ್ತಾನೆ' ಎಂಬ ಅಂಶವೇ ಆತನಲ್ಲಿ ಲೋಕರಸ ಸಂಚಾರವಾಗಿಲ್ಲವೆಂಬುದನ್ನು ಸಿದ್ಧಪಡಿಸುತ್ತದೆ. ಅಂತೆಯೇ ಆತನಿಗೆ ರಸಿಕನಂತೆಯೇ ರಸಾನುಭವ ಸಾಧ್ಯ ಎಂದು ಅಭಿಪ್ರಾಯಪಡಲಾಗಿದೆ.

ಹೋಲಿಕೆ = ಸಾ.ದ. : ೩-೧೯.

## ೫೨. ರಸೋದ್ಭೂತಿ ಮತ್ತು ರಸಸ್ವರೂಪ :

**ಸ್ವಾದಃ ಕಾವ್ಯಾರ್ಥಸಂಭೇದಾದಾತ್ಮಾನಂದಸಮುದ್ಭವಃ ।**
**ವಿಕಾಸವಿಸ್ತರಕ್ಷೋಭವಿಕ್ಷೇಪೈಃ ಸ ಚತುರ್ವಿಧಃ ॥ ೪೩ ॥**
**ಶೃಂಗಾರವೀರಬೀಭತ್ಸರೌದ್ರೇಷು ಮನಸಃ ಕ್ರಮಾತ್ ।**
**ಹಾಸ್ಯಾದ್ಭುತಭಯೋತ್ಕರ್ಷಕರುಣಾನಾಂ ಸ ಏವ ಹಿ. ॥ ೪೪ ॥**
**ಅತಸ್ತಜ್ಜನ್ಯತಾ ತೇಷಾಮತ ಏವಾವಧಾರಣಮ್ ।**

ಅನು : ಕಾವ್ಯಾರ್ಥದೊಡನೆ (ಸ್ಥಾಯ್ಯಾದಿಗಳೊಡನೆ) ತಲ್ಲೀನತೆ ಹೊಂದುವುದರಿಂದ [ರಸಿಕನಲ್ಲಿ] ಆತ್ಮಾನಂದ ಉದ್ಭವಿಸುವುದೇ 'ಸ್ವಾದ'. ಮನಸ್ಸಿನ ಕ್ರಮದಿಂದ [ಎಂದರೆ, ಆಯಾ ರಸಕ್ಕೆ ಮೂಲವಾದ ಮನೋಭಾವವನ್ನನುಸರಿಸಿ] ಶೃಂಗಾರ, ವೀರ, ಬೀಭತ್ಸ, ರೌದ್ರ[ಈ ರಸ]ಗಳಲ್ಲಿ ಅದು [ಎಂದರೆ, 'ಸ್ವಾದ'ವು–ಕ್ರಮವಾಗಿ] ವಿಕಾಸ, ವಿಸ್ತರ, ಕ್ಷೋಭ,

ವಿಕ್ಷೇಪ ಎಂದು ನಾಲ್ಕು ವಿಧ.೧ [ಎಂದರೆ, ಶೃಂಗಾರ ರಸದ ಸ್ವಾದವು ಚಿತ್ತವಿಕಾಸ ರೂಪವಾದದ್ದೂ, ವೀರದ ಸ್ವಾದವು ಚಿತ್ತವಿಸ್ತರರೂಪವಾದದ್ದೂ, ಬೀಭತ್ಸದ ಸ್ವಾದವು ಚಿತ್ತಕ್ಷೋಭರೂಪವಾದದ್ದೂ, ರೌದ್ರದ ಸ್ವಾದವು ಚಿತ್ತವಿಕ್ಷೇಪರೂಪವಾದದ್ದೂ ಆಗಿರುತ್ತದೆ.] ಅದರಂತೆಯೇ ಹಾಸ್ಯ, ಅದ್ಭುತ, ಭಯೋತ್ಕರ್ಷ (ಭಯಾನಕ), ಕರುಣ – ಈ ರಸಗಳಲ್ಲಿ [ಕೂಡ ಸ್ವಾದವು ಕ್ರಮವಾಗಿ ನಾಲ್ಕು ವಿಧ; ಹಾಸ್ಯದ ಸ್ವಾದವು ಚಿತ್ತವಿಕಾಸರೂಪವಾದದ್ದೂ, ಅದ್ಭುತದ ಸ್ವಾದವು ಚಿತ್ತ ವಿಸ್ತರರೂಪವಾದದ್ದೂ, ಭಯಾನಕದ ಸ್ವಾದವು ಚಿತ್ತಕ್ಷೋಭರೂಪವಾದದ್ದೂ,ಕರುಣದ ಸ್ವಾದವು ಚಿತ್ತವಿಕ್ಷೇಪ ರೂಪವಾದದ್ದೂ ಆಗಿರುತ್ತದೆ]; ಆದ್ದರಿಂದ ಇವು [ಎಂದರೆ, ಹಾಸ್ಯ, ಅದ್ಭುತ, ಭಯಾನಕ, ಕರುಣಗಳು ಕ್ರಮವಾಗಿ] ಅವುಗಳಿಂದ [ಎಂದರೆ, ಶೃಂಗಾರ, ವೀರ, ಬೀಭತ್ಸ ರೌದ್ರಗಳಿಂದ] ಜನ್ಯವಾದವು [ಎಂದು ಹೇಳಲಾಗಿದೆ]; [ಅದರಂತೆ, ಶೃಂಗಾರದಿಂದ ಹಾಸ್ಯವೂ ವೀರದಿಂದ ಅದ್ಭುತವೂ ಬೀಭತ್ಸದಿಂದ ಭಯಾನಕವೂ ರೌದ್ರದಿಂದ ಕರುಣವೂ ಜನ್ಯ.] ಮತ್ತು [ಚಿತ್ತದ ಈ ನಾಲ್ಕು ರೂಪಗಳಿಗನುಸಾರವಾಗಿ ಮೊದಲ ನಾಲ್ಕು ಪ್ರಕೃತಿರಸಗಳೂ ಅನಂತರದ ನಾಲ್ಕು ತಜ್ಜನ್ಯ ರಸಗಳೂ ಹುಟ್ಟುತ್ತವೆಯಾದಕಾರಣ ರಸಗಳು ಕೇವಲ ಎಂಟು ಎಂದು] ಅವಧಾರಣಪೂರ್ವಕವಾಗಿಯೇ ಹೇಳಿದೆ.

ವ್ಯಾಖ್ಯೆ : ಕಾವ್ಯಾರ್ಥ = ವಿಭಾವಾದಿಗಳಿಂದ ಸಂಸೃಷ್ಟವಾದ ಸ್ಥಾಯಿಯೇ ಆತ್ಮವಾಗಿರುವಂಥದು; ಸಂಭೇದ = ಪರಸ್ಪರ ಸಮ್ಮಿಲನ. ವಿಭಾವಾದಿಸಂಸೃಷ್ಟ ಸ್ಥಾಯಿರೂಪವಾದ ಕಾವ್ಯಾರ್ಥವು ಭಾವಕನ ಚೇತನದಲ್ಲಿ ಸಮ್ಮಿಲನಗೊಳ್ಳುತ್ತದೆ. ಹಾಗೆ ಸಮ್ಮಿಲನಗೊಂಡಾಗ ಭಾವಕನಲ್ಲಿ ತನ್ನದು ಬೇರೆಯದು ಎಂಬ ವಿಭಾಗವೇ ಅಳಿದುಹೋಗುತ್ತದೆ. [ಎಂದರೆ, ಕಾವ್ಯಾರ್ಥಪರಿಶೀಲನದಿಂದ, ರಾಮಾದಿಗಳಲ್ಲಿ ಭಾಸವಾಗುವ ಭಾವಾದಿಗಳು ಸಾಮಾಜಿಕನನ್ನು ತಲ್ಲೀನಗೊಳಿಸುತ್ತವೆ. ಆ ಭಾವಾದಿಗಳನ್ನು ಆತನೇ ಸ್ವತಃ ಅನುಭವಿಸುತ್ತಾನೆ. ಹಾಗೂ ಆ ಭಾವಾದಿಗಳು ರಾಮಾದಿಗಳವೆಂದಾಗಲೀ ತನ್ನವೆಂದಾಗಲೀ ಅನುಭವಿಸದೆ 'ಭಾವಸಾಮಾನ್ಯ'ವಾಗಿ ಸಾಧಾರಣೀಕೃತಾವಸ್ಥೆಯಲ್ಲಿ ಅನುಭವಿಸುತ್ತಾನೆ.] ಇದರಿಂದ ಆತನಲ್ಲಿ ಪ್ರಬಲತರವಾದ ಆತ್ಮಾನಂದ ಹುಟ್ಟುತ್ತದೆ. ಈ ಪ್ರಬಲತರವಾದ ಸ್ವಾನಂದೋದ್ಭೂತಿಯೇ 'ಸ್ವಾದ'. ಆ ಸ್ವಾದ ಎಲ್ಲ ರಸಗಳಲ್ಲೂ ಒಂದೇ ಆಗಿದ್ದರೂ, ಬೇರೆ ಬೇರೆ ರಸಗಳ ಉದ್ಭೂತಿಯಲ್ಲಿ ಬೇರೆ ಬೇರೆ ನಿಯತ ವಿಭಾವಾದಿಗಳು ಕಾರಣವಾಗಿ ಅವು ಬೇರೆ ಬೇರೆ ಬಗೆಯಿಂದ ರಸಿಕನ ಚಿತ್ತವನ್ನು ತಲ್ಲೀನಗೊಳಿಸುವುದರಿಂದ, ರಸಿಕನಲ್ಲಿ ನಾಲ್ಕು ವಿಧವಾದ ಚಿತ್ತಭೂಮಿಗಳನ್ನು ಕಲ್ಪಿಸಿದೆ. ಅವು : ಶೃಂಗಾರದಲ್ಲಿ ವಿಕಾಸ, ವೀರದಲ್ಲಿ ವಿಸ್ತಾರ, ಬೀಭತ್ಸದಲ್ಲಿ ಕ್ಷೋಭ, ರೌದ್ರದಲ್ಲಿ ವಿಕ್ಷೇಪ. ತಮ್ಮ ತಮ್ಮ ವಿಭಾವಾದಿ ಸಾಮಗ್ರಿಗಳಿಂದ ಪರಿಪುಷ್ಟವಾಗುವ ಇನ್ನುಳಿದ ಹಾಸ್ಯ ಅದ್ಭುತ ಭಯಾನಕ ಕರುಣ – ಈ ರಸಗಳಲ್ಲಿ ಮೇಲೆ ಹೇಳಿದ ವಿಕಾಸಾದಿ ರೂಪದಿಂದಲೇ ಭಾವಕಚೇತನದ ತಲ್ಲೀನತೆ ಉಂಟಾಗುತ್ತದೆ.

---

೧ 'ಕನ್ನಡ ಕೈಪಿಡಿ'ಯ ಅಲಂಕಾರ ವಿಭಾಗ(ರಸಪ್ರಕರಣದ ೪ನೆಯ ಖಂಡ)ವಲ್ಲಿ ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳು ಈ ವಿಕಾಸಾದಿ ಚಿತ್ತಸ್ವರೂಪವನ್ನು ಉದಾಹರಣೆಯ ಸಮೇತ ಹೀಗೆ ವಿವರಿಸಿದ್ದಾರೆ :

ವಿಕಾಸ–ಗುಲಾಬಿಯ ಮೊಗ್ಗು ಸುತ್ತಲೂ ಅರಳಿ ದುಂಡಗೆ ಹೂವಾಗುವಂತೆ

ವಿಸ್ತಾರ–ಕಾದ ತುಪ್ಪದಲ್ಲಿ ಹಾಕಿದ ಹಪ್ಪಳ ಹಿಗ್ಗುವಂತೆ

ಕ್ಷೋಭ–(ಸಾರನ್ನು)ತೊಳೆಸಿದಂತೆ, ಅಥವಾ (ಮಜ್ಜಿಗೆ) ಕಡೆದಂತೆ

ವಿಕ್ಷೇಪ–ಫಿರಂಗಿಯಿಂದ ಹೊಡೆದ ಗುಂಡು ನುಗ್ಗುವಂತೆ

'ಶೃಂಗಾರಾದ್ಧಿ ಭವೇದ್ಧಾಸ್ಯೋ ರೌದ್ರಾಚ್ಚ ಕರುಣೋ ರಸಃ।
ವೀರಾಚ್ಚೈವಾದ್ಭುತೋತ್ಪತ್ತಿರ್ಬೀಭತ್ಸಾಚ್ಚ ಭಯಾನಕಃ॥'

[ಶೃಂಗಾರದಿಂದ ಹಾಸ್ಯವೂ, ರೌದ್ರದಿಂದ ಕರುಣವೂ ಉಂಟಾಗುತ್ತದೆ; ವೀರದಿಂದ ಅದ್ಭುತವೂ, ಬೀಭತ್ಸದಿಂದ ಭಯಾನಕವೂ ಉತ್ಪನ್ನವಾಗುತ್ತವೆ. (ನಾ.ಶಾ. : ೬-೩೯)] ಎಂದು ಹೇಳಿದ್ದು ಇದೇ ದೃಷ್ಟಿಯಿಂದ. ಎಂದರೆ, 'ಸಂಭೇದ'(ತಲ್ಲೀನತೆಯ ರೀತಿ)ವನ್ನು ದೃಷ್ಟಿಯಲ್ಲಿಟ್ಟುಕೊಂಡು ಶೃಂಗಾರಾದಿಗಳಿಂದ ಹಾಸ್ಯಾದಿಗಳು ಉಂಟಾಗುತ್ತವೆ ಎಂದು ಹೇಳಲಾಗಿದೆ. ಇದು 'ಹೇತು-ಹೇತುಮತ್ ಭಾವ' ಎಂದು ತಿಳಿಯಬೇಕು. ಹೀಗೆ ಕಾರ್ಯಕಾರಣಭಾವ ಹೇಳಿದೆಂದ ಮಾತ್ರಕ್ಕೆ, ಶೃಂಗಾರಾದಿಗಳ ಹುಟ್ಟಿಗೆ ಕಾರಣವಾದ ವಿಭಾವಾದಿಗಳೇ ಹಾಸ್ಯಾದಿಗಳ ಹುಟ್ಟಿಗೂ ಕಾರಣವಾಗುತ್ತವೆ ಎಂಬ ಅಭಿಪ್ರಾಯವಲ್ಲ. [ಒಟ್ಟಿನ ತಾತ್ಪರ್ಯ : ವಿಕಾಸಾದಿ ಚಿತ್ತಭೂಮಿಗಳಿಂದ ಶೃಂಗಾರಾದಿಗಳು ಹೇಗೆ ಉಂಟಾಗುತ್ತವೂ ಹಾಗೆಯೇ ಅದೇ ವಿಕಾಸಾದಿ ಚಿತ್ತಭೂಮಿಗಳಿಂದಲೇ ಹಾಸ್ಯಾದಿಗಳು ಉಂಟಾಗುತ್ತವೆ.]

'ಶೃಂಗಾರಾನುಕೃತಿರ್ಯಾ ತು ಸ ಹಾಸ್ಯ ಇತಿ ಕೀರ್ತಿತಃ।'

[ಶೃಂಗಾರದ ಅನುಕೃತಿಯು ಹಾಸ್ಯವೆಂದು ಪ್ರಸಿದ್ಧವಾಗಿದೆ. (ನಾ.ಶಾ. : ೬-೪೦)] - ಎಂಬ ಹೇಳಿಕೆ ಕೂಡ ಶೃಂಗಾರಾದಿಗಳಿಗೂ ಹಾಸ್ಯಾದಿಗಳಿಗೂ ವಿಕಾಸಾದಿ ಸಂಭೇದ ಒಂದೇ ಎಂಬುದನ್ನು ಸ್ಪುಟಗೊಳಿಸುವ ಸಲುವಾಗಿ ಮತ್ತು ವಿಕಾಸಾದಿ ನಾಲ್ಕು ಸಂಭೇದಗಳಲ್ಲದೆ ಬೇರೆ ಸಂಭೇದಗಳು ಇಲ್ಲದಿರುವುದರಿಂದ [ಹಾಗೂ ವಿಕಾಸಾದಿಗಳೊಂದೊಂದಕ್ಕೂ ಶೃಂಗಾರಹಾಸ್ಯಾದಿ ಎರಡೆರಡು ರಸಗಳು ನಿಯತವಾಗಿರುವುದರಿಂದ] ರಸಗಳು ಕೇವಲ ಎಂಟು ಎಂಬ ಅವಧಾರಣೆಗೆ ಪುಷ್ಟಿ ದೊರೆಯುತ್ತದೆ.

ಇಲ್ಲಿ ಯಾರಾದರೂ ಹೀಗೆ ಪ್ರಶ್ನಿಸಬಹುದು : ಪ್ರಮೋದಾತ್ಮಕವಾದ ಶೃಂಗಾರವೀರ ಹಾಸ್ಯಾದಿಗಳಲ್ಲಿ ಕಾವ್ಯಾರ್ಥಸಂಭೇದದಿಂದ ಆನಂದೋದ್ಭವವಾಗುತ್ತದೆಂಬ ಮಾತು ಯುಕ್ತವಾದುದಾದರೂ ದುಃಖಾತ್ಮಕಗಳಾದ ಕರುಣಾದಿಗಳಿಂದ ಆನಂದ ಹುಟ್ಟುತ್ತದೆಂಬುದು ತಪ್ಪಲ್ಲವೆ? ಕರುಣಾತ್ಮಕವಾದ ಕಾವ್ಯಗಳನ್ನು ಕೇಳುವ ರಸಿಕರಿಗೆ ಕೂಡ ದುಃಖ ಉಂಟಾಗುತ್ತದೆ, ಕಣ್ಣೀರು ಸುರಿಯುವುದೇ ಮುಂತಾದ ಪ್ರತಿಕ್ರಿಯೆಗಳುಂಟಾಗುತ್ತವೆ. ಹೀಗಿರುವುದರಿಂದ ಕರುಣಾದಿಗಳು ಆನಂದಾತ್ಮಕಗಳೆಂಬುದು ಹೊಂದದ ಮಾತು. ಇದಕ್ಕೆ ಉತ್ತರ : ಕರುಣರಸದ ಕಾವ್ಯಗಳನ್ನೋದುವಾಗ ರಸಿಕನಲ್ಲಿ ಅಶ್ರುಪಾತಾದಿಗಳುಂಟಾಗುತ್ತವೆ ಮುಂತಾಗಿ ಹೇಳುವ ಮಾತು ನಿಜ. ಆದರೆ, ಸುರತ ಸಮಯದಲ್ಲಿ ಕುಟ್ಟಮಿತ(ಪ್ರಣಯಕೋಪ)ದ ಸಂಭೋಗಾವಸ್ಥೆಯಲ್ಲಿ ಸ್ತ್ರೀಯರ ಪ್ರಹರಣ ಇತ್ಯಾದಿಗಳಿಂದ [ರಸಿಕನು ಆನಂದಗೊಳ್ಳುವುದು] ಹೇಗೋ ಹಾಗೆ ಅದೇ ರೀತಿಯಲ್ಲಿ ಕಾವ್ಯದ ಕರುಣಾದಿಗಳಿಂದ ರಸಿಕನು ಆನಂದಗೊಳ್ಳುತ್ತಾನೆ. ಆದರೆ ಈ ಆನಂದವು [ಶೃಂಗಾರಾದಿಗಳಲ್ಲಿನ ಸುಖರೂಪವಾದ ಆನಂದವಾಗಿರದೆ] ಸುಖದುಃಖಾತ್ಮಕವಾಗಿರುತ್ತದೆ; ಸುಖದುಃಖಗಳ ಮಿಶ್ರಣದಿಂದ ಹುಟ್ಟುವ ಆನಂದವಾಗಿರುತ್ತದೆ. ಇಲ್ಲಿ ಒಂದು ವಿಷಯ ತಿಳಿದಿರಬೇಕು : ಲೌಕಿಕ ಕರುಣೆ ಬೇರೆ, ಕಾವ್ಯದ ಕರುಣ ಬೇರೆ. ಆದ್ದರಿಂದಲೇ [ಸುಖದುಃಖಗಳ ಮಿಶ್ರಣವಿದ್ದರೂ] ಇದರಲ್ಲಿ ರಸಿಕರಿಗೆ ಉತ್ತರೋತ್ತರವಾದ ಪ್ರವೃತ್ತಿಯಿರುತ್ತದೆ, ವಿಶೇಷ ಆಸಕ್ತಿಯಿರುತ್ತದೆ. ಒಂದು ವೇಳೆ ಲೌಕಿಕ ಕರುಣೆಯಲ್ಲಿ ಹೇಗೋ ಹಾಗೆ ಇಲ್ಲಿ ಕೂಡ ದುಃಖವೇ ಉಂಟಾಗುವುದಾಗಿದ್ದರೆ ಯಾರೊಬ್ಬರಿಗೂ ಅದರಲ್ಲಿ ಆಸಕ್ತಿಯಿರುತ್ತಿರಲಿಲ್ಲ. ಮತ್ತು ಹಾಗಿದ್ದಲ್ಲಿ ಕರುಣವೊಂದೇ ರಸವಾಗಿರುವ ರಾಮಾಯಣ ಮುಂತಾದ ಮಹಾಪ್ರಬಂಧಗಳು ಉಚ್ಛೇದಿತವಾಗಿ ಹೋಗುತ್ತಿದ್ದವು. ಇನ್ನು, ಲೋಕದಲ್ಲಿ ದುಃಖವನ್ನು ಕಂಡಾಗ ಹೇಗೋ ಹಾಗೆಯೇ ಕಾವ್ಯದಲ್ಲಿ ಕರುಣಾತ್ಮಕವಾದ ವೃತ್ತಗಳನ್ನು ಕೇಳುವಾಗ ಅಶ್ರುಪಾತಾದಿಗಳು ತೋರುವುದು ನಿಜವಾದರೂ ಅದರಿಂದ ರಸೋದ್ಭೂತಿಗೆ ಯಾವ ವಿರೋಧವೂ ಉಂಟಾಗುವುದಿಲ್ಲ. ಆದಕಾರಣ, ಕಾವ್ಯದಲ್ಲಿ ಶೃಂಗಾರವೇ ಮುಂತಾದ ಇತರ ರಸಗಳು ಹೇಗೋ ಹಾಗೆ ಕರುಣಾದಿಗಳೂ ಆನಂದಾತ್ಮಕಗಳೇ ಆಗಿರುತ್ತವೆ.

ಇಲ್ಲಿಯೇ ಮತ್ತೊಂದು ಪ್ರಶ್ನೆ ಏಳಬಹುದು : [ಭರತಮುನಿ] ಶಾಂತರಸವನ್ನು ಹೆಸರಿಸಿಲ್ಲ ಎಂಬ ಕಾರಣದಿಂದ ನಾಟ್ಯದಲ್ಲಿ ಅದಕ್ಕೆ ಅವಕಾಶವಿಲ್ಲ ಎಂಬುದನ್ನಂತೂ ಒಪ್ಪಿಕೊಳ್ಳೋಣ. ಮತ್ತು ಶಾಂತವನ್ನು ಚತುರ್ವಿಧಾಭಿನಯಗಳಿಂದ ಪ್ರತಿಪಾದಿಸುವುದು ಅಸಾಧ್ಯವೆಂಬುದನ್ನೂ ಅಂಗೀಕರಿಸೋಣ. ಆದರೆ ಕಾವ್ಯದಲ್ಲಿ

ಎಲ್ಲೆಡೆಯೂ ಎಂಥ ಸೂಕ್ಷ್ಮವಸ್ತುಗಳನ್ನಾಗಲಿ ಅತೀತವಾದ ವಸ್ತುಗಳನ್ನಾಗಲಿ ಶಬ್ದದ ಮೂಲಕ ಪ್ರತಿಪಾದಿಸುವುದು ಸಾಧ್ಯವಿರುತ್ತದೆ. ಹೀಗಿರುವುದರಿಂದ ಕಾವ್ಯದಲ್ಲಿ ಶಾಂತರಸ ಉಂಟೆಂದರೆ ಅದನ್ನು ವಿರೋಧಿಸುವುದಿಲ್ಲವಷ್ಟೆ? – ಈ ಪ್ರಶ್ನೆಗೆ ಮುಂದಿನ ಕಾರಿಕೆಯಲ್ಲಿ ಉತ್ತರ ಹೇಳಲಾಗಿದೆ.

ಟಿಪ್ಪಣಿ : ನಾ.ಶಾ.ದಲ್ಲಿ ಶೃಂಗಾರಾದಿ ನಾಲ್ಕು ರಸಗಳಿಂದ ಹಾಸ್ಯಾದಿ ನಾಲ್ಕು ರಸಗಳು ಉತ್ಪನ್ನವಾಗುತ್ತವೆಂದು ಹೇಳಿದೆ. ಆ ಮಾತನ್ನು ಹೊಂದಿಸಿ ಅರ್ಥಮಾಡಿಕೊಳ್ಳುವುದು ಕಷ್ಟ. ಅದರಲ್ಲೂ, ಶೃಂಗಾರದ ಅನುಕರಣವೇ ಹಾಸ್ಯ ಎಂಬ ಮಾತು ಅನರ್ಥಕಾರಿಯಾಗಿಯೇ ತೋರುತ್ತದೆ. ನಾಟ್ಯಶಾಸ್ತ್ರಕ್ಕೆ ವ್ಯಾಖ್ಯೆ ಬರೆದ ಅಭಿನವಗುಪ್ತನೂ ಈ ಮಾತಿಗೆ ತನ್ನ ಅಸಮ್ಮತಿ ಸೂಚಿಸಿದ್ದಾನೆ. ಆದರೆ ಇಲ್ಲಿ, ಚಿತ್ತದ ನಾಲ್ಕು ಭೂಮಿಕೆಗಳನ್ನು ಗುರುತಿಸಿ ಒಂದೊಂದರಲ್ಲೂ ಎರಡೆರಡು ರಸಗಳು ಉಂಟಾಗುತ್ತವೆಂದು ಹೇಳಿ ಭರತನ ಮಾತಿಗೆ ಒಂದು ನೂತನ ಅರ್ಥ ಕಲ್ಪಿಸಿದೆ. ಹೀಗೆ ರಸಾನುಭವದಲ್ಲಿ ನಾಲ್ಕು ಚಿತ್ತಭೂಮಿಕೆಗಳನ್ನು ಈ ಗ್ರಂಥಕಾರರಿಗೆ ಹಿಂದಿನವರು ಯಾರಾದರೂ ಕಲ್ಪಿಸಿದ್ದರೂ ಇಲ್ಲವೂ ತಿಳಿಯದು. ಅಂತೂ ರಸವಿಮರ್ಶೆಯಲ್ಲಿ ಇದೊಂದು ಗಮನಾರ್ಹವಾದ ಅಂಶವಾಗಿದೆ.

ಹಿಂದೆ (೪–೪೪) ಸ್ಥಾಯಿಭೇದಗಳನ್ನು ಹೇಳುವಾಗ ಕಾರಿಕೆ ಹಾಗೂ ವ್ಯಾಖ್ಯಾನಗಳೆರಡರಲ್ಲೂ 'ಶಮ' ಎಂಬ ಸ್ಥಾಯಿಯನ್ನು – ಪರ್ಯಾಯವಾಗಿ ಶಾಂತರಸವನ್ನು – ನಾಟ್ಯಗಳಲ್ಲಿ ವಿರೋಧಿಸಲಾಗಿದೆ. ನಾಟ್ಯದಲ್ಲಲ್ಲದಿದ್ದರೆ ಕಾವ್ಯದಲ್ಲಾದರೂ ಶಾಂತಕ್ಕೆ ಸ್ಥಾನವುಂಟೆ ಎಂಬ ಪ್ರಶ್ನೆಯನ್ನು ವ್ಯಾಖ್ಯಾಂತ್ಯದಲ್ಲಿ ಧನಿಕ ಎತ್ತಿಕೊಂಡಿದ್ದಾನೆ. ಆ ಪ್ರಶ್ನೆಗೆ ಮುಂದಿನ ಖಂಡದಲ್ಲಿ ಉತ್ತರವಿದೆ. [ಮುಂದಿನ ಟಿಪ್ಪಣಿ ನೋಡಿ.]

ಹೋಲಿಕೆ = ನಾ.ಶಾ. : ೬–೩೮ರಿಂದ ಮುಂದೆ ೪೧ರ ವರೆಗೆ.

## ೫೩. ಮುದಿತಾದಿಗಳಿಂದ 'ಶಾಂತ'ದ ಪ್ರಕಟನೆ :

**ಶಮಪ್ರಕರ್ಷೋ ನಿರ್ವಾಚ್ಯೋ[೧] ಮುದಿತಾದೇಸ್ತದಾತ್ಮತಾ ॥ ೪೫ ॥**

ಅನು : ಶಮಪ್ರಕರ್ಷ(ಶಾಂತ)ವು ಅದರ ಆತ್ಮವಾದ ಮುದಿತ ಮೊದಲಾದವುಗಳಿಂದ ಹೇಳುವಂಥದು.

ವ್ಯಾಖ್ಯೆ : 'ಶಾಂತ'ದ ಲಕ್ಷಣವನ್ನು ಹೀಗೆ ಹೇಳಲಾಗಿದೆ [ಆಕರ ತಿಳಿಯದು] :

'ನ ಯತ್ರ ದುಃಖಂ ನ ಸುಖಂ ನ ಚಿಂತಾ
ನ ದ್ವೇಷರಾಗೌ ನ ಚ ಕಾಚಿದಿಚ್ಛಾ ।
ರಸಸ್ತು ಶಾಂತಃ ಕಥಿತೋ ಮುನೀಂದ್ರೈಃ
ಸರ್ವೇಷು ಭಾವೇಷು ಶಮಪ್ರಧಾನಃ ॥'

[ಎಲ್ಲಿ ದುಃಖವಿಲ್ಲವೊ ಸುಖವಿಲ್ಲವೊ ಚಿಂತೆಯಿಲ್ಲವೂ ರಾಗದ್ವೇಷಗಳಿಲ್ಲವೋ ಯಾವೊಂದು ಇಚ್ಛೆಯೂ ಇಲ್ಲವೋ ಅದೇ ಶಾಂತರಸವೆಂದು ಮುನೀಂದ್ರ(ಭರತ?)ರಿಂದ ಹೇಳಲ್ಪಟ್ಟಿದೆ. ಎಲ್ಲ ಭಾವಗಳಲ್ಲಿ ಶಮವೇ ಪ್ರಧಾನವಾದದ್ದು.]

– ಇದೇ 'ಶಾಂತ'ದ ಲಕ್ಷಣವಾಗಿದ್ದರೆ, ಅದು ಮೋಕ್ಷಾವಸ್ಥೆಯಲ್ಲಿ ಮಾತ್ರ – ಎಂದರೆ ಆತ್ಮಸ್ವರೂಪಜ್ಞಾನವಾದಲ್ಲಿ – ಹುಟ್ಟಬಲ್ಲುದು. ಮತ್ತು ಅಂಥ ಸ್ಥಿತಿಯ ಸ್ವರೂಪವನ್ನು ಹೇಳಲುಬಾರದು; ಅದು ಅನಿರ್ವಚನೀಯ. ಆದ್ದರಿಂದಲೇ ಆತ್ಮರೂಪವನ್ನು ಹೇಳುವಲ್ಲಿ ಶ್ರುತಿ ಕೂಡ 'ಇವಲ್ಲ, ಇವಲ್ಲ' (ನೇತಿ ನೇತಿ) ಎಂದು ಅನ್ಯಾಪೋಹ (ಬೇರೆಯವನ್ನು ದೂರೀಕರಿಸುವ) ಮಾರ್ಗವನ್ನು ಬಳಸಿಕೊಂಡಿದೆ. ಹಾಗಿರುವ ಶಾಂತರಸವನ್ನು ಸವಿಯುವ ಸಹೃದಯರೂ ಇಲ್ಲ. ಹಾಗಿದ್ದರೂ ಕೂಡ, ಹಿಂದೆ ಹೇಳಲಾದ ವಿಕಾಸ, ವಿಸ್ತರ, ಕ್ಷೋಭ, ವಿಕ್ಷೇಪ – ಈ ನಾಲ್ಕು

---

೧ ಪಾಠ : ಪ್ರಕರ್ಷೋऽನಿರ್ವಾಚ್ಯೋ (೪–೫೩ರ ಟಿಪ್ಪಣಿ ನೋಡಿ.)

ಚಿತ್ತಭೂಮಿಗಳಿಗೆ ಸಮರೂಪವಾದ ಮುದಿತ, ಮೈತ್ರಿ, ಕರುಣ, ಉಪೇಕ್ಷಾ – ಇವು 'ಶಾಂತ'ದ ಲಕ್ಷಣಗಳಾಗಿವೆ. ಅಂತಯೇ ಆ [ಮುದಿತಾದಿ] ಉಕ್ತಿಗಳಿಂದಲೇ ಶಾಂತರಸಾಸ್ವಾದವು ನಿರೂಪಿತವಾಗಿದೆ.

ಟಿಪ್ಪಣಿ : ಹಿಂದಿನ ಟಿಪ್ಪಣಿ ಮತ್ತು ೪–೪೫ರ ಟಿಪ್ಪಣಿ ನೋಡಿ. 'ಶಮಪ್ರಕರ್ಷೋ ನಿರ್ವಾಚ್ಯೋ....' ಎಂಬ ಪಾಠವೇ ಎಲ್ಲೆಡೆ ಇದೆ. ಹ್ಯಾಸ್ ಅವರು ಅದೇ ಪಾಠ ಇಟ್ಟುಕೊಂಡು ಅನುವಾದಿಸಿದ್ದಾರೆ. ಆದರೆ ಹಿಂದಿ ದ.ರೂ.ದಲ್ಲಿ 'ಶಮಪ್ರಕರ್ಷೋಽನಿರ್ವಾಚ್ಯೋ....' ಎಂದಿದೆ. ಅದಕ್ಕೆ ತಕ್ಕಂತೆ ಅವರ ಅನುವಾದ ಹೀಗಿದೆ : ಶಾಂತವು ಅನಿರ್ವಾಚ್ಯ; ಅದು ಮುದಿತಾದಿಗಳಿಂದ ಪ್ರತೀತವಾಗುತ್ತದೆ.

ನಾಟ್ಯದಲ್ಲಿ ಶಾಂತರಸಕ್ಕೆ ಸರ್ವಥಾ ಸ್ಥಾನವಿಲ್ಲ ಎಂದು ಅಭಿಪ್ರಾಯಪಡುವ ಈ ಗ್ರಂಥಕಾರರು ಕಾವ್ಯದಲ್ಲೂ ಶಾಂತಕ್ಕೆ ಉಳಿದವುಗಳ ಸ್ಥಾನವಿಲ್ಲವೆಂದೇ ಸಂದೇಹಿಸುತ್ತಾರೆಂದು ತೋರುತ್ತದೆ. ಒಮ್ಮೆ ಅತ್ಯಗತ್ಯವಾದಲ್ಲಿ ಕಾವ್ಯದಲ್ಲಿ ಶಾಂತರಸವನ್ನು ವಿಕಾಸಾದಿಗಳಿಗೆ ಸಮರೂಪವಾದ ಮುದಿತಾದಿಗಳ ಮೂಲಕ ಸೂಚಿಸ ಬಹುದೆಂದೂ ಇವರು ಹೇಳಿದ್ದಾರೆ. ಹಾಗಿದ್ದರೂ ಮುಂದೆ ಶೃಂಗಾರಾದಿಗಳ ಲಕ್ಷಣ ಹೇಳುವಾಗ (೪–೫೭ರಿಂದ ೮೭) 'ಶಾಂತ'ವನ್ನು ಪ್ರಸ್ತಾಪಿಸಿಯೂ ಇಲ್ಲ. ಒಟ್ಟಿನಲ್ಲಿ ಈ ಅಂಶದ ಬಗೆಗೆ ಇವರ ಅಭಿಪ್ರಾಯ ನಿಷ್ಪಷ್ಟವಾಗಿ ತಿಳಿಯುವುದಿಲ್ಲ.

## ೫೪. ರಸಲಕ್ಷಣ :

> ಪದಾರ್ಥೈರಿಂದುನಿರ್ವೇದರೋಮಾಂಚಾದಿಸ್ವರೂಪಕೈಃ ।
> ಕಾವ್ಯಾದ್ವಿಭಾವಸಂಚಾರ್ಯನುಭಾವಪ್ರಖ್ಯತಾಂ ಗತೈಃ ॥ ೪೭ ॥
> ಭಾವಿತಃ ಸ್ವದತೇ ಸ್ಥಾಯೀ ರಸಃ ಸ ಪರಿಕೀರ್ತಿತಃ ।

ಅನು : ವಿಭಾವ, ಸಂಚಾರಿ (ವ್ಯಭಿಚಾರಿಭಾವ), ಅನುಭಾವಗಳೆಂದು ಪ್ರಖ್ಯಾತವಾದ ಚಂದ್ರ, ನಿರ್ವೇದ, ರೋಮಾಂಚ ಮುಂತಾದ ಸ್ವರೂಪವುಳ್ಳ ಪದಗಳ ಅರ್ಥಗಳಿಂದ ಕಾವ್ಯದಲ್ಲಿ ಭಾವಿತವಾಗಿ ಸ್ವಾದುವಾಗುವ ಸ್ಥಾಯಿಯೇ 'ರಸ'ವೆಂದು ಹೇಳಲಾಗುತ್ತದೆ. [ಎಂದರೆ – ಕಾವ್ಯದಲ್ಲಿನ ಪದಗಳ ಅರ್ಥ ವಿಭಾವ, ವ್ಯಭಿಚಾರಿಭಾವ ಹಾಗೂ ಅನುಭಾವಗಳನ್ನು ಪ್ರತೀತಗೊಳಿಸುತ್ತದೆ. ಈ ವಿಭಾವಾದಿಗಳನ್ನು ಪ್ರತೀತಗೊಳಿಸುವ ಪದಾರ್ಥಗಳುಳ್ಳ ಕಾವ್ಯದಿಂದ ರತ್ಯಾದಿ 'ಸ್ಥಾಯಿಭಾವ'ಗಳು ಪ್ರತೀತವಾಗುತ್ತವೆ. ಹೀಗೆ ಕಾವ್ಯದಲ್ಲಿ ಭಾವಿತವಾಗುವ ಸ್ಥಾಯಿ ಸವಿಯನ್ನು ಕೊಡುವುದಾಗಿ 'ರಸ' ಎನ್ನಿಸಿ ಕೊಳ್ಳುತ್ತದೆ.]

ವ್ಯಾಖ್ಯೆ : ಈ ವರೆಗೆ ರಸದ ವಿವರಣೆ ಮಾಡಲಾಯಿತು. ಇಲ್ಲಿ ಉಪಸಂಹಾರರೂಪವಾಗಿ, ವಿಭಾವಾದಿಗಳೆಲ್ಲದರಿಂದ ಆರಂಭವಾಗಿ ರಸದಲ್ಲಿ ಕೊನೆಗೊಳ್ಳುವ ಕಾವ್ಯವ್ಯಾಪಾರವನ್ನು ಸಮಗ್ರವಾಗಿ ಪರಿಶೀಲಿಸಲಾಗಿದೆ.

ಕಾವ್ಯವ್ಯಾಪಾರದಲ್ಲಿ ಅತಿಶಯೋಕ್ತಿಯ ಮೂಲಕ ವಿಭಾವಾದಿಗಳು ವರ್ಣಿತವಾಗಿರುತ್ತವೆ. [ಕಾವ್ಯದಲ್ಲಿನ ಪದಗಳ ಅರ್ಥ ಈ ವಿಭಾವಾದಿಗಳನ್ನು ಪ್ರತೀತಗೊಳಿಸುತ್ತದೆ.] ಎಂದರೆ – ಒಂದು ಕಾವ್ಯದಲ್ಲಿ ಚಂದ್ರನೇ ಮೊದಲಾದ ಉದ್ದೀಪನವಿಭಾವವೂ, ಪ್ರಮದೆಯರೇ ಮೊದಲಾದ ಆಲಂಬನ ವಿಭಾವವೂ, ನಿರ್ವೇದವೇ ಮೊದಲಾದ ವ್ಯಭಿಚಾರಿಭಾವವೂ, ರೋಮಾಂಚ ಅಶ್ರು ಭ್ರೂವಿಕ್ಷೇಪಕಟಾಕ್ಷ ಮೊದಲಾದ ಅನುಭಾವಗಳೂ ಬಂದಿರುತ್ತವೆನ್ನೋಣ. ಆ ಕಾವ್ಯದಲ್ಲಿನ ಪದಗಳ ಅರ್ಥಗಳು ಮೇಲೆ ಹೇಳಿದ ಚಂದ್ರ, ಪ್ರಮದೆ ನಿರ್ವೇದ ರೋಮಾಂಚ ಇವೇ ಮೊದಲಾದ ವಿಭಾವ ವ್ಯಭಿಚಾರಿ ಅನುಭಾವಗಳನ್ನು ವರ್ಣಿಸುತ್ತವೆ. ಈ ಪದಗಳ ಅರ್ಥಗಳಿಂದ ಒಂದು ವಾಕ್ಯಾರ್ಥ ಹೊರಡಬೇಕಷ್ಟೆ. ಕಾವ್ಯದಲ್ಲಿ ಪದಾರ್ಥಗಳಿಂದ ಹೊರಡುವ ವಾಕ್ಯಾರ್ಥವೆಂದರೆ ಅದು ರತ್ಯಾದಿ ಸ್ಥಾಯಿಭಾವ. ಹೀಗೆ ವಿಭಾವಾದಿಗಳನ್ನು ವರ್ಣಿಸುವ ಪದಾರ್ಥಗಳ

ಮೂಲಕ ಕಾವ್ಯದ ವಾಕ್ಯಾರ್ಥವಾದ ಸ್ಥಾಯಿಯನ್ನು ಸಹೃದಯರು ಭಾವಿಸಿಕೊಳ್ಳುತ್ತಾರೆ. ಹಾಗೆ ಸಹೃದಯರು ಕಾವ್ಯವ್ಯಾಪಾರದಿಂದ ಭಾವಿಸಿಕೊಂಡ ಸ್ಥಾಯಿ ಸವಿಯಾಗುತ್ತದೆ; 'ರಸ' ಎನ್ನಿಸಿಕೊಳ್ಳುತ್ತದೆ. ರಸವಿಚಾರದಲ್ಲಿ ಹಿಂದೆ (ಹಿಂದಿನ ಕೆಲವು ಖಂಡಗಳಲ್ಲಿ) ಹೇಳಿರುವುದರ ತಾತ್ಪರ್ಯವನ್ನು ಇಲ್ಲಿ ಒಗ್ಗೂಡಿಸಿ ಹೇಳಿದೆ.

ಟಿಪ್ಪಣಿ : ವಿಭಾವಕ್ಕೆ ೪-೨, ವ್ಯಭಿಚಾರಿಭಾವಕ್ಕೆ ೪-೮ರಿಂದ ೪೨, ಅನುಭಾವಕ್ಕೆ ೪-೩ ನೋಡಿ.

ರಸದ ಸಂಕ್ಷಿಪ್ತಲಕ್ಷಣ ೪-೧ರಲ್ಲಿ ಬಂದಿದ್ದು, ೪-೪೭ರಿಂದ ಈಚೆ ರಸವನ್ನು ಕುರಿತು ಹಲವು ವಿವರಗಳಿವೆ. ಅವೆಲ್ಲವುಗಳನ್ನು ಐಕ್ಯಗೊಳಿಸಿ ಉಪಸಂಹಾರರೂಪವಾಗಿ ಸಮಗ್ರವಾಗಿ ಇಲ್ಲಿ ರಸಲಕ್ಷಣವನ್ನು ಹೇಳಿದೆ.

ಅನುಬಂಧ-೨ ನೋಡಿ.

ಹೋಲಿಕೆ = ನಾ.ಶಾ. ೬-೩೧ರಿಂದ ಮುಂದಿನ ಗದ್ಯ ಮತ್ತು ಶ್ಲೋಕಗಳು; ಸಾ.ದ. : ೩-೧ ಇ.; ಪ್ರತಾಪ : ೪-೧.

## ೫೫. ರಸಭಾವಗಳ ಲಕ್ಷಣೈಕ್ಯ :

**ಲಕ್ಷಣೈಕ್ಯಂ ವಿಭಾವೈಕ್ಯಾದಭೇದಾದ್ರಸಭಾವಯೋಃ ॥ ೪೭ ॥**

ಅನು : [ಸ್ವಾದುವಾಗುವ ಸ್ಥಾಯಿಭಾವವೇ ರಸ ಎಂದು ಹೇಳಲಾಯಿತಷ್ಟೆ. ಅದರಂತೆ] ರಸ ಹಾಗೂ [ಸ್ಥಾಯಿ]ಭಾವಗಳೆರಡರಲ್ಲೂ ವಿಭಾವ [ಮುಂತಾದವುಗಳು] ಒಂದೇ ಆಗಿರುವುದರಿಂದ [ರಸ ಸ್ಥಾಯಿಭಾವಗಳೆರಡಕ್ಕೂ] ಒಂದೇ ಲಕ್ಷಣ[ವನ್ನು ಹೇಳುತ್ತೇವೆ].

ವ್ಯಾಖ್ಯೆ : ಆಚಾರ್ಯ[ಭರತ]ನು ರತ್ಯಾದಿ ಸ್ಥಾಯಿಭಾವಗಳಿಗೆ ಅವುಗಳ ಲಕ್ಷಣವನ್ನೂ ವಿಭಾವಾದಿಗಳನ್ನೂ ಒಮ್ಮೆ ಹೇಳಿ ಅನಂತರ ಮತ್ತೆ ಶೃಂಗಾರಾದಿ ರಸಗಳಿಗೂ ಲಕ್ಷಣ ಹಾಗೂ ವಿಭಾವಾದಿ ಪರಿಕರಗಳನ್ನು ಹೇಳಿದ್ದಾನೆ. (ನೋಡಿ : ನಾ.ಶಾ. ೬-೪೨ರಿಂದ ೮೨ ಮತ್ತು ೭-೯ರಿಂದ ೨೭) ರಸ ಹಾಗೂ ಸ್ಥಾಯಿಗಳಿಗೆ ಅವುಗಳ ವಿಭಾವಾದಿಗಳೇ ಮುಖ್ಯ ಲಕ್ಷಣಗಳು. ಮತ್ತು ಒಂದು ಸ್ಥಾಯಿಯ ವಿಭಾವಾದಿಗಳೇ ಆ ರಸಕ್ಕೂ ವಿಭಾವಾದಿಗಳಾಗಿರುವುದರಿಂದ ಸ್ಥಾಯಿಯ ಲಕ್ಷಣ ಹಾಗೂ ರಸದ ಲಕ್ಷಣ ಒಂದೇ ಆಗಿರುತ್ತವೆ. ಅಂತೆಯೇ ಇಲ್ಲಿ ಒಂದೇ ಲಕ್ಷಣವನ್ನು ಹೇಳಲಾಗಿದೆ. 'ರಸಭಾವಗಳಲ್ಲಿ ಒಂದೇ ಲಕ್ಷಣ' ಎಂದು ಕಾರಿಕೆಯಲ್ಲಿ ಹೇಳಿದೆಯಷ್ಟೆ; ಅದಕ್ಕೆ 'ಹೇಳುತ್ತೇವೆ' ಎಂದು ವಾಕ್ಯಶೇಷವನ್ನು ಸೇರಿಸಿಕೊಳ್ಳತಕ್ಕದ್ದು.

ಟಿಪ್ಪಣಿ : ಮುಂದಿನ (೪-೫೬) ಖಂಡದಿಂದ 'ರಸಲಕ್ಷಣ'ಗಳನ್ನು ಹೇಳಲಾಗುತ್ತದೆ. ನಾ.ಶಾ.ದಲ್ಲಿ ಸ್ಥಾಯಿಗಳ ಹಾಗೂ ರಸಗಳ ಲಕ್ಷಣಗಳನ್ನು ಬೇರೆಬೇರೆಯಾಗಿ ಹೇಳಿದೆ; ಅದು ಅಗತ್ಯವಲ್ಲವೆಂದು ಇಲ್ಲಿ ಸ್ಥಾಯಿ ಹಾಗೂ ಅದರ ರಸ ಇವುಗಳನ್ನು ಕೂಡಿಸಿ ಒಂದೇ ಲಕ್ಷಣ ಹೇಳಿದೆ.

ಕಾರಿಕೆಯಲ್ಲಿನ 'ಭಾವ' ಎಂಬ ಪದಕ್ಕೆ 'ಸ್ಥಾಯಿಭಾವ' ಎಂದೇ ಅರ್ಥ.

# ಶೃಂಗಾರರಸ

## ೫೬. ಶೃಂಗಾರಲಕ್ಷಣ :

**ರಮ್ಯದೇಶಕಲಾಕಾಲವೇಷಭೋಗಾದಿಸೇವನೈಃ ।**
**ಪ್ರಮೋದಾತ್ಮಾ ರತಿಃ ಸೈವ ಯೂನೋರನ್ಯೋನ್ಯರಕ್ತಯೋಃ ।**
**ಪ್ರಹೃಷ್ಯಮಾಣಾ ಶೃಂಗಾರೋ ಮಧುರಾಂಗವಿಚೇಷ್ಟಿತೈಃ ॥ ೪೮ ॥**

ಅನು : ರಮ್ಯವಾದ ದೇಶ ಕಲೆ ಕಾಲ ವೇಷ ಭೋಗ ಇತ್ಯಾದಿಗಳನ್ನು ಸೇವಿಸುವುದರ ಮೂಲಕ, ಪರಸ್ಪರ ಅನುರಕ್ತರಾದ ಯುವಕಯುವತಿಯರಲ್ಲಿ [ಉಂಟಾಗುವ]

ಪ್ರಮೋದಾತ್ಮಕವಾದ [ಯಾವ ಭಾವವುಂಟೋ] ಅದೇ 'ರತಿ'; ಮಧುರವಾದ ಅಂಗವಿನ್ಯಾಸಗಳಿಂದ [ಪ್ರಕಟವಾಗುವ ಈ ಭಾವವೇ] ವಿಶೇಷ ಹರ್ಷಗೊಳಿಸುವದಾಗಿ 'ಶಂಗಾರ' [ರಸ' ಎನ್ನಿಸಿಕೊಳ್ಳುತ್ತದೆ].

ವ್ಯಾಖ್ಯೆ : ಮೇಲೆ ಹೇಳಿದಂಥ ಲಕ್ಷಣಗಳನ್ನು ಒಳಗೊಂಡಿರುವ ಕಾವ್ಯ ಶೃಂಗಾರದ ಸವಿಯನ್ನು ಹುಟ್ಟಿಸುತ್ತದೆ - ಎಂದು ತಿಳಿಯತಕ್ಕದ್ದು. ರಮ್ಯವಾದ ದೇಶಕಲಾಕಾಲಾದಿಗಳು ಅಲ್ಲಿ ವಿಭಾವಗಳು. ಈ ಕಾರಿಕೆ ಕವಿಗೆ ಉಪದೇಶ ಕೊಡುವಂಥದು.

ದೇಶವಿಭಾವಕ್ಕೆ ಉದಾ:- [ಉತ್ತರ : ೧-೨೬] :

'ಸ್ಮರಸಿ ಸುತನು ತಸ್ಮಿನ್ಪರ್ವತೇ ಲಕ್ಷ್ಮಣೇನ
ಪ್ರತಿವಿಹಿತಸಪರ್ಯಾಸುಸ್ಥಯೋಸ್ತಾನ್ಯಹಾನಿ ।
ಸ್ಮರಸಿ ಸರಸತೀರಾಂ ತತ್ರ ಗೋದಾವರೀಂ ವಾ
ಸ್ಮರಸಿ ಚ ತದುಪಾಂತೇಷ್ವಾವಯೋರ್ವರ್ತನಾನಿ ॥'

[ಎಲೈ ಸುತನು, ಅದೇ ಪರ್ವತದಲ್ಲಿ ಲಕ್ಷ್ಮಣನ ಸೇವೆಗೊಂಡು ಸುಖದಿಂದ ನೆಲೆಸಿದ್ದ ಆ ದಿನಗಳು ನೆನಪಿದೆಯಲ್ಲವೆ? ಅಥವಾ, ಸರಸತೀರಳಾದ ಅಲ್ಲಿನ ಗೋದಾವರಿಯ ಹಾಗೂ ಆ ತಟದಲ್ಲಿ ನಾವು ಅಲೆದಾಡಿದುದರ ನೆನಪಿದೆಯಲ್ಲವೆ?]

ಕಲಾವಿಭಾವಕ್ಕೆ ಉದಾ:- [ಮಾಲ.ಮಿ. : ೨-೮] :

'ಹಸ್ತೈರಂತರ್ನಿಹಿತವಚನೈಃ ಸೂಚಿತಃ ಸಮ್ಯಗರ್ಥಃ
ಪಾದನ್ಯಾಸೈರ್ಲಯಮುಪಗತಸ್ತನ್ಮಯತ್ವಂ ರಸೇಷು ।
ಶಾಖಾಯೋನಿರ್ಮೃದುರಭಿನಯಃ ಷಡ್ವಿಕಲ್ಪೋಽನುವೃತ್ತ್ಯೈ -
ರ್ಭಾವೇ ಭಾವೇ ನುದತಿ ವಿಷಯಾನ್ರಾಗಬಂಧಃ ಸ ಏವ ॥'

[ನುಡಿ ಅಡಗಿರುವಂಥ ಕೈಗಳ ಮಣಿತದಿಂದ ಅರ್ಥಸಮಸ್ತವೂ ಸೂಚಿತವಾಯಿತು; ಹೆಜ್ಜೆಯಿಡುವಲ್ಲಿ ಲಯವೂ ರಸಗಳ ತನ್ಮಯತ್ವವೂ ಹೊಂದಿಕೊಂಡಿತು. [ಶಾರೀರಕ, ಮುಖಜ, ಚೇಷ್ಟಾಕೃತ, ವಾಚಿಕ, ಆಹಾರ್ಯ, ಸಾತ್ವಿಕ-ಈ] ಆರು ಬಗೆಯುಳ್ಳ ಹಾಗೂ ಕೈ ಸೋಜಿಗದ ಬಗೆಗಳಲ್ಲಿ ಮಣಿಯುವ ಆಕೆಯ ಮೃದುವಾದ ಅಭಿನಯ ಭಾವಭಾವಗಳಲ್ಲಿ ವಿಷಯಗಳನ್ನು ನೂಗುತ್ತಿದೆ. ಅದೇ ರಾಗಬಂಧವಾಗಿದೆ.]

ಮತ್ತು - [ನಾಗಾ. : ೧ - ೧೫] :

'ವ್ಯಕ್ತಿರ್ವ್ಯಂಜನಧಾತುನಾ ದಶವಿಧೇನಾಪ್ಯತ್ರ ಲಬ್ಧಾಮುನಾ
ವಿಸ್ಪಷ್ಟೋ ದ್ರುತಮಧ್ಯಲಂಬಿತಪರಿಚ್ಛಿನ್ನಸ್ತ್ರಿಧಾಽಯಂ ಲಯಃ ।
ಗೋಪುಚ್ಛಪ್ರಮುಖಾಃ ಕ್ರಮೇಣ ಗತಯಸ್ತಿ ಸ್ರೋಽಪಿ ಸಂಪಾದಿತಾ-
ಸ್ತತ್ತ್ವೌಘಾನುಗತಾಶ್ಚ ವಾದ್ಯವಿಧಯಃ ಸಮ್ಯಕ್ ತ್ರಯೋ ದರ್ಶಿತಾಃ ॥'

[ಹೊಳೆಸುವ ಹತ್ತು ಬಗೆಗಳಿಂದ ರಾಗ ವ್ಯಕ್ತವಾಗಿದೆ; ಮೂರು ಬಗೆಗಳಲ್ಲಿ ಒಡೆದು ತೋರುವ ದ್ರುತಮಧ್ಯಲಂಬಿತವೆಂಬ ಲಯಕ್ರಮ ಸ್ಪಷ್ಟವಾಗಿದೆ; ಗೋಪುಚ್ಛವೇ ಮೊದಲಾದ ಮೂರು ಗತಿಗಳು ಕ್ರಮಕ್ರಮವಾದ ಹೊಂದಿಕೆಯಿಂದ ಬಳಕೆಯಾಗಿವೆ; ತತ್ತ್ವ ಓಘ ಅನುಗತಗಳೆಂಬ ವಾದ್ಯದ ಮೂರು ಬಗೆಗಳು ಚೆನ್ನಾಗಿ ತೋರಿವೆ.]

ಕಾಲವಿಭಾವಕ್ಕೆ ಉದಾ:- [ಕು.ಸಂ. : ೩-೨೬, ೩೬] :

'ಅಸೂತ ಸದ್ಯಃ ಕುಸುಮಾನ್ಯಶೋಕಃ ಸ್ಕಂಧಾತ್ಪ್ರಭೃತ್ಯೇವ ಸಪಲ್ಲವಾನಿ ।
ಪಾದೇನ ನಾಪೈಕ್ಷತ ಸುಂದರೀಣಾಂ ಸಂಪರ್ಕಮಾಶಿಂಜಿತನೂಪುರೇಣ ॥'

[ಅಶೋಕವೃಕ್ಷ ಚೆಲುವೆಯರ ಝಣಿರೆಸುವ ಅಂದುಗೆಗಳ ಅಡಿಸೋಂಕನ್ನು ಬಯಸದೆಯೆ, ಚಿಗುರುಗೂಡಿದ ಹರೆಹರೆಗಳಲ್ಲಿ ಒಡನೆಯೇ ಹೂಬಿಟ್ಟಿತು.]

ಎಂದು ಮೊದಲಾಗಿ,

'ಮಧು ದ್ವಿರೇಫಃ ಕುಸುಮೈಕಪಾತ್ರೇ ಪಪೌ ಪ್ರಿಯಾಂ ಸ್ವಾಮನುವರ್ತಮಾನಃ ।

ಶೃಂಗೇಣ ಸಂಸ್ಪರ್ಶನಿಮೀಲಿತಾಕ್ಷೀಂ ಮೃಗೀಮಕಂಡೂಯತ ಕೃಷ್ಣಸಾರಃ ॥'

[ತನ್ನ ನಲ್ಲೆಯನ್ನು ಕೂಡಿ ಒಂದೆ ಹೂಬಟ್ಟಲಿನಲ್ಲಿ ದುಂಬಿ ಬಂಡನ್ನುಂಡಿತು; ಸೋಂಕಿನ ಸೊಗಸಿಗೆ ಎವೆ ಅರೆಮುಗಿದ ಹೆಣ್ಣನ್ನು ಕೃಷ್ಣಸಾರ ತನ್ನ ಕೊಂಬಿನಿಂದ ತುರಿಸಿತು.]

ವೇಷವಿಭಾವಕ್ಕೆ ಉದಾಃ– [ಕು.ಸಂ. ३–५३] :

'ಅಶೋಕನಿರ್ಭರ್ತ್ಸಿತಪದ್ಮರಾಗಮಾಕೃಷ್ಟಹೇಮದ್ಯುತಿಕರ್ಣಿಕಾರಮ್ ।

ಮುಕ್ತಾ ಕಲಾಪೀಕೃತಸಿಂದುವಾರಂ ವಸಂತಪುಷ್ಪಾಭರಣಂ ವಹಂತೀ ॥'

[ಪದ್ಮರಾಗವನ್ನು ಹಳಿಯುವಂತಹ ಅಶೋಕ, ಚಿನ್ನದ ಹೊಗರನ್ನು ಸೆಳೆದಿಟ್ಟುಕೊಂಡ ಕರ್ಣಿಕಾರ, ಮುತ್ತಿನ ಮಾಲೆಯಾದ ಸಿಂದುವಾರ – ಹೀಗೆ ವಸಂತಪುಷ್ಪಾಭರಣಭೂಷಿತೆಯಾದವಳು.]

ಉಪಭೋಗವಿಭಾವಕ್ಕೆ ಉದಾಃ– [ಆಕರ ತಿಳಿಯದು] :

'ಚಕ್ಷುರ್ಲುಪ್ತಮಷೀಕಣಂ ಕವಲಿತಸ್ತಾಂಬೂಲರಾಗೋಽಧರೇ

ವಿಶ್ರಾಂತಾ ಕಬರೀ ಕಪೋಲಫಲಕೇ ಲುಪ್ತೇವ ಗಾತ್ರದ್ಯುತಿಃ ।

ಜಾನೇ ಸಂಪ್ರತಿ ಮಾನಿನಿ ಪ್ರಣಯಿನಾ ಕೈರಪ್ಯುಪಾಯಕ್ರಮೈ –

ರ್ಭಗ್ನೋ ಮಾನಮಹಾತರುಸ್ತರುಣಿ ತೇ ಚೇತಸ್ಥಲೀವರ್ಧಿತಃ ॥'

[(ನಾಯಕನಲ್ಲಿ ಕೋಪಗೊಂಡು ಪುನಃ ಅವನಿಂದ ರತಿಕ್ರೀಡೆಗೆ ಸೆಳೆಯಲ್ಪಟ್ಟ ತರುಣಿಯೊಬ್ಬಳನ್ನು ಕುರಿತು ಆಕೆಯ ಸಖಿ ಹೇಳುವ ಮಾತು :) ಕಣ್ಣು ಕಾಡಿಗೆ ಕಳೆದುಕೊಂಡಿದೆ; ಕೆಳದುಟಿಯಲ್ಲಿನ ತಾಂಬೂಲರಾಗ ಅಪಹೃತವಾಗಿದೆ; ತುರುಬು ಕೆನ್ನೆಯಲ್ಲಿ ತುರುಬಿದೆ; ಮೆಯ್‌ಹೊಗರು ಅಳಿದಂತಿದೆ. ಎಲೈ ಮಾನಿನಿ, ನಿನ್ನ ಜೀವನೆಲದಲ್ಲಿ ಬೆಳೆದ ಮಾನದ ಹೆಮ್ಮರವನ್ನು ಯಾವುದೋ ಉಪಾಯಕ್ರಮಗಳಿಂದ ನಿನ್ನ ನಲ್ಲ ಉರುಳಿಸಿಬಿಟ್ಟಿರಬೇಕೆಂದು ತೋರುತ್ತದೆ.]

ಪ್ರಮೋದಾತ್ಮಕ ರತಿಗೆ ಉದಾಃ– [ಮಾ.ಮಾ. : ೧–೩೯] :

'ಜಗತಿ ಜಯಿನಸ್ತೇ ತೇ ಭಾವಾ ನವೇಂದುಕಲಾದಯಃ

ಪ್ರಕೃತಿಮಧುರಾಃ ಸನ್ತ್ಯೇವಾನ್ಯೇ ಮನೋ ಮದಯಂತಿ ಯೇ ।

ಮಮ ತು ಯದಿಯಂ ಯಾತಾ ಲೋಕೇ ವಿಲೋಚನಚಂದ್ರಿಕಾ

ನಯನವಿಷಯಂ ಜನ್ಮನ್ಯೇಕಃ ಸ ಏವ ಮಹೋತ್ಸವಃ ॥'

[ಜಗತ್ತಿನಲ್ಲಿ ಹೊಸದಿಂಗಳಿನ ಕಲೆಯೇ ಮೊದಲಾಗಿ ನಿಸರ್ಗಮಧುರವಾದ ಬೇರೆ ಅನೇಕ ಭಾವಗಳು ಮನವನ್ನು ಹುಚ್ಚೆಬ್ಬಿಸಿ ಗೆಲುವು ಪಡೆದಿವೆ. ನನಗಾದರೋ, ನನ್ನ ಕಣ್ಣುಂಬಿದ (ಮಾಲತಿಯ) ಕಣ್ದಿಂಗಳು ಜನ್ಮದುದ್ದಕ್ಕೆ ಹಾಗೂ ಲೋಕದಗಲಕ್ಕೆ ಒಂದೇ ಆಗಿದೆ; ಹಿರಿದಿಬ್ಬಣವಾಗಿದೆ.]

ಯುವತಿವಿಭಾವಕ್ಕೆ ಉದಾಃ– [ಮಾಲ.ಮಿ. : ೨–३] :

ದೀರ್ಘಾಕ್ಷಂ ಶರದಿಂದುಕಾಂತಿವದನಂ ಬಾಹೂ ನತಾವಂಸಯೋಃ

ಸಂಕ್ಷಿಪ್ತಂ ನಿಬಿಡೋನ್ನತಸ್ತನಮುರಃ ಪಾರ್ಶ್ವೇ ಪ್ರಮೃಷ್ಟೇ ಇವ ।

ಮಧ್ಯಃ ಪಾಣಿಮಿತೋ ನಿತಂಬಿ ಜಘನಂ ಪಾದಾವರಾಲಾಂಗುಲೀ

ಛಂದೋ ನರ್ತಯಿತುರ್ಯಥೈವ ಮನಸಃ ಸ್ಪಷ್ಟಂ ತಥಾಸ್ಯಾ ವಪುಃ ॥'

[ಉದ್ವಿಗ್ನಕಣ್ಣು; ಶರದದ ಚಂದ್ರನ ಹೊಗರು ಸೂಸುವ ಮೊಗ; ಭುಜದಿಂದ ಬಾಗಿದ ಕೈಗಳು; ಎತ್ತರವಾದ ತುಂಬುಮೊಲೆಗಳಿಂದ ಕಿರಿದಾದ ಎದೆ, ಇಲ್ಲವೆಂದೇ ತೋರುವ ಬದಿ, ಮುಷ್ಟಿಗೆಟಕುವ ನಡು, ಘನಜಘನ ಅಗಲಿದ ತಳ, ಬಾಗುಬೆರಳಿನ ಪಾದಗಳು – ಹೀಗೆ ನಿಚ್ಚಳವಾದ ಮೆಯ್, ನನ್ನ ಬಗೆಯಂತೆಯೇ, ಕುಣಿಯುತ್ತಿದೆ.]

ಯುವಕಯುವತಿಯರ ವಿಭಾವಕ್ಕೆ ಉದಾ– [ಮಾ.ಮಾ. : ೧–೧೮] :

'ಭೂಯೋ ಭೂಯಃ ಸವಿಧನಗರೀರಥ್ಯಯಾ ಪರ್ಯಟಂತಂ
ದೃಷ್ಟ್ವಾ ದೃಷ್ಟ್ವಾ ಭವನವಲಭೀತುಂಗವಾತಾಯನಸ್ಥಾ ।
ಸಾಕ್ಷಾತ್ಕಾಮಂ ನವಮಿವ ರತಿರ್ಮಾಲತೀಮಾಧವಂ ಯ –
ದ್ಗಾಢೋತ್ಕಂಠಾ ಲುಲಿತಲಲಿತೈರಂಗಕೈಸ್ತಾಮ್ಯತೀತಿ ॥'

[ನೂತನ ರತಿಯೋ ಎಂಬಂತಿರುವ ಮಾಲತಿ, ಸಮೀಪದ ನಗರಮಾರ್ಗದಲ್ಲಿ ಮೇಲಿಂದಮೇಲೆ ತಿರುಗುತ್ತಿರುವ ಸಾಕ್ಷಾತ್ ಕಾಮನಂತಿರುವ ಮಾಧವನನ್ನು, ತನ್ನ ಸೌಧದ ಮೇಲುಪ್ಪರಿಗೆಯ ಎರುಕಿಟಕಿಯಿಂದ ನೋಡಿ ತೀವ್ರ ಉತ್ಕಂಠೆಯಾಗಿ ಸೊರಗಿ ಲಲಿತವಾಗಿರುವ ಅಂಗಗಳಿಂದ ಹೀಗೆ ಸಂಕಟಪಡುತ್ತಿದ್ದಾಳೆ.]

ಅನ್ಯೋನ್ಯಾನುರಾಗಕ್ಕೆ ಉದಾ– [ಮಾ.ಮಾ. : ೧–೩೨; ೧–೪೬ರಲ್ಲೂ ಉದಾಹೃತವಾಗಿದೆ] :

'ಯಾನ್ತ್ಯಾ ಮುಹುರ್ವಲಿತಕಂಧರಮಾನನಂ ತ –
ದಾವೃತ್ತವೃಂತಶತಪತ್ರನಿಭಂ ವಹನ್ತ್ಯಾ ।
ದಿಗ್ಧೋಽಮೃತೇನ ಚ ವಿಷೇಣ ಚ ಪಕ್ಷ್ಮಲಾಕ್ಷ್ಯಾ
ಗಾಢಂ ನಿಖಾತ ಇವ ಮೇ ಹೃದಯೇ ಕಟಾಕ್ಷಃ ॥'

[ಅವಳು ಹೋಗುವಾಗ ಕೊರಳನ್ನು ಕೊಂಕಿಸಿ ಕಮಲವೃಂತದ ಮೇಲಿರುವ ದುಂಡು ತಾವರೆಯಂತಹ ಮುಖವನ್ನು ಮತ್ತೆ ಮತ್ತೆ ಹೊರಳಿಸಿ ನೋಡಿದ – ತುಂಬುಗೂದಲುರೆಪ್ಪೆಯಿದ್ದು ಅಮೃತ ಮತ್ತು ವಿಷ ತುಂಬಿದ – ಅವಳ ಕಡೆಗಣ್ಣೋಟವು ಇಂದಿಗೂ ನನ್ನ ಹೃದಯದಲ್ಲಿ ನಟ್ಟಂತಿದೆ.]

ಮಧುರಾಂಗವಿನ್ಯಾಸಕ್ಕೆ ಉದಾ– [ಮಾ.ಮಾ. : ೧–೩೦] :

'ಸ್ತಿಮಿತವಿಕಸಿತಾನಾಮುಲ್ಲಸದ್ಭ್ರೂಲತಾನಾಂ
ಮಸೃಣಮುಕುಲಿತಾನಾಂ ಪ್ರಾಂತವಿಸ್ತಾರಭಾಜಾಮ್
ಪ್ರತಿನಯನನಿಪಾತೇ ಕಿಂಚಿದಾಕುಂಚಿತಾನಾಂ
ವಿವಿಧಮಹಮಭೂವಂ ಪಾತ್ರಮಾಲೋಕಿತಾನಾಮ್ ॥'

[ತೆಪ್ಪನಿರುವ, ಅರಳುವ, ಹುಬ್ಬುಗಳನ್ನೇರಿಸಿ ಬಾಗಿಸುವ, ಮೆಲುವಾಗಿ ಮುಗಿಯುವ, ಸುತ್ತ ಹರಡಿ ಬೆಳಗುವ, ಎದುರುಗಣ್ಣಿಗೆ ತೊಡರಿ ತುಸು ಕಿರಿದುಗೊಳ್ಳುವ(ಮಾಲತಿಯ) ಬಗೆಬಗೆಯ ನೋಟಗಳಿಗೆ ನಾನು ಪಾತ್ರನಾದೆ.]

ಟಿಪ್ಪಣಿ : ಹೋಲಿಕೆ = ನಾ.ಶಾ. : ೬–೪೫ರ ಮುಂದಿನ ಗದ್ಯದಿಂದ ೪೮; ಸಾ.ದ. : ೩–೧೮೩ರಿಂದ ಮುಂದೆ.

## ೫೭. ಪೋಷಕ ಭಾವಗಳು :

**ಯೇ ಸತ್ತ್ವಜಾಃ ಸ್ಥಾಯಿನ ಏವ ಚಾಷ್ಟೌ**
**ತ್ರಿಂಶತ್ತ್ರಯೋ ಯೇ ವ್ಯಭಿಚಾರಿಣಶ್ಚ ।**
**ಏಕೋನಪಂಚಾಶದಮೀ ಹಿ ಭಾವಾ**
**ಯುಕ್ತ್ಯಾ ನಿಬದ್ಧಾಃ ಪರಿಪೋಷಯಂತಿ ।**

ಆಲಸ್ಯಮೌಗ್ರ್ಯಂ ಮರಣಂ ಜುಗುಪ್ಸಾ
ತಸ್ಯಾಶ್ರಯಾದ್ವೈತವಿರುದ್ಧಮಿಷ್ಟಮ್ ॥ ೪೯ ॥

ಅನು : ಸತ್ತ್ವಜವಾದ ಎಂಟು [ಭಾವಗಳು] ಮತ್ತು ಅದೇ [ಎಂಟು] ಸ್ಥಾಯಿ [ಭಾವಗಳು] ಹಾಗೂ ಮೂವತ್ತುಮೂರು ವ್ಯಭಿಚಾರಿ [ಭಾವಗಳು - ಕೂಡಿ] ಈ ನಲವತ್ತೊಂಬತ್ತು ಭಾವಗಳು ಯುಕ್ತವಾಗಿ ಯೋಜಿತವಾದರೆ-[ಶೃಂಗಾರರಸವನ್ನು] ಪರಿಪೋಷಿಸುತ್ತವೆ. ಆಲಸ್ಯ, ಔಗ್ರ್ಯ, ಮರಣ[-ಈ ವ್ಯಭಿಚಾರಿ ಭಾವ]ಗಳು [ಮತ್ತು ಸ್ಥಾಯಿಯಾದ] ಜುಗುಪ್ಸಾ-ಇವು ಅದರ[ಎಂದರೆ, ಶೃಂಗಾರದ] ಏಕಾಶ್ರಯ ಪಡೆಯುವುದು ವಿರೋಧಿತವಾಗಿದೆ.

ವ್ಯಾಖ್ಯೆ : ಶೃಂಗಾರಪೋಷಕ ಭಾವಗಳು: ಮೂವತ್ತುಮೂರು ವ್ಯಭಿಚಾರಿಗಳು, ಎಂಟು ಸ್ಥಾಯಿ ಮತ್ತು ಎಂಟು ಸಾತ್ತ್ವಿಕ ಭಾವಗಳು ಹೀಗೆ ಒಟ್ಟಿನಲ್ಲಿ ನಲವತ್ತೊಂಬತ್ತು. 'ಯುಕ್ತವಾಗಿ ಯೋಜಿತವಾದರೆ' ಎಂಬ ಕಾರಿಕೆಯ ಮಾತಿನ ಅರ್ಥ ಇದು : ಈ ನಲವತ್ತೊಂಬತ್ತು ಭಾವಗಳು ಶೃಂಗಾರಕ್ಕೆ 'ಅಂಗವಾಗಿ' ಯೋಜಿತವಾಗಬೇಕು. ಕಾರಿಕೆಯ ಕೊನೆಯ ಸಾಲಿನ ಅರ್ಥ: ಆಲಸ್ಯ, ಔಗ್ರ್ಯ, ಮರಣ, ಜುಗುಪ್ಸಾ-ಈ ಭಾವಗಳನ್ನು ಒಂದೇ 'ಆಲಂಬನವಿಭಾವ'ದ ಅಂಗವಾಗಿ ಯೋಜಿಸುವುದು ಮತ್ತು ಶೃಂಗಾರಕ್ಕೆ ನೇರ ಅಂಗವಾಗಿ ಹೊಂದಿಸುವುದು-ಇವು ಶೃಂಗಾರರಸಕ್ಕೆ ವಿರೋಧವನ್ನುಂಟುಮಾಡುತ್ತವೆ; ಪ್ರಕಾರಾಂತರದಿಂದ-ಎಂದರೆ, ಏಕಾಲಂಬನ ವಿಭಾವಾಶ್ರಯತ್ವವನ್ನು ತಪ್ಪಿಸುವುದರಿಂದ ಮತ್ತು ಸಾಕ್ಷಾತ್ ಅಂಗವಾಗಿ ಯೋಜಿಸದಿರುವುದರಿಂದ-ಈ ಆಲಸ್ಯಾದಿ ಭಾವಗಳಿಂದ ಶೃಂಗಾರಕ್ಕೆ ಉಂಟಾಗುವ ವಿರೋಧವನ್ನು ತಪ್ಪಿಸಬೇಕು. ಈ ವಿಷಯವನ್ನು ಹಿಂದೆಯೇ ಪ್ರತಿಪಾದಿಸಲಾಗಿದೆ.

ಟಿಪ್ಪಣಿ : ಸತ್ತ್ವಜವಾದ ಭಾವಗಳಿಗೆ ೪-೭, ಸ್ಥಾಯಿಗಳಿಗೆ ೪-೪೪, ವ್ಯಭಿಚಾರಿಗಳಿಗೆ ೪-೯, ಆಲಸ್ಯಕ್ಕೆ ೪-೩೪, ಔಗ್ರ್ಯಕ್ಕೆ ೪-೧೮, ಮರಣಕ್ಕೆ ೪-೨೫, ಜುಗುಪ್ಸಾ(ಬೀಭತ್ಸ)ಕ್ಕೆ ೪-೮೦, ಆಲಂಬನವಿಭಾವಕ್ಕೆ ೪-೨ ನೋಡಿ.

ಯಾವುದಾದರೊಂದು ಸ್ಥಾಯಿಗೆ ಅಂಗವಾಗಿ ಎಲ್ಲ ಸ್ಥಾಯಿಗಳೂ ಬರಬಹುದು. ಹಾಗೆ ಸ್ಥಾಯಿಯೊಂದಕ್ಕೆ ಅಂಗವಾಗಿ ಬೇರೆ ಸ್ಥಾಯಿಗಳು ಬಂದರೆ ಅಂಥ ಅಂಗತ್ವಪಡೆದ ಸ್ಥಾಯಿಗಳು ವ್ಯಭಿಚಾರಿಯ ಸ್ವರೂಪದಲ್ಲಿ ಇರುತ್ತವೆ. (ನೋಡಿ : ೩-೩೬ರ ಮತ್ತು ೩೮ರ ವ್ಯಾಖ್ಯೆ.)

ಶೃಂಗಾರಕ್ಕೆ ವಿರೋಧಿಗಳಾದ ಆಲಸ್ಯಾದಿಗಳನ್ನು ಅವಿರೋಧವಾಗುವಂತೆ ಉಪಾಯದಿಂದ ಬಳಸಿಕೊಳ್ಳಬೇಕು; ಈ ವಿಷಯ ಹಿಂದೆಯೇ ಹೇಳಲಾಗಿದೆ – ಎಂದು ವ್ಯಾಖ್ಯಾಂತ್ಯದಲ್ಲಿ ಧನಿಕ ಹೇಳಿದ್ದಾನೆ. ಅದರ ವಿವರಗಳಿಗೆ ೪-೪೩ರ ವ್ಯಾಖ್ಯೆ ನೋಡಿ.

ಹ್ಯಾಸ್ ಅವರು (೪-೫೭) ಕೊನೆಯ ಸಾಲನ್ನು ಹೀಗೆ ಅನುವಾದಿಸಿದ್ದಾರೆ : ಆಲಸ್ಯ, ಔಗ್ರ್ಯ, ಮರಣ ಮತ್ತು ಜುಗುಪ್ಸಾ ಇವುಗಳಲ್ಲಿ ಒಂದೊಂದೂ ಶೃಂಗಾರರಸದ ಏಕಾಶ್ರಯದಿಂದಾಗಿ ವಿರುದ್ಧವೆಂದು ಪರಿಗಣಿಸಲ್ಪಟ್ಟಿದೆ.

ಹೋಲಿಕೆ = ನಾ.ಶಾ. : ೬-೪೫ರ ಅನಂತರದ ಗದ್ಯ ಮತ್ತು ೪೬ರಿಂದ ೪೮; ಸಾ.ದ. : ೩-೧೮೩; ಪ್ರತಾಪ: ೪-೫೩.

ಛಂದಸ್ಸು : ಇಂದ್ರವಜ್ರದ ಆರು ಸಾಲುಗಳು.

## ೫೮. ಶೃಂಗಾರಭೇದಗಳು :

ಅಯೋಗೋ ವಿಪ್ರಯೋಗಶ್ಚ ಸಂಭೋಗಶ್ಚೇತಿ ಸ ತ್ರಿಧಾ ।

ಅನು : ಅದು [ಎಂದರೆ, ಶೃಂಗಾರವು] ಅಯೋಗ, ವಿಪ್ರಯೋಗ, ಸಂಭೋಗ-ಎಂದು ಮೂರು ವಿಧವಾಗಿದೆ.

ವ್ಯಾಖ್ಯೆ : [ಸಾಮಾನ್ಯವಾಗಿ ಶೃಂಗಾರವಲ್ಲಿ ಎರಡೇ ವಿಧಗಳನ್ನು ಹೇಳುತ್ತಾರೆ: ವಿಪ್ರಲಂಭ ಮತ್ತು ಸಂಭೋಗ ಎಂದು. ಅದರ ಪ್ರಕಾರ, ಇಲ್ಲಿನ ಅಯೋಗವಿಪ್ರಯೋಗಗಳೆರಡೂ ವಿಪ್ರಲಂಭದಲ್ಲೆ ಬರುತ್ತವೆ. ಇಲ್ಲಿ ಮಾತ್ರ ವಿಪ್ರಲಂಭ' ಎಂಬ ಹೆಸರನ್ನು ಬಳಸಿಲ್ಲ. ಏಕೆಂದರೆ–] 'ವಿಪ್ರಲಂಭ' ಎಂಬುದು ಅಯೋಗ ವಿಪ್ರಯೋಗ ಎಂಬ ಎರಡು ವಿಶಿಷ್ಟಭೇದಗಳನ್ನು ಕೂಡಿಸಿ ಹೇಳುವ ಸಾಮಾನ್ಯ ಹೆಸರು. [ಅದು ನಾಯಕನಾಯಿಕೆಯರ ಸಂಯೋಗಾಭಾವವನ್ನು ಹೇಳುತ್ತದೆಯಲ್ಲದೆ, ಸಂಯೋಗಾಭಾವದಲ್ಲಿನ ಪ್ರಕಾರಗಳನ್ನು ವಿಶದಪಡಿಸುವುದಿಲ್ಲ.] ಮತ್ತು 'ವಿಪ್ರಲಂಭ' ಎಂಬ ಶಬ್ದಕ್ಕೆ [ಪ್ರವಂಚನೆಯೆಂಬ] ಬೇರೆ ಅರ್ಥವೊಂದಿದೆ. ಇಲ್ಲಿ ಸಲ್ಲದಂಥ ಆ ಅರ್ಥ ಎಲ್ಲಿಯಾದರೂ ಉಂಟಾಗಿಬಿಟ್ಟೀತೆಂಬ ಕಾರಣದಿಂದ ಕೂಡ ವಿಪ್ರಲಂಭ ಶಬ್ದವನ್ನು ಇಲ್ಲಿ ಬಳಸಿಲ್ಲ. ಎರಡೂ ಪ್ರಕಾರಗಳನ್ನು ಒಗ್ಗೂಡಿಸಿ 'ವಿಪ್ರಲಂಭ' ಎಂದು ಹೇಳಿಬಿಡದೆ ಬೇರೆಬೇರೆಯಾಗಿ ಗುರುತಿಸುವ ವಿಧಾನವೇ ಸರಿಯಾದದ್ದು. ನಾಯಿಕೆಗೆ ಸಂಕೇತ ಹೇಳಿ ಅವಧಿ ಕಳೆದರೂ ಅಲ್ಲಿಗೆ ನಾಯಕ ಬರದಿರುವಾಗ ಮತ್ತು ಆತ ಬೇರೊಬ್ಬಳನ್ನು ಅನುಸರಿಸಿ ಹೋಗಿರಬಹುದಾದಾಗ ಅಂಥ ವೇಳೆಯಲ್ಲಿ 'ವಿಪ್ರಲಂಭ' ಎಂಬ ಶಬ್ದವನ್ನು ಬಳಸುತ್ತೇವೆ. ಅಂತೆಯೇ ಆ ಶಬ್ದಕ್ಕೆ 'ವಂಚನೆ' ಎಂಬ ಅರ್ಥ ಬರುತ್ತದೆ. [ಅಂಥ ಸ್ಥಿತಿಯಲ್ಲಿನ ನಾಯಿಕೆಗೆ ವಿಪ್ರಲಬ್ಧೆ ಎನ್ನುತ್ತಾರೆ; ನೋಡಿ : ೨-೪೨].

ಟಿಪ್ಪಣಿ : ಗ್ರಂಥಾಂತರಗಳಲ್ಲಿ ಅಯೋಗ ವಿಪ್ರಯೋಗಗಳೆಂಬ ಭೇದವಿಲ್ಲದೆ, ವಿಪ್ರಲಂಭ ಹಾಗೂ ಸಂಭೋಗ ಎಂಬ ಎರಡೇ ಪ್ರಕಾರಗಳನ್ನು ಹೇಳಿದೆ. 'ವಾಗ್ಭಟಾಲಂಕಾರ'ದಲ್ಲಿ 'ವಿಪ್ರಲಂಭ'ಕ್ಕೆ 'ವಿಪ್ರಯೋಗ' ಎಂದೂ, 'ವಾಗ್ಭಟಾಲಂಕಾರ', 'ರಸಗಂಗಾಧರ'ಗಳೆರಡರಲ್ಲೂ 'ಸಂಭೋಗ'ಕ್ಕೆ 'ಸಂಯೋಗ' ಎಂದೂ ಹೇಳಿದೆ. [ನೋಡಿ : ನಾ.ಶಾ. : ೬-೪೫ರ ಅನಂತರದ ಗದ್ಯ; ಸಾ.ದ. : ೩-೧೮೬; ಪ್ರತಾಪ : ೪-೭೯.]

## ೫೯. ಅಯೋಗಲಕ್ಷಣ :

**ತತ್ರಾಯೋಗೋಽನುರಾಗೋಽಪಿ ನವಯೋರೇಕಚಿತ್ತಯೋಃ ॥ ೫೦ ॥**
**ಪಾರತಂತ್ರ್ಯೇಣ ದೈವಾದ್ವಾ ವಿಪ್ರಕರ್ಷಾದಸಂಗಮಃ ।**

ಅನು : ಏಕಮನಸ್ಸಿನವರಾದ ಹೊಸಬರಿಬ್ಬರು, [ಪರಸ್ಪರ] ಅನುರಾಗವಿದ್ದು ಕೂಡ, ಪರತಂತ್ರತೆಯಿಂದ ಅಥವಾ ದೈವದಿಂದ ಬೇರೆಗೊಳಿಸಲ್ಪಟ್ಟು ಕೂಡದಿರುವುದು 'ಅಯೋಗ'.

ವ್ಯಾಖ್ಯೆ : ಪರಸ್ಪರ ಸ್ವೀಕಾರವೇ ಯೋಗ; ಅದರ ಅಭಾವ 'ಅಯೋಗ'. ದೈವ ಕಾರಣವಾಗಿ ಅಥವಾ ಪಿತ್ರಾದಿಗಳು ಕಾರಣವಾಗಿ ನಾಯಕನಾಯಿಕೆಯರ ಸಮಾಗಮ ಉಂಟಾಗದಿರುವುದೇ 'ಅಯೋಗ'. ಪಾರತಂತ್ರ್ಯದಿಂದ 'ಅಯೋಗ'ಕ್ಕೆ ಉದಾ:- 'ಮಾಲತೀಮಾಧವ'ದಲ್ಲಿನ ಮಾಲತಿ ಹಾಗೂ ಮಾಧವ; 'ರತ್ನಾವಲಿ'ಯಲ್ಲಿನ ಸಾಗರಿಕಾ ಹಾಗೂ ವತ್ಸರಾಜ. ದೈವಕಾರಣವಾಗಿ ಉಂಟಾಗುವ 'ಅಯೋಗ'ಕ್ಕೆ ಉದಾ:- ಶಿವ ಹಾಗೂ ಪಾರ್ವತಿ.

ಟಿಪ್ಪಣಿ : ೪-೫೮ರ ಹಾಗೂ ೪-೬೫ರ ಟಿಪ್ಪಣಿ ನೋಡಿ.

## ೬೦. ಅಯೋಗಾವಸ್ಥೆಗಳು :

**ದಶಾವಸ್ಥಃ ಸ ತತ್ರಾದಾವಭಿಲಾಷೋಽಥ ಚಿಂತನಮ್ ॥ ೫೧ ॥**
**ಸ್ಮೃತಿರ್ಗುಣಕಥೋದ್ವೇಗಪ್ರಲಾಪೋನ್ಮಾದಸಂಜ್ವರಾಃ ।**
**ಜಡತಾ ಮರಣಂ ಚೇತಿ ದುರವಸ್ಥಂ ಯಥೋತ್ತರಮ್ ॥ ೫೨ ॥**

ಅನು : ಅಲ್ಲಿ [ಎಂದರೆ, ಅಯೋಗಶೃಂಗಾರದಲ್ಲಿ] ಹತ್ತು ಅವಸ್ಥೆಗಳು : ಮೊದಲಲ್ಲಿ 'ಅಭಿಲಾಷೆ', ಅನಂತರ 'ಚಿಂತನ' 'ಸ್ಮೃತಿ' 'ಗುಣಕಥನ' 'ಉದ್ವೇಗ' 'ಪ್ರಲಾಪ'

'ಉನ್ಮಾದ' 'ಸಂಜ್ವರ'ಗಳು 'ಜಡತೆ' ಮತ್ತು 'ಮರಣ' – ಹೀಗೆ ಕ್ರಮವಾಗಿ ದುರವಸ್ಥೆ [ಉಂಟಾಗುತ್ತದೆ].

ಟಿಪ್ಪಣಿ : ಹೋಲಿಕೆ = ನಾ.ಶಾ. : ೨೪–೧೬೦–೧೬೨; ಸಾ.ದ. : ೩–೧೯೦; ಪ್ರತಾಪ : ೪–೬೯.

## ೬೧. ಅಭಿಲಾಷಾಲಕ್ಷಣ :

ಅಭಿಲಾಷಃ ಸ್ಪೃಹಾ ತತ್ರ ೧ಕಾಂತೇ೧ ಸರ್ವಾಂಗಸುಂದರೇ ।
ದೃಷ್ಟೇ ಶ್ರುತೇ ವಾ ತತ್ರಾಪಿ ವಿಸ್ಮಯಾನಂದಸಾಧ್ವಸಾಃ ॥ ೫೩ ॥
ಸಾಕ್ಷಾತ್ಪ್ರತಿಕೃತಿಸ್ವಪ್ನಚ್ಛಾಯಾಮಾಯಾಸು ದರ್ಶನಮ್ ।
ಶ್ರುತಿರ್ವ್ಯಾಜಾತ್ಸಖೀಗೀತಮಾಗಧಾದಿಗುಣಸ್ತುತೇಃ ॥ ೫೪ ॥

ಅನು : ಅಲ್ಲಿ [ಎಂದರೆ, ಅಯೋಗದ ದಶಾವಸ್ಥೆಗಳಲ್ಲಿ] ಸರ್ವಾಂಗಸುಂದರನಾದ ಕಾಂತನಲ್ಲಿ [ನಾಯಿಕೆಗೆ] ಆಸೆ ಉಂಟಾಗುವುದು 'ಅಭಿಲಾಷೆ'. [ನಾಯಕನನ್ನು ಅಥವಾ ಆತನ ಚಿತ್ರಾದಿಗಳನ್ನು] ನೋಡುವುದರಿಂದ ಅಥವಾ [ನಾಯಕನ ಬಗೆಗೆ] ಕೇಳುವುದರಿಂದ [ಅದು ಉಂಟಾಗುತ್ತದೆ]. ಅಲ್ಲಿ [ಎಂದರೆ, ಅಭಿಲಾಷೆಯಲ್ಲಿ] ಕೂಡ ವಿಸ್ಮಯ, ಆನಂದ, ಸಾಧ್ವಸ (ತಳಮಳ) – ಇವುಗಳು [ಉಂಟಾಗುತ್ತವೆ]. ಸಾಕ್ಷಾತ್ತಾಗಿ [ಅಥವಾ] ಪ್ರತಿಕೃತಿಯ (ಚಿತ್ರದ) ಮೂಲಕ [ಅಥವಾ] ಸ್ವಪ್ನದಲ್ಲಿ [ಅಥವಾ] ಮಾಯೆ[ಇಂದ್ರಜಾಲ ಇ.,]ಗಳಿಂದ [ಪ್ರಿಯರ] ದರ್ಶನ [ಉಂಟಾಗುವುದು ಮತ್ತು] ಸಖಿಯರ ಮೂಲಕ [ಅಥವಾ] ಗೀತದ ಮೂಲಕ [ಅಥವಾ] ಮಾಗಧಾದಿಗಳ ಹೊಗಳಿಕೆಯ ಮೂಲಕ [ಪ್ರಿಯರನ್ನು ಕುರಿತು] ಕೇಳುವುದು – ಇವುಗಳಿಂದ [ಈ 'ಅಭಿಲಾಷೆ' ಹುಟ್ಟುತ್ತದೆ].

ವ್ಯಾಖ್ಯೆ : 'ಅಭಿಲಾಷೆ'ಗೆ ಉದಾ– [ಶಾಕುಂ. : ೧–೧೯] :

'ಅಸಂಶಯಂ ಕ್ಷತ್ರಪರಿಗ್ರಹಕ್ಷಮಾ
ಯದಾರ್ಯಮಸ್ಯಾಮಭಿಲಾಷಿ ಮೇ ಮನಃ ।
ಸತಾಂ ಹಿ ಸಂದೇಹಪದೇಷು ವಸ್ತುಷು
ಪ್ರಮಾಣಮಂತಃಕರಣಪ್ರವೃತ್ತಯಃ ॥'

[ಆರ್ಯವಾದ ನನ್ನ ಮನ ಆಕೆಯನ್ನು ಬಯಸಿತೆಂದಾಗ ನಿಶ್ಚಯವಾಗಿಯೂ ಆಕೆ ಕ್ಷತ್ರಿಯ ಪರಿಗ್ರಹಣಕ್ಕೆ ಯೋಗ್ಯಳು; ಸಂಶಯ ತರುವ ವಸ್ತುಗಳಲ್ಲಿ (ನಿರ್ಧಾರ ಮಾಡುವಾಗ) ಸತ್ಪುರುಷರ ಅಂತಃಕರಣಪ್ರವೃತ್ತಿಗಳೇ ಪ್ರಮಾಣವಲ್ಲವೆ?]

[ಅಭಿಲಾಷಾಂತರ್ಗತ] 'ವಿಸ್ಮಯ'ಕ್ಕೆ ಉದಾ– [ಆಕರ ತಿಳಿಯದು] :

'ಸ್ತನಾವಾಲೋಕ್ಯ ತನ್ವಂಗ್ಯಾಃ ಶಿರಃ ಕಂಪಯತೇ ಯುವಾ ।
ತಯೋರಂತರನಿರ್ಮಗ್ನಾಂ ದೃಷ್ಟಿಮುತ್ಪಾಟಯನ್ನಿವ ॥'

---

೧ ಪಾಠ : ಕಾಮ್ಯೇ

[ತೆಳುಮೆಯ್ಯವಳ ಮೊಲೆಗಳನ್ನು ನೋಡಿ, ಅವುಗಳ ಒಳಗಿಳಿದು ಸಿಲುಕಿದ ನೋಟವನ್ನು ಕೀಳಲೋ ಎಂಬಂತೆ, ಹರಯದವನ ಮುಡಿ ಕಂಪಿಸುತ್ತದೆ.]

[ಅಭಿಲಾಷಾಂತರ್ಗತ] 'ಆನಂದ'ಕ್ಕೆ ಉದಾ:- [ವಿದ್ಧಶಾಲಭಂಜಿಕಾ : ೧-೩೧; ಮೂಲದ ಶ್ಲೋಕ ಸಾಲು ತಿರುಗಿ ಉದ್ಧೃತವಾಗಿದೆ.] :

'ಸುಧಾಬದ್ಧಗ್ರಾಸೈರುಪವನಚಕೋರೈಃ ಕವಲಿತಾಂ
ಕಿರನ್ ಜ್ಯೋತ್ಸ್ನಾಮಚ್ಛಾಂ ಲವಲಿಫಲಪಾಕಪ್ರಣಯಿನೀಮ್ ।
ಉಪಪ್ರಾಕಾರಾಗ್ರಂ ಪ್ರಹಿಣು ನಯನೇ ತರ್ಕಯ ಮನಾ -
ಗನಾಕಾಶೇ ಕೋಽಯಂ ಗಲಿತಹರಿಣಃ ಶೀತಕಿರಣಃ ॥'

[(ನಾಯಿಕೆಯ ಮೊಗದಿಂಗಳನ್ನು ಸೂಚಿಸಿ ರಾಜನು ವಿದೂಷಕನಿಗೆ ಹೇಳುವ ಮಾತು :) ಪ್ರಾಕಾರದ ಮೇಲೆ ತುದಿಯ ಕಡೆ ನೋಡು; ಸ್ವಲ್ಪ ವಿಚಾರಮಾಡು : ಲವಲಿಯ ಮಾಗುವಣ್ಣಿಗೆ ಜೊತೆಯೆನಿಸಿ ಸ್ವಚ್ಛವಾದ ಬೆಳುದಿಂಗಳನ್ನು ಬೀರುತ್ತ ಉಪವನದ ಚಕೋರಗಳಿಗೆ ತುತ್ತಾಗಿರುವ, ಮಿಗ(ದ ಕಲೆ)ಕಾಣದ ಈ ತಿಂಗಳು ಯಾವುದು?]

[ಅಭಿಲಾಷಾಂತರ್ಗತ] ಸಾಧ್ವಸ(ತಳಮಳ)ಕ್ಕೆ ಉದಾ:- [ಕು.ಸಂ. : ೫-೮೫] :

'ತಂ ವೀಕ್ಷ್ಯ ವೇಪಥುಮತೀ ಸರಸಾಂಗಯಷ್ಟಿ -
ರ್ನಿಕ್ಷೇಪಣಾಯ ಪದಮುದ್ಧೃತಮುದ್ವಹಂತೀ ।
ಮಾರ್ಗಾಚಲವ್ಯತಿಕರಾಕುಲಿತೇವ ಸಿಂಧುಃ
ಶೈಲಾಧಿರಾಜತನಯಾ ನ ಯಯೌ ನ ತಸ್ಥೌ ॥'

[ಚೆಲುವು ಚೆಲ್ಲುವ ಮೆಯ್ಯಿನ ಶೈಲಾಧಿರಾಜತನಯೆ ಅವನನ್ನು (ಶಿವ) ನೋಡಿ ಮೆಯ್ ನಡುಗಿರಲು, ನಡೆಯಲೆಂದು ಅಡಿಯೆತ್ತಿದವಳು - ದಾರಿಗಡ್ಡವಾದ ಬೆಟ್ಟದಿಂದ ವ್ಯಾಕುಲಗೊಂಡ ನದಿಯಂತೆ - ಮುಂದೆ ನಡೆಯಲಿಲ್ಲ, ಅಲ್ಲಿ ನಿಲ್ಲಲಿಲ್ಲ.]

ಮತ್ತು - [ಕು.ಸಂ. : ೮-೨; ೨-೨೬ರಲ್ಲೂ ಉದ್ಧೃತವಾಗಿದೆ] :

'ವ್ಯಾಹೃತಾ ಪ್ರತಿವಚೋ ನ ಸಂದಧೇ ಗಂತುಮೈಚ್ಛದವಲಂಬಿತಾಂಶುಕಾ ।
ಸೇವತೇ ಸ್ಮ ಶಯನಂ ಪರಾಙ್ಮುಖೀ ಸಾ ತಥಾಪಿ ರತಯೇ ಪಿನಾಕಿನಃ ॥'

[ಮಾತನಾಡಿದರೆ ಉತ್ತರ ಕೊಡಳು; ಸೀರೆ ಹಿಡಿದುಕೊಂಡರೆ ಸರಿಯಲಿಚ್ಚಿಸುವಳು; ಹಾಸಿಗೆಯಲ್ಲಿ ಮಲಗಿದರೂ ಮುಖ ತಿರುಗಿರುವಳು - ಹೀಗೂ ಅವಳು ( ಪಾರ್ವತಿ) ಪಿನಾಕಿಗೆ ಪ್ರೀತಿಯೀಯುವಳು.]

ಟಿಪ್ಪಣಿ : ಪ್ರತಾಪ.ದಲ್ಲಿ 'ವಿಪ್ರಲಂಭ'ದ ನಾಲ್ಕು ಪ್ರಕಾರಗಳಲ್ಲಿ ಒಂದನ್ನಾಗಿ 'ಅಭಿಲಾಷಾ'ವನ್ನು ಹೇಳಿದೆ. (ನೋಡಿ : ಪ್ರತಾಪ : ೪-೮೦.)

ಹೋಲಿಕೆ = ನಾ.ಶಾ. : ೨೪-೧೬೩, ೧೬೪; ಸಾ.ದ. : ೩-೧೮೮ರಿಂದ ೧೯೨.

## ೬೨. ಚಿಂತಾದಿಗಳ ಲಕ್ಷಣ :

**ಸಾನುಭಾವವಿಭಾವಾಸ್ತು ಚಿಂತಾದ್ಯಾಃ ಪೂರ್ವದರ್ಶಿತಾಃ ।**

ಅನು : [ಅಯೋಗದ ದಶಾವಸ್ಥೆಗಳಲ್ಲಿ 'ಅಭಿಲಾಷೆ'ಯಲ್ಲದೆ ಇನ್ನುಳಿದ] ಚಿಂತೆ ಮೊದಲಾದವು[ಎಂದರೆ, ಸ್ಮೃತಿ ಗುಣಕಥನ ಉದ್ವೇಗ ಪ್ರಲಾಪ ಉನ್ಮಾದ ಸಂಜ್ವರ ಜಡತಾ ಮರಣ - ಇವು]ಗಳನ್ನು ಅನುಭಾವವಿಭಾವಗಳೊಡಗೂಡಿ ಹಿಂದೆಯೇ ತೋರಿಸಿದೆ.

ವ್ಯಾಖ್ಯೆ : [ಚಿಂತಾದಿಗಳನ್ನು ಹಿಂದೆ ಹೇಳಲಾಗಿದೆ.] ಗುಣಕೀರ್ತನ ಇತ್ಯಾದಿಗಳು ಸ್ಪಷ್ಟವಾಗಿರುವುದರಿಂದ ವ್ಯಾಖ್ಯಾನಿಸಿಲ್ಲ.

ಟಿಪ್ಪಣಿ : ಈ ದಶಾವಸ್ಥೆಗಳ ಸ್ವರೂಪವನ್ನು ಸೂಚಿಸಲು ಅವುಗಳಲ್ಲಿ ಮೊದಲನೆಯದಾದ 'ಅಭಿಲಾಷೆ'ಯನ್ನು ವಿವರವಾಗಿ ಹೇಳಿದೆ. (ನೋಡಿ : ೪-೬೧.) ಇನ್ನು ಚಿಂತೆ, ಸ್ಮೃತಿ, ಉನ್ಮಾದ, ಜಡತಾ, ಮರಣ – ಇವುಗಳನ್ನು, ವ್ಯಭಿಚಾರಿಭಾವಗಳಾಗಿ ಹಿಂದೆಯೇ ಲಕ್ಷಿಸಿರುವುದರಿಂದ ಪ್ರಾಯಃ ಮತ್ತೆ ಹೇಳಿಲ್ಲ. ( ನೋಡಿ : ಕ್ರಮವಾಗಿ ೪-೧೯, ೨೪, ೩೯, ೧೫, ೨೫.) ಮತ್ತು 'ಉದ್ವೇಗ'ವು 'ಆವೇಗ'ವೆಂಬ ವ್ಯಭಿಚಾರಿಯಲ್ಲೂ (೪-೩೫), 'ಸಂಜ್ವರ'ವು 'ವ್ಯಾಧಿ'(೪-೩೮)ಯಲ್ಲೂ ಲಕ್ಷಿತವಾಗಿದೆಯೆನ್ನಬಹುದು. ಗುಣಕಥನ ಪ್ರಲಾಪಗಳನ್ನೂ ವ್ಯಭಿಚಾರಿಗಳಲ್ಲೆ ಗುರುತಿಸಬಹುದು ಅಥವಾ ಧನಿಕನ ಅಭಿಪ್ರಾಯದಂತೆ ಅವು ಸ್ಪಷ್ಟವಿರುವುದರಿಂದ ಲಕ್ಷಣ ಹೇಳಿಲ್ಲವೆಂದು ಗ್ರಹಿಸಬಹುದು.

## ೬೩. ಅಯೋಗಾವಸ್ಥೆಗಳ ಅನಂತತೆ :

**ದಶಾವಸ್ಥತ್ವಮಾಚಾರ್ಯೈಃ ಪ್ರಾಯೋವೃತ್ತ್ಯಾ ನಿದರ್ಶಿತಮ್ ॥ ೫೫ ॥**
**ಮಹಾಕವಿ೧ಪ್ರಬಂಧೇಷು೧ ದೃಶ್ಯತೇ ತದನಂತತಾ ।**

ಅನು : [ಅಯೋಗಶೃಂಗಾರದಲ್ಲಿ ಮೇಲೆ ಹೇಳಿದ ಹತ್ತು ಅವಸ್ಥೆಗಳೇ] ವಿಶೇಷ ಬಳಕೆಯಾಗುವುದರಿಂದ [ಅದಕ್ಕೆ] ಹತ್ತು ಅವಸ್ಥೆಗಳೆಂದು ಆಚಾರ್ಯರು ತೋರಿಸಿ ಕೊಟ್ಟಿದ್ದಾರೆ. [ಆದರೆ ಆ ಹತ್ತು ಮುಖ್ಯ ಅವಸ್ಥೆಗಳಲ್ಲದೆ ಬೇರೆ ಅವಸ್ಥೆಗಳು ಅಲ್ಲಿ ಇರುವುದೇ ಇಲ್ಲವೆಂದು ತಿಳಿಯಬಾರದು. ಏಕೆಂದರೆ] ಮಹಾಕವಿಗಳ ಪ್ರಬಂಧಗಳಲ್ಲಿ [ಅಂಥ ಅವಸ್ಥೆಗಳ] ಅನಂತತೆ ತೋರುತ್ತದೆ.

ಟಿಪ್ಪಣಿ : ಮಹಾಕವಿಪ್ರಬಂಧಗಳನ್ನು ನೋಡಿದಾಗ ಅಲ್ಲಿ ಅಯೋಗದ ಅವಸ್ಥೆಗಳು ಅನಂತವಾಗಿರುವಂತೆ ತೋರುತ್ತದೆ. ಆದರೆ ಇಲ್ಲಿ ಕೇವಲ ಹತ್ತು ಅವಸ್ಥೆಗಳನ್ನು ಹೇಳಿದ್ದೀರಲ್ಲ – ಎಂದು ಸಂದೇಹಿಸುವವರಿಗೆ ಈ ಕಾರಿಕೆ ಉತ್ತರಿಸುತ್ತದೆ : ಅಯೋಗಾವಸ್ಥೆಗಳು ಅನಂತವಾಗಿವೆ ಎಂಬುದು ನಿಜ. ಆದರೆ ಅವುಗಳಲ್ಲಿ ಹತ್ತು ಅವಸ್ಥೆಗಳು ಪ್ರಮುಖವಾಗಿರುತ್ತವೆ; ಪ್ರಮುಖವಾದ ಆ ಹತ್ತು ಅವಸ್ಥೆಗಳನ್ನು ಮಾತ್ರವೇ – ಸಂಪ್ರದಾಯದಂತೆ – ಇಲ್ಲಿ ಗುರುತಿಸಿದೆ. ನಾ.ಶಾ.ದಲ್ಲಿ ಈ ದಶಾವಸ್ಥೆಗಳ ಲಕ್ಷಣ ವಿವರವಾಗಿದೆ. (ನೋಡಿ : ನಾ.ಶಾ. : ೨೪-೧೬೩ರಿಂದ ೧೮೨.)

## ೬೪. ಅವಸ್ಥಾಂತರಸೂಚನೆ :

**ದೃಷ್ಟೇ ಶ್ರುತೇಽಭಿಲಾಷಾಚ್ಚ ಕಿಂ ನೌತ್ಸುಕ್ಯಂ ಪ್ರಜಾಯತೇ ॥ ೫೬ ॥**
**ಅಪ್ರಾಪ್ತೌ ಕಿಂ ನ ನಿರ್ವೇದೋ ಗ್ಲಾನಿಃ ಕಿಂ ನಾತಿಚಿಂತನಾತ್ ।**

ಅನು : [ಪ್ರಮುಖವಾಗಿ ಹತ್ತು ಅವಸ್ಥೆಗಳನ್ನು ಗುರುತಿಸಿದ್ದರೂ ಇಲ್ಲಿ ಅವಸ್ಥಾಂತರಗಳು ಅನಂತವಾಗಿರುವುವೆಂಬುದನ್ನು ಒಪ್ಪಲೇಬೇಕು. ಏಕೆಂದರೆ –] ದರ್ಶನಶ್ರವಣಗಳ ಮೂಲಕ ಉಂಟಾದ 'ಅಭಿಲಾಷೆ'ಯಿಂದ 'ಔತ್ಸುಕ್ಯ' ಹುಟ್ಟುವುದಿಲ್ಲವೇನು? [ಪ್ರಿಯರು] ದೊರಕದಿರಲು 'ನಿರ್ವೇದ'ವುಂಟಾಗದೆ? [ಪ್ರಿಯರನ್ನು ಕುರಿತು] ವಿಶೇಷ ಚಿಂತಿಸುವುದರಿಂದ 'ಗ್ಲಾನಿ'ಯಾಗುವುದಿಲ್ಲವೇನು?

---

೧ ಪಾಠ : ಪ್ರಯೋಗೇಷು

ವ್ಯಾಖ್ಯೆ : [ಅಯೋಗಾವಸ್ಥೆಗಳಾಗಿ ಬರುವ] ಇನ್ನುಳಿದ ಪ್ರಚ್ಛನ್ನಕಾಮಿತ (ರಹಸ್ಯವಾದ ಪ್ರಣಯ) ಇತ್ಯಾದಿಗಳನ್ನು ಕಾಮಸೂತ್ರವೇ ಮೊದಲಾದವುಗಳಿಂದ ತಿಳಿದುಕೊಳ್ಳಬಹುದು.

## ೬೫. ವಿಪ್ರಯೋಗಲಕ್ಷಣ :

**ವಿಪ್ರಯೋಗಸ್ತು ವಿಶ್ಲೇಷೋ ರೂಢವಿಸ್ರಂಭಯೋರ್ದ್ವಿಧಾ ॥ ೫೭ ॥**
**ಮಾನಪ್ರವಾಸಭೇದೇನ ಮಾನೋಽಪಿ ಪ್ರಣಯೇರ್ಷ್ಯಯೋಃ ।**

ಅನು : ಒಲವು ಬಳಕೆಗೊಂಡವರಿಬ್ಬರ [ನಡುವೆ] ವಿಚ್ಛೇದ [ಉಂಟಾಗುವುದು] 'ವಿಪ್ರಯೋಗ'. [ಅದರಲ್ಲಿ] 'ಮಾನ' [ಹಾಗೂ] 'ಪ್ರವಾಸ' ಎಂಬ ಭೇದಗಳಿಂದ ಎರಡು ವಿಧ. 'ಮಾನ'ವು ಕೂಡ 'ಪ್ರಣಯ' 'ಈರ್ಷ್ಯೆ'ಗಳಿಂದ [ಪ್ರಣಯಮಾನ ಈರ್ಷ್ಯಾಮಾನ ಗಳೆಂದು] ಎರಡು ವಿಧ.

ವ್ಯಾಖ್ಯೆ : ಒಮ್ಮೆ ಪರಸ್ಪರ ಪ್ರಾಪ್ತಿಯಾಗಿ ಅನಂತರ ಅಪ್ರಾಪ್ತಿಯಾಗುವುದು [ಎಂದರೆ, ಪ್ರೇಮಿಗಳಿಬ್ಬರು ಒಮ್ಮೆ ಕೂಡಿ ಅನಂತರ ಅಗಲುವುದು] 'ವಿಪ್ರಯೋಗ'. 'ವಿಪ್ರಯೋಗ'ದಲ್ಲಿ 'ಮಾನ' 'ಪ್ರವಾಸ' ಎಂದು ಎರಡು ವಿಧ. 'ಮಾನವಿಪ್ರಯೋಗ'ದಲ್ಲಿ ಕೂಡ 'ಪ್ರಣಯಮಾನ' 'ಈರ್ಷ್ಯಾಮಾನ' ಎಂದು ಎರಡು ವಿಧಗಳು.

ಟಿಪ್ಪಣಿ : ಉಳಿದವರು 'ವಿಪ್ರಲಂಭಶೃಂಗಾರ' ಎಂದು ಹೆಸರಿಸುವುದನ್ನು ಈ ಗ್ರಂಥಕಾರರು ಎರಡು ಭಾಗ ಮಾಡಿ ಅಯೋಗ ವಿಪ್ರಯೋಗಗಳೆಂದು ಲಕ್ಷಿಸಿದ್ದಾರೆ. (ನೋಡಿ : ೪-೫೦ ಮತ್ತು ಅದರ ಟಿಪ್ಪಣಿ.) ಇತರ ಗ್ರಂಥಗಳಲ್ಲಿ 'ವಿಪ್ರಲಂಭ' ಶೃಂಗಾರದ ನಾಲ್ಕು ವಿಧಗಳನ್ನು ಹೇಳಿದೆ. ಅವು : ಪೂರ್ವಾನುರಾಗ (ಅಭಿಲಾಷೆ), ಮಾನ (ಈರ್ಷ್ಯೆ), ಪ್ರವಾಸ ಮತ್ತು ಕರುಣ. ನಾ.ಶಾ.ದಲ್ಲಿ ವಿಪ್ರಲಂಭಭೇದಗಳನ್ನು ಹೇಳಿಲ್ಲ. ಇಲ್ಲಿನ 'ಅಯೋಗ' ಉಳಿದವುಗಳ 'ಪೂರ್ವಾನುರಾಗ'ವನ್ನು ಹೋಲುವಂತೆ ತೋರುತ್ತದೆ. ಕೊನೆಯದಾದ 'ಕರುಣ ವಿಪ್ರಲಂಭ'ವನ್ನು ಹೋಲುವ ಯಾವ ಪ್ರಕಾರವನ್ನೂ ಇಲ್ಲಿ ಹೇಳಿಲ್ಲ.

ಇಲ್ಲಿ ಕೊಟ್ಟಿರುವ ಹೋಲಿಕೆ 'ವಿಪ್ರಲಂಭ'(ಇಲ್ಲಿನ ಅಯೋಗ ಹಾಗೂ ವಿಪ್ರಯೋಗ)ಕ್ಕೆ ಅನ್ವಯಿಸುತ್ತದೆ.

ಹೋಲಿಕೆ = ನಾ.ಶಾ. : ೬-೪೫ರ ಮುಂದಿನ ಗದ್ಯ; ಸಾ.ದ. : ೩-೧೮೬, ೧೮೭; ಪ್ರತಾಪ : ೪-೮೦.

## ೬೬. ಪ್ರಣಯಮಾನಲಕ್ಷಣ :

**ತತ್ರ ಪ್ರಣಯಮಾನಃ ಸ್ಯಾತ್ಕೋಪಾಗವಸಿತಗಯೋರ್ದ್ವಯೋಃ ॥ ೫೮ ॥**

ಅನು : ಅಲ್ಲಿ [ ಎಂದರೆ, 'ಮಾನ'ದಲ್ಲಿ], ಕೋಪ ತುಂಬಿದ [ನಾಯಕನಾಯಿಕೆ – ಈ] ಇಬ್ಬರಲ್ಲಿ [ಉಂಟಾಗುವಂಥದು] 'ಪ್ರಣಯಮಾನ'ವಾಗಿರುತ್ತದೆ.

ವ್ಯಾಖ್ಯೆ : ಪ್ರೇಮಪೂರ್ವಕವಾದ ವಶೀಕರಣವೇ ಪ್ರಣಯ; ಅದನ್ನು ಭಂಗಗೊಳಿಸುವ ಮಾನ(ಕೋಪ)ವೇ 'ಪ್ರಣಯಮಾನ'. ಅದು ನಾಯಕನಾಯಿಕೆಯರಿಬ್ಬರಲ್ಲೂ ಉಂಟಾಗುತ್ತದೆ.

ನಾಯಕನ ಪ್ರಣಯಮಾನಕ್ಕೆ ಉದಾ:- [ಉತ್ತರ. : ೩-೩೭] :

'ಅಸ್ಮಿನ್ನೇವ ಲತಾಗೃಹೇ ತ್ವಮಭವಸ್ತನ್ಮಾರ್ಗದತ್ತೇಕ್ಷಣಃ
ಸಾ ಹಂಸೈಃ ಕೃತಕೌತುಕಾ ಚಿರಮಭೂದ್ಗೋದಾವರೀ ಸೈಕತೇ ।
ಆಯಾಂತ್ಯಾ ಪರಿದುರ್ಮನಾಯಿತಮಿವ ತ್ವಾಂ ವೀಕ್ಷ್ಯ ಬದ್ಧಸ್ತಯಾ
ಕಾತರ್ಯಾದರವಿಂದಕುಡ್ಮಲನಿಭೋ ಮುಗ್ಧಃ ಪ್ರಣಾಮಾಂಜಲಿಃ ।'

---

೧ ಪಾಠ : ವೇಶಿತ

[ಆಕೆ ಬರುವ ದಾರಿಯಲ್ಲಿ ಕಣ್ಣು ನೆಟ್ಟು ನೀನು ಇದೇ ಬಳ್ಳಿಮಾಡದಲ್ಲಿದ್ದೆ. ಆಕೆ (ಸೀತೆ) ಹಂಸಗಳ ಚೆದುರು ನೋಡುತ್ತ ಗೋದಾವರಿಯ ಮರಳಿನಲ್ಲಿ ಬಹುಕಾಲ ನಿಂತುಬಿಟ್ಟಳು. ಮರಳಿದಾಗ, ಬಗೆ ಕದಡಿದಂತಿದ್ದ ನಿನ್ನನ್ನು ಕಂಡು ಕಾತರದಿಂದ ತಾವರೆಮೊಗ್ಗಿನಂತೆ ಮುಗ್ಧವಾಗಿ ಕೈಜೋಡಿಸಿದಳು.]

ನಾಯಿಕೆಯ ಪ್ರಣಯಮಾನಕ್ಕೆ ಉದಾ:- [ಶ್ರೀವಾಕ್ಪತಿರಾಜದೇವ(ಮುಂಜ)ಕೃತ; ೪-೬೭ರಲ್ಲೂ ಉದ್ಧೃತವಾಗಿದೆ] :

'ಪ್ರಣಯಕುಪಿತಾಂ ದೃಷ್ಟ್ವಾ ದೇವೀಂ ಸಸಂಭ್ರಮವಿಸ್ಮಿತ -
ಸ್ತ್ರಿಭುವನಗುರುರ್ಭೀತ್ಯಾ ಸದ್ಯಃ ಪ್ರಣಾಮಪರೋಽಭವತ್ ।
ನಮಿತಶಿರಸೋ ಗಂಗಾಲೋಕೇ ತಯಾ ಚರಣಾಹತಾ -
ವವತು ಭವತಸ್ತ್ರ್ಯಕ್ಷಸ್ಯೈತದ್ವಿಲಕ್ಷಮವಸ್ಥಿತಮ್ ॥'

[ಪ್ರಣಯಕುಪಿತಳಾದ ದೇವಿಯನ್ನು ಕಂಡು ಹೆದರಿ ಸಂಭ್ರಮವಿಸ್ಮಯಗಳಿಂದ ಮೂರು ಲೋಕದ ಗುರು (ಶಿವ) ಒಡನೆಯೇ ತಲೆವಾಗಲು, ತಲೆವಾಗಿದ ಅವನ (ಮುಡಿಯಲ್ಲಿ) ಗಂಗೆಯನ್ನು ಕಂಡು (ಮತ್ತಷ್ಟು ಕ್ರುದ್ಧಳಾದ) ಆಕೆ ಚರಣಪ್ರಹಾರಮಾಡಲು, ಮುಕ್ಕಣ್ಣನ ಅಂಥ ವಿಲಕ್ಷಣ ಅವಸ್ಥೆ ನಿಮ್ಮೆಲ್ಲರನ್ನು ಕಾಪಾಡಲಿ.]

ನಾಯಕನಾಯಿಕೆಯರಿಬ್ಬರದೂ ಪ್ರಣಯಮಾನಕ್ಕೆ ಉದಾ:- [ಹಾಲ. : ೨೭] :

'ಪಣಅಕುವಿಆಣ ದೋಣ್ಣವಿ ಅಲಿಅಪಸುತ್ತಾಣ ಮಾಣಇಂತಾಣಂ ।
ಣಿಚ್ಚಲಣಿರುದ್ಧಣೀಸಾಸದಿಣ್ಣಅಣ್ಣಾಣ ಕೋ ಮಲ್ಲೋ ॥'

[ಒಲವಿನ ಸಿಟ್ಟಿನಿಂದ ಸುಳ್ಳೆ ನಿದ್ದಿಸುತ್ತಿರುವ, ಅಲುಗದೆ ಬಿಗಿಹಿಡಿದ ಉಸಿರಿನತ್ತ (ಪರಸ್ಪರ) ಕಿವಿಗೊಟ್ಟಿರುವ ಈ ಮಾನವಂತರಿಬ್ಬರಲ್ಲಿ (ನಾಯಕನಾಯಿಕೆಯರಲ್ಲಿ) ಯಾರು ಧೀರರು?]

ಟಿಪ್ಪಣಿ : ಹೋಲಿಕೆ = ಸಾ.ದ. : ೩-೧೯೪.

## ೬೭. ಈರ್ಷ್ಯಾಮಾನಲಕ್ಷಣ :

**ಸ್ತ್ರೀಣಾಮೀರ್ಷ್ಯಾಕೃತೋ ಮಾನಃ ಕೋಪೋಽನ್ಯಾಸಂಗಿನಿ ಪ್ರಿಯೇ ।**
**ಶ್ರುತೇ ವಾಽನುಮಿತೇ ದೃಷ್ಟೇ ಶ್ರುತಿಸ್ತತ್ರ ಸಖೀಮುಖಾತ್ ॥ ೫೯ ॥**
**ಉತ್ಸ್ವಪ್ನಾಯಿತಭೋಗಾಂಕಗೋತ್ರಸ್ಖಲನಕಲ್ಪಿತಃ ।**
**ತ್ರಿಧಾಽನುಮಾನಿಕೋ ದೃಷ್ಟಃ ಸಾಕ್ಷಾದಿಂದ್ರಿಯಗೋಚರಃ ॥ ೬೦ ॥**

ಅನು : [ತನ್ನ] ಪ್ರಿಯನು ಬೇರೊಬ್ಬಳನ್ನು ಕೂಡಿರಲು [ಆ ಅನ್ಯಳ ಸಂಗವನ್ನು] ಕೇಳಿ ಅಥವಾ ಊಹಿಸಿ [ಅಥವಾ] ನೋಡಿ [ಅದರಿಂದ] ಸ್ತ್ರೀಯರಲ್ಲಿ ಉಂಟಾಗುವ ಕೋಪ (ಮಾನ)ವು ಈರ್ಷ್ಯಾಕೃತ[ವಾದ ಮಾನ ಎನ್ನಿಸಿಕೊಳ್ಳುತ್ತದೆ]. ಅಲ್ಲಿ, [ಪ್ರಿಯನ ಅಪರಾಧವನ್ನು]ಕೇಳುವುದು ಸಖಿಯ ಮುಖದಿಂದ; ಅನುಮಾನಿಸುವುದು (ಊಹಿಸುವುದು) [ಅಪರಾಧಿಯಾದ ಪ್ರಿಯನ] ಕನವರಿಕೆ, ಭೋಗಚಿಹ್ನೆ, ಗೋತ್ರಸ್ಖಲನ (ಹೆಸರು ತಪ್ಪಿ ಹೇಳುವಿಕೆ) – ಹೀಗೆ ಮೂರು ವಿಧದಿಂದ ಕಲ್ಪಿಸಿಕೊಂಡು; ನೋಡುವುದೆಂದರೆ ಸಾಕ್ಷಾತ್ತಾಗಿ (ದೃಕ್) ಇಂದ್ರಿಯಕ್ಕೆ ಕಾಣಿಸುವುದು.

ವ್ಯಾಖ್ಯೆ : 'ಈರ್ಷ್ಯಾಮಾನ'ವು ಸ್ತ್ರೀಯರಲ್ಲಿ (ನಾಯಿಕೆಯರಲ್ಲಿ) ಮಾತ್ರವೇ ಉಂಟಾಗುತ್ತವೆ. ತನ್ನ ಪ್ರಿಯನು ಬೇರೊಬ್ಬ ನಾಯಿಕೆಯಲ್ಲಿ ಆಸಕ್ತನಾಗಿರುವನೆಂದು ತಿಳಿದಾಗ ಈ 'ಈರ್ಷ್ಯಾಮಾನ' ಹುಟ್ಟುತ್ತದೆ. ಪ್ರಿಯನು

ಮತ್ತೊಬ್ಬಳಲ್ಲಿ ಆಸಕ್ತನಾಗಿರುವನೆಂಬುದು ಆಕೆಗೆ ತಿಳಿಯುವುದು ಅದನ್ನು ಕೇಳುವುದರಿಂದ ಅಥವಾ ಅನುಮಾನದಿಂದ ಅಥವಾ ನೋಡುವುದರಿಂದ.

ಇದರಲ್ಲಿ ಪ್ರಿಯನ ಅಪರಾಧವನ್ನು ಕೇಳಿ ತಿಳಿಯುವುದು ಸಖಿಯ ಮಾತಿನಿಂದ. ಸಖಿ ನಾಯಿಕೆಯ ವಿಶ್ವಾಸಕ್ಕೆ ಪಾತ್ರಳಾಗಿರುತ್ತಾಳಾದ್ದರಿಂದ ಆಕೆ ಹೇಳಿದ ಮಾತನ್ನು ನಾಯಿಕೆ ನಂಬುತ್ತಾಳೆ. ಇದಕ್ಕೆ ಉದಾ:- [ಧನಿಕನದೇ] :

'ಸುಭ್ರು ತ್ವಂ ನವನೀತಕಲ್ಪಹೃದಯಾ ಕೇನಾಪಿ ದುರ್ಮಂತ್ರಿಣಾ
ಮಿಥ್ಯೈವ ಪ್ರಿಯಕಾರಿಣಾ ಮಧುಮುಖೇನಾಸ್ಮಾಸು ಚಂಡೀಕೃತಾ।
ಕಿಂ ತ್ವೇತದ್ವಿಮೃಶ ಕ್ಷಣಂ ಪ್ರಣಯಿನಾಮೇಣಾಕ್ಷಿ ಕಸ್ತೇ ಹಿತಃ
ಕಿಂ ಧಾತ್ರೀತನಯಾ ವಯಂ ಕಿಮು ಸಖೀ ಕಿಂ ವಾ ಕಿಮಸ್ಮತ್ಸುಹೃತ್ ॥'

[ಚಂದಹುಬ್ಬಿನವಳೆ, ಬೆಣ್ಣೆಯಂಥ ನಲ್ಲೆದೆಯವಳು ನೀನು. ಸುಳ್ಳೆ ಒಳಿತೆಸಗುವಂತೆ ತೋರುವ ಯಾರೋ ಜೇನುಬಾಯಿಯ ಚಾಡಿಕೋರರು ನಿನ್ನನ್ನು ನಮ್ಮ ಮೇಲೆ ಹಟಕಟ್ಟಿಸಿದ್ದಾರೆ. ಜಿಂಕೆಗಣ್ಣಿನವಳೆ, ಚಣ ಯೋಚಿಸು : ನಿನ್ನ ನೇಹಿಗರಲ್ಲಿ ಹಿತವರು ಯಾರು? ನಿನ್ನ ದಾಯಿಮಗಳೋ ಅಥವಾ ನಾವೋ? ಮತ್ತು, ನಿನ್ನ ಸಖಿಯೋ ಇಲ್ಲವೆ ನಮ್ಮ ಗೆಳೆಯನೋ?]

ಪ್ರಿಯನ ಅಪರಾಧವನ್ನು ಅನುಮಾನಿಸುವುದು : ೧. ಕನವರಿಕೆಯಿಂದ. ಅದಕ್ಕೆ ಉದಾ:- [ರುದ್ರಕೃತ] :

'ನಿರ್ಮಗ್ನೇನ ಮಯಾಂಭಸಿ ಸ್ಮರಭರಾದಾಲೀ ಸಮಾಲಿಂಗಿತಾ
ಕೇನಾಲೀಕಮಿದಂ ತವಾದ್ಯ ಕಥಿತಂ ರಾಧೇ ಮುಧಾ ತಾಮ್ಯಸಿ।
ಇತ್ಯುತ್ಸ್ವಪ್ನಪರಂಪರಾಸು ಶಯನೇ ಶ್ರುತ್ವಾ ವಚಃ ಶಾರ್ಙ್ಗಿಣಃ
ಸವ್ಯಾಜಂ ಶಿಥಿಲೀಕೃತಃ ಕಮಲಯಾ ಕಂಠಗ್ರಹಃ ಪಾತು ವಃ ॥'

['ನೀರುಮುಳುಗಿದ ನಾನು ಕಾಮಭರದಲ್ಲಿ ಸಖಿಯನ್ನು ಅಪ್ಪಿಬಿಟ್ಟೆನೆಂಬ ಈ ಸುಳ್ಳನ್ನು ಯಾರಿಂದ ಕೇಳಿ ಬರಿದೆ ಅಳಲುತ್ತಿರುವೆ, ರಾಧೆ?' – ಹಾಸಿನಲ್ಲಿ ಹೀಗೆ ಕನವರಿಸುವ ಕೃಷ್ಣನ ಕ್ರಮವಾದ ಮಾತನ್ನು ಕೇಳಿ ನೆಪದಿಂದ ಸಡಲಿದ ಕಮಲೆಯ ಕೊರಳಪ್ಪುಗೆ ನಿಮ್ಮನ್ನು ಕಾಪಾಡಲಿ.]

ಪ್ರಿಯನ ಅಪರಾಧ ಅನುಮಾನಿಸುವುದು : ೨. ಭೋಗದ ಚಿಹ್ನೆಗಳಿಂದ. ಇದಕ್ಕೆ ಉದಾ:- [ಮಾಘ. : ೧೧-೩೪; ೨-೪೦ರಲ್ಲೂ ಉದ್ಧೃತವಾಗಿದೆ] :

'ನವನಖಪದಮಂಗಂ ಗೋಪಯಸ್ಯಂಶುಕೇನ
ಸ್ಥಗಯಸಿ ಪುನರೋಷ್ಠಂ ಪಾಣಿನಾ ದಂತದಷ್ಟಮ್।
ಪ್ರತಿದಿಶಮಪರಸ್ತ್ರೀಸಂಗಶಂಸೀ ವಿಸರ್ಪನ್
ನವಪರಿಮಲಗಂಧಃ ಕೇನ ಶಕ್ಯೋ ವರೀತುಮ್ ॥'

[ನೂತನ ನಖಕ್ಷತವಿರುವ ಶರೀರಭಾಗವನ್ನು ಉತ್ತರೀಯದಿಂದ ಅಡಗಿಸಿಕೊಳ್ಳುತ್ತಿದ್ದೀಯೆ ಮತ್ತು ದಂತಕ್ಷತ ಹೊಂದಿದ ಮೇಲ್ತುಟಿಯನ್ನು ಕೈಯಿಂದ ಮುಚ್ಚಿಕೊಳ್ಳುತ್ತಿದ್ದೀಯೆ. ಆದರೆ, ಅನ್ಯಸ್ತ್ರೀ ಸಂಗವನ್ನು ಸೂಚಿಸಿ ದಿಕ್ಕುಗಳಲ್ಲಿ ಹರಡುತ್ತಿರುವ ಪರಿಮಳಗಂಧವನ್ನು ಯಾವುದರಿಂದ ಮುಚ್ಚಿಕೊಳ್ಳಲು ಸಾಧ್ಯ?]

ಪ್ರಿಯನ ಅಪರಾಧ ಅನುಮಾನಿಸುವುದು : ೩. ಗೋತ್ರಸ್ಖಲನದಿಂದ (ಪ್ರಿಯನು ತನ್ನ ನಾಯಿಕೆಯ ಎದುರು ಆಕೆಯ ಹೆಸರು ಹೇಳಲು ಹೋಗಿ, ತಪ್ಪಿ ತಾನು ಒಲಿದ ಬೇರೊಬ್ಬಳ ಹೆಸರು ಹೇಳುವುದು). ಇವಕ್ಕೆ ಉದಾ:- [ಹಾಲ. : ೯೬೭] :

'ಕೇಲೀಗೋತ್ತಕ್ಖಲಣೇ ವಿಕುಪ್ಪಏ ಕೇಅವಂ ಅಆಣಂತೀ।
ದುಟ್ಠ ಉಅಸು ಪರಿಹಾಸಂ ಜಾಆ ಸಚ್ಚಂ ವಿಅ ಪರುಣ್ಣಾ ॥'

[ಎಲೈ ದುಷ್ಟ, ನಿನ್ನ ಪರಿಹಾಸವನ್ನು ನೋಡು : ಆಟದಲ್ಲಿ ನೀನು ಹೆಸರು ತಪ್ಪಿ (ಅನ್ಯಳ ಹೆಸರನ್ನು) ಹೇಳಲು, ಮೋಸವರಿಯದ ನಿನ್ನ ಮಡದಿ (ನಿನ್ನ ಮಾತು) ದಿಟವೆಂಬಂತೆ ಕೋಪಗೊಂಡು ಅಳಲು ಮೊದಲಿಟ್ಟಿದ್ದಾಳೆ.]

ಪ್ರಿಯನು ಅನ್ಯಳಲ್ಲಿ ಆಸಕ್ತನಾದುದನ್ನು ಸಾಕ್ಷಾತ್ತಾಗಿ ಕಂಡು ಈರ್ಷ್ಯಾಮಾನ ಉಂಟಾಗುವುದಕ್ಕೆ ಉದಾ:- [ಶ್ರೀಮುಂಜ (ವಾಕ್ಪತಿದೇವ) ಕೃತ; ೪-೬೬ರಲ್ಲೂ ಉದ್ಧೃತವಾಗಿದೆ] :

'ಪ್ರಣಯಕುಪಿತಾಂ ದೃಷ್ಟ್ವಾ ದೇವೀಂ ಸಸಂಭ್ರಮವಿಸ್ಮಿತ -
ಸ್ತ್ರಿಭುವನಗುರುರ್ಭೀತ್ಯಾ ಸದ್ಯಃ ಪ್ರಣಾಮಪರೋಽಭವತ್ ।
ನಮಿತಶಿರಸೋ ಗಂಗಾಲೋಕೇ ತಯಾ ಚರಣಾಹತಾ -
ವವತು ಭವತಸ್ತ್ರ್ಯಕ್ಷಸ್ಯೈತದ್ವಿಲಕ್ಷಮವಸ್ಥಿತಮ್ ॥'

[ಪ್ರಣಯಕುಪಿತಳಾದ ದೇವಿಯನ್ನು ಕಂಡು ಹೆದರಿ ಸಂಭ್ರಮವಿಸ್ಮಯಗಳಿಂದ ಮೂರು ಲೋಕದ ಗುರು (ಶಿವ) ಒಡನೆಯೇ ತಲೆವಾಗಲು, ತಲೆವಾಗಿದ ಅವನ (ಮುಡಿಯಲ್ಲಿ) ಗಂಗೆಯನ್ನು ಕಂಡು (ಮತ್ತಷ್ಟು ಕ್ರುದ್ಧಳಾದ) ಆಕೆ ಚರಣಪ್ರಹಾರ ಮಾಡಲು, ಮುಕ್ಕಣ್ಣನ ಅಂಥ ವಿಲಕ್ಷಣ ಅವಸ್ಥೆ ನಿಮ್ಮೆಲ್ಲರನ್ನೂ ಕಾಪಾಡಲಿ.]

ಟಿಪ್ಪಣಿ : ಈ ಕಾರಿಕೆಯಲ್ಲಿನ ಮೊದಲ ಸಾಲು, ಅಪ್ಪಯ್ಯದೀಕ್ಷಿತನ 'ಕುವಲಯಾನಂದ' ಕಾರಿಕೆಗೆ (ಕಾ. ೪೧) ವ್ಯಾಖ್ಯೆ ಬರೆವಲ್ಲಿ ಆಶಾಧರನಿಂದ ಉದ್ಧೃತವಾಗಿದೆ.

ಹೋಲಿಕೆ = ಸಾ.ದ. : ೩-೧೯೯, ೨೦೦; ಪ್ರತಾಪ : ೪-೮೧.

## ೬೮. ಮಾನೋಪಚಾರಗಳು :

**ಯಥೋತ್ತರಂ ಗುರುಃ ಷಡ್ಭಿರುಪಾಯೈಸ್ತಮುಪಾಚರೇತ್ ।**
**ಸಾಮ್ನಾ ಭೇದೇನ ದಾನೇನ ನತ್ಯುಪೇಕ್ಷಾರಸಾಂತರೈಃ ॥ ೬೧ ॥**

ಅನು : [ಪ್ರಿಯನ ಅನ್ಯಾಸಕ್ತಿಯನ್ನು ಕೇಳಿ ಅನುಮಾನಿಸಿ ನೋಡಿ – ಹೀಗೆ ಮೂರು ಬಗೆಯಿಂದ ತಿಳಿದುಕೊಳ್ಳಬಹುದಷ್ಟೆ. ಅದರಲ್ಲಿ] ಒಂದಕ್ಕಿಂತ ಒಂದು ಹೆಚ್ಚು [ಕೋಪವನ್ನುಂಟುಮಾಡುತ್ತದೆ; ಎಂದರೆ, ಕೇಳಿದ್ದಕ್ಕಿಂತ ಅನುಮಿತವಾದದ್ದು ಅದಕ್ಕಿಂತ ನೋಡಿದ್ದು – ಹೆಚ್ಚು ಹೆಚ್ಚು ಕೋಪಕ್ಕೆ ಕಾರಣವಾಗುತ್ತದೆ]. ಅದನ್ನು [ಎಂದರೆ, ಈರ್ಷ್ಯಾಮಾನವನ್ನು] ಆರು [ಬೇರೆಬೇರೆ] ಉಪಾಯಗಳಿಂದ – ಸಾಮದಿಂದ, ಭೇದದಿಂದ, ದಾನದಿಂದ, ನತಿ(ನಮಸ್ಕಾರ)ಯಿಂದ, ಉಪೇಕ್ಷೆಯಿಂದ, ರಸಾಂತರದಿಂದ – ಉಪಚರಿಸಬೇಕು.

ವ್ಯಾಖ್ಯೆ[1] : ಪ್ರಿಯನು ಬೇರೊಬ್ಬಳಲ್ಲಿ ಅನುರಕ್ತನಾದುದನ್ನು ತಿಳಿದುಕೊಳ್ಳುವ ಶ್ರುತ, ಅನುಮಿತ, ದೃಷ್ಟ – ಈ ಮೂರು ಬಗೆಗಳಲ್ಲಿ ಉತ್ತರೋತ್ತರ, ಎಂದರೆ ಒಂದಕ್ಕಿಂತ ಒಂದಕ್ಕೆ ಕೋಪಶಮನ ಕಷ್ಟತರವಾಗುತ್ತದೆ. 'ಅದನ್ನು' ಎಂದರೆ 'ಮಾನವನ್ನು' ಎಂದರ್ಥ (ಕಾರಿಕೆಯಲ್ಲಿರುವ 'ತಂ' ನೋಡಿ.) ಉಪಚರಿಸಬೇಕು ಎಂದರೆ ನಿವಾರಿಸಬೇಕು ಎಂದು ಅರ್ಥ.

ಟಿಪ್ಪಣಿ : ಹ್ಯಾಸ್ ಅವರು 'ಗುರು' ಎಂಬ ಶಬ್ದಕ್ಕೆ 'ಪ್ರಿಯನು' ಎಂದು ಅರ್ಥಮಾಡಿದ್ದಾರೆ. (ನೋಡಿ : ಹ್ಯಾಸ್ : ಪು. ೧೩೬).

ಹೋಲಿಕೆ = ನಾ.ಶಾ. : ೨೫-೬೬; ಸಾ.ದ. : ೩-೨೦೧.

## ೬೯. ಸಾಮಾದಿಗಳ ಲಕ್ಷಣ :

**ತತ್ರ ಪ್ರಿಯವಚಃ ಸಾಮ ಭೇದಸ್ತತ್ಸಖ್ಯುಪಾರ್ಜನಮ್ ।**
**ದಾನಂ ವ್ಯಾಜೇನ ಭೂಷಾದೇಃ ಪಾದಯೋಃ ಪತನಂ ನತಿಃ ॥ ೬೨ ॥**

---

೧ ಈ ವ್ಯಾಖ್ಯೆ ಹಿಂದಿ ದ.ರೂ. ಗ್ರಂಥದಲ್ಲಿ ಮಾತ್ರ ಉಪಲಬ್ಧವಾಗಿದೆ; ಪ್ರಕ್ಷಿಪ್ತವಾಗಿದ್ದಿರಬಹುದು.

**ಸಾಮಾದೌ ತು ಪರಿಕ್ಷೀಣೇ ಸ್ಯಾದುಪೇಕ್ಷಾವಧೀರಣಮ್।**

**ರಭಸತ್ರಾಸಹರ್ಷಾದೇಃ ಕೋಪಭ್ರಂಶೋ ರಸಾಂತರಮ್ ॥ ೬೩ ॥**

**ಕೋಪಚೇಷ್ಟಾಶ್ಚ ನಾರೀಣಾಂ ಪ್ರಾಗೇವ ಪ್ರತಿಪಾದಿತಾಃ ।**

ಅನು : ಅಲ್ಲಿ, ಪ್ರಿಯವಾದ ಮಾತು 'ಸಾಮ'; ಆಕೆಯ ಸಖಿಯನ್ನು ತನ್ನೊಳಗುಮಾಡಿ ಕೊಳ್ಳುವುದು 'ಭೇದ'; ಭೂಷಣ ಇತ್ಯಾದಿ [ಕೊಡುವ] ನೆಪದಿಂದ [ನಾಯಿಕೆಯ ಕೋಪ ನಿವಾರಿಸುವುದು] 'ದಾನ'; ಕಾಲಿಗೆ ಬೀಳುವುದು 'ನತಿ'; ಸಾಮಾದಿಗಳು ತೀರಲು [ಅವುಗಳಿಂದ ನಾಯಿಕೆಯ ಕೋಪ ಶಮನವಾಗದೆ, ನಾಯಕನೂ ಹಟದಿಂದ ಉದಾಸೀನವಾಗಿರಲು] ನಿಶ್ಚಯಿಸುವುದು 'ಉಪೇಕ್ಷೆ'ಯಾಗುತ್ತದೆ; ರಭಸ ತ್ರಾಸ ಹರ್ಷಗಳಿಂದ [ಎಂದರೆ, ನಾಯಿಕೆ ಕೋಪಗೊಂಡಿರಲು ರಭಸಾದಿಗಳ ನೆಪದಿಂದ, ಆಕೆಯ] ಕೋಪವನ್ನು ನಿವಾರಿಸುವುದು 'ರಸಾಂತರ'. ಸ್ತ್ರೀಯರ ಕೋಪಚೇಷ್ಟೆಗಳು ಹಿಂದೆಯೇ ಪ್ರತಿಪಾದಿತವಾಗಿವೆ.

ವ್ಯಾಖ್ಯೆ : ಪ್ರಿಯವಚನದ 'ಸಾಮ'ಕ್ಕೆ ಉದಾ:– [ಧನಿಕನದೇ] :

'ಸ್ಮಿತಜ್ಯೋತ್ಸ್ನಾಭಿಸ್ತೇ ಧವಲಯತಿ ವಿಶ್ವಂ ಮುಖಶಶೀ
ದೃಶಸ್ತೇ ಪೀಯೂಷದ್ರವಮಿವ ವಿಮುಂಚಂತಿ ಪರಿತಃ ।
ವಪುಸ್ತೇ ಲಾವಣ್ಯಂ ಕಿರತಿ ಮಧುರಂ ದಿಕ್ಷು ತದಿದಂ
ಕುತಸ್ತೇ ಪಾರುಷ್ಯಂ ಸುತನು ಹೃದಯೇನಾದ್ಯ ಗುಣಿತಮ್ ॥'

[ನಿನ್ನ ಮೊಗದಿಂಗಳಿನ ನಗೆಬೆಳ್ದಿಂಗಳು ವಿಶ್ವವನ್ನ ಬೆಳಗುತ್ತಿದೆ; ನಿನ್ನ ನೋಟವೋ ಅಮೃತರಸದಂತೆ ಸುತ್ತೆಲ್ಲ ಹೊನಲಿಟ್ಟದೆ; ನಿನ್ನ ಮೆಯ್ ದಿಕ್ಕುದಿಕ್ಕುಗಳಲ್ಲಿ ಇನಿಸೊಬಗನ್ನು ಕರೆಯುತ್ತಿದೆ. ಎಲೈ ಸುತನು, ಮತ್ತೆ, ಎದೆಯಲ್ಲಿ ಈಗ ಎಣಿಸಿಟ್ಟುಕೊಂಡ ಈ ಒರಟು ಎಲ್ಲಿಯದು?]

ಮತ್ತು–[ಶೃಂಗಾರತಿಲಕ : ೩] :

'ಇಂದೀವರೇಣ ನಯನಂ ಮುಖಮಂಬುಜೇನ
ಕುಂದೇನ ದಂತಮಧರಂ ನವಪಲ್ಲವೇನ ।
ಅಂಗಾನಿ ಚಂಪಕದಲೈಃ ಸ ವಿಧಾಯ ವೇಧಾಃ
ಕಾಂತೇ ಕಥಂ ರಚಿತವಾನುಪಲೇನ ಚೇತಃ ॥'

[ಕಾಂತೆ, ಬ್ರಹ್ಮನು ನಿನ್ನ ಕಣ್ಣುಗಳನ್ನು ನೈದಿಲೆಯಿಂದ, ಮೊಗವನ್ನು ತಾವರೆಯಿಂದ, ಹಲ್ಲುಗಳನ್ನು ಮಲ್ಲಿಗೆಯಿಂದ, ತುಟಿಯನ್ನು ಹೊಸ ಚಿಗುರಿನಿಂದ, ಅಂಗಗಳನ್ನು ಸಂಪಿಗೆಯ ದಳಗಳಿಂದ ನಿರ್ಮಿಸಿ ಮನಸ್ಸನ್ನು ಕಲ್ಲಿನಿಂದ ರಚಿಸಿದನೇನು?]

ನಾಯಿಕೆಯ ಸಖಿಯನ್ನು ಒಲಿಸಿಕೊಂಡು 'ಭೇದ'ಗೊಳಿಸುವುದಕ್ಕೆ ಉದಾ:– [ಧನಿಕನದೇ] :

'ಕೃತೇಽಪ್ಯಾಜ್ಞಾಭಂಗೇ ಕಥಮಿವ ಮಯಾ ತೇ ಪ್ರಣತಯೋ
ಧೃತಾಃ ಸ್ಮಿತ್ವಾ ಹಸ್ತೇ ವಿಸೃಜಸಿ ರುಷಂ ಸುಭ್ರು ಬಹುಶಃ ।
ಪ್ರಕೋಪಃ ಕೋಽಪ್ಯನ್ಯಃ ಪುನರಯಮಸೀಮಾಽದ್ಯ ಗುಣಿತೋ
ವೃಥಾ ಯತ್ರ ಸ್ನಿಗ್ಧಾಃ ಪ್ರಿಯಸಹಚರೀಣಾಮಪಿ ಗಿರಃ ॥'

[ಅಂದ ಹುಬ್ಬಿನವಳೆ, ಅನೇಕ ವೇಳೆ ಹೇಗೋ ನಾನು ಆಣೆ ತಪ್ಪಿ ಕೂಡ ಮತ್ತೆ ಎರಗಿದರೆ ನಕ್ಕು ಸಿಟ್ಟನ್ನು ಬಿಟ್ಟುಕೊಟ್ಟಿದ್ದೀಯೆ. ಆದರೆ, ಒಲುಮೆಯ ಜೊತೆಗಾತಿಯರ ನಲ್ವಾತನ್ನೂ ಬರಿದುಗೊಳಿಸುವಷ್ಟು ಈಗ ಕೂಡಿಸಿಟ್ಟುಕೊಂಡ ಮಿತಿಮೀರಿದ ಸಿಟ್ಟು ಯಾವುದಿದು?]

ಭೂಷ ಇತ್ಯಾದಿ ದಾನಕ್ಕೆ ಉದಾ:- [ಮಾಘ. : ೭-೫೫] :

'ಮುಹುರುಪಹಸಿತಾಮಿವಾಲಿನಾದೈ -

ರ್ವಿತರಸಿ ನಃ ಕಲಿಕಾಂ ಕಿಮರ್ಥಮೇನಾಮ್ ।

ಅಧಿರಜನಿ ಗತೇನ ಧಾಮ್ನಿ ತಸ್ಯಾಃ

ಶಠ ಕಲಿರೇವ ಮಹಾಂಸ್ತ್ವಯಾಽದ್ಯ ದತ್ತಃ ॥'

[ಕಲಿ ಎಂದರೆ ಕಲಹ, ಕಲಿಕೆ ಎರಡರ್ಥವೂ ಬರುತ್ತದೆ. ತನ್ನನ್ನು ಸಮಾಧಾನಪಡಿಸಲು ಕಲಿಕೆಯನ್ನು ಕೊಡುತ್ತಿರುವ ನಲ್ಲನನ್ನು ಕುರಿತು ಕುಪಿತಳಾದ ನಲ್ಲೆ ಹೇಳುವ ಮಾತು ಇದು : ಮತ್ತೆ ಮತ್ತೆ ಭ್ರಮರನಾದದಿಂದ ಉಪಹಾಸಮಾಡುವಂತಿರುವ ಕಲಿಕೆ(ಮೊಗ್ಗೆ)ಯನ್ನು ಏತಕ್ಕೋಸ್ಕರ ನಮಗೆ ಕೊಡುವೆ? ಎಲೈ ಶಠ, ರಾತ್ರಿ ಆಕೆಯ ಮನೆಗೆ ಹೋಗಿದ್ದುದರಿಂದ ಮೊದಲೇ ಮಹತ್ತಾದ ಕಲಿ(ಕಲಹ)ಯನ್ನು ಕೊಟ್ಟಿದ್ದೀಯೆ.]

ಕಾಲಿಗೆ ಬಿದ್ದು ನಮಸ್ಕರಿಸುವುದಕ್ಕೆ ('ನತಿ') ಉದಾ:- [ಹಾಲ. : ೧೮೮] :

'ಣೇಉರಕೋಡಿವಿಲಗ್ಗಂ ಚಿಹುರಂ ದಇಅಸ್ಸ ಪಾಅಪಡಿಅಸ್ಸ ।

ಹಿಅಅಂ ಮಾಣಪಉತ್ಥಂ ಉಮ್ಮೋಇಅಂ ತ್ತಿ ಚ್ಚಿಅ ಅಹೇಇ ॥'

[ಕಾಲಿಗೆರಗಿದ ಪ್ರಿಯನ ಕೂದಲು (ಪ್ರಿಯಳ) ನೇವುರದ ತುದಿಗೆ ಸಿಕ್ಕಿದ್ದು, (ಆಕೆಯ) ಹೃದಯ ಮಾನ(ಕೋಪ)ಪದದಿಂದ ಬಿಡುಗಡೆಯಾಯಿತೆಂಬುದನ್ನು ಸೂಚಿಸುತ್ತದೆ.]

ಉಪೇಕ್ಷೆಗೆ ಉದಾ:- [ಕಿರಾತ. : ೯-೪೦] :

'ಕಿಂ ಗತೇನ ನ ಹಿ ಯುಕ್ತಮುಪೈತುಂ

ನೇಶ್ವರೇ ಪರುಷತಾ ಸಖಿ ಸಾಧ್ವೀ ।

ಅನಯೈನಮನುನೀಯ ಕಥಂ ವಾ

ವಿಪ್ರಿಯಾಣಿ ಜನಯನ್ನನುನೇಯಃ ॥'

[(ಉಪೇಕ್ಷಿತನಾಗಿ ತೆರಳಿದ ಅವನನ್ನು ಅನುಸರಿಸಿ) ಹೋಗುವುದರಿಂದ ಏನಾದೀತು? ಕುರಿತು ಹೋಗುವುದು ಯುಕ್ತವಲ್ಲ. ಆದರೆ, ಎಲೈ ಸಖಿ, ಒಡೆಯನಲ್ಲಿ ಕಾಠಿನ್ಯವೂ ಸಾಧುವಲ್ಲ. ಆತನನ್ನು ಅನುನಯಗೊಳಿಸಿ ಕರೆದುಕೊಂಡು ಬಾ... ಅಥವಾ, ನಮಗೆ ವಿಪ್ರಿಯವನ್ನುಂಟುಮಾಡಿದ ಅವನನ್ನು ಅನುನಯ ಗೊಳಿಸುವುದೆಂತು?]

ರಭಸತ್ರಾಸಹರ್ಷಾದಿಗಳಿಂದ ರಸಾಂತರಗೊಳಿಸಿ ಕೋಪಭಂಗಮಾಡುವುದಕ್ಕೆ ಉದಾ:- [ಧನಿಕನದೇ; ೨-೭೯ರಲ್ಲೂ ಬಂದಿದೆ] :

'ಅಭಿವ್ಯಕ್ತಾಲೀಕಃ ಸಕಲವಿಫಲೋಪಾಯವಿಭವ -

ಶ್ಚಿರಂ ಧ್ಯಾತ್ವಾ ಸದ್ಯಃ ಕೃತಕೃತಕಸಂರಂಭನಿಪುಣಮ್ ।

ಇತಃ ಪೃಷ್ಠೇ ಕಿಮಿದಮಿತಿ ಸಂತ್ರಾಸ್ಯ ಸಹಸಾ

ಕೃತಾಶ್ಲೇಷಾಂ ಧೂರ್ತಃ ಸ್ಮಿತಮಧುರಮಾಲಿಂಗತಿ ವಧೂಮ್ ॥'

[ತನ್ನ ದೋಷ ಪ್ರಕಟವಾಗಿರುವವನೊಬ್ಬನು, ಅವಳನ್ನು ಮುಚ್ಚಲು ಅನೇಕ ಉಪಾಯಗಳನ್ನು ಮಾಡಿ ಅವೆಲ್ಲ ವಿಫಲಗೊಂಡು ಸೋತನು. ಆದರೆ ಪುನಃ, ಒಡನೊಡನೆಯೇ ಕೃತಕ ಭ್ರಮೆ ಹುಟ್ಟಿಸುವುದರಲ್ಲಿ ನಿಪುಣನಾದ ಆ

ಧೂರ್ತನು ಬಹುಕಾಲ ಚಿಂತಿಸಿ, 'ಇದೇನು ಹಿಂವೆ, ಹಿಂವೆ!' ಎಂದು ಆಕೆಯನ್ನು ಭೀತಿಗೊಳಿಸಿ ಮಧುರವಾಗಿ ನಗುತ್ತ ಒಮ್ಮೆಲೆ ಆ ಮೊವಲಗಿತ್ತಿಯನ್ನು ಅಪ್ಪಬಿಡುತ್ತಾನೆ]

ಟಿಪ್ಪಣಿ : 'ಸ್ತ್ರೀಯರ ಕೋಪಚೇಷ್ಟೆಗಳು ಹಿಂದೆಯೇ ಪ್ರತಿಪಾದಿತವಾಗಿವೆ' ಎಂದು ಕಾರಿಕೆಯಲ್ಲಿ ಹೇಳಿದೆಯಷ್ಟೆ. ಅದರ ವಿವರಗಳಿಗೆ ೨–೨೬, ೨೮, ೩೦ ನೋಡಿ.

ಹೋಲಿಕೆ = ನಾ.ಶಾ. : ೨೪–೬೬ರಿಂದ ೬೯, ೭೨; ಸಾ.ದ. : ೩–೨೦೨, ೨೦೩.

## ೭೦. ಪ್ರವಾಸವಿಪ್ರಯೋಗಲಕ್ಷಣ :

**ಕಾರ್ಯತಃ ಸಂಭ್ರಮಾಚ್ಛಾಪಾತ್ಪ್ರವಾಸೋ ಭಿನ್ನದೇಶತಾ । ೬೪ ॥**

**ದ್ವಯೋಸ್ತತ್ರಾಶ್ರುನಿಃಶ್ವಾಸಕಾರ್ಶ್ಯಲಂಬಾಲಕಾದಿತಾ ।**

ಅನು : [ಯಾವುದಾದರೂ] ಕಾರ್ಯದ ನಿಮಿತ್ತದಿಂದ [ಅಥವಾ] ಸಂಭ್ರಮದಿಂದ (ಭ್ರಾಂತಿಯಿಂದ) [ಅಥವಾ] ಶಾಪದಿಂದ ಇಬ್ಬರು [ಎಂದರೆ, ನಾಯಕನಾಯಿಕೆಯರು] ಬೇರೆಬೇರೆ ದೇಶಗಳಲ್ಲಿರುವುದು [ವಿಪ್ರಯೋಗಶೃಂಗಾರದಲ್ಲಿನ] 'ಪ್ರವಾಸ' [ಎನ್ನಿಸಿಕೊಳ್ಳುತ್ತದೆ]. ಅಲ್ಲಿ ಅಶ್ರುಪಾತ, ನಿಃಶ್ವಾಸ, ಸೊರಗುವಿಕೆ, ಕೂದಲು ಇಳಿಬಿಡುವುದು [ಇತ್ಯಾದಿ ಚಿಹ್ನೆಗಳು ಪ್ರಕಟವಾಗುತ್ತವೆ].

ಟಿಪ್ಪಣಿ : ಈ ಬಗೆಯ 'ವಿಪ್ರಯೋಗ'ವನ್ನು ಅನುಭವಿಸುವ ನಾಯಿಕೆಗೆ 'ಪ್ರೋಷಿತಪ್ರಿಯಾ' ಎನ್ನುತ್ತಾರೆ. (ನೋಡಿ : ೨–೪೩).

ಹೋಲಿಕೆ = ಸಾ.ದ. : ೩–೨೦೪, ೨೦೫; ಪ್ರತಾಪ : ೪–೮೩.

## ೭೧. ಕಾರ್ಯಜಪ್ರವಾಸ :

**ಸ ಚ ಭಾವೀ ಭವನ್ಭೂತಸ್ತ್ರಿಧಾಽದ್ಯೋ ಬುದ್ಧಿಪೂರ್ವಕಃ ॥ ೬೫ ॥**

ಅನು : ಮತ್ತು ಬುದ್ಧಿಪೂರ್ವಕವಾದ ಮೊದಲನೆಯದು [ಎಂದರೆ, ಕಾರ್ಯನಿಮಿತ್ತವಾದ 'ಪ್ರವಾಸ'] ಭವಿಷ್ಯತ್, ವರ್ತಮಾನ, ಭೂತ – ಎಂದು ಮೂರು ವಿಧ.

ವ್ಯಾಖ್ಯೆ : ಮೊದಲನೆಯದು ಎಂದರೆ ಕಾರ್ಯನಿಮಿತ್ತದಿಂದ ಉಂಟಾದ 'ಪ್ರವಾಸ'. ಅದು ಸಮುದ್ರಗಮನ ಅಥವಾ ಬೇರೊಬ್ಬರ ಸೇವೆಗಾಗಿ ಬೇರೆಡೆಗೆ ಹೋಗುವುದು ಇತ್ಯಾದಿ ನಿಮಿತ್ತಗಳಿಂದ ಉಂಟಾಗುತ್ತದೆ. ಬುದ್ಧಿಪೂರ್ವಕವಾದ ಈ ಕಾರ್ಯಜಪ್ರವಾಸದಲ್ಲಿ ಭೂತ, ಭವಿಷ್ಯತ್, ವರ್ತಮಾನ (ಹೋದದ್ದು, ಹೊರಟದ್ದು, ಹೋಗಲಿರುವುದು) ಎಂದು ಮೂರು ವಿಧ.

ಹೋಗಲಿರುವ 'ಪ್ರವಾಸ'ಕ್ಕೆ ಉದಾ– [ಹಾಲ. : ೪೭] :

'ಹೋಂತಪಹಿಅಸ್ಸ ಜಾಆ ಆಉಚ್ಛಣಜೀಅಧಾರಣರಹಸ್ಸಂ ।
ಪುಚ್ಛಂತೀ ಭಮಇ ಘರಂ ಘರೇಸು ಪಿಅವಿರಹಸಹಿರೀಅ ॥'

[ಪ್ರವಾಸ ಹೊರಡಲಿರುವವನೊಬ್ಬನ ಮಡದಿ, ಪ್ರಿಯನ ವಿರಹದಿಂದ ಲಜ್ಜಿತಳಾಗಿ ಮುಂದಿನ ಪ್ರತಿಕ್ಷಣ ಜೀವಹಿಡಿದುಕೊಂಡಿರುವ (ಬಗೆ ಹೇಗೆಂಬ) ರಹಸ್ಯವನ್ನು ಕೇಳುತ್ತ ಮನೆಮನೆಗಳನ್ನು ತಿರುಗುತ್ತಿದ್ದಾಳೆ.]

ಹೊರಟ 'ಪ್ರವಾಸ'ಕ್ಕೆ ಉದಾ– [ಅಮರು. : ಶ್ಲೋ. ೧೨] :

'ಪ್ರಹರವಿರತೌ ಮಧ್ಯೇ ವಾಹ್ನಸ್ತತೋಽಪಿ ಪರೇಽಥವಾ
ದಿನಕೃತೇ ಗತೇ ವಾಸ್ತಂ ನಾಥ ತ್ವಮದ್ಯ ಸಮೇಷ್ಯಸಿ।
ಇತಿ ದಿನಶತಪ್ರಾಪ್ಯಂ ದೇಶಂ ಪ್ರಿಯಸ್ಯ ಯಿಯಾಸತೋ
ಹರತಿ ಗಮನಂ ಬಾಲಾಽಲಾಪೈಃ ಸಬಾಷ್ಪಗಲಜ್ಜಲೈಃ॥'

['ಪ್ರಿಯನೆ, ನೀನು ಯಾವಾಗ ಮರಳುವೆ? ಈ ಜಾವದ ಕೊನೆಯಲ್ಲಿಯೆ, ನಡುವಗಲಿನಲ್ಲಿ ಅಥವಾ ಅದರ ಮುಂದಿನ ಯಾಮದಲ್ಲಿಯೆ, ಇಲ್ಲವೆ ನೇಸರು ಮುಳುಗಿದಮೇಲೆಯೇ?' – ಹೀಗೆ, ನೂರು ದಿನದ ಹಾದಿಯ ಊರಿಗೆ ಪ್ರಯಾಣಹೊರಟ ಪ್ರಿಯನನ್ನು ಕಂಬನಿ ತುಳುಕುವ ಆಕೆ ಹುಡುಗು ಮಾತುಗಳಿಂದ ತಡೆದುಬಿಡುತ್ತಾಳೆ.]

ಮತ್ತು – [ಅಮರು. : ಶ್ಲೋ. ೯೯] :

'ದೇಶೈರಂತರಿತಾ ಶತೈಶ್ಚ ಸರಿತಾಮುರ್ವೀಭೃತಾಂ ಕಾನನೈ –
ರ್ಯತ್ನೇನಾಪಿ ನ ಯಾತಿ ಲೋಚನಪಥಂ ಕಾಂತೇತಿ ಜಾನನ್ನಪಿ।
ಉದ್ಗ್ರೀವಶ್ಚರಣಾರ್ಧರುದ್ಧವಸುಧಃ ಕೃತ್ವಾಽಶ್ರುಪೂರ್ಣೇ ದೃಶೌ
ತಾಮಾಶಾಂ ಪಥಿಕಸ್ತಥಾಪಿ ಕಿಮಪಿ ಧ್ಯಾತ್ವಾ ಚಿರಂ ತಿಷ್ಠತಿ॥'

[ನೂರು ದೇಶಗಳಿಂದ ಹೊಳೆಗಳಿಂದ ಬೆಟ್ಟಗಳಿಂದ ಕಾಡುಗಳಿಂದ ಅಡ್ಡಯಿಸಲ್ಪಟ್ಟ ತನ್ನ ನಲ್ಲೆ ಎಷ್ಟು ಯತ್ನಿಸಿ ಕೂಡ ಕಣ್ದಾರಿಗೆ ಸಿಲುಕಳೆಂಬುದನ್ನು ತಿಳಿದೂ ಆ ಪಥಿಕ, ನೆಲದ ಮೇಲೆ ಎತ್ತಿದಡಿಯಲ್ಲಿ ನಿಂತು ಕೊರಳು ಉದ್ದಮಾಡಿ ಕಂಬನಿದುಂಬಿದ ಕಣ್ಣುಗಳಿಂದ (ತನ್ನ ನಲ್ಲೆಯಿರುವ) ಆ ದಿಕ್ಕನ್ನೇ ನೋಡುತ್ತಾ ಏನನ್ನೋ ಯೋಚಿಸುತ್ತ ಬಹುಕಾಲ ನಿಂತುಬಿಡುತ್ತಾನೆ.]

ಹೋಗಿದ್ದ 'ಪ್ರವಾಸ'ಕ್ಕೆ ಉದಾ:– [ಮೇಘದೂತ : ಉ.ಮೇ. ೨೩] :

'ಉತ್ಸಂಗೇ ವಾ ಮಲಿನವಸನೇ ಸೌಮ್ಯ ನಿಕ್ಷಿಪ್ಯ ವೀಣಾಂ
ಮದ್ಗೋತ್ರಾಂಕಂ ವಿರಚಿತಪದಂ ಗೇಯಮುದ್ಗಾತುಕಾಮಾ।
ತಂತ್ರೀಮಾರ್ದ್ರಾಂ ನಯನಸಲಿಲೈಃ ಸಾರಯಿತ್ವಾ ಕಥಂಚಿ –
ದ್ಭೂಯೋ ಭೂಯಃ ಸ್ವಯಮಪಿ ಕೃತಾಂ ಮೂರ್ಛನಾಂ ವಿಸ್ಮರಂತೀ॥'

[ಎಲೈ ಸೌಮ್ಯನೆ, ಮುಸುಕುದುಗೆಯ ತೊಡೆಯಲ್ಲಿ ವೀಣೆಯನ್ನಿಟ್ಟು ತಾನೇ ಕಟ್ಟಿದ ನನ್ನ ಹೆಸರಿನ ಹಾಡನ್ನು ಹಾಡಬಯಸುವ ಅವಳು, ಕಣ್ಣೀರಿನಿಂದ ಒದ್ದೆಯಾದ ತಂತಿಯನ್ನು ಸವರುತ್ತ ತಾನೇ ಜೋಡಿಸಿಕೊಂಡ ಏರಿಳಿತಗಳನ್ನು ಮತ್ತೆ ಮತ್ತೆ ಮರೆತುಬಿಡುತ್ತಾಳೆ.]

– ಇಲ್ಲಿ ಒಂದು ಸಂದೇಹ ಬರಬಹುದು : ಕಾರ್ಯಜಪ್ರವಾಸವಿಪ್ರಯೋಗದಲ್ಲಿ ಈ ಮೂರು ಬಗೆಗಳೇ ಅಲ್ಲದೆ ಇನ್ನೂ ಮೂರು ಬಗೆಗಳನ್ನು ಹೇಳಬಹುದಲ್ಲವೆ, ಆಗಚ್ಛತ್ಪತಿಕಾ (ಯಾವಳ ಪ್ರಿಯ ಬರುತ್ತಿದ್ದಾನೆಯೋ ಅಂಥ ಪ್ರಿಯೆ) ಆಗತಪತಿಕಾ (ಪ್ರಿಯನು ಬಂದಿರುವವಳು) ಏಷ್ಯತ್ಪತಿಕಾ (ಪ್ರಿಯನು ಬರಲಿರುವವಳು) – ಎಂದು? ಅದಕ್ಕೆ ಉತ್ತರ : ಆಗಚ್ಛತ್ಪತಿಕಾ ಮತ್ತು ಆಗತಪತಿಕಾ – ಈ ಎರಡು ಸ್ಥಿತಿಯಲ್ಲಿ 'ಪ್ರವಾಸ'ವೇ ಇಲ್ಲವಾಗಿದೆ. ಇನ್ನು ಏಷ್ಯತ್ಪತಿಕಾ ಎಂಬ ಸ್ಥಿತಿ 'ಗತಪ್ರವಾಸ'ದಲ್ಲ ಸೇರಿಕೊಳ್ಳುವಂಥದು. ಆದ್ದರಿಂದ ಹಿಂದೆ ಹೇಳಿದ ಮೂರು ಬಗೆಗಳೇ (ಭೂತಭವಿಷ್ಯದ್ವರ್ತಮಾನ) ಯುಕ್ತವಾಗಿವೆ.

ಟಿಪ್ಪಣಿ : ಹೋಲಿಕೆ = ಸಾ.ದ. : ೩–೨೦೮.

## ೭೨. ಸಂಭ್ರಮಜಪ್ರವಾಸ :

**ದ್ವಿತೀಯಃ ಸಹಸೋತ್ಪನ್ನೋ ದಿವ್ಯಮಾನುಷವಿಪ್ಲವಾತ್।**

ಅನು : ಎರಡನೆಯದು [ಎಂದರೆ, ಸಂಭ್ರಮಜನಿತವಾದ ಪ್ರವಾಸವಿಪ್ರಯೋಗವು] ದೈವಸಂಬಂಧಿಯಾದ [ಅಥವಾ] ಮನುಷ್ಯಸಂಬಂಧಿಯಾದ ವಿಪ್ಲವದಿಂದ ಒಡನೆಯೇ ಉಂಟಾಗುವಂಥದು.

ವ್ಯಾಖ್ಯೆ : ಉತ್ಪಾತ, ದಾಳಿ, ವಾತ (ಬಿರುಗಾಳಿ ಇ.,) ಮೊದಲಾದವುಗಳಿಂದ ಹುಟ್ಟಿದ ವಿಪ್ಲವ ಅಥವಾ ಶತ್ರುರಾಜರಿಂದ ಉಂಟಾದದ್ದು ಮುಂತಾದ ವಿಪ್ಲವ – ಇವುಗಳಿಂದ ಒದಗುವ ನಾಯಕನಾಯಿಕೆಯರ 'ಪ್ರವಾಸ ವಿಪ್ರಯೋಗ'ಕ್ಕೆ 'ಸಂಭ್ರಮಜ' ಎಂದು ಹೆಸರು. ಇವರಲ್ಲಿ ಮೊದಲನೆಯದು (ಉತ್ಪಾತೇತ್ಯಾದಿ) ದೈವಕೃತ, ಎರಡನೆಯದು (ಪರರಾಜರು ಇತ್ಯಾದಿ) ಮನುಷ್ಯಕೃತ. ಬುದ್ಧಿಪೂರ್ವಕವಾದ ಈ ಸಂಭ್ರಮಜಪ್ರವಾಸ ಒಂದೇ ರೂಪವಾದದ್ದು. (ಕಾರ್ಯಜವಲ್ಲಿ ಭೂತಭವಿಷ್ಯದಾದಿ ಹಲವು ವಿಧಗಳಿರುವಂತೆ ಇಲ್ಲಿ ಹಲವು ವಿಧಗಳಿಲ್ಲ.)

ಉದಾ:– 'ವಿಕ್ರಮೋರ್ವಶೀಯ'ದಲ್ಲಿನ ಊರ್ವಶೀಪುರೂರವರ ವಿಯೋಗ ಅಥವಾ 'ಮಾಲತೀ ಮಾಧವ'ದಲ್ಲಿ ಕಪಾಲಕುಂಡಲ ಮಾಲತಿಯನ್ನು ಅಪಹರಿಸಲು ಮಾಲತೀಮಾಧವರಲ್ಲಿ ಉಂಟಾದ ವಿಯೋಗ. (ಮೊದಲನೆಯದು ದೈವಕೃತ, ಎರಡನೆಯದು ಮನುಷ್ಯಕೃತ.)

## ೭೩. ಶಾಪಜಪ್ರವಾಸ :

ಸ್ವರೂಪಾನ್ಯತ್ವಕರಣಾಚ್ಛಾಪಜಃ ಸನ್ನಿಧಾವಪಿ ॥ ೬೭ ॥

ಅನು : [ಪ್ರವಾಸವಿಪ್ರಯೋಗದಲ್ಲಿನ ಮೂರನೆಯ ಬಗೆ : ಯಾವುದಾದರೂ ಶಾಪ ಕಾರಣವಾಗಿ] ಸ್ವರೂಪ (ನಾಯಕ ಅಥವಾ ನಾಯಿಕೆಯ ರೂಪ ಅಥವಾ ಸ್ವಭಾವ) ಬದಲಾಗುವುದರಿಂದ, ಅವರಿಬ್ಬರು ಬಳಿಯಲ್ಲೇ ಇದ್ದರೂ ಕೂಡ [ವಿಯೋಗ ಉಂಟಾಗುವುದು] 'ಶಾಪಜ'.

ವ್ಯಾಖ್ಯೆ : ಉದಾ:– 'ಕಾದಂಬರೀ' ಗ್ರಂಥದಲ್ಲಿ ವೈಶಂಪಾಯನ(ಪುಂಡರೀಕ) ಮಹಾಶ್ವೇತೆಯರ ವಿಯೋಗ.

## ೭೪. ವಿಪ್ರಯೋಗ ಮತ್ತು ಕರುಣಗಳಲ್ಲಿ ಭೇದ :

ಮೃತೇ ತ್ವೇಕತ್ರ ಯತ್ರಾನ್ಯಃ ಪ್ರಲಪೇಚ್ಛೋಕ ಏವ ಸಃ ।
[1]ವ್ಯಾಶ್ರಯತ್ವಾ[1]ನ್ನ ಶೃಂಗಾರಃ ಪ್ರತ್ಯಾಪನ್ನೇ ತು ನೇತರಃ ॥ ೬೮ ॥

ಅನು : [ನಾಯಕನಾಯಿಕೆಯರಲ್ಲಿ] ಯಾರೊಬ್ಬರು ಮೃತಿ ಹೊಂದಿ ಮತ್ತೊಬ್ಬರು ಪ್ರಲಾಪಿಸುತ್ತಿರಲು ಅಲ್ಲಿ 'ಶೋಕ'[ಭಾವ]ವೇ ಸರಿ. [ಅಲ್ಲಿ ವಿಪ್ರಯೋಗ ಶೃಂಗಾರವನ್ನು ಆರೋಪಿಸಬಾರದು.] ಆಶ್ರಯ (ಆಲಂಬನ) ಇಲ್ಲದಲ್ಲಿ ಶೃಂಗಾರ ಇರುವುದಿಲ್ಲ; [ಒಮ್ಮೆ ದೈವಾದಿ ಶಕ್ತಿಗಳಿಂದ ಮೃತರು] ಪುನಃ ಪ್ರಾಪ್ತಿಯಾದರೆ (ಜೀವಪಡೆದರೆ) [ಅಲ್ಲಿ ಶೃಂಗಾರವನ್ನೇ ಹೇಳಬೇಕು] ಬೇರೆಯಲ್ಲ.

ವ್ಯಾಖ್ಯೆ : ಉದಾ:–'ರಘುವಂಶ'ದಲ್ಲಿ ಇಂದುಮತಿ ಮರಣಹೊಂದಿ ಅದಕ್ಕಾಗಿ ಅಜ ಪ್ರಲಾಪಿಸುವುದು [ಶೋಕಮೂಲವಾದ] 'ಕರುಣ'ವೇ ಸರಿ; ಮತ್ತು 'ಕಾದಂಬರಿ'ಯಲ್ಲಿ ಮೊದಲಲ್ಲಿ ಕರುಣವೂ, ಆಕಾಶ ವಾಣಿಯನ್ನು ಕೇಳಿದ ಅನಂತರ ಪುಂಡರೀಕಮಹಾಶ್ವೇತೆಯರ ವಿಯೋಗದಲ್ಲಿ 'ವಿಪ್ರಯೋಗಶೃಂಗಾರ'ವೂ ಇದೆ.

---

೧ ಪಾಠ : ನಿರಾಶ್ರಯಾತ್

ಟಿಪ್ಪಣಿ : ಇತರ ಆಲಂಕಾರಿಕರು 'ವಿಪ್ರಲಂಭಶೃಂಗಾರ'ದ ಭೇದವಾಗಿಯೇ 'ಕರುಣ'ವನ್ನೂ ಹೇಳುತ್ತಾರೆ. (ನೋಡಿ : ೪-೫೮ರ ಮತ್ತು ೬೫ರ ಟಿಪ್ಪಣಿ ಹಾಗೂ ನಾ.ಶಾ. : ೬-೪೫ರ ಅನಂತರದ ಗದ್ಯ ಮತ್ತು ೭೮ ಹಾಗೂ ಸಾ.ದ. : ೩-೨೦೯.) ಆ 'ಕರುಣ'ಕ್ಕೂ 'ಕರುಣರಸ' (೪-೮೭)ಕ್ಕೂ ಸಂಬಂಧ ಹಚ್ಚಬಾರದು.

## ೭೫. ವಿಪ್ರಯೋಗದಲ್ಲಿ ನಾಯಿಕೆ :

**ಪ್ರಣಯಾಯೋಗಯೋರುತ್ಕಾ ಪ್ರವಾಸೇ ಪ್ರೋಷಿತಪ್ರಿಯಾ ।**

**ಕಲಹಾಂತರಿತೇರ್ಷ್ಯಾಯಾಂ ವಿಪ್ರಲಬ್ಧಾ ಚ ಖಂಡಿತಾ ॥ ೬೮ ॥**

ಅನು : [ವಿಪ್ರಯೋಗಶೃಂಗಾರದಲ್ಲಿ ನಾಯಿಕೆಯ ಅವಸ್ಥೆಯ ನಿಯಮ ಹೀಗೆ :] ಪ್ರಣಯಾಯೋಗ[ಎಂದರೆ, ಪ್ರಣಯಮಾನ]ದಲ್ಲಿ [ನಾಯಿಕೆಯು] 'ಉತ್ಕಾ' (ವಿರಹೋತ್ಕಂಠಿತಾ) [ಆಗಿರುತ್ತಾಳೆ]; ಪ್ರವಾಸವಿಪ್ರಯೋಗದಲ್ಲಿ [ಆಕೆ 'ಪ್ರೋಷಿತಪ್ರಿಯಾ' [ಆಗಿರುತ್ತಾಳೆ]; ಈರ್ಷ್ಯೆ(ಈರ್ಷ್ಯಾಮಾನ)ಯಲ್ಲಿ [ಆಕೆ]'ಕಲಹಾಂತರಿತಾ' [ಅಥವಾ] 'ವಿಪ್ರಲಬ್ಧಾ' ಅಥವಾ 'ಖಂಡಿತಾ' ಆಗಿರುತ್ತಾಳೆ.

ಟಿಪ್ಪಣಿ : 'ಉತ್ಕಾ'(ವಿರಹೋತ್ಕಂಠಿತಾ)ಗೆ ೨-೩೯, 'ಪ್ರೋಷಿತಪ್ರಿಯಾ' ೨-೪೩, 'ಕಲಹಾಂತರಿತಾ'ಗೆ ೨-೪೧, 'ವಿಪ್ರಲಬ್ಧಾ'ಗೆ ೨-೪೨, 'ಖಂಡಿತಾ'ಗೆ ೨-೪೦ ನೋಡಿ.

## ೭೬. ಸಂಭೋಗಶೃಂಗಾರ :

**ಅನುಕೂಲೌ ನಿಷೇವೇತೇ ಯತ್ರಾನ್ಯೋನ್ಯಂ ವಿಲಾಸಿನೌ ।**

**ದರ್ಶನಸ್ಪರ್ಶನಾದೀನಿ ಸ ಸಂಭೋಗೋ ಮುದಾನ್ವಿತಃ ॥ ೬೯ ॥**

ಅನು : [ಶೃಂಗಾರದಲ್ಲಿನ 'ಅಯೋಗ' 'ವಿಪ್ರಯೋಗ'ಗಳ ವಿವೇಚನೆಯಾಯಿತು; ಇಲ್ಲಿ ಶೃಂಗಾರದಲ್ಲಿನ ಮೂರನೆಯ ಬಗೆಯಾದ 'ಸಂಭೋಗ'ವನ್ನು ಲಕ್ಷಿಸಿದೆ :] ಅನುಕೂಲರಾದ ಇಬ್ಬರು ವಿಲಾಸಿ[ಪ್ರೇಮಿ]ಗಳು ಪರಸ್ಪರ ದರ್ಶನ ಸ್ಪರ್ಶನ ಮುಂತಾದವುಗಳಿಂದ ಭೋಗಿಸುವುದು 'ಸಂಭೋಗ'; ಅದು ಸಂತೋಷದಿಂದ ಕೂಡಿರುವಂಥದು.

ವ್ಯಾಖ್ಯೆ : ಉದಾ:- [ಉತ್ತರ. : ೧-೨೭] :

'ಕಿಮಪಿ ಕಿಮಪಿ ಮಂದಂ ಮಂದಮಾಸತ್ತಿಯೋಗಾ -
ದವಿರಲಿತಕಪೋಲಂ ಜಲ್ಪತೋರಕ್ರಮೇಣ ।
ಸಪುಲಕಪರಿರಂಭವ್ಯಾಪೃತೈಕೈಕದೋಷ್ಣೋ -
ರವಿದಿತಗತಯಾಮಾ ರಾತ್ರಿರೇವ ವ್ಯರಂಸೀತ್ ॥'

[ಕೆನ್ನೆ ಹೊಂದಿ ಒಂದಾಗಿರಲು, ಮೆಲ್ಲಮೆಲ್ಲನೆ ಹೊಂದಿಕೆಯಿಲ್ಲದ ಏನೇನನ್ನೋ ಹರಟುತ್ತ ಒಂದೊಂದು ಕೈಗಳಲ್ಲಿ ಒಬ್ಬರನ್ನೊಬ್ಬರು ಅಪ್ಪಿ ನವಿರುಗೊಂಡಿದ್ದೆವು. ಹಾಗೆಯೇ ಜಾವ ಜಾರಿದುದು ತಿಳಿಯಲಿಲ್ಲ; (ಕೊನೆಯಲ್ಲಿ) ರಾತ್ರಿಯೇ ಕಳೆದಿದ್ದಿತು!]

ಮತ್ತು - [ಉತ್ತರ. : ೧-೩೫; ೪-೩೭ರಲ್ಲೂ ಉದ್ಧೃತವಾಗಿದೆ] :

'ವಿನಿಶ್ಚೇತುಂ ಶಕ್ಯೋ ನ ಸುಖಮಿತಿ ವಾ ದುಃಖಮಿತಿ ವಾ
ಪ್ರಮೋಹೋ ನಿದ್ರಾ ವಾ ಕಿಮು ವಿಷವಿಸರ್ಪಃ ಕಿಮು ಮದಃ ।
ತವ ಸ್ಪರ್ಶೇ ಮಮ ಹಿ ಪರಿಮೂಢೇಂದ್ರಿಯಗಣೋ
ವಿಕಾರಃ ಕೋಽಪ್ಯಂತರ್ಜಡಯತಿ ಚ ತಾಪಂ ಚ ಕುರುತೇ ॥'

[ಇದು ಸುಖವೆಂದು ಅಥವಾ ದುಃಖವೆಂದು ನಿರ್ಧರಿಸುವುದೇ ಅಸಾಧ್ಯ; ಅಥವಾ ವಿಶೇಷವಾದ ಮೋಹವೆ? ಅಥವಾ ನಿದ್ರೆಯೆ? ವಿಷಪ್ರಸಾರವೆ? ಮದವೆ? – ನಿನ್ನ ದೇಹದ ಸ್ಪರ್ಶಸ್ಪರ್ಶದಲ್ಲಿಯೂ ನನ್ನ ಇಂದ್ರಿಯಗಳು ಪರಿಮೂಢವಾಗುತ್ತವೆ; ಯಾವುದೋ ವಿಕಾರ ಅಂತಃಕರಣವನ್ನು ಸ್ತಬ್ಧಗೊಳಿಸುತ್ತದೆ, ತಾಪವನ್ನುಂಟು ಮಾಡುತ್ತದೆ.]

ಮತ್ತು – [ಧನಿಕನದೇ] :

'ಲಾವಣ್ಯಾಮೃತವರ್ಷಿಣಿ ಪ್ರತಿದಿಶಂ ಕೃಷ್ಣಾಗರುಶ್ಯಾಮಲೇ
ವರ್ಷಾಣಾಮಿವ ತೇ ಪಯೋಧರಭರೇ ತನ್ವಂಗಿ ದೂರೋನ್ನತೇ ।
ನಾಸಾವಂಶಮನೋಜ್ಞಕೇತಕತನುಭ್ರೂಪತ್ರಗರ್ಭೋಲ್ಲಸ –
ತ್ಪುಷ್ಪಶ್ರೀಸ್ತಿಲಕಃ ಸಹೇಲಮಲಕೈರ್ಭೃಂಗೈರಿವಾಪೀಯತೇ ॥'

[ಚೆಂದ ಮೆಯ್ಯವಳೆ, ಅಗರುಗಾಳಿನಿಂದ ಕಪ್ಪಾದ ಬಲು ಎತ್ತರವಾದ ನಿನ್ನ ಮೊಲೆಭಾರ, (ಅಗರುಗಪ್ಪಿನ ಏರುಮುಗಿಲು) ಮಳೆಗರೆಯುವಂತೆ, ಎಲ್ಲೆಡೆಗಳಲ್ಲೂ ಸೊಬಗಿನ ಸೋನೆ ಸುರಿಸುತ್ತಿರಲು, ಕೊಳಲುಮೂಗಿನ ಬಗೆಪೊಗುವ ಕೇದಗೆಬಣ್ಣವಾಂತು ಹುಬ್ಬಿನೆಲೆಗಳ ಬಸಿರಲ್ಲಿ ಅರಳಿದಂಥ ಹಣೆಬಟ್ಟಿನ ಹೂವನ್ನು ಮುಂಗುರುಳ್ದುಂಬಿಗಳು ಸಡಗರದಿಂದ ಕುಡಿಯುತ್ತಿವೆಯೋ ಎಂದು ತೋರುತ್ತದೆ.]

ಟಿಪ್ಪಣಿ : 'ರಸಗಂಗಾಧರ' 'ವಾಗ್ಭಟಾಲಂಕಾರ'ಗಳಲ್ಲಿ ಇದಕ್ಕೆ 'ಸಂಯೋಗ' ಎಂಬ ಹೆಸರಿದೆ.

ಹೋಲಿಕೆ = ನಾ.ಶಾ. : ೬-೪೫ರ ಅನಂತರದ ಗದ್ಯ; ಸಾ.ದ. : ೩-೨೧೦; ಪ್ರತಾಪ : ೪-೭೯.

## ೭೭. ಸಂಭೋಗದಲ್ಲಿ ನಾಯಿಕಾಚೇಷ್ಟೆ :

**ಚೇಷ್ಟಾಸ್ತತ್ರ ಪ್ರವರ್ತಂತೇ ಲೀಲಾದ್ಯಾ ದಶ ಯೋಷಿತಾಮ್ ।**
**ದಾಕ್ಷಿಣ್ಯಮಾರ್ದವಪ್ರೇಮ್ಣಾಮನುರೂಪಾಃ ಪ್ರಿಯಂ ಪ್ರತಿ ॥ ೭೦ ॥**

ಅನು : ಅಲ್ಲಿ [ಎಂದರೆ, ಸಂಭೋಗಶೃಂಗಾರದಲ್ಲಿ] ಪ್ರಿಯನನ್ನು ಕುರಿತು ದಾಕ್ಷಿಣ್ಯ ಮಾರ್ದವ ಪ್ರೇಮಗಳಿಗೆ ಅನುರೂಪವಾದ ಸ್ತ್ರೀಯರ 'ಲೀಲಾದಿ' ಹತ್ತು ಚೇಷ್ಟೆಗಳು ಪ್ರಯೋಗವಾಗುತ್ತವೆ.

ಟಿಪ್ಪಣಿ : ಸ್ತ್ರೀಯರ ಸ್ವಭಾವಜವಾದ 'ಲೀಲಾ'ದಿ ದಶ ಭಾವಗಳಿಗೆ ನೋಡಿ : ೨-೪೯; ಮತ್ತು ಅವುಗಳ ಲಕ್ಷಣಕ್ಕೆ : ೨-೬೦ರಿಂದ ೬೯.

ಹೋಲಿಕೆ = ನಾ.ಶಾ. : ೬-೪೫ರ ಅನಂತರದ ಗದ್ಯ.

## ೭೮. ಸಂಭೋಗದಲ್ಲಿ ನಾಯಕ :

**ರಮಯೇಚ್ಚಾಟುಕೃತ್ಕಾಂತಃ ಕಲಾಕ್ರೀಡಾದಿಭಿಶ್ಚ ತಾಮ್ ।**
**ನ ಗ್ರಾಮ್ಯಮಾಚರೇತ್ಕಿಂಚಿನ್ನರ್ಮಭ್ರಂಶಕರಂ ನ ಚ ॥ ೭೧ ॥**

ಅನು : [ಸಂಭೋಗಶೃಂಗಾರದಲ್ಲಿ] ಕಾಂತನು ಪ್ರಿಯವಾದುದನ್ನೆಸಗಿ ಕಲೆ, ಕ್ರೀಡೆ ಮುಂತಾದವುಗಳಿಂದ ಆಕೆ(ನಾಯಿಕೆ)ಯನ್ನು ರಮಿಸತಕ್ಕದ್ದು. [ಅಲ್ಲಿ] ಗ್ರಾಮ್ಯ(ಕೀಳ್ಮೆ) ವನ್ನಾಗಲಿ ಶೃಂಗಾರದ ಪ್ರಸನ್ನತೆ(ನರ್ಮ)ಯನ್ನು ನಷ್ಟಗೊಳಿಸುವಂಥದನ್ನಾಗಲಿ ಸ್ವಲ್ಪವೂ ಮಾಡಬಾರದು.

ವ್ಯಾಖ್ಯೆ : ಗ್ರಾಮ್ಯವಾದ ಸಂಭೋಗವು ರಂಗದಲ್ಲಿ ನಿಷಿದ್ಧವಾಗಿರುವುದಷ್ಟೆ ಅಲ್ಲದೆ ಕಾವ್ಯದಲ್ಲಿ ಕೂಡ ಅದು ಬರಬಾರದೆಂದು ಇಲ್ಲಿ ಅದನ್ನು ಪುನಃ ನಿಷೇಧಿಸಿದೆ. [ಶುಚಿಯಾದ ಶೃಂಗಾರಕ್ಕೆ] ಉದಾ:- [ರತ್ನಾ. : ೧-೨೧] :

'ಸ್ಪೃಷ್ಟಸ್ತ್ವಯೈಷ ದಯಿತೇ ಸ್ಮರಪೂಜಾವ್ಯಾಪೃತೇನ ಹಸ್ತೇನ ।
ಉದ್ಭಿನ್ನಾಪರಮೃದುತರಕಿಸಲಯ ಇವ ಲಕ್ಷ್ಯತೇಽಶೋಕಃ ॥'

[ದಯಿತೆ, ಕಾಮಪೂಜೆಯಲ್ಲಿ ತೊಡಗಿದ ನಿನ್ನ ಕೈಯಿಂದ ಈ ಅಶೋಕ ಬೇರೆ ಮೃದುತರವಾಗಿ ಚಿಗುರೊಡೆದಿತೋ ಎಂಬಂತಿದೆ.] ಇತ್ಯಾದಿ. ನಾಯಕ ನಾಯಿಕೆ ಕೈಶಿಕೀವೃತ್ತಿ ನಾಟಕ ನಾಟಿಕೆ ಮುಂತಾದವುಗಳಿಗೆ ಹೇಳಿರುವ ಲಕ್ಷಣಗಳು ಕವಿಪರಂಪರೆಯಿಂದ ತಿಳಿಯಲ್ಪಟ್ಟಿವೆ. ಹಾಗೆ ಕವಿ ಪರಂಪರೆಯಿಂದ ಜ್ಞಾತವಾದದ್ದನ್ನು ತಿಳಿದು ಮತ್ತು ಔಚಿತ್ಯಕ್ಕೆ ತಕ್ಕಂತೆ ಸ್ವತಃ ಹೊಂದಿಸುವುದರಿಂದ ತಾನು ಉತ್ಪ್ರೇಕ್ಷಿಸಿದುದನ್ನು ಅನುಸಂಧಾನಮಾಡಿ ಸುಕವಿಯಾದವನು ಶೃಂಗಾರವನ್ನು ಚಿತ್ರಿಸಬೇಕು.

ಟಿಪ್ಪಣಿ : ರಂಗದಲ್ಲಿ ಗ್ರಾಮ್ಯಸಂಭೋಗ (ರತಿ) ಕೂಡದು ಎಂಬುದು ನಿಯಮ. (ನೋಡಿ : ೩-೩೯.) ಶೃಂಗಾರಕ್ಕೂ 'ಕೈಶಿಕೀವೃತ್ತಿ'ಗೂ ಇರುವ ಸಂಬಂಧ ಹಾಗೂ 'ನಾಟಕ' 'ನಾಟಿಕೆ'ಗಳಿಗೂ ಶೃಂಗಾರಕ್ಕೂ ಇರುವ ಸಂಬಂಧ ಗಮನಿಸಿ. (ನೋಡಿ : ೨-೭೭, ೩-೩೮, ೩-೪೭)

# ವೀರರಸ

## ೭೯. ವೀರರಸಲಕ್ಷಣ :

**ವೀರಃ ಪ್ರತಾಪವಿನಯಾಧ್ಯವಸಾಯಸತ್ತ್ವ -**
**ಮೋಹಾವಿಷಾದನಯವಿಸ್ಮಯವಿಕ್ರಮಾದ್ಯೈಃ ।**
**ಉತ್ಸಾಹಭೂಃ ಸ ಚ ದಯಾರಣದಾನಯೋಗಾ -**
**ತ್ತ್ರೇಧಾ ಕಿಲಾತ್ರ ಮತಿಗರ್ವಧೃತಿಪ್ರಹರ್ಷಾಃ ॥ ೭೨ ॥**

ಅನು : ಪ್ರತಾಪ ವಿನಯ ದೃಢನಿಶ್ಚಯ ಸತ್ತ್ವ ಮೋಹ ವಿಷಾದರಾಹಿತ್ಯ ನಯ ವಿಸ್ಮಯ ಶೌರ್ಯ[-ಈ ವಿಭಾವ]ಗಳಿಂದ [ಪುಷ್ಟಗೊಂಡು] 'ಉತ್ಸಾಹ' [ಸ್ಥಾಯಿಭಾವ]ವನ್ನು ಮೂಲವಾಗಿ ಉಳ್ಳುದು 'ವೀರ'[ರಸ]. ಮತ್ತು ಅದು 'ದಯಾ' 'ರಣ' 'ದಾನ' ಇವುಗಳ ಹೊಂದಿಕೆಯಿಂದ ಮೂರು ಬಗೆ [ಎಂದರೆ, 'ವೀರ'ವು 'ದಯಾವೀರ' 'ರಣವೀರ' 'ದಾನವೀರ' ಎಂಬುದಾಗಿ ಮೂರು ವಿಧ]. ಅಲ್ಲಿ 'ಮತಿ' 'ಗರ್ವ' 'ಧೃತಿ' 'ಪ್ರಹರ್ಷ'(ಹರ್ಷ)ಗಳು [ಸಂಚಾರಿ ಭಾವಗಳು].

ವ್ಯಾಖ್ಯೆ : ಪ್ರತಾಪ ವಿನಯ ಮುಂತಾದವುಗಳಿಂದ ವಿಭಾವಿತವಾಗುವ, ಕರುಣ ಯುದ್ಧದಾನ ಈ ಅನುಭಾವಗಳಿಂದ ಪ್ರಕಟವಾಗುವ, ಗರ್ವ ಧೃತಿ ಹರ್ಷ ಅಮರ್ಷ ಸ್ಮೃತಿ ಮತಿ ವಿತರ್ಕ ಇತ್ಯಾದಿ [ವ್ಯಭಿಚಾರಿ ಭಾವ]ಗಳಿಂದ ಭಾವಿತವಾಗುವ 'ಉತ್ಸಾಹ' ಸ್ಥಾಯಿಭಾವವೇ ಸವಿಕೊಟ್ಟು ಭಾವಕರ ಚಿತ್ತವನ್ನು ವಿಸ್ತರಿಸುವ ಆನಂದವಾಗಿ 'ವೀರರಸ' ಎನ್ನಿಸಿಕೊಳ್ಳುತ್ತದೆ.

ಅಲ್ಲಿ 'ದಯಾವೀರ'ಕ್ಕೆ ಉದಾ:- 'ನಾಗಾನಂದ'ದಲ್ಲಿನ ಜೀಮೂತವಾಹನನ ವೀರ.

'ಯುದ್ಧವೀರ'ಕ್ಕೆ ಉದಾ:- 'ಮಹಾವೀರಚರಿತೆ'ಯಲ್ಲಿನ ರಾಮನ ವೀರ.

'ದಾನವೀರ'ಕ್ಕೆ ಉದಾ:- ಪರಶುರಾಮ, ಬಲಿ ಇವರುಗಳ ವೀರ.

ಪರಶುರಾಮನ 'ದಾನವೀರ'ಕ್ಕೆ ಉದಾ:- [ಮಹಾ. : ೨-೩೫] : 'ತ್ಯಾಗಃ ಸಪ್ತಸಮುದ್ರಮುದ್ರಿತ ಮಹೀನಿರ್ವ್ಯಾಜದಾನಾವಧಿಃ' [ಸಪ್ತಸಮುದ್ರಗಳ ಪರ್ಯಂತ ಹಬ್ಬಿದ ಭೂಮಿಯನ್ನೆ ನಿಷ್ಕಾಮದಿಂದ ದಾನಮಾಡಿಬಿಡುವೆ....]

ಮತ್ತು – ಬಲಿಯ 'ದಾನವೀರ'ಕ್ಕೆ ಉದಾ:- [ಆಕರ ತಿಳಿಯದು] :

'ಖರ್ವಗ್ರಂಥಿವಿಮುಕ್ತಸಂಧಿವಿಕಸದ್ವಕ್ಷಸ್ಫುರತ್ಕೌಸ್ತುಭಂ
ನಿರ್ಯನ್ನಾಭಿಸರೋಜಕುಡ್ಮಲಕುಟೀಗಂಭೀರಸಾಮಧ್ವನಿ ।
ಪಾತ್ರಾವಾಪ್ತಿ ಸಮುತ್ಸುಕೇನ ಬಲಿನಾ ಸಾನಂದಮಾಲೋಕಿತಂ
ಪಾಯಾದ್ವಃ ಕ್ರಮವರ್ಧಮಾನಮಹಿಮಾಶ್ಚರ್ಯಂ ಮುರಾರೇರ್ವಪುಃ ॥'

[ವಾಮನತ್ವವನ್ನು ನೀಗಿದ ಅಂಗಾಂಗಗಳು, ಕೌಸ್ತುಭ ಹೊಳೆವ ಅರಳಿದೆದೆ, ಒಡಲಲ್ಲಿ ಗಂಭೀರ ಸಾಮಧ್ವನಿ ಹೊಳಲಿಡುವ ಹೊಕ್ಕುಳುದಾವರೆಯ ಮೊಗ್ಗು – ಹೀಗಿರುವ, ತಕ್ಕುದು ದೊರೆಯಿತೆಂಬ ಸಡಗರದಿಂದ ಬಲಿಚಕ್ರವರ್ತಿಗೆ ಆನಂದವುಕ್ಕಿಸುವ ನೋಟವಾದ, ಕ್ರಮವಾಗಿ ಮಹಿಮಾಶ್ಚರ್ಯಗಳು ವರ್ಧಿಸುವ ಮುರಾರಿಯ ಮೆಯ್ ನಮ್ಮನ್ನು ಕಾಪಾಡಲಿ.]

ಮತ್ತು – [ಧನಿಕನದೇ] :

'ಲಕ್ಷ್ಮೀಪಯೋಧರೋತ್ಸಂಗಕುಂಕುಮಾರುಣಿತೋ ಹರೇಃ ।
ಬಲಿರೇಷ ಸ ಯೇನಾಸ್ಯ ಭಿಕ್ಷಾಪಾತ್ರೀಕೃತಃ ಕರಃ ॥'

[ಲಕ್ಷ್ಮಿಯ ಸ್ತನಗಳಿಗೆ ಲೇಪಿತವಾದ ಕುಂಕುಮದಿಂದ ಕೆಂಪಿಡಿದ ಹರಿಯ ಕೈ ಯಾರಿಂದ ಭಿಕ್ಷಾ ಪಾತ್ರೆಯಾಗಿಸಲ್ಪಟ್ಟಿತೊ ಆ ಬಲಿಯೇ ಇವನು.]

– ವಿನಯಾದಿಗಳ ಬಗೆಗೆ ಹಿಂದೆ ಹೇಳಿರುವುದನ್ನು ಗಮನಿಸಬೇಕು. (ನೋಡಿ : ೨-೫) ಹಿಂದಿನವರ ಅಭಿಪ್ರಾಯದಂತೆ, 'ವೀರ'ದಲ್ಲಿ 'ಪ್ರತಾಪವೀರ' 'ಗುಣವೀರ' 'ಆವರ್ಜನವೀರ' (ದಯಾವೀರ) – ಎಂದು ಮೂರು ಬಗೆ. 'ಯುದ್ಧವೀರ'ನಲ್ಲಿ ವಿಶೇಷ ಸ್ವೇದ, ಆರಕ್ತವಾದ ಮುಖ ಮತ್ತು ಕಣ್ಣುಗಳು ಮುಂತಾದ 'ಕ್ರೋಧ'ದ ಅನುಭಾವ ಇರಕೂಡದು. ಅಂಥ ಅನುಭಾವ ತೋರುವಲ್ಲಿ 'ರೌದ್ರ'ವೇ ರಸವೆಂದೂ, ಅಂಥ ಅನುಭಾವಗಳಿಲ್ಲದೆ ಕೇವಲ 'ವೀರ' ಇರುವಲ್ಲಿ 'ವೀರ'ವೇ ರಸವೆಂದೂ ತಿಳಿಯಬೇಕು.

ಟಿಪ್ಪಣಿ : 'ಮತಿ'ಗೆ ೪-೩೩, 'ಗರ್ವ'ಕ್ಕೆ ೪-೨೩, 'ಧೃತಿ'ಗೆ ೪-೧೪, 'ಹರ್ಷ'ಕ್ಕೆ ೪-೧೬, 'ಅಮರ್ಷ'ಕ್ಕೆ ೪-೨೨, 'ಸ್ಮೃತಿ' ಗೆ ೪-೨೪, 'ವಿತರ್ಕ'ಕ್ಕೆ ೪-೩೬ ನೋಡಿ. 'ರೌದ್ರರಸ'ಕ್ಕೆ ೪-೮೧ ನೋಡಿ.

'ನಾಗಾನಂದ'ದ ಜೀಮೂತವಾಹನ 'ದಯಾವೀರ'ನೆಂಬುದರ ವಿವರಣೆಗೆ ೨-೫ ನೋಡಿ.

ನಾ.ಶಾ.ದ ಪ್ರಕಾರ 'ವೀರ'ದ ಮೂರು ವಿಧಗಳು : ದಾನವೀರ, ಧರ್ಮವೀರ, ಯುದ್ಧವೀರ. ಸಾ.ದ.ದಲ್ಲಿ ಮತ್ತು ಇತರ ಹಲವು ಗ್ರಂಥಗಳಲ್ಲಿ ನಾಲ್ಕು ಬಗೆಯ 'ವೀರ'ವನ್ನು ಹೇಳಿದೆ : ದಯಾದಾನ ಯುದ್ಧಧರ್ಮವೀರಗಳು.

ಹೋಲಿಕೆ = ನಾ.ಶಾ : ೬-೬೬ರಿಂದ ಮುಂದಿನ ಗದ್ಯ, ೬೭, ೬೮ ಮತ್ತು ೭೯; ಸಾ.ದ. : ೩-೨೩೨ರಿಂದ ೨೩೪; ಪ್ರತಾಪ : ೪-೫೩.

ಛಂದಸ್ಸು : ವಸಂತತಿಲಕ.

# ಬೀಭತ್ಸರಸ

## ೮೦. ಬೀಭತ್ಸರಸಲಕ್ಷಣ :

ಬೀಭತ್ಸಃ ಕೃಮಿಪೂತಿಗಂಧಿವಮಥುಪ್ರಾಯೈರ್ಜುಗುಪ್ಸೈಕಭೂ –
ರುದ್ವೇಗೀ ರುಧಿರಾಂತ್ರಕೀಕಸವಸಾಮಾಂಸಾದಿಭಿಃ ಕ್ಷೋಭಣಃ ।
ವೈರಾಗ್ಯಾಜ್ಜಘನಸ್ತನಾದಿಷು ಘೃಣಾಶುದ್ಧೋಽನುಭಾವೈರ್ವೃತೋ
ನಾಸಾವಕ್ತ್ರವಿಕೂಣನಾದಿಭಿರಿಹಾವೇಗಾರ್ತಿಶಂಕಾದಯಃ ॥ ೭೩ ॥

ಅನು : ಹುಳು, ಕೊಳೆತ ವಾಸನೆ, ವಮನ(ವಾಂತಿ)ಗಳು ಕಾರಣವಾಗಿ 'ಜುಗುಪ್ಸಾ' [ಸ್ಥಾಯಿಭಾವ] ಒಂದೇ ಮೂಲವಾಗಿರುವಂಥದು 'ಉದ್ವೇಗೀ ಬೀಭತ್ಸ'[ರಸ]; ರಕ್ತ ಕರುಳು, ಎಲುಬು, ಮಜ್ಜೆ, ಮಾಂಸ[ಇವೇ ಮೊದಲಾದವು]ಗಳಿಂದ [ಉಂಟಾಗುವಂಥದು] 'ಕ್ಷೋಭಣ'[ಬೀಭತ್ಸ]; ವೈರಾಗ್ಯದಿಂದ ಜಘನಸ್ತನ [ಇತ್ಯಾದಿ]ಗಳಲ್ಲಿ ತಿರಸ್ಕಾರ [ಉಂಟಾಗುವಂಥದು] 'ಶುದ್ಧ'[ಬೀಭತ್ಸ;–ಹೀಗೆ 'ಬೀಭತ್ಸ'ದಲ್ಲಿ ಮೂರು ವಿಧಗಳು ಮತ್ತು 'ಬೀಭತ್ಸ'ವು] ಮೂಗು ಮುಖಗಳನ್ನು ಸಂಕೋಚಗೊಳಿಸುವುದು ಇತ್ಯಾದಿ ಅನುಭಾವಗಳಿಂದ ಕೂಡಿರುತ್ತದೆ. ಅಲ್ಲಿ ಆವೇಗ, ಅರ್ತಿ, ಶಂಕಾ ಮೊದಲಾದವು [ವ್ಯಭಿಚಾರಿಭಾವಗಳಾಗಿರುತ್ತವೆ.]

ವ್ಯಾಖ್ಯೆ : ಕೃಮಿ ದುರ್ಗಂಧ ಮುಂತಾದ ವಿಭಾವಗಳಿಂದ ಹುಟ್ಟುವ 'ಜುಗುಪ್ಸಾ' ಸ್ಥಾಯಿಭಾವದಿಂದ ಪರಿಪೋಷಿತವಾಗುವ ಅತ್ಯಂತ ಅಹೃದ್ಯವಾದ 'ಉದ್ವೇಗೀಬೀಭತ್ಸ'ಕ್ಕೆ ಉದಾ:–[ಮಾಮಾ : ೫–೧೬] :

'ಉತ್ಕೃತ್ಯೋತ್ಕೃತ್ಯ ಕೃತ್ತಿಂ ಪ್ರಥಮಮಥ ಪೃಥೂಚ್ಛೋಫಭೂಯಾಂಸಿ ಮಾಂಸಾ
ನ್ಯಂಸಸ್ಫಿಕ್ಪೃಷ್ಠಪಿಂಡಾದ್ಯವಯವಸುಲಭಾನ್ಯುಗ್ರಪೂತೀನಿ ಜಗ್ಧ್ವಾ[1] ।
ಆರ್ತಃ ಪರ್ಯಸ್ತನೇತ್ರಃ ಪ್ರಕಟಿತದಶನಃ ಪ್ರೇತರಂಕಃ ಕರಂಕಾ –
ದಂಕಸ್ಥಾದಸ್ಥಿಸಂಸ್ಥಂ ಸ್ಥಪುಟಗತಮಪಿ ಕ್ರವ್ಯಮವ್ಯಗ್ರಮತ್ತಿ ॥'

[ಮೊದಲು ಚರ್ಮವನ್ನು ಕಿತ್ತು ಕಿತ್ತು, ಅನಂತರ ದೊಡ್ಡದಾಗಿ ಉಬ್ಬಿ ಮೇಲೆ ಬರುವ ಮಾಂಸಗಳನ್ನು ಹಾಗೂ ಭಯಂಕರವಾಗಿ ನಾರುವ ತಳ ಬೆನ್ನುಗಳೇ ಮೊದಲಾದ ಅವಯವಗಳನ್ನು ಮೆಲುಕುತ್ತ, ಸುತ್ತುಗಣ್ಣಿನ ಕಲ್‌ಕಿರಿದ ಆರ್ತವಾದ ಈ ನೀಚಪ್ರೇತಗಳು ತಲೆಬುರುಡೆ ಎಲುಬುಗೂಡುಗಳನ್ನು ತೊಡೆಯ ಮೇಲಿಟ್ಟುಕೊಂಡು ಒಳಭಾಗದ ಮಾಂಸವನ್ನು ಕೂಡ ಬಿಡದೆ ನಿರ್ಯೋಚನೆಯಾಗಿ ತಿನ್ನುತ್ತಿವೆ.]

ರಕ್ತ, ಕರುಳು, ಎಲುಬು, ಮಜ್ಜೆ, ಮಾಂಸ ಇತ್ಯಾದಿ ವಿಭಾವಗಳನ್ನುಳ್ಳ 'ಕ್ಷೋಭಣ ಬೀಭತ್ಸ'ಕ್ಕೆ ಉದಾ:–[ಮಹಾ. : ೧–೩೫] :

'ಅಂತ್ರಪ್ರೋತಬೃಹತ್ಕಪಾಲನಲಕಕ್ರೂರಕ್ವಣತ್ಕಂಕಣ–
ಪ್ರಾಯಪ್ರೇಂಖಿತಭೂರಿಭೂಷಣರವೈರಾಘೋಷಯಂತ್ಯಂಬರಮ್ ।
ಪೀತೋಚ್ಛರ್ದಿತರಕ್ತಕರ್ದಮಘನಪ್ರಾಗ್ಭಾರಘೋರೋಲ್ಲಸ–
ದ್ವ್ಯಾಲೋಲಸ್ತನಭಾರಭೈರವವಪುರ್ದರ್ಪೋದ್ಧತಂ ಧಾವತಿ ॥'

---

೧ ಪಾಠ : ಯುಕ್ತೋ

[ರಾಮನತ್ತ ಧಾವಿಸಿಬರುವ ತಾಟಕಿಯ ವರ್ಣನೆ ಇದು : ನಲಿಕೆಗಳು ಭಯಂಕರವಾಗಿ ಸದ್ದು ಮಾಡುತ್ತಿರುವ ಬೃಹತ್ಕಪಾಲಗಳನ್ನು ಕರುಳಿನಲ್ಲಿ ಪೋಣಿಸಿ ಮಾಡಿದ ಕಂಕಣ ಈ ಮೊದಲಾದ ವಿಶೇಷ ಆಭರಣಗಳ ಸದ್ದಿನಿಂದ ಗಗನ ಹೊಳಲಿಡುವಂತೆ ಮಾಡಿದ್ದಾಳೆ ; ಕುಡಿದುಕ್ಕಿದ ನೆತ್ತರು ಹೆಪ್ಪುಗಟ್ಟಿರುವಂಥ ಹಾಗೂ ಮುಂಭಾರದಿಂದ ಘೋರವಾಗಿ ಎದ್ದು ತೋರುವಂಥ ತೂಗುಮೊಲೆಹೊರೆಯ ಭೀಷಣಶರೀರವುಳ್ಳವಳಾಗಿ ಔದ್ಧತ್ಯದಿಂದ ಧಾವಿಸುತ್ತಿದ್ದಾಳೆ.]

ರಮಣೀಯವಾದ ಜಘನಸ್ತನಾದಿಗಳಲ್ಲಿ ಕೂಡ ವೈರಾಗ್ಯದಿಂದ ತಿರಸ್ಕಾರ ಉಂಟಾಗುವಂಥ 'ಶುದ್ಧಬೀಭತ್ಸ'ಕ್ಕೆ ಉದಾ:-[ಆಕರ ತಿಳಿಯದು] :

> 'ಲಾಲಾಂ ವಕ್ತ್ರಾಸವಂ ವೇತ್ತಿ ಮಾಂಸಪಿಂಡೌ ಪಯೋಧರೌ ।
> ಮಾಂಸಾಸ್ಥಿಕೂಟಂ ಜಘನಂ ಜನಃ ಕಾಮಗ್ರಹಾತುರಃ ॥'

[ಕಾಮಾತುರನಾದವನು ಲಾಲಾರಸವನ್ನೆ ವಕ್ತ್ರಾಸವವೆಂದು, ಮಾಂಸಪಿಂಡಗಳನ್ನು ಸ್ತನಗಳೆಂದು, ಎಲುಬು ಮಾಂಸಗಳ ಕೂಟವನ್ನು ಜಘನವೆಂದು ತಿಳಿಯುತ್ತಾನೆ.]

-ಈ ಉದಾ:-'ಬೀಭತ್ಸ'ವೇ ಸರಿ, ಶಾಂತವಲ್ಲ. ಏಕೆಂದರೆ ಶಾಂತವೈರಾಗ್ಯದಲ್ಲಿ ಇಲ್ಲಿ ತೋರುವಂಥ 'ಬೀಭತ್ಸ' ಪ್ರಕಟವಾಗುವುದಿಲ್ಲ.

ಟಿಪ್ಪಣಿ : 'ಜುಗುಪ್ಸಾ'ಕ್ಕೆ ಪುಷ್ಟಿಕೊಡುವ ವ್ಯಭಿಚಾರಿಗಳಲ್ಲಿ 'ಅರ್ತಿ' ಎಂಬುದನ್ನು ಹೇಳಿದೆ; ಅದು 'ಗ್ಲಾನಿ'(೪-೧೧)ಯನ್ನು ಹೋಲುವಂತೆ ತೋರುತ್ತದೆ.

ಮೂರು ಬಗೆಯ 'ಬೀಭತ್ಸ'ಕ್ಕೂ 'ಜುಗುಪ್ಸೆ'ಯೇ ಸ್ಥಾಯಿ. " 'ಜುಗುಪ್ಸಾ' ಒಂದೇ ಮೂಲವಾಗಿರುವಂಥದು 'ಉದ್ವೇಗೀಬೀಭತ್ಸ' " ಎಂದು ಕಾರಿಕೆಯಲ್ಲಿ ಹೇಳಿದ್ದರ ಅರ್ಥ ಪ್ರಾಯಃ ಹೀಗೆ : ಉದ್ವೇಗೀಬೀಭತ್ಸದಲ್ಲಿ ಜುಗುಪ್ಸೆ ಅತಿಯಾಗಿರುತ್ತದೆ; ಉಳಿದೆರಡು ಬಗೆಗಳಲ್ಲಿ ಕ್ರಮವಾಗಿ ಅದರ ಹೆಚ್ಚಳ ಕುಂದಿ ಉಳಿದ ವ್ಯಭಿಚಾರಿಗಳ ಪ್ರಸಾರ ಹೆಚ್ಚಿರುತ್ತದೆ.

ಹೋಲಿಕೆ = ನಾ.ಶಾ. : ೬-೭೨ರ ಮುಂದಿನ ಗದ್ಯ, ೭೩, ೭೪ ಮತ್ತು ೮೧; ಸಾ.ದ. : ३-२३೯ರಿಂದ २४२; ಪ್ರತಾಪ : ೪-೫೩.

ಛಂದಸ್ಸು : ಶಾರ್ದೂಲವಿಕ್ರೀಡಿತ.

# ರೌದ್ರರಸ

## ೮೧. ರೌದ್ರರಸಲಕ್ಷಣ :

> ಕ್ರೋಧೋ ಮತ್ಸರವೈರಿವೈಕೃತಮಯೈಃ ಪೋಷೋಽಸ್ಯ ರೌದ್ರೋಽನುಜಃ
> ಕ್ಷೋಭಃ ಸ್ವಾಧರದಂಶಕಂಪಭ್ರುಕುಟಿಸ್ವೇದಾಸ್ಯರಾಗೈರ್ಯುತಃ ।
> ಶಸ್ತ್ರೋಲ್ಲಾಸವಿಕತ್ಥನಾಂಸಧರಣೀಘಾತಪ್ರತಿಜ್ಞಾಗ್ರಹೈ-
> ರತ್ರಾಮರ್ಷಮದೌ ಸ್ಮೃತಿಶ್ಚಪಲತಾಸೂಯೌಗ್ರ್ಯವೇಗಾದಯಃ ॥ ೭೪ ॥

ಅನು : ಮತ್ಸರ[ದ ಮೂಲಕ ಅಥವಾ] ಶತ್ರು[ಗಳ ಮೂಲಕ ಒದಗುವ] ಅಪಕೃತಿ ಪರಂಪರೆ [ಇತ್ಯಾದಿ ವಿಭಾವ]ಗಳಿಂದ [ಉಂಟಾಗುವಂಥದು] 'ಕ್ರೋಧ' [ಸ್ಥಾಯಿಭಾವ]; ಅದರ ಉತ್ಕರ್ಷ (ಪೋಷ) 'ರೌದ್ರ'['ರಸ']. ತನ್ನ ತುಟಿಗಳನ್ನು ಕಡಿದುಕೊಳ್ಳುವುದು, ಕಂಪಿಸುವುದು, ಹುಬ್ಬುಗಂಟಿಕ್ಕುವುದು, ಬೆವರುವುದು, ರುದ್ರರಾಗದಿಂದ ಕೂಡಿರುವುದು – ಇವುಗಳುಳ್ಳ ಕ್ಷೋಭೆ[ರೌದ್ರರಸದ] ಜೊತೆಯಲ್ಲಿ ಪ್ರಕಟವಾಗುತ್ತದೆ. ಶಸ್ತ್ರಗಳನ್ನು

ಝುಳಪಿಸುವುದು, ಆತ್ಮಪ್ರಶಂಸಾರೂಪವಾದ ಹೆಗಲು[ಕುಣಿಸುವುದು], ನೆಲದ ಮೇಲೆ [ಹೆಜ್ಜೆ] ಬಡಿಯುವುದು, ಪ್ರತಿಜ್ಞೆಯನ್ನು [ಹಟದಿಂದ] ನಿಶ್ಚೈಸುವುದು [ಈ ಅನುಭಾವ]ಗಳಿಂದ [ರೌದ್ರರಸವು ಪ್ರಕಟವಾಗುತ್ತದೆ]. ಅಲ್ಲಿ ಅಮರ್ಷ, ಮದ, ಸ್ಮೃತಿ, ಚಪಲತೆ, ಅಸೂಯೆ, ಔಗ್ರ್ಯ, [ಆ]ವೇಗ ಇತ್ಯಾದಿ [ವ್ಯಭಿಚಾರಿಭಾವಗಳು ತೋರುತ್ತವೆ].

ವ್ಯಾಖ್ಯೆ : ಮಾತ್ಸರ್ಯವೇ ವಿಭಾವವಾಗಿ ಉಂಟಾಗುವ 'ರೌದ್ರ'ಕ್ಕೆ ಉದಾ:- [ಮಹಾ. : ೩-೪೪] :

'ತ್ವಂ ಬ್ರಹ್ಮವರ್ಚಸಧರೋ ಯದಿ ವರ್ತಮಾನೋ
ಯದ್ವಾ ಸ್ವಜಾತಿಸಮಯೇನ ಧನುರ್ಧರಃ ಸ್ಯಾಃ।
ಉಗ್ರೇಣ ಭೋಸ್ತವ ತಪಸ್ತಪಸಾ ದಹಾಮಿ
ಪಕ್ಷಾಂತರಸ್ಯ ಸದೃಶಂ ಪರಶುಃ ಕರೋತಿ ॥'

[ನೀನು ಬ್ರಹ್ಮವರ್ಚಸ್ಸನ್ನು ಧರಿಸಿ ಅದರಂತೆ ನಡೆ ಇಲ್ಲವೆ ನಿನ್ನ ಜಾತಿಗೆ ಹೊಂದಿ ಧನುರ್ಧಾರಿಯಾಗಿರು; (ಈ ಎರಡರಲ್ಲಿ ಹೇಗಿದ್ದರೂ ಸರಿ, ನಾನು ನಿನ್ನನ್ನು ಜಯಿಸಬಲ್ಲೆ.) ನಿನ್ನ ತಪಸ್ಸನ್ನು ನನ್ನ ಉಗ್ರವಾದ ತಪಸ್ಸಿನಿಂದ ದಹಿಸುತ್ತೇನೆ; (ಅಥವಾ) ಬೇರೊಂದು ಪಕ್ಷದಲ್ಲಿ (ನೀನು ಧನುವನ್ನು ಧರಿಸಿದಲ್ಲಿ, ಈ ನನ್ನ) ಪರಶುವು (ನಿನಗೆ) ತಕ್ಕುದನ್ನು ಮಾಡುತ್ತದೆ.]

ಶತ್ರುಗಳ ಅಪಕೃತಿಯಿಂದುಂಟಾಗುವ 'ರೌದ್ರ'ಕ್ಕೆ ಉದಾ:- [ವೇಣೀ. : ೧-೮; ೩-೧೦ರಲ್ಲೂ ಉದ್ಧೃತವಾಗಿದೆ] :

'ಲಾಕ್ಷಾಗೃಹಾನಲವಿಷಾನ್ನಸಭಾಪ್ರವೇಶೈಃ
ಪ್ರಾಣೇಷು ವಿತ್ತನಿಚಯೇಷು ಚ ನಃ ಪ್ರಹೃತ್ಯ।
ಆಕೃಷ್ಟಪಾಂಡವವಧೂಪರಿಧಾನಕೇಶಾಃ
ಸ್ವಸ್ಥಾ ಭವಂತು ಮಯಿ ಜೀವತಿ ಧಾರ್ತರಾಷ್ಟ್ರಾಃ ॥'

[ಅರಗಿನ ಮನೆಯ ಬೆಂಕಿಯಿಂದ ವಿಷಾನ್ನದಿಂದ ದ್ಯೂತಸಭಾಪ್ರವೇಶದಿಂದ ನಮ್ಮ ಪ್ರಾಣ ಐಶ್ವರ್ಯಗಳನ್ನು ಸೆಳೆದ, ಪಾಂಡವಪತ್ನಿಯ ಸೀರೆ ಮುಡಿಗಳನ್ನು ಸೆಳೆದ ಧಾರ್ತರಾಷ್ಟ್ರರು, ನಾನು ಜೀವಿಸಿರುವಾಗ, ಸ್ವಸ್ಥರಾಗಿರುವರೆ?]

- ಇದೇ ಬಗೆಯ ವಿಭಾವಗಳಿಂದ, ಬೆವರುಗೊಂಡ ನೆತ್ತರುಗೊಂಡ ಮುಖ ಕಣ್ಣು ಮುಂತಾದ ಅನುಭಾವಗಳಿಂದ, ಅಮರ್ಷಾದಿ ವ್ಯಭಿಚಾರಿಗಳಿಂದ ಕ್ರೋಧದ ಉತ್ಕರ್ಷವುಂಟಾಗುವುದೇ 'ರೌದ್ರ'. ಪರಶುರಾಮ, ಭೀಮಸೇನ, ದುರ್ಯೋಧನ ಮುಂತಾದ ನಾಯಕರ ವ್ಯವಹಾರಗಳಲ್ಲೂ 'ಮಹಾವೀರಚರಿತ' 'ವೇಣೀಸಂಹಾರ' ಮುಂತಾದ ರೂಪಕಗಳಲ್ಲೂ 'ರೌದ್ರರಸ'ವನ್ನು ಕಾಣಬಹುದು.

ಟಿಪ್ಪಣಿ : 'ಅಮರ್ಷ'ಕ್ಕೆ ೪-೨೨, 'ಮದ'ಕ್ಕೆ ೪-೨೬, 'ಸ್ಮೃತಿ'ಗೆ ೪-೨೪, 'ಚಪಲತೆ'ಗೆ ೪-೪೨, 'ಅಸೂಯೆ'ಗೆ ೪-೨೧, 'ಔಗ್ರ್ಯ'ಕ್ಕೆ ೪-೧೮, 'ಆವೇಗ'ಕ್ಕೆ ೪-೩೫ ನೋಡಿ.

ನಾ.ಶಾ.(೬-೭೭)ದಲ್ಲಿ ರೌದ್ರ ಹಾಸ್ಯಗಳೆರಡಕ್ಕೂ ಅಂಗ, ನೇಪಥ್ಯ, ವಾಕ್ಯಗಳೆಂಬ ಮೂರು ವಿಧಗಳೆಂದು ಹೇಳಿದೆ.

ಹೋಲಿಕೆ = ನಾ.ಶಾ. : ೬-೬೩ರ ಮುಂದಿನ ಗದ್ಯ, ೬೪ರಿಂದ ೬೬, ಸಾ.ದ. : ೩-೨೨೭ರಿಂದ ೨೩೧; ಪ್ರತಾಪ : ೪-೫೩.

ಛಂದಸ್ಸು : ಶಾರ್ದೂಲವಿಕ್ರೀಡಿತ.

# ಹಾಸ್ಯರಸ

## ೮೨. ಹಾಸ್ಯರಸಲಕ್ಷಣ :

> ವಿಕೃತಾಕೃತಿವಾಗ್ವೇಷೈರಾತ್ಮನೋಽಥ ಪರಸ್ಯ ವಾ ।
> ಹಾಸಃ ಸ್ಯಾತ್ಪರಿತೋಷೋಽಸ್ಯ ಹಾಸ್ಯಸ್ತ್ರಿಪ್ರಕೃತಿಃ ಸ್ಮೃತಃ ॥ ೭೫ ॥

ಅನು : ವಿಕಾರವಾದ ಆಕೃತಿ, ಮಾತು, ವೇಷ ಇವುಗಳಿಂದ [ಉಂಟಾಗುವ] ತನ್ನ ಅಥವಾ ಪರರ 'ಹಾಸ'[ಸ್ಥಾಯೀಭಾವ]ವು ಸಂತೋಷ[ವನ್ನು ಕೊಡುವಂಥದು]. ಅದರ [ಉತ್ಕರ್ಷವೇ] 'ಹಾಸ್ಯ'[ರಸ]; [ಅದರಲ್ಲಿ ಉತ್ತಮ ಮಧ್ಯಮ ಅಧಮ ಎಂದು] ಮೂರು ಪ್ರಕೃತಿಗಳನ್ನು ಹೇಳಿದೆ.

ವ್ಯಾಖ್ಯೆ : ತನ್ನ ಅಥವಾ ಬೇರೆಯವರ ವಿಕೃತ ವೇಷಭಾಷಾದಿಗಳ ಆಲಂಬನೆಯುಳ್ಳ, ಅದೇ ವಿಭಾವವಾಗಿರುವ ಸ್ಥಾಯಿಭಾವ 'ಹಾಸ'. ಅದರ ಉತ್ಕರ್ಷದಿಂದ ಉಂಟಾಗುವುದೇ 'ಹಾಸ್ಯರಸ'. ಅದು [ಆತ್ಮಸ್ಥ ಮತ್ತು ಪರಸ್ಥ ಎಂದು] ಎರಡು ಅಧಿಷ್ಠಾನ ಉಳ್ಳದ್ದು ಮತ್ತು, ಉತ್ತಮ ಮಧ್ಯಮ ಅಧಮ ಪ್ರಕೃತಿಗಳಿಗನುಸಾರವಾಗಿ ಅದರಲ್ಲಿ ಮೂರು ವಿಧಗಳುಂಟಾಗುತ್ತವೆ. (ಮುಂದಿನ ಖಂಡ ನೋಡಿ.)

ಆತ್ಮಸ್ಥವಾದ ಹಾಸ್ಯಕ್ಕೆ ಉದಾ:- [ರಾವಣೋಕ್ತಿಯೆಂದು ಉದ್ಧೃತವಾದ, ಆಕರ ತಿಳಿಯದ ಪದ್ಯ] :

> 'ಜಾತಂ ಮೇ ಪರುಷೇಣ ಭಸ್ಮರಜಸಾ ತಚ್ಚಂದನೋದ್ಧೂಲನಂ
> ಹಾರೋ ವಕ್ಷಸಿ ಯಜ್ಞಸೂತ್ರಮುಚಿತಂ ಕ್ಲಿಷ್ಟಾ ಜಟಾಃ ಕುಂತಲಾಃ ।
> ರುದ್ರಾಕ್ಷೈಃ ಸಕಲೈಃ ಸರತ್ನವಲಯಂ ಚಿತ್ರಾಂಶುಕಂ ವಲ್ಕಲಂ
> ಸೀತಾಲೋಚನಹಾರಿ ಕಲ್ಪಿತಮಹೋ ರಮ್ಯಂ ವಪುಃ ಕಾಮಿನಃ ॥'

[ಒರಟಾದ ಬೂದಿ ಈ ದೇಹಕ್ಕೆ ಚಂದನದ ಲೇಪವಾಯಿತು; ಇದಕ್ಕೆ ಹೊಂದಿದ ಯಜ್ಞಸೂತ್ರವೇ ಹಾರವಾಯಿತು; ಸಿಕ್ಕುಜಡೆಗಳೇ ಸೊಬಗಿನ ಹೆಳಲುಗಳಾದವು; ರುದ್ರಾಕ್ಷಿಗಳಿಂದಲೇ ರನ್ನದ ಬಳೆಯಾಯಿತು; ನಾರುಡೆಯೇ ಚಿತ್ರಾಂಬರವಾಯಿತು – ಹೀಗೆ, ಅಹೋ, ಕಾಮಿಯಾದ ನನ್ನ ಮೆಯ್ ಸೀತೆಯ ಕಣ್ ಸೆಳೆಯುವಂತೆ ಚೆಲುವಾಗಿ ಅಣಿಯಾಯಿತು.]

ಪರಸ್ಥವಾದ ಹಾಸ್ಯಕ್ಕೆ ಉದಾ:- [ಅಜ್ಞಾತಕರ್ತೃಕವಾದ ಮುಕ್ತಕ] :

> 'ಭಿಕ್ಷೋ ಮಾಂಸನಿಷೇವಣಂ ಪ್ರಕುರುತೇ ಕಿಂ ತೇನ ಮದ್ಯಂ ವಿನಾ
> ಕಿಂ ತೇ ಮದ್ಯಮಪಿ ಪ್ರಿಯಂ ಪ್ರಿಯಮಹೋ ವಾರಾಂಗನಾಭಿಃ ಸಹ ।
> ವೇಶ್ಯಾ ದ್ರವ್ಯರುಚಿಃ ಕುತಸ್ತವ ಧನಂ ದ್ಯೂತೇನ ಚೌರ್ಯೇಣ ವಾ
> ಚೌರ್ಯದ್ಯೂತಪರಿಗ್ರಹೋಽಪಿ ಭವತೋ ದಾಸಸ್ಯ ಕಾಽನ್ಯಾ ಗತಿಃ ॥'

['ಭಿಕ್ಷು, ಮಾಂಸವನ್ನು ಸೇವಿಸುವೆಯಾ?' 'ಮದ್ಯವಿಲ್ಲದೆ ಅದರಿಂದೇನು?' 'ಏನು ನಿನಗೆ ಮದ್ಯವೂ ಪ್ರಿಯವೆ?' 'ಅಹೋ, ವಾರಾಂಗನೆಯರ ಜೊತೆಯಲ್ಲಿ ಅದೂ ಪ್ರಿಯವೇ.' 'ವೇಶ್ಯೆಯರು ಹಣವಲ್ಲಿ ಆಸಕ್ತರು; ನಿನಗೆ ಹಣವೆಲ್ಲಿ?' 'ದ್ಯೂತದಿಂದ ಇಲ್ಲವೆ ಚೌರ್ಯದಿಂದ ದೊರೆಯುತ್ತದೆ.' 'ದ್ಯೂತಚೌರ್ಯಗಳ ಪರಿಗ್ರಹವೂ ಉಂಟೇನು?' '(ಚಟಗಳ) ದಾಸನಿಗೆ ಬೇರೆ ಗತಿ ಯಾವುದು?']

ಟಿಪ್ಪಣಿ : ಹೋಲಿಕೆ = ನಾ.ಶಾ. : ೬-೪೮ರ ಮುಂದಿನ ಗದ್ಯ, ೪೯ರಿಂದ ೬೧; ಸಾ.ದ. : ೩-೨೧೪ರಿಂದ ೨೨೧; ಪ್ರತಾಪ : ೪-೫೩.

## ೮೩. ಹಾಸ್ಯದ ಪ್ರಕೃತಿಗಳು :

ಸ್ಮಿತಮಿಹ ವಿಕಾಸಿತನಯನಂ ಕಿಂಚಿಲ್ಲಕ್ಷ್ಯದ್ವಿಜಂ ತು ಹಸಿತಂ ಸ್ಯಾತ್ ।
ಮಧುರಸ್ವರಂ ವಿಹಸಿತಂ ಸಶಿರಃಕಂಪಮಿದಮುಪಹಸಿತಮ್ ॥ ೭೬ ॥
ಅಪಹಸಿತಂ ಸಾಸ್ರಾಕ್ಷಂ ವಿಕ್ಷಿಪ್ತಾಂಗಂ ಭವತ್ಯತೀಹಸಿತಮ್ ।[೧]
ದ್ವೇ ದ್ವೇ ಹಸಿತೇ ಚೈಷಾಂ ಜ್ಯೇಷ್ಠೇ ಮಧ್ಯೇಽಧಮೇ ಕ್ರಮಶಃ ॥ ೭೭ ॥

ಅನು : ಇಲ್ಲಿ [ಎಂದರೆ, ಹಾಸ್ಯದಲ್ಲಿ –] ಕಣ್ಣು ಅರಳಿರುವುದು 'ಸ್ಮಿತ'; ಹಲ್ಲು ತುಸು ಕಾಣಿಸುವುದು 'ಹಸಿತ'; ಮಧುರವಾದ ಧ್ವನಿಯುಳ್ಳದು 'ವಿಹಸಿತ'; ತಲೆ ನಡುಕದಿಂದೊಡಗೂಡಿದ್ದು 'ಉಪಹಸಿತ'; ಕಣ್ಣಲ್ಲಿ ನೀರು ಬರುವುದು 'ಅಪಹಸಿತ'; ಅಂಗಗಳು ಕುಣಿಯುವುದು 'ಅತೀಹಸಿತ' (ಅತಿಹಸಿತ); ಉತ್ತಮ ಮಧ್ಯಮ ಅಧಮ[ಈ ವಿವಿಧ ಪ್ರಕೃತಿಯ ಜನ]ರಲ್ಲಿ ಕ್ರಮವಾಗಿ, ಇವು[ಆರು ಬಗೆಯ ಹಸಿತ]ಗಳಲ್ಲಿ ಎರಡೆರಡು [ಉಂಟಾಗುತ್ತವೆ. ಎಂದರೆ ಉತ್ತಮರಲ್ಲಿ ಸ್ಮಿತಹಸಿತಗಳೂ, ಮಧ್ಯಮರಲ್ಲಿ ವಿಹಸಿತ ಉಪಹಸಿತಗಳೂ, ಅಧಮರಲ್ಲಿ ಅಪಹಸಿತ ಅತಿಹಸಿತಗಳೂ ಉಂಟಾಗುತ್ತವೆ].

ವ್ಯಾಖ್ಯೆ : ಮೇಲೆ ಹೇಳಿದ ಆರು ಬಗೆಯ ಹಸಿತಗಳಲ್ಲಿ ಉತ್ತಮ ಮಧ್ಯಮ ಅದಮರಿಗೆ ಕ್ರಮವಾಗಿ ಎರಡೆರಡರಂತೆ ಉಂಟಾಗುತ್ತವೆ. ಇವೆಲ್ಲವೂ ತನ್ನ ವಿಕಾರವನ್ನು ಕಂಡು ಉಂಟಾಗಬಹುದು ಅಥವಾ ಬೇರೊಬ್ಬರ ವಿಕಾರ ಕಂಡು ಆಗಬಹುದು. ಇವುಗಳಿಗೆಲ್ಲ ಉದಾಹರಣೆ ಕಂಡುಕೊಳ್ಳಬಹುದು.

ಟಿಪ್ಪಣಿ : ಹೋಲಿಕೆಗೆ ೪–೮೨ರ ಟಿಪ್ಪಣಿ ನೋಡಿ.

ಛಂದಸ್ಸು : ಆರ್ಯಾ.

## ೮೪. ಹಾಸ್ಯದ ವ್ಯಭಿಚಾರಿಗಳು :

ನಿದ್ರಾಲಸ್ಯಶ್ರಮಗ್ಲಾನಿಮೂರ್ಛಾಶ್ಚ ಸಹಚಾರಿಣಃ ।

ಅನು : [ಹಾಸ್ಯದಲ್ಲಿ] ನಿದ್ರೆ, ಆಲಸ್ಯ, ಶ್ರಮ, ಗ್ಲಾನಿ, ಮೂರ್ಛೆ[ಇವುಗಳು] ಸಹಚಾರಿ (ವ್ಯಭಿಚಾರಿ)ಗಳು.

ಟಿಪ್ಪಣಿ : 'ನಿದ್ರೆ'ಗೆ ೪–೨೮, 'ಆಲಸ್ಯ'ಕ್ಕೆ ೪–೩೪, 'ಶ್ರಮ'ಕ್ಕೆ ೪–೧೩, 'ಗ್ಲಾನಿ'ಗೆ ೪–೧೧.

'ಜಡತಾ'(೪–೧೫)ಕ್ಕೆ ಬದಲಾಗಿ ಇಲ್ಲಿ 'ಮೂರ್ಛಾ' ಎಂಬ ಹೆಸರನ್ನು ಬಳಸಿರಬಹುದಾಗಿ ಹ್ಯಾಸ್ ಯೋಚಿಸಿದ್ದಾರೆ. (ನೋಡಿ : ಹ್ಯಾಸ್ : ೪–೮೪ರ ಟಿಪ್ಪಣಿ.) ಅದು ಸರಿಯಲ್ಲ. 'ಮೋಹ'(೪–೩೨)ಕ್ಕೆ ಬದಲಾಗಿ 'ಮೂರ್ಛೆ' ಎಂಬ ಪದ ಬಳಸಿದೆ.

ಹೋಲಿಕೆಗೆ ೪–೮೨ರ ಟಿಪ್ಪಣಿ ನೋಡಿ.

---

೧ ಎಲ್ಲ ಮುದ್ರಿತ ಪ್ರತಿಗಳಲ್ಲೂ 'ಅತಿಹಸಿತಮ್' ಎಂದಿರುವುದನ್ನು ಇಲ್ಲಿ 'ಅತೀಹಸಿತಮ್' ಎಂದು ಬದಲಿಸಿಕೊಂಡಿದೆ. ಹ್ಯಾಸ್ ಅವರು ಹೀಗೆ ಬದಲಿಸಿದ್ದಾರೆ. ಛಂದಸ್ಸಿನ ತಪ್ಪನ್ನು ಸರಿಮಾಡಲು ಅವರು ಸಕಾರಣವಾಗಿ ಮಾಡಿಕೊಂಡಿರುವ ಬದಲಾವಣೆಯನ್ನು ಇಲ್ಲಿಯೂ ಅನುಸರಿಸಿದೆ. ನೋಡಿ : ಹ್ಯಾಸ್ : ೪–೮೩ರ ಟಿಪ್ಪಣಿ ಮತ್ತು ಪು. ೧೫೦ರ ಳನೆಯ ಪ್ಯಾರಾ.

# ಅದ್ಭುತರಸ

## ೮೫. ಅದ್ಭುತರಸಲಕ್ಷಣ :

ಅತಿಲೋಕೈಃ ಪದಾರ್ಥೈಃ ಸ್ಯಾದ್ವಿಸ್ಮಯಾತ್ಮಾ ರಸೋಽದ್ಭುತಃ ॥ ೭೮ ॥
ಕರ್ಮಾಸ್ಯ ಸಾಧುವಾದಾಶ್ರು[೧]ವೇಪಥುಗಸ್ವೇದಗದ್ಗದಾಃ ।
ಹರ್ಷಾವೇಗಧೃತಿಪ್ರಾಯಾ ಭವಂತಿ ವ್ಯಭಿಚಾರಿಣಃ ॥ ೭೯ ॥

ಅನು : ಅತಿಲೌಕಿಕ ವಸ್ತುಗಳಿಂದ [ಉಂಟಾಗುವ] 'ವಿಸ್ಮಯ'[ಸ್ಥಾಯಿಭಾವ]ವು ಮೂಲವಾಗಿರುವಂಥದು 'ಅದ್ಭುತರಸ'. ಸಾಧುವಾದ (ಒಳ್ಳೆಯದು, ಒಳ್ಳೆಯದು ಎಂಬಂಥ ವಿಸ್ಮಯಪೂರ್ಣ ಪ್ರಶಂಸೆ), ಕಣ್ಣೀರು, ನಡುಕ, ಗದ್ಗದ[ವಾಣಿ] ಇವುಗಳು ಅದರ ಅನುಭಾವ(ಕರ್ಮ)ಗಳು. [ಅಲ್ಲಿ] ಹರ್ಷ, ಆವೇಗ, ಧೃತಿ ಮೊದಲಾದ ವ್ಯಭಿಚಾರಿ [ಭಾವ]ಗಳು ತೋರುತ್ತವೆ.

ವ್ಯಾಖ್ಯೆ : ಲೌಕಿಕವನ್ನು ಮೀರಿದ ಪದಾರ್ಥಗಳ ವರ್ಣನೆ ಇತ್ಯಾದಿಗಳಿಂದ ವಿಭಾವಿತವಾಗುವ, ಸಾಧುವಾದ ಮುಂತಾದ ಅನುಭಾವಗಳಿಂದ ಪುಷ್ಟಿಗೊಳ್ಳುವ 'ವಿಸ್ಮಯ' ಸ್ಥಾಯಿಭಾವವು ಆವೇಗಾದಿ ವ್ಯಭಿಚಾರಿಗಳಿಂದ ಕೂಡಿ 'ಅದ್ಭುತರಸ'ವಾಗುತ್ತದೆ.

ಅದ್ಭುತರಸ'ಕ್ಕೆ ಉದಾಃ-[ಮಹಾ. : ೧-೫೪] :

'ದೋರ್ದಂಡಾಂಚಿತಚಂದ್ರಶೇಖರಧನುರ್ದಂಡಾವಭಂಗೋದ್ಧತ-
ಷ್ಟಂಕಾರಧ್ವನಿರಾರ್ಯಬಾಲಚರಿತಪ್ರಸ್ತಾವನಾಡಿಂಡಿಮಃ ।
ದ್ರಾಕ್ಪರ್ಯಸ್ತಕಪಾಲಸಂಪುಟಮಿಲದ್ಬ್ರಹ್ಮಾಂಡಭಾಂಡೋದರ-
ಭ್ರಾಮ್ಯತ್ಪಿಂಡಿತಚಂಡಿಮಾ ಕಥಮಸೌ ನಾದ್ಯಾಪಿ ವಿಶ್ರಾಮ್ಯತಿ ॥'

[ಈ (ರಾಮಚಂದ್ರನ) ಬಾಹುದಂಡಗಳಲ್ಲಿ ಶೋಭಿಸುತ್ತಿರುವ ಶಿವಧನುಸ್ಸಿನ ದಂಡ ಭಂಗಿತವಾಗಿರಲು ಉಂಟಾದ ಉದ್ಧಟ ಟಂಕಾರಧ್ವನಿ – ಆರ್ಯ ರಾಮಚಂದ್ರನ ಬಾಲ್ಯಚರಿತ್ರೆಗೆ ಪ್ರಸ್ತಾವನಾಡಿಂಡಿಮದಂತಿರುವ ಹಾಗೂ ಒಡನೆಯೇ ಕೂಡಿಸಿದ ಕಪಾಲಸಂಪುಟದಂಥ ಬ್ರಹ್ಮಾಂಡಭಾಂಡದ ಒಡಲಲ್ಲಿ ಸುತ್ತಿಸುತ್ತಿ ಮುದ್ದೆಯಾದ ಈ ಧ್ವನಿ – ಇನ್ನೂ ವಿಶ್ರಾಂತವಾಗಲಿಲ್ಲವೇಕೆ?]

ಟಿಪ್ಪಣಿ : 'ಹರ್ಷ'ಕ್ಕೆ ೪-೧೯, 'ಆವೇಗ'ಕ್ಕೆ ೪-೩೫, 'ಧೃತಿ'ಗೆ ೪-೧೪ ನೋಡಿ.

ನಾ.ಶಾ.(೬-೮೨)ದಲ್ಲಿ 'ಅದ್ಭುತ'ವು ದಿವ್ಯ ಮತ್ತು ಆನಂದಜ – ಹೀಗೆ ಎರಡು ವಿಧಗಳೆಂದು ಹೇಳಿದೆ.

ಹೋಲಿಕೆ = ನಾ.ಶಾ. : ೬-೭೪ರ ಅನಂತರದ ಗದ್ಯ, ೭೫, ೭೬; ಸಾ.ದ. : ೩-೨೪೨ರಿಂದ ೨೪೫; ಪ್ರತಾಪ : ೪-೫೩.

---

೧ ಪಾಠ : ಪಮುಖ

# ಭಯಾನಕರಸ

## ೮೬. ಭಯಾನಕರಸಲಕ್ಷಣ :

ವಿಕೃತಸ್ವರಸತ್ತ್ವಾದೇರ್ಭಯಭಾವೋ ಭಯಾನಕಃ ।
ಸರ್ವಾಂಗವೇಪಥುಸ್ವೇದಶೋಷ⁽¹⁾ವೈಚಿತ್ರ್ಯಲಕ್ಷಣಃ ।
ದೈನ್ಯಸಂಭ್ರಮಸಂಮೋಹತ್ರಾಸಾದಿಸ್ತತ್ಸಹೋದರಃ ॥ ೮೦ ॥

ಅನು : ವಿಕೃತವಾದ ಸ್ವರ, [ವಿಕೃತವಾದ ಅಥವಾ ಅಳಿದುಹೋದ] ಸತ್ತ್ವ (ಶಕ್ತಿ) ಇತ್ಯಾದಿಗಳಿಂದ [ವಿಭಾವಿತವಾಗುವ] 'ಭಯ' [ಸ್ಥಾಯಿ]ಭಾವವು [ಉತ್ಕರ್ಷಗೊಂಡು] 'ಭಯಾನಕ' [ರಸವಾಗುತ್ತದೆ]. ಸರ್ವಾಂಗಗಳ ಕಂಪನ, ಬೆವರು, ಶೋಷ (ತಾರುವುದು ಅಥವಾ ಒಣಗುವುದು), ಮನಸ್ಸು ಸ್ತಬ್ಧವಾಗುವುದು [ಇತ್ಯಾದಿ ಅನುಭಾವಗಳು ಅಲ್ಲಿನ] ಲಕ್ಷಣ. ದೈನ್ಯ, ಸಂಭ್ರಮ (ಆವೇಗ), ಸಂಮೋಹ (ಮೋಹ), ತ್ರಾಸ ಮೊದಲಾದವು ಅದರ ಜೊತೆಹುಟ್ಟು [ಎಂದರೆ, ವ್ಯಭಿಚಾರಿಗಳು].

ವ್ಯಾಖ್ಯೆ : ರೌದ್ರಶಬ್ದಗಳನ್ನು ಕೇಳುವುದರಿಂದ ಮತ್ತು ರೌದ್ರಸತ್ತ್ವವನ್ನು ನೋಡುವುದರಿಂದ ಉಂಟಾಗುವ 'ಭಯ' ಸ್ಥಾಯಿಭಾವವು 'ರೌದ್ರರಸ'ಕ್ಕೆ ಕಾರಣವಾಗುತ್ತದೆ. ಅಲ್ಲಿ ಸರ್ವಾಂಗಕಂಪನಾದಿಗಳು ಅನುಭಾವಗಳು; ದೈನ್ಯಾದಿಗಳು ವ್ಯಭಿಚಾರಿಗಳು.

'ಭಯಾನಕರಸ'ಕ್ಕೆ ಉದಾ:– [ಆಕರ ತಿಳಿಯದು] :

'ಶಸ್ತ್ರಮೇತತ್ಸಮುತ್ಸೃಜ್ಯ ಕುಬ್ಜೀಭೂಯ ಶನೈಃ ಶನೈಃ ।
ಯಥಾತಥಾಗತೇನೈವ ಯದಿ ಶಕ್ನೋಷಿ ಗಮ್ಯತಾಮ್ ॥'

[ಈ ಶಸ್ತ್ರವನ್ನು ಬಿಟ್ಟು ಮೆಯ್ಯನ್ನು ಮೆಲ್ಲಮೆಲ್ಲನೆ ಮುದುಗಿಸಿಕೊಂಡು ಹೇಗಾದರೂ ಹೋಗಲು ಸಾಧ್ಯವಾಗುವುದಾದರೆ ಹೋಗು.]

ಮತ್ತು – ಹಿಂದೆ ಉದಾಹೃತವಾದದ್ದು : [ರತ್ನಾ. : ೨–೩; ೨–೯ ೨ರಲ್ಲಿ ಉದ್ಧೃತವಾದದ್ದು; ಪೂರ್ಣಪಾಠಕ್ಕೆ ಅಲ್ಲೇ ನೋಡಿ] : 'ನಷ್ಟಂ ವರ್ಷವರೈಃ....' ಇತ್ಯಾದಿ.

ಮತ್ತು – [ಆಕರ ತಿಳಿಯದು] :

'ಸ್ವಗೇಹಾತ್ಪಂಥಾನಂ ತತ ಉಪಚಿತಂ ಕಾನನಮಥೋ
ಗಿರಿಂ ತಸ್ಮಾತ್ಸಾಂದ್ರದ್ರುಮಗಹನಮಸ್ಮಾದಪಿ ಗುಹಾಮ್ ।
ತದನ್ವಂಗಾನ್ಯಂಗೈರಭಿನಿವಿಶಮಾನೋ ನ ಗಣಯ -
ತ್ಯರಾತಿಃ ಕ್ವಾಲೀಯೇ ತವ ವಿಜಯಯಾತ್ರಾ ಚಕಿತಧೀಃ ॥'

[ ತನ್ನ ಮನೆಯಿಂದ ನಡುದಾರಿ, ಅದನ್ನು ಬಿಟ್ಟು ಕಾಡು, ಅನಂತರ ಗುಡ್ಡಗಾಡು, ಅಲ್ಲಿಂದ ದಟ್ಟವಾದ ಗಿಡಮರಗಳು, ಅಲ್ಲಿಂದ ಮತ್ತೆ ಗುಹೆ – ಹೀಗೆ ನಿನ್ನ ವಿಜಯಯಾತ್ರೆಯಿಂದ ಬುದ್ಧಿ ಚಕಿತವಾದ ಶತ್ರುವು ಎಡೆಯಿಂದ ಎಡೆಗೆ ಸುತ್ತುತ್ತ ತನ್ನ ಅಂಗಗಳಿಂದಲೇ ಅಂಗಗಳನ್ನು ಮುಚ್ಚಿಕೊಳ್ಳಲೆಳಸುತ್ತ, ಎಲ್ಲಿ ಅಡಗುವುದೆಂಬುದನ್ನು ಎಣಿಸಲಾರದವನಾಗಿದ್ದಾನೆ.]

---

೧ ಪಾಠ : ವೈವರ್ಣ್ಯ

ಟಿಪ್ಪಣಿ : 'ದೈನ್ಯ'ಕ್ಕೆ ೪–೧೭, 'ಆವೇಗ'(ಸಂಭ್ರಮ)ಕ್ಕೆ ೪–೩೫, ಮೋಹ(ಸಂಮೋಹ)ಕ್ಕೆ ೪–೩೨, 'ತ್ರಾಸ'ಕ್ಕೆ ೪–೨೦ ನೋಡಿ.

ನಾ.ಶಾ.(೬–೮೦)ವಲ್ಲಿ ಹೇಳಿರುವ 'ಭಯಾನಕ'ದ ಮೂರು ಭೇದಗಳು : ವ್ಯಾಜ(ಸುಳ್ಳುನೆಪ)ದಿಂದ ಉಂಟಾಗುವಂಥದು, ಅಪರಾಧದಿಂದ ಉಂಟಾಗುವಂಥದು, ತ್ರಾಸ ಉಂಟುಮಾಡುವಂಥದು.

ಹೋಲಿಕೆ = ನಾ.ಶಾ. : ೬–೬೮ರ ಮುಂದಿನ ಗದ್ಯ, ೬೯ರಿಂದ ೭೨; ಸಾ.ದ. : ೩–೨೩೫ರಿಂದ ೨೩೮; ಪ್ರತಾಪ : ೪–೫೩.

# ಕರುಣರಸ

## ೮೭. ಕರುಣರಸಲಕ್ಷಣ :

ಇಷ್ಟನಾಶಾದನಿಷ್ಟಾಪ್ತೌ[1] ಶೋಕಾತ್ಮಾ ಕರುಣೋಽನು ತಮ್ ।
ನಿಃಶ್ವಾಸೋಚ್ಛ್ವಾಸರುದಿತಸ್ತಂಭಪ್ರಲಪಿತಾದಯಃ ॥ ೮೧ ॥
ಸ್ವಾಪಾಪಸ್ಮಾರದೈನ್ಯಾಧಿಮರಣಾಲಸ್ಯಸಂಭ್ರಮಾಃ ।
ವಿಷಾದಜಡತೋನ್ಮಾದಚಿಂತಾದ್ಯಾ ವ್ಯಭಿಚಾರಿಣಃ ॥ ೮೨ ॥

ಅನು : ಇಷ್ಟನಾಶದಿಂದ, ಅನಿಷ್ಟಪ್ರಾಪ್ತಿಯಲ್ಲಿ [ಉಂಟಾಗುವ] 'ಶೋಕ' [ಸ್ಥಾಯಿಭಾವ]ವು ಮೂಲವಾಗಿರುವಂಥದು 'ಕರುಣ'[ರಸ]. [ಅದರಲ್ಲಿ] ನಿಃಶ್ವಾಸ, ಉಚ್ಛ್ವಾಸ, ಅಳು, ಸ್ತಂಭ, ಪ್ರಲಾಪಿಸುವುದು ಇತ್ಯಾದಿಗಳು [ಅನುಭಾವಗಳಾಗಿರುತ್ತವೆ]. [ಅಲ್ಲಿ] ಸ್ವಾಪ (ನಿದ್ರೆ ಅಥವಾ ಸುಪ್ತ), ಅಪಸ್ಮಾರ, ದೈನ್ಯ, ಆಧಿ (ಔಗ್ರ್ಯ), ಆಲಸ್ಯ, ಸಂಭ್ರಮ (ಆವೇಗ), ವಿಷಾದ, ಜಡತೆ, ಉನ್ಮಾದ, ಚಿಂತೆ ಇತ್ಯಾದಿ ವ್ಯಭಿಚಾರಿ[ಭಾವ]ಗಳು.

ವ್ಯಾಖ್ಯೆ : ಬಂಧುಗಳು ಮುಂತಾದ ಇಷ್ಟಜನರ ವಿನಾಶ ಅನಿಷ್ಟಪ್ರಾಪ್ತಿ ಎಂದರೆ, ಬಂಧನ ಇತ್ಯಾದಿ–ಇವುಗಳಿಂದ ಒದಗುವ 'ಶೋಕ' ಸ್ಥಾಯಿಭಾವದ ಹೆಚ್ಚಳದಿಂದ ಹುಟ್ಟಿದ್ದು 'ಕರುಣರಸ'. ಕಾರಿಕೆಯಲ್ಲಿ 'ತಮನು' (ಕರುಣೋನು ತಮ್) ಎಂದಿದೆಯಷ್ಟೆ. ಅದು ಕರುಣದ ಅನುಭಾವದ ಕಥನವನ್ನು ಸೂಚಿಸುತ್ತದೆ. ಅಲ್ಲಿ ನಿಃಶ್ವಾಸಾದಿ ಅನುಭಾವಗಳು; ಸ್ವಪಾಪಸ್ಮಾರಾದಿ ವ್ಯಭಿಚಾರಿಗಳು.

ಇಷ್ಟನಾಶದಿಂದ 'ಕರುಣ'ಕ್ಕೆ ಉದಾ:–[ಕು.ಸಂ. : ೪–೩] :

'ಅಯಿ ಜೀವಿತನಾಥ ಜೀವಸೀತ್ಯಭಿಧಾಯೋತ್ಥಿತಯಾ ತಯಾ ಪುರಃ ।
ದದೃಶೇ ಪುರುಷಾಕೃತಿ ಕ್ಷಿತೌ ಹರಕೋಪಾನಲಭಸ್ಮ ಕೇವಲಮ್ ॥'

['ಜೀವಿತೇಶ್ವರ, ಜೀವಿಸಿರುವೆಯಾ' – ಎಂದು ಆಕೆ ಕೂಗುತ್ತ ಏಳಲು ಎದುರು ನೆಲದಲ್ಲಿ ಕೇವಲ ಹರಕೋಪಾನಲಭಸ್ಮವಾದ ಪುರುಷಾಕೃತಿಯನ್ನು ಕಂಡಳು.] ಇತ್ಯಾದಿ ರತಿಪ್ರಲಾಪ.

ಮತ್ತು, ಅನಿಷ್ಟಪ್ರಾಪ್ತಿಯಿಂದುಂಟಾದ 'ಕರುಣ'ಕ್ಕೆ ಉದಾ:– ರತ್ನಾವಲಿಯಲ್ಲಿ ಸಾಗರಿಕೆಯ ಬಂಧನ ಇತ್ಯಾದಿ.

ಟಿಪ್ಪಣಿ : 'ನಿದ್ರೆ'ಗೆ ೪–೨೮, 'ಸುಪ್ತ'ಕ್ಕೆ ೪–೨೭, 'ಅಪಸ್ಮಾರ'ಕ್ಕೆ ೪–೩೧, 'ದೈನ್ಯ'ಕ್ಕೆ ೪–೧೭, 'ಔಗ್ರ್ಯ'ಕ್ಕೆ ೪–೧೮, 'ಮರಣ'ಕ್ಕೆ ೪–೨೫, 'ಆಲಸ್ಯ'ಕ್ಕೆ ೪–೩೪, 'ಆವೇಗ'ಕ್ಕೆ ೪–೩೫, 'ವಿಷಾದ'ಕ್ಕೆ ೪–೪೦, 'ಜಡತೆ'ಗೆ ೪–೧೫, 'ಉನ್ಮಾದ'ಕ್ಕೆ ೪–೩೯, 'ಚಿಂತೆ'ಗೆ ೪–೧೯ ನೋಡಿ.

---

[1] ಪಾಠ : ಅನಿಷ್ಟಾಪ್ತೇಃ ।

ನಾ.ಶಾ.(೬–೭೮)ದಲ್ಲಿ ಧರ್ಮೋಪಘಾತಜ, ಅಪಚಯೋದ್ಭವ, ಶೋಕಕೃತ ಎಂದು 'ಕರುಣ'ವನ್ನು ಮೂರು ವಿಧಗಳಾಗಿ ಹೇಳಿದೆ.

ಹೋಲಿಕೆ = ನಾ.ಶಾ. : ೬–೬೧ರ ಮುಂದಿನ ಗದ್ಯ, ೬೨, ೬೩; ಸಾ.ದ. : ೩–೨೨೨ರಿಂದ ೨೨೫; ಪ್ರತಾಪ : ೪–೫೩.

# ರಸಾಂತರವಿಚಾರ

## ೮೮. ರಸಾಂತರನಿಷೇಧ :

ಪ್ರೀತಿಭಕ್ತ್ಯಾದಯೋ ಭಾವಾ ಮೃಗಯಾಕ್ಷಾದಯೋ ರಸಾಃ ।
ಹರ್ಷೋತ್ಸಾಹಾದಿಷು ಸ್ಪಷ್ಟಮಂತರ್ಭಾವಾನ್ನ ಕೀರ್ತಿತಾಃ ॥ ೮೩ ॥

ಅನು : 'ಪ್ರೀತಿ', 'ಭಕ್ತಿ' ಮೊದಲಾದ [ಸ್ಥಾಯಿ]ಭಾವಗಳೂ, 'ಮೃಗಯಾ' (ಬೇಟೆ) 'ಅಕ್ಷ' (ಜೂಜು) ಮೊದಲಾದ ರಸಗಳೂ 'ಹರ್ಷ' 'ಉತ್ಸಾಹ' ಮೊದಲಾದವುಗಳಲ್ಲಿ ಸ್ಪಷ್ಟವಾಗಿ ಒಳಗಾಗುತ್ತವಾದ ಕಾರಣ [ಅವುಗಳನ್ನು ಈ ಗ್ರಂಥದಲ್ಲಿ] ಹೇಳಿಲ್ಲ.

# ಅನುಕ್ತವಿಷಯಗಳು

## ೮೯. ಅನುಕ್ತಗಳು :

ಷಟ್‌ತ್ರಿಂಶದ್ಭೂಷಣಾದೀನಿ ಸಾಮಾದೀನ್ಯೇಕವಿಂಶತಿಃ ।
[1]ಲಕ್ಷ್ಯಸಂಧ್ಯಂತರಾಖ್ಯಾನಿ[1] ಸಾಲಂಕಾರೇಷು ತೇಷು ಚ ॥ ೮೪ ॥

ಅನು : ಮತ್ತು, ಮೂವತ್ತಾರು 'ಭೂಷಣ' ಮುಂತಾದುವುಗಳೂ, ಇಪ್ಪತ್ತೊಂದು 'ಸಾಮ'ವೇ ಮುಂತಾದ ಸಂಧ್ಯಂತರ ಇತ್ಯಾದಿಗಳ ಲಕ್ಷಣ ಮತ್ತು ಹೆಸರುಗಳೂ ಅಲಂಕಾರಸಹಿತವಾದ ಅವುಗಳಲ್ಲಿ [ಎಂದರೆ, ಹರ್ಷೋತ್ಸಾಹಾದಿಗಳಲ್ಲಿ ಅಂತರ್ಭಾವ ವಾಗುವ ಕಾರಣ ಅವುಗಳನ್ನು ಈ ಗ್ರಂಥದಲ್ಲಿ ಹೇಳಿಲ್ಲ].

ವ್ಯಾಖ್ಯೆ : ಮೂವತ್ತಾರು ಕಾವ್ಯಲಕ್ಷಣಗಳಿಗೆ 'ಭೂಷಣ'ಗಳೆಂದು ಹೆಸರು. 'ವಿಭೂಷಣಂ ಚಾಕ್ಷರಸಂಹತಿಶ್ಚ ಶೋಭಾಭಿಮಾನೌ ಗುಣಕೀರ್ತನಂ ಚ....' (ನಾ.ಶಾ. : ೧೭–೪೨ರ ಅನಂತರ, ಪ್ರಕ್ಷಿಪ್ತವಿರಬಹುದೆಂದು ಅಡಿ ಟಿಪ್ಪಣಿಯಲ್ಲಿ ಕೊಟ್ಟಿರುವ ಶ್ಲೋಕ.) [ಅರ್ಥ : 'ವಿಭೂಷಣ, ಅಕ್ಷರಸಂಹತಿ, ಶೋಭಾ, ಅಭಿಮಾನ, ಗುಣ ಕೀರ್ತನ..... ' ಇತ್ಯಾದಿಗಳು ಕಾವ್ಯದಲ್ಲಿ ಪ್ರಯೋಗವಾಗಬೇಕು.] 'ಸಾಮ ಭೇದಃ ಪ್ರಧಾನಂ ಚ.....' (ನಾ.ಶಾ : ೨೧–೮೯) ಇತ್ಯಾದಿ ಹೇಳಿಕೆಯಂತೆ 'ಸಾಮ'ವೇ ಮೊದಲಾದ ಇಪ್ಪತ್ತೊಂದು ಸಂಧ್ಯಂತರಗಳು : ಇವೆಲ್ಲವುಗಳೂ ಉಪಮಾದಿ ಅಲಂಕಾರಗಳಿಂದ ಕೂಡಿದ ಹರ್ಷೋತ್ಸಾಗಳಲ್ಲ ಅಂತರ್ಭಾವವಾಗುವ ಕಾರಣ ಅವುಗಳನ್ನೂ ಇಲ್ಲಿ ಬೇರೆಯಾಗಿ ಹೇಳಿಲ್ಲ.

ಟಿಪ್ಪಣಿ : ಅರ್ಥಪೂರ್ಣತೆಗಾಗಿ ಹಿಂದಿನ ಕಾರಿಕೆಯನ್ನೂ ಇವರ ಸಂಗಡ ಸೇರಿಸಿಕೊಳ್ಳಬೇಕು. ಹಾಗೆ ಸೇರಿಸಿಕೊಂಡ ಭಾಗವನ್ನು ಅನುವಾದದಲ್ಲಿ ಚೌಕ ಆವರಣಗಳಲ್ಲಿ ಕೊಟ್ಟಿದೆ.

---

೧ ಪಾಠ : ಲಕ್ಷಸಂಧ್ಯಂತರಾಂಗಾನಿ

ಮೂವತ್ತಾರು 'ಕಾವ್ಯಲಕ್ಷಣ'ಗಳಿಗೆ ನಾ.ಶಾ. : ೧೭-೧ರಿಂದ ೫ ಅಥವಾ ೪೨ರ ಅನಂತರ ಅಡಿಟಿಪ್ಪಣಿಯಲ್ಲಿ ಕೊಟ್ಟಿರುವ ಕಾರಿಕೆಗಳು ನೋಡಿ. ಇವುಗಳ ಲಕ್ಷಣಕ್ಕೆ ನಾ.ಶಾ. : ೧೭-೬ರಿಂದ ೪೧ ಅಥವಾ ಮೇಲೆ ಹೇಳಿದ ಅಡಿಟಿಪ್ಪಣಿಯ ಕಾರಿಕೆಗಳು ನೋಡಿ.

ಇಪ್ಪತ್ತೊಂದು 'ಸಂಧ್ಯಂತರ'ಗಳಿಗೆ ನಾ.ಶಾ. : ೨೧-೪೮ರಿಂದ ೫೧ ನೋಡಿ.

ಉಪಮಾದಿ 'ಅಲಂಕಾರ'ಗಳಿಗೆ ನಾ.ಶಾ. : ೧೭-೪೩ರಿಂದ ೮೬ ನೋಡಿ.

# ನಾಲ್ಕನೆಯ ಪ್ರಕಾಶದ ಉಪಸಂಹಾರ

## ೯೦. ರಸವಿಚಾರದ ಉಪಸಂಹಾರ :

**ರಮ್ಯಂ ಜುಗುಪ್ಸಿತಮುದಾರಮಥಾಪಿ ನೀಚ –**
**ಮುಗ್ರಂ ಪ್ರಸಾದಿ ಗಹನಂ ವಿಕೃತಂ ಚ ವಸ್ತು ।**
**ಯದ್ವಾಪ್ಯವಸ್ತು ಕವಿಭಾವಕಭಾವ್ಯಮಾನಂ**
**ತನ್ನಾಸ್ತಿ ಯನ್ನ ರಸಭಾವಮುಪೈತಿ ಲೋಕೇ ॥ ೮೫ ॥**

ಅನು : [ನಾಟ್ಯದಲ್ಲಿನ ಅಥವಾ ಕಾವ್ಯದಲ್ಲಿನ] ವಸ್ತು ರಮ್ಯವಾಗಿರಲಿ ಜುಗುಪ್ಸೆಯಿಂದ ಕೂಡಿದ್ದಾಗಿರಲಿ, ಉದಾರವಿರಲಿ ಇಲ್ಲವೆ ನೀಚವಿರಲಿ, ಉಗ್ರವಿರಲಿ, ಪ್ರಸನ್ನವಾದುದಿರಲಿ, ಗಹನವಿರಲಿ ಅಥವಾ ವಿಕೃತವಾದುದಿರಲಿ – [ವಸ್ತು ಹೇಗಿದ್ದರೂ] ಕವಿ [ಮತ್ತು] ಸಹೃದಯನಿಂದ ಭಾವ್ಯವಾಗಿ ರಸಭಾವಗಳನ್ನು ಹೊಂದದ ವಸ್ತುವೇ ಲೋಕದಲ್ಲಿಲ್ಲ.

ಟಿಪ್ಪಣಿ : ಛಂದಸ್ಸು : ವಸಂತತಿಲಕ

# ಗ್ರಂಥದ ಉಪಸಂಹಾರ

## ೯೧. ಗ್ರಂಥಕಾರನ ವಿಷಯ :

**ವಿಷ್ಣೋಃ ಸುತೇನಾಪಿ ಧನಂಜಯೇನ**
**ವಿದ್ವನ್ಮನೋರಾಗನಿಬಂಧಹೇತುಃ ।**
**ಆವಿಷ್ಕೃತಂ ಮುಂಜಮಹೀಶಗೋಷ್ಠೀ –**
**ವೈದಗ್ಧ್ಯಭಾಜಾ ದಶರೂಪಮೇತತ್ ॥ ೮೬ ॥**

ಅನು : ಮುಂಜರಾಜನ [ವಿದ್ವದ್] ಗೋಷ್ಠಿಯಲ್ಲಿ ಪಾಂಡಿತ್ಯವನ್ನು ಪಾಲುಗೊಂಡ [ಹಾಗೂ]ವಿಷ್ಣುವಿನ ಪುತ್ರನಾದ ಧನಂಜಯನಿಂದ, ವಿದ್ವಾಂಸರ ಮನಸ್ಸಿಗೆ ಸಂತೋಷವನ್ನುಂಟುಮಾಡುವಂಥ ಈ 'ದಶರೂಪ'ವು ಆವಿಷ್ಕೃತವಾಯಿತು.

ವ್ಯಾಖ್ಯೆ : ಇಲ್ಲಿಗೆ ಶ್ರೀ ವಿಷ್ಣುವಿನ ಮಗನಾದ ಧನಿಕನಿಂದ ರಚಿತವಾದ 'ದಶರೂಪಾವಲೋಕ'ದಲ್ಲಿ 'ರಸವಿಚಾರ'ವೆಂಬ ನಾಲ್ಕನೆಯ ಪ್ರಕಾಶವು ಸಮಾಪ್ತವಾಯಿತು.

ಟಿಪ್ಪಣಿ : ಛಂದಸ್ಸು : ಇಂದ್ರವಜ್ರ

**– ಈ ಗ್ರಂಥ ಮುಗಿಯಿತು –**

ಅನುಬಂಧ : ೧

(೩-೫೪ರ ಟಿಪ್ಪಣಿಗೆ ಸಂಬಂಧಿಸಿ)

# ಲಾಸ್ಯಾಂಗಗಳ ಲಕ್ಷಣ

ಲಾಸ್ಯಾಂಗಗಳನ್ನು ಈ ಗ್ರಂಥವಲ್ಲಿ ಹೆಸರಿಸಿದೆಯಲ್ಲದೆ ಅವುಗಳೊಂದೊಂದರ ಲಕ್ಷಣವನ್ನು ಇಲ್ಲಿ ಹೇಳಿಲ್ಲ. ನಾ.ಶಾ. (೨೦-೧೪೦ರಿಂದ ಮುಂದೆ) ಮತ್ತು ಸಾ.ದ.(೬-೨೧೪ರಿಂದ ಮುಂದೆ)ಗಳಲ್ಲಿ ಲಾಸ್ಯಾಂಗಗಳ ಲಕ್ಷಣ ಬಂದಿದೆ. ನಾ.ಶಾ.ದಲ್ಲಿ ಲಾಸ್ಯಾಂಗಗಳು ಹನ್ನೆರಡು ಎಂದು ಹೇಳಿದೆ : ಇಲ್ಲಿ ಹೇಳಿರುವ ಹತ್ತು ಮತ್ತು 'ವಿಚಿತ್ರಪದ' 'ಭಾವಿತ'ಗಳೆಂಬ ಮತ್ತೆರಡು. ಇಲ್ಲಿನ ಹೆಸರುಗಳಿಗೂ ಅಲ್ಲಿನ ಹೆಸರುಗಳಿಗೂ ಅಲ್ಲಲ್ಲಿ ಸ್ವಲ್ಪ ಭೇದ ಉಂಟು. ಉದಾ:- ಇಲ್ಲಿನ 'ಪುಷ್ಪಗಂಡಿಕಾ' ಅಲ್ಲಿ 'ಪುಷ್ಪಗಂಧಿಕಾ' ಆಗಿದೆ; 'ತ್ರಿಗೂಢ' 'ದ್ವಿಗೂಢ'ಗಳು 'ತ್ರಿಮೂಢ' 'ದ್ವಿಮೂಢ'ಗಳಾಗಿವೆ. ಸಾ.ದ.ವಲ್ಲಿ ದ.ರೂ.ದಲ್ಲಿನ ಹೆಸರುಗಳೇ ಕ್ರಮವಾಗಿ ಬಂದಿವೆ. ನಾ.ಶಾ.ದಲ್ಲಿನ ಲಕ್ಷಣಗಳಿಗೂ ಸಾ.ದ.ದಲ್ಲಿನವಕ್ಕೂ ಸೂಕ್ಷ್ಮ ಭೇದಗಳಿವೆ.

ಸಾ.ದ.ದಲ್ಲಿನ ಲಾಸ್ಯಾಂಗಲಕ್ಷಣಗಳನ್ನೆ ಇಲ್ಲಿ ಕೊಟ್ಟಿದೆ :

## ೧. ಗೇಯಪದ :

**ತಂತ್ರೀಭಾಂಡಂ ಪುರಸ್ಕೃತ್ಯೋಪವಿಷ್ಟಸ್ಯಾಸನೇ ಪುರಃ ॥ ೨೧೪ ॥**
**ಶುಷ್ಕಗಾನಂ ಗೇಯಪದಂ.......**

[ತಂತ್ರೀಭಾಂಡ(ವೀಣೆ)ವನ್ನು ಎದುರಿಗಿಟ್ಟುಕೊಂಡು ಪೀಠದ ಎದುರಿನಲ್ಲಿ ನಿಂತು ಹಾಡುವ ಶುಷ್ಕಗಾನ (ಪಾಠಾಂತರ : ಶುದ್ಧಗಾನ) 'ಗೇಯಪದ'.]

## ೨. ಸ್ಥಿತಪಾಠ್ಯ :

**.......ಸ್ಥಿತಪಾಠ್ಯಂ ತದುಚ್ಯತೇ ।**
**ಮದನೋತ್ತಾಪಿತಾ ಯತ್ರ ಪಠತಿ ಪ್ರಾಕೃತಂ ಸ್ಥಿತಾ ॥ ೨೧೫ ॥**

[ಕಾಮದಿಂದ ತಪ್ತಳಾದ ಹೆಣ್ಣು ಪ್ರಾಕೃತಭಾಷೆಯಲ್ಲಿ ನಿಂತು ಪಠಿಸುವುದು 'ಸ್ಥಿತಪಾಠ್ಯ'.]

## ೩. ಆಸೀನ(ಪಾಠ್ಯ) :

**ನಿಖಿಲಾತೋದ್ಯರಹಿತಂ ಶೋಕಚಿಂತಾನ್ವಿತಾಬಲಾ ।**
**ಅಪ್ರಸಾಧಿತಗಾತ್ರಂ ಯದಾಸೀನಾಸೀನಮೇವ ತತ್ ॥ ೨೧೬ ॥**

[ಶೋಕಚಿಂತೆಗಳಿಂದ ಕೂಡಿದ ಮತ್ತು ಅನಲಂಕೃತದೇಹವುಳ್ಳ ಹೆಣ್ಣು ಯಾವೊಂದು ವಾದ್ಯವಿಲ್ಲದೆ ಕುಳಿತು ಹಾಡುವುದು 'ಆಸೀನಪಾಠ್ಯ'.]

೪. ಪುಷ್ಪಗಂಡಿಕಾ :

ಆತೋದ್ಯಮಿಶ್ರಿತಂ ಗೇಯಂ ಛಂದಾಂಸಿ ವಿವಿಧಾನಿ ಚ ।
ಸ್ತ್ರೀಪುಂಸಯೋರ್ವಿಪರ್ಯಾಸಚೇಷ್ಟಿತಂ ಪುಷ್ಪಗಂಡಿಕಾ ॥ ೨೧೭ ॥

[ಹೆಣ್ಣು ಗಂಡಿನಂತೆ ಗಂಡು ಹೆಣ್ಣಿನಂತೆ ಚೇಷ್ಟೆಯನ್ನಭಿನಯಿಸುತ್ತ ವಾದ್ಯಸಮೇತವಾಗಿ ವಿವಿಧ ಛಂದಸ್ಸುಗಳಲ್ಲಿ ಹಾಡುವ ಹಾಡು 'ಪುಷ್ಪಗಂಡಿಕಾ'.]

೫. ಪ್ರಚ್ಛೇದಕ :

ಅನ್ಯಾಸಕ್ತಂ ಪತಿಂ ಮತ್ವಾ ಪ್ರೇಮವಿಚ್ಛೇದಮನ್ಯುನಾ ।
ವೀಣಾಪುರಃಸರಂ ಗಾನಂ ಸ್ತ್ರಿಯಾಃ ಪ್ರಚ್ಛೇದಕೋ ಮತಃ ॥ ೨೧೮ ॥

[ಪತಿ ಅನ್ಯಳಲ್ಲಿ ಆಸಕ್ತನಾದುದನ್ನು ತಿಳಿದ ಹೆಣ್ಣು ಪ್ರೇಮವನ್ನು ಭಂಗಗೊಳಿಸುವ ಕೋಪದಿಂದ ವೀಣೆಯನ್ನು ಎದುರಿಟ್ಟುಕೊಂಡು ಹಾಡುವುದು 'ಪ್ರಚ್ಛೇದಕ'.]

೬. ತ್ರಿಗೂಢಕ :

ಸ್ತ್ರೀವೇಷಧಾರಿಣಾಂ ಪುಂಸಾಂ ನಾಟ್ಯಂ ಶ್ಲಕ್ಷ್ಣಂ ತ್ರಿಗೂಢಕಮ್ ।

[ಸ್ತ್ರೀವೇಷವನ್ನು ಧರಿಸಿದ ಪುರುಷನ ಮಧುರವಾದ ನಾಟ್ಯ 'ತ್ರಿಗೂಢಕ'.]

೭. ಸೈಂಧವ :

ಕಶ್ಚನ ಭ್ರಷ್ಟಸಂಕೇತಃ ಸುವ್ಯಕ್ತಕರಣಾನ್ವಿತಃ ॥ ೨೧೯ ॥
ಪ್ರಾಕೃತಂ ವಚನಂ ವಕ್ತಿ ಯತ್ರ ತತ್ಸೈಂಧವಂ ಮತಮ್ ।

[ಸಂಕೇತಸ್ಥಲದಲ್ಲಿ ನಾಯಿಕೆಯನ್ನು ಕಾಣದೆ ಭ್ರಷ್ಟನಾದ ಯಾವನೊಬ್ಬ ಪುರುಷನು ಸುಸ್ಪಷ್ಟಕರಣ(ಗೀತಪ್ರಕಾರ)ದಿಂದ ಕೂಡಿ ಪ್ರಾಕೃತಭಾಷೆಯ ವಚನವನ್ನು ಹೇಳುವುದು 'ಸೈಂಧವ'.]

೮. ದ್ವಿಗೂಢಕ :

ಚತುರಸ್ರಪದಂ ಗೀತಂ ಮುಖಪ್ರತಿಮುಖಾನ್ವಿತಮ್ ॥ ೨೨೦ ॥
ದ್ವಿಗೂಢಂ......

[ಮುಖಪ್ರತಿಮುಖಸಂಧಿಗಳಿಗೆ ಹೊಂದಿದ ಚತುರಸ್ರಪದ(ಪೂರ್ಣಸಪ್ತಸ್ವರ)ದ ಗೀತ 'ದ್ವಿಗೂಢ'.]

೯. ಉತ್ತಮೋತ್ತಮಕ :

.........ರಸಭಾವಾಢ್ಯಂ ಉತ್ತಮೋತ್ತಮಕಂ..... ।

[ರಸಭಾವಗಳಿಂದ ಪರಿಪುಷ್ಟವಾದದ್ದು 'ಉತ್ತಮೋತ್ತಮಕ'.]

## ೧೦. ಉಕ್ತಪ್ರತ್ಯುಕ್ತ :

.....ಪುನಃ ।

ಕೋಪಪ್ರಸಾದಜಮಧಿಕ್ಷೇಪಯುಕ್ತಂ ರಸೋತ್ತರಮ್ ॥ ೨೨೧ ॥
ಹಾವಹೇಲಾನ್ವಿತಂ ಚಿತ್ರಶ್ಲೋಕಬಂಧಮನೋಹರಮ್ ।
ಉಕ್ತಿಪ್ರತ್ಯುಕ್ತಿಸಂಯುಕ್ತಂ ಸೋಪಾಲಂಭಮಲೀಕವತ್ ॥ ೨೨೨ ॥
ವಿಲಾಸಾನ್ವಿತಗೀತಾರ್ಥಮುಕ್ತಪ್ರತ್ಯುಕ್ತಮುಚ್ಯತೇ ।

[ಕೋಪದಿಂದ ಪ್ರಸನ್ನತೆಯಿಂದ ಹುಟ್ಟಿದ, ಅವಮಾನದಿಂದ ಕೂಡಿದ, ರಸಪೂರ್ಣವಾದ, ಹಾವಹೇಲಾಗಳಿಂದ ಯುಕ್ತವಾದ, ಮನೋಹರವೂ ವಿಚಿತ್ರವೂ ಆದ ಶ್ಲೋಕ ಬಂಧಗಳಿರುವ, ಉಕ್ತಿಪ್ರತ್ಯುಕ್ತಿಗಳಿರುವ, ಅಸತ್ಯವೆಂಬಂತೆ ಭರ್ತ್ಸನೆಗಳಿಂದ ಕೂಡಿದ, ವಿಲಾಸಸಮೇತವಾದ ಗೀತಾರ್ಥವು 'ಉಕ್ತಪ್ರತ್ಯುಕ್ತ'. ]

## ಅನುಬಂಧ : ೨

(೪–೧ ಮತ್ತು ೪–೪೩ರಿಂದ ೫೫ ಇ.,ಗಳಿಗೆ ಸಂಬಂಧಿಸಿ)

# ರಸನಿಷ್ಪತ್ತಿಯನ್ನು ಕುರಿತ ವಿವಿಧ ಸಿದ್ಧಾಂತಗಳು

'ವಿಭಾವಾನುಭಾವವ್ಯಭಿಚಾರಿಸಂಯೋಗಾದ್ರಸನಿಷ್ಪತ್ತಿಃ।' [ವಿಭಾವ ಅನುಭಾವ ವ್ಯಭಿಚಾರಿಭಾವಗಳ ಸಂಯೋಗದಿಂದ ರಸನಿಷ್ಪತ್ತಿಯಾಗುತ್ತದೆ.] – ಎಂಬುದು ಭರತಮುನಿಯ ರಸಸೂತ್ರ. (ನಾ.ಶಾ. : ೬–೩೧ರ ಅನಂತರದ ಗದ್ಯ.) ಅಲ್ಲಿಯೇ ರಸವನ್ನು ಕುರಿತು ಬೇರೆ ಹಲವು ಮಾತುಗಳಿದ್ದರೂ ಅವುಗಳಿಂದ ಈ ಸೂತ್ರದ ಅರ್ಥ ಇದೇ ಎಂದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ನಾಟ್ಯಶಾಸ್ತ್ರಕ್ಕೆ ಹಿಂದಿನಿಂದ ಅನೇಕರು ವ್ಯಾಖ್ಯೆ ರಚಿಸಿರುವುದಾಗಿ ತಿಳಿಯುತ್ತದೆ. ಅವರೆಲ್ಲ ಈ ಸೂತ್ರಕ್ಕೆ ತಮ್ಮ ತಮ್ಮ ದೃಷ್ಟಿಯಿಂದ ಅರ್ಥ ಹೇಳಿರಬೇಕು. ಆದರೆ ಅವೆಲ್ಲ ಈಗ ದೊರೆಯದಾಗಿವೆ. ನಾ.ಶಾ.ವನ್ನು ಕುರಿತು ಈಗ ದೊರೆತಿರುವ ಪ್ರಸಿದ್ಧ ವ್ಯಾಖ್ಯೆ (ಅದೂ ಪೂರ್ಣ ಪ್ರಕಟವಾಗಿಲ್ಲ.) ಅಭಿನವಗುಪ್ತನದು. ಮೇಲಿನ ಸೂತ್ರಕ್ಕೆ ವ್ಯಾಖ್ಯೆ ಬರೆವಲ್ಲಿ ಈತ ತನಗಿಂತ ಹಿಂದಿನವರು ಈ ಸೂತ್ರದಿಂದ ಯಾವ ಯಾವ ಅರ್ಥ ಹೊರಡಿಸಿದ್ದಾರೆಂಬುದನ್ನು ಸಂಗ್ರಹಿಸಿ ಹೇಳಿದ್ದಾನೆ; ತಾನೇ ಬೇರೆಯಾಗಿ ಅರ್ಥಯಿಸಿಕೊಟ್ಟಿದ್ದಾನೆ. ಇವೆಲ್ಲವೂ ರಸನಿಷ್ಪತ್ತಿಯನ್ನು ಕುರಿತ ಬೇರೆ ಬೇರೆ ಸಿದ್ಧಾಂತಗಳೇ ಆಗಿವೆ. 'ಕಾವ್ಯಪ್ರಕಾಶ' ಕಾರನಾದ ಮಮ್ಮಟ ತನ್ನ ಗ್ರಂಥದ ನಾಲ್ಕನೆಯ ಉಲ್ಲಾಸದಲ್ಲಿ ಪುನಃ, ಅಭಿನವಗುಪ್ತ ಹಾಗೂ ಆತನ ಹಿಂದಿನವರ ಸಿದ್ಧಾಂತಗಳನ್ನು ಸಂಗ್ರಹಿಸಿ ಕೊಟ್ಟಿದ್ದಾನೆ. ಮಮ್ಮಟನ ಕಾಲ ಕ್ರಿ.ಶ. ೧೦೫೦–೧೧೦೦.

ಮುಖ್ಯವಾಗಿ, ಅಭಿನವಗುಪ್ತನ ಆಧಾರದಿಂದ ನಮಗೆ ದೊರೆಯುವ ಪ್ರಮುಖವಾದ ರಸಸಿದ್ಧಾಂತಗಳು ನಾಲ್ಕು :

೧. ಸುಮಾರು ಕ್ರಿ.ಶ. ೮೦೦–೮೪೦ರಲ್ಲಿದ್ದ ಭಟ್ಟಲೊಲ್ಲಟನದು. (ಈ ವಾದದ ಪುರಸ್ಕರ್ತರು ಹಲವರಿದ್ದು ಅದನ್ನು ಪ್ರಮುಖವಾಗಿ ಪ್ರಕಟಿಸಿದವನು ಲೊಲ್ಲಟ.)

೨. ಸು. ಕ್ರಿ.ಶ. ೮೪೦ರಲ್ಲಿದ್ದಿರಬಹುದೆಂದು ಊಹಿಸಿರುವ ಶಂಕುಕನದು.

೩. ಸು. ಕ್ರಿ.ಶ. ೯೦೦–೯೨೫ರಲ್ಲಿದ್ದ ಭಟ್ಟನಾಯಕನದು.

೪. ಕ್ರಿ.ಶ. ೯೮೦–೧೦೨೦ರಲ್ಲಿದ್ದ ಅಭಿನವಗುಪ್ತನದು.

ಮೇಲಿನ ನಾಲ್ವರೂ ಕಾಶ್ಮೀರದೇಶದವರೆಂದು ಹೇಳುತ್ತಾರೆ. ಇವರಲ್ಲಿ ಲೊಲ್ಲಟಾದಿ ಮೊದಲ ಮೂವರು 'ದಶರೂಪಕ' ಹಾಗೂ ಧನಿಕನ 'ದಶರೂಪಾವಲೋಕವ್ಯಾಖ್ಯೆ' ರಚಿತವಾಗುವುದಕ್ಕೆ ಮೊದಲು ಇದ್ದವರಿರಬೇಕು. ಮತ್ತು ಅಭಿನವಗುಪ್ತನ ನಾಟ್ಯಶಾಸ್ತ್ರ ವ್ಯಾಖ್ಯೆ (ಅಭಿನವಭಾರತೀ)ಮಾತ್ರ ಅನಂತರ ರಚಿತವಾಯಿತು.

ಜೊತೆಯಲ್ಲಿ, ಶಂಕುಕನ ವಾದವನ್ನು ತನ್ನ ಗುರುವಾದ ಭಟ್ಟತೌತನು ಖಂಡಿಸಿದ್ದ ನೆಂದೂ ಅಭಿನವಗುಪ್ತ ಹೇಳಿದ್ದಾನೆ. ಆದರೆ ಭಟ್ಟತೌತನ ವಾದ ಏನೆಂಬುದನ್ನು ಈತ ತಿಳಿಸಿಲ್ಲ.

ಮೇಲೆ ಹೇಳಿದ ನಾಲ್ವರ ಸಿದ್ಧಾಂತಗಳನ್ನು ಇಲ್ಲಿ ಕ್ರಮವಾಗಿ ಸಂಗ್ರಹಿಸಿಕೊಟ್ಟಿದೆ :

## ೧. ಭಟ್ಟಲೊಲ್ಲಟನ ಉತ್ಪತ್ತಿವಾದ :

ಭರತಮುನಿಯ ರಸಸೂತ್ರವನ್ನು ವ್ಯಾಖ್ಯಾನಿಸಿ ಭಟ್ಟಲೊಲ್ಲಟ ಮೊದಲಾದವರು ಮಂಡಿಸಿದ ವಾದಕ್ಕೆ 'ಉತ್ಪತ್ತಿವಾದ' ಎಂದು ಹೇಳುತ್ತಾರೆ. ಈ ಮತದಂತೆ – ಭರತನ ಸೂತ್ರದಲ್ಲಿ 'ಸ್ಥಾಯಿಭಾವಕ್ಕೆ' ಎಂಬ ಪದವನ್ನು ಅಧ್ಯಾಹೃತವೆಂದು ಇಟ್ಟುಕೊಳ್ಳತಕ್ಕದ್ದು. ಅಂತೆಯೇ, ಸ್ಥಾಯಿಭಾವಕ್ಕೆ ವಿಭಾವಾನುಭಾವ ವ್ಯಭಿಚಾರಿಭಾವಗಳ ಸಂಯೋಗವಾಗು ವುದರಿಂದ ರಸನಿಷ್ಪತ್ತಿಯುಂಟಾಗುತ್ತದೆ – ಎಂಬುದು ಪೂರ್ಣಸೂತ್ರ. ರತ್ಯಾದಿ ಸ್ಥಾಯಿ ಭಾವವು ಲಲನಾದಿ ಆಲಂಬನ ಹಾಗೂ ಉದ್ಯಾನಾದಿ ಉದ್ದೀಪನ ವಿಭಾವಗಳಿಂದ, ಕಟಾಕ್ಷಾದಿ ಅನುಭಾವಗಳಿಂದ ಮತ್ತು ನಿರ್ವೇದಾದಿ ವ್ಯಭಿಚಾರಿಭಾವಗಳಿಂದ ಪ್ರಕರ್ಷ (ಹೆಚ್ಚಳ)ಗೊಂಡು ಶೃಂಗಾರಾದಿ ರಸವಾಗುತ್ತದೆ. ಎಂದರೆ – ವಿಭಾವಾದಿಗಳಿಂದ ರಸ ಉತ್ಪನ್ನವಾಗುತ್ತದೆ. ಅಂತೆಯೇ ರಸಕ್ಕೂ ವಿಭಾವಾದಿಗಳಿಗೂ ಇರುವ ಸಂಬಂಧ 'ಉತ್ಪಾದ್ಯೋತ್ಪಾದಕ ಸಂಬಂಧ'. ರಸವು ಮೂಲತಃ ರಾಮಾದಿ ಅನುಕಾರ್ಯನಲ್ಲಿರುತ್ತದೆ ಮತ್ತು ರಾಮಾದಿಗಳಂತೆಯೇ ಪಾತ್ರ ಧರಿಸಿ ನಟಿಸುವ ಅನುಕರ್ತ(ನಟ)ನಲ್ಲಿಯೂ ಕಾಣ ಬರುತ್ತದೆ.

## ೨. ಶಂಕುಕನ ಅನುಮಿತಿವಾದ :

ಮೀಮಾಂಸಕನಾದ ಭಟ್ಟಲೊಲ್ಲಟನ ಉತ್ಪತ್ತಿವಾದವನ್ನು ಖಂಡಿಸಿ ನೈಯ್ಯಾಯಿಕನಾದ ಶಂಕುಕ ಬೇರೊಂದು ವಾದವನ್ನು ಮಂಡಿಸಿದ. ಅದಕ್ಕೆ 'ಅನುಮಿತಿವಾದ' ಎನ್ನುತ್ತಾರೆ. ಈತ ಮೊದಲು, ನಾಟ್ಯಾದಿಗಳಲ್ಲುಂಟಾಗುವ ಜ್ಞಾನದ ರೀತಿಯನ್ನು ಪರಿಶೀಲಿಸುತ್ತಾನೆ. ರಾಮಾದಿಗಳನ್ನು ಅನುಕರಿಸುವ ನಟನನ್ನು ನೋಡಿದಾಗ ಸಾಮಾಜಿಕನಿಗೆ ಹುಟ್ಟುವುದು 'ಇವನೇ ತ್ರೇತಾಯುಗದ ರಾಮ' ಎಂಬ ನಿಶ್ಚಿತವಾದ 'ಸಮ್ಯಕ್‌ಜ್ಞಾನ'ವಲ್ಲ; ಮೊದಲು 'ಇವನೇ ರಾಮ' ಎಂಬ ಭ್ರಮೆ ಹುಟ್ಟುವ ಹಾಗೂ ಅನಂತರ ಆ ಭ್ರಮೆ ನಿರಸನವಾಗ ಬಹುದಾದ 'ಮಿಥ್ಯಾಜ್ಞಾನ'ವೂ ಅಲ್ಲ; 'ಇವನು ರಾಮನೇ ಅಲ್ಲವೇ' ಎಂದು ಸಂದೇಹಿಸು ವಂಥ 'ಸಂಶಯಜ್ಞಾನ'ವೂ ಅಲ್ಲ; 'ಇವನು ರಾಮನಂತಿದ್ದಾನೆ' ಎನ್ನುವಂತಹ 'ಸಾದೃಶ್ಯ ಜ್ಞಾನ'ವೂ ಅಲ್ಲ. ಇಲ್ಲಿನ ಜ್ಞಾನ 'ಚಿತ್ರತುರಗನ್ಯಾಯ'ವನ್ನು ಹೋಲುವಂಥದು. (ಎಂದರೆ – ಚಿತ್ರದ ಕುದುರೆಯನ್ನು ನೋಡಿದಾಗ ನಮಗೆ ಅದು ಕುದುರೆಯಲ್ಲ ಎನ್ನಿಸದು; ನಿಜವಾದ ಕುದುರೆಯೇ ಹೌದು ಎಂದೂ ತೋರದು; ಅಥವಾ, ಅದು ಕತ್ತೆಯೋ ಇನ್ನೇನೋ ಆಗಿದ್ದು ಕುದುರೆಯನ್ನು ಹೋಲುತ್ತದೆ ಎಂದೂ ಅನ್ನಿಸದು.) ನಾಟ್ಯಾದಿ ಗಳಲ್ಲುಂಟಾಗುವ ಜ್ಞಾನ ಇಂಥದು. ನಟಾದಿಗಳು ಸ್ಥಾಯಿಭಾವ ತಮ್ಮಲ್ಲಿ ಇಲ್ಲದಿದ್ದರೂ,

ಅಭಿನಯಕೌಶಲದಿಂದ ಅದು ಇದ್ದರೆ ಹೇಗೋ ಹಾಗೆ ವಿಭಾವಾದಿಗಳನ್ನು ಪ್ರದರ್ಶಿಸುತ್ತಾರೆ. ಅದನ್ನು ಪ್ರೇಕ್ಷಕರು 'ಚಿತ್ರತುರಗನ್ಯಾಯ'ದಿಂದ ಗ್ರಹಿಸಿ, ಆ ವಿಭಾವಾದಿಗಳಿಂದ ಸ್ಥಾಯಿಯನ್ನು ಅನುಮಾನಿಸು(ಊಹಿಸು)ತ್ತಾರೆ. ಹೊಗೆಯಿರುವಲ್ಲಿ ಬೆಂಕಿಯನ್ನು ಅನುಮಾನಿಸುವಂತೆ ಪ್ರೇಕ್ಷಕರು ಅಭಿನೀತ ವಿಭಾವಾದಿಗಳಿಂದ ಸ್ಥಾಯಿಯನ್ನು ಅನುಮಾನಿಸುತ್ತಾರೆ. ಈ ಜ್ಞಾನ ಲೋಕಸಹಜವಾದ ಸಮ್ಯಕಾದಿ ಜ್ಞಾನಗಳಿಗೆ ಬೇರೆಯಾಗಿದ್ದರೂ ಅದರಿಂದ ಪ್ರೇಕ್ಷಕರ ಅನುಭವಕ್ಕೆ ಅಪೋಹವಿಲ್ಲ. ಹೀಗೆ, ನಟನು ಅಭಿನಯಿಸಿ ತೋರಿಸುವ ಲೋಕವಿಲಕ್ಷಣವೂ ಸುಂದರವೂ ಆದ ವಿಭಾವಾದಿಗಳಿಂದ ಗಮ್ಯವಾಗುವ ಸ್ಥಾಯಿಭಾವವೇ ಸವಿಕೊಡುವುದಾಗಿ ರಸವೆನ್ನಿಸಿಕೊಳ್ಳುತ್ತದೆ. ಎಂದರೆ – ನಟನಿಂದ ವಿಭಾವಾದಿಗಳ ದ್ವಾರಾ ಅನುಕೃತವಾಗಿ ತನ್ಮೂಲಕ ಸಾಮಾಜಿಕನಿಂದ 'ಅನುಮಿತ'ವಾಗುವ ರತ್ಯಾದಿ ಸ್ಥಾಯಿಯೇ ಶೃಂಗಾರಾದಿ ರಸವೆನ್ನಿಸಿಕೊಳ್ಳುತ್ತದೆ. ಈ ವಾದದ ಪ್ರಕಾರ – ಲೊಲ್ಲಟ ಹೇಳುವಂತೆ – ಸೂತ್ರದಲ್ಲಿ ಯಾವೊಂದು ಶಬ್ದವನ್ನೂ ಅಧ್ಯಾಹೃತವೆಂದು ಇಟ್ಟುಕೊಳ್ಳಬೇಕಿಲ್ಲ. ಈ ವಾದದಂತೆ ರಸಕ್ಕೂ ವಿಭಾವಾದಿಗಳಿಗೂ ಇರುವ ಸಂಬಂಧ 'ಗಮ್ಯಗಮಕಭಾವ'; ವಿಭಾವಾದಿಗಳು 'ಗಮಕ', ರಸವೇ 'ಗಮ್ಯ'.

## ೩. ಭಟ್ಟನಾಯಕನ ಭುಕ್ತಿವಾದ :

ಪುನಃ, ಶಂಕುಕನ ವಾದವನ್ನು ಖಂಡಿಸಿ ಹೊಸ ವಾದವನ್ನು ಮಂಡಿಸಿದಾತ ಸಾಂಖ್ಯನಾದ ಭಟ್ಟನಾಯಕ. ಈತನ ವಾದಕ್ಕೆ 'ಭುಕ್ತಿವಾದ' ಎಂಬ ಹೆಸರು ಬಂದಿದೆ. ಈತನ ವಾದದ ಸಾರ ಇಷ್ಟು : ನಾಟ್ಯಾದಿಗಳಿಂದ ಪ್ರತೀತವಾಗುವ ಸ್ಥಾಯಿಗಳು ಸಾಮಾಜಿಕನ ದೃಷ್ಟಿಯಿಂದ ಆತ್ಮಗತವಾಗಿಯೂ ಇರುವುದಿಲ್ಲ, ಪರಗತವಾಗಿಯೂ ಇರುವುದಿಲ್ಲ. ಅಂತೆಯೇ ಅದು ಉತ್ಪನ್ನವೂ ಅಲ್ಲ, ಅಭಿವ್ಯಕ್ತವೂ ಅಲ್ಲ. ನಾಟ್ಯಾದಿಗಳಲ್ಲಿನ ಶಬ್ದವ್ಯಾಪಾರ ಅಭಿಧಾದಿ ಶಕ್ತಿಯನ್ನು ಮೀರಿ ಬೇರೆ ಎರಡು ವ್ಯಾಪಾರಗಳಲ್ಲಿ ಪ್ರವರ್ತಿಸುತ್ತದೆ. ನಾಟ್ಯಾದಿಗಳಲ್ಲಿ ಮೊದಲು ಅಭಿಧಾಶಕ್ತಿಯಿಂದ ಶಬ್ದದ ವಾಚ್ಯಾರ್ಥ ಪ್ರಕಟವಾಗುತ್ತದೆ. ಅಲ್ಲಿಂದ ಎರಡನೆಯ ಹಂತದಲ್ಲಿ 'ಭಾವಕತ್ವ' ಎಂಬ ವ್ಯಾಪಾರವೂ ಮೂರನೆಯ ಹಂತದಲ್ಲಿ 'ಭೋಜಕತ್ವ' ಎಂಬ ವ್ಯಾಪಾರವೂ ಉಂಟಾಗುತ್ತದೆ. ನಾಟ್ಯಾದಿಗಳಲ್ಲಿ ಬರುವ ಪಾತ್ರಗಳು ತಮ್ಮ ವೈಯಕ್ತಿಕ ವಿಶೇಷಗಳನ್ನು ಕಳೆದುಕೊಂಡು ಸಾಮಾನ್ಯರಾಗುತ್ತಾರೆ. ಎಂದರೆ, ನಾಟ್ಯದಲ್ಲಿನ ಸೀತೆ ಜನಕತನಯಾದಿ ವಿಶೇಷಗಳನ್ನು ಕಳೆದುಕೊಂಡು ಸ್ತ್ರೀಸಾಮಾನ್ಯಳಾಗುತ್ತಾಳೆ. ಅಲ್ಲಿನ ಸ್ಥಾಯಿಭಾವ ಕೂಡ ಹೀಗೆಯೇ ಸಾಧಾರಣವಾಗುವುದು. ಎಂದರೆ, ಸೀತೆಯ ಶೋಕ ವ್ಯಕ್ತಿಸಂಪರ್ಕವನ್ನು ಕಳೆದುಕೊಂಡು ಶೋಕಸಾಧಾರಣವಾಗುತ್ತದೆ. ಇದಕ್ಕೆ 'ಸಾಧಾರಣೀಕರಣ' ಎನ್ನಬಹುದು. ಈ ಸಾಧಾರಣೀಕರಣ ಉಂಟಾಗುವುದೇ 'ಭಾವಕತ್ವ' ವ್ಯಾಪಾರ. ಇದರಿಂದ ಭಾವಿತವಾಗುವ ಸ್ಥಾಯಿಯೇ ರಸ. ಅನಂತರ ಈ ರಸವನ್ನು ಸಹೃದಯ ಭೋಗಿಸಿ ಆನಂದಪಡೆಯುತ್ತಾನೆ. ಈ ಸ್ಥಿತಿಯಲ್ಲಿ ಆತ್ಮದ ಸತ್ತ್ವಗುಣವೇ ಪ್ರಧಾನವಾಗುವುದರಿಂದ, ಈ 'ಸತ್ತ್ವೋದ್ರೇಕ'ದ ಮೂಲಕ ಸಾಮಾಜಿಕನಿಗೆ ಪರಬ್ರಹ್ಮಾಸ್ವಾದಕ್ಕೆ ಸಮನಾದ ವಿಶ್ರಾಂತಿರೂಪವಾದ ಆನಂದ ಉಂಟಾಗುತ್ತದೆ. ಅದನ್ನೇ ರಸದ

ಭೋಗ ಎನ್ನುವುದು. ಈ ರಸಭೋಗದ ವ್ಯಾಪಾರಕ್ಕೇ 'ಭೋಜಕತ್ವ' ಎಂದು ಹೆಸರು. ಒಟ್ಟಿನಲ್ಲಿ : 'ಅಭಿಧಾಶಕ್ತಿ'ಯಿಂದ ವಾಚ್ಯಾರ್ಥವುಂಟಾಗಿ, 'ಭಾವಕತ್ವಶಕ್ತಿ'ಯಿಂದ ಸಾಧಾರಣೀಕರಣವುಂಟಾಗಿ (ಮತ್ತು ಸ್ಥಾಯಿ ರಸವಾಗಿ), 'ಭೋಜಕತ್ವಶಕ್ತಿ'ಯಿಂದ ರಸಾನುಭೂತಿ ಉಂಟಾಗುತ್ತದೆ – ಎಂಬುದು ಭಟ್ಟನಾಯಕನ ವಾದದ ಸಾರಾಂಶ.

## ೪. ಅಭಿನವಗುಪ್ತನ ವ್ಯಕ್ತಿವಾದ :

ಅಭಿನವಗುಪ್ತ ಮೇಲಿನ ಎಲ್ಲ ವಾದಗಳನ್ನೂ ಪರಿಶೀಲಿಸಿ ಅಲ್ಲಿನ ಸತ್ಯಾಂಶಗಳನ್ನು ಎತ್ತಿಕೊಂಡ; ದೋಷಗಳನ್ನು ಉದ್ಘಾಟಿಸಿ ತಿರಸ್ಕರಿಸಿದ. ಕೊನೆಯದಾಗಿ ಒಂದು ಸಮಗ್ರವೂ ಉಚಿತವೂ ಆದ ಸಿದ್ಧಾಂತವನ್ನು ಮಂಡಿಸಿದ. ಈತನ ವಾದ 'ವ್ಯಕ್ತಿವಾದ'ವೆಂದು ಪ್ರಸಿದ್ಧವಾಗಿದೆ; ಬಹುಜನ ಸಮ್ಮತವಾಗಿದೆ.

ರಸವ್ಯಾಪಾರದಲ್ಲಿ ಸಹೃದಯನ ಸ್ಥಾನವನ್ನು ನಿಷ್ಕರ್ಷಿತಗೊಳಿಸದಿರುವುದು ಮತ್ತು ಸಹೃದಯನ ಸ್ಥಾನವನ್ನು ಸ್ವಲ್ಪಮಟ್ಟಿಗೆ ಸೂಚಿಸಿದರೂ ಅಲ್ಲಿ ಶಾಸ್ತ್ರಾಧಾರವಿಲ್ಲದೆ ಅನಗತ್ಯವಾಗಿ ವ್ಯಾಪಾರಾಂತರಗಳನ್ನು ಕಲ್ಪಿಸುತ್ತ ಹೋಗುವುದು – ಇವೇ, ಅಭಿನವಗುಪ್ತನ ಮತದಂತೆ, ಹಿಂದಿನ ವ್ಯಾಖ್ಯಾಕಾರರ ಮುಖ್ಯ ದೋಷಗಳು.

ಅಭಿನವಗುಪ್ತನ ಸಿದ್ಧಾಂತವನ್ನು ಹೀಗೆ ಸಂಗ್ರಹಿಸಬಹುದು : ನಾಟ್ಯಾದಿಗಳಲ್ಲಿ ರಸಾಸ್ವಾದ ಪಡೆಯುವುದಕ್ಕೆ ಸಾಮಾಜಿಕನಿಗೆ ಒಂದು ಅರ್ಹತೆ (ಅಧಿಕಾರ) ಬೇಕು. ಆತ ಲೋಕಾನುಭವಿಯಿದ್ದು ಲೋಕಘಟನೆಗಳಲ್ಲಿ ಕಾಣುವ ಕಾರಣಾದಿಗಳಿಂದ ಅಲ್ಲಿನ ಚಿತ್ತವೃತ್ತಿ ಯಾವುದೆಂಬುದನ್ನು ತಟ್ಟನೆ ಊಹಿಸುವ ಸಾಮರ್ಥ್ಯವುಳ್ಳವನಾಗಿರಬೇಕು. ಈ ಸಾಮರ್ಥ್ಯದಿಂದ ಸಾಮಾಜಿಕನಿಗೆ ನಾಟ್ಯಾದಿಗಳಲ್ಲಿ 'ಹೃದಯಸಂವಾದ' ಉಂಟಾಗುತ್ತದೆ. ಇನ್ನು – ಇಹಜಗತ್ತಿನಲ್ಲಿ ಯಾವುವು ಕಾರಣಾದಿಗಳೆನ್ನಿಸಿಕೊಳ್ಳುತ್ತವೊ ಅವು ಪ್ರತಿಭಾನಿರ್ಮಿತವಾದ ನಾಟ್ಯಜಗತ್ತಿನಲ್ಲಿ ಬಂದಾಗ ವಿಭಾವಾದಿಗಳೆನ್ನಿಸಿಕೊಳ್ಳುತ್ತವೆ. ಇಹಜಗತ್ತಿನ ಕಾರಣಾದಿಗಳಿಗೂ ನಾಟ್ಯಜಗತ್ತಿನ ವಿಭಾವಾದಿಗಳಿಗೂ ಇರುವ ಮುಖ್ಯವಾದ ಅಂತರ ಇದು : ಇಹಜಗತ್ತಿನಲ್ಲಿನ ಕಾರಣಾದಿಗಳ ಕೂಡ ನಮಗೆ ನಿಯತವಾದ ವೈಯಕ್ತಿಕ ಸಂಬಂಧವಿರುತ್ತದೆ. ಎಂದರೆ – ಯಾವೊಂದು ನಮಗೆ ಪ್ರಿಯವಿರಬಹುದು ಅಥವಾ ದ್ವೇಷ ಉಂಟುಮಾಡುವಂಥದಿರಬಹುದು ಅಥವಾ ನಮ್ಮಲ್ಲಿ ಉದಾಸೀನ (ತಾಟಸ್ಥ್ಯ) ಹುಟ್ಟಿಸುವಂಥದಿರಬಹುದು. ಆದರೆ ಅವೇ ನಾಟ್ಯಜಗತ್ತಿನಲ್ಲಿ ವಿಭಾವಾದಿಗಳ ರೂಪ ಪಡೆದು ಬಂದಾಗ ಅವಕ್ಕೆ ಸಾಮಾಜಿಕನ ಕೂಡ ಯಾವ ಬಗೆಯ ವೈಯಕ್ತಿಕ ಸಂಬಂಧ ವಿಶೇಷಗಳೂ ಇರುವುದಿಲ್ಲ. ನಾಟ್ಯದಲ್ಲಿನ ವಿಭಾವಾದಿಗಳು ಸಾಧಾರಣಸ್ವರೂಪದಿಂದ ಮಾತ್ರ ಪ್ರತೀತವಾಗುತ್ತವೆ. (ಉದಾಹರಣೆಗೆ – ನಾಟ್ಯದಲ್ಲಿ ಬರುವ ಶಕುಂತಲೆಯನ್ನು ಕಂಡಾಗ ಸಾಮಾಜಿಕನಿಗೆ – ಜೀವನದಲ್ಲಿನಂತೆ – ಯಾವ ಬಗೆಯ ನಿಯತಸಂಬಂಧವೂ ತೋರದು : ಆಕೆ ಕಣ್ವಪುತ್ರಿಯೆಂದು ಗೌರವ ಸಲ್ಲಿಸಲು ಅಥವಾ ದುಃಖಿಯೆಂದು ಸಹಾಯ ನೀಡಲು ಆತ ಮುನ್ನುಗ್ಗುವುದಿಲ್ಲ. ಅದು ಬಿಟ್ಟು, ಆಕೆ ಕಣ್ವಪುತ್ರಿಯೇ ಎಂಬ ನಿಯತಜ್ಞಾನವಾಗಲಿ, ಆಕೆಯ ರೂಪದಲ್ಲಿ ಬಂದಿರುವವಳು ಇಂಥ ನಟಿ ಎಂಬುದಾಗಲಿ ಆತನಿಗಿರದು. ಈ 'ಸಾಧಾರಣಸ್ವರೂಪ'

ಭಟ್ಟನಾಯಕ ಹೇಳುವ 'ಸಾಧಾರಣೀಕರಣ'ವೇ ಎನ್ನಬಹುದು.) ಇಂಥ ಸಾಧಾರಣೀಕೃತವಾದ ವಿಭಾವಾದಿಗಳು, ಲೋಕಾನುಭವದಿಂದ ಪಕ್ವಗೊಂಡ ಸಾಮಾಜಿಕನಲ್ಲಿ ವಾಸನಾರೂಪವಾಗಿರುವ ರತ್ಯಾದಿ ಸ್ಥಾಯಿಭಾವಗಳನ್ನು ವ್ಯಕ್ತಗೊಳಿಸುತ್ತವೆ. ಹೀಗೆ ವ್ಯಕ್ತವಾಗುವ ಸ್ಥಾಯಿಭಾವ, ತನ್ನದು ಇನ್ನೊಬ್ಬರದು ಎಂಬ ಭೇದಜ್ಞಾನವಿಲ್ಲದ ಕಾರಣ ವೈಯಕ್ತಿಕತೆಯ ಲೇಪವಿಲ್ಲದ ಕಾರಣ, ಅಖಂಡವಾಗಿ ಸಾಮಾಜಿಕನ ಹೃದಯವನ್ನು ಆವರಿಸುತ್ತದೆ; ಬೇರೆ ಜ್ಞಾನಗಳ ಸ್ಪರ್ಶವೇ ಇಲ್ಲದೆ ತಾನೇತಾನಾಗಿ ಪ್ರಜ್ವಲಿಸುತ್ತದೆ. ಅಹಂಕಾರ ನಿರ್ಲಿಪ್ತವಾದ ಸ್ಥಾಯಿಯ ಇಂಥ ಅರಿವು ಚರ್ವಣೈಕರೂಪವಾಗಿರುತ್ತದೆ. ಈ ಬಗೆಯಲ್ಲಿ ಅಭಿವ್ಯಕ್ತವಾಗಿ ಆಸ್ವಾದ್ಯವಾಗುವ ಸ್ಥಾಯಿಭಾವವೇ ರಸ. (ಈ ಮೇಲಿನ ಅಂಶಗಳು ನಾಟ್ಯಕ್ಕೆಂತೊ ಅಂತೆಯೇ ಕಾವ್ಯಾದಿಗಳಿಗೂ ಅನ್ವಯಿಸುತ್ತವೆ. ನಾಟ್ಯದಲ್ಲಿ ಅಭಿನಯದ ಮೂಲಕ ವಿಭಾವಾದಿಗಳು ಪ್ರದರ್ಶಿತವಾದರೆ ಕಾವ್ಯದಲ್ಲಿ ಶಬ್ದಗಳ ಮೂಲಕ ವಿಭಾವಾದಿಗಳ ಸಾಕ್ಷಾತ್ಕಾರವಾಗುತ್ತದೆ.)

ರಸಕ್ಕೂ ವಿಭಾವಾದಿಗಳಿಗೂ ಇರುವ ಸಂಬಂಧವನ್ನು 'ಕಾರ್ಯಕಾರಣಭಾವ'ವೆಂದು ಹೇಳಬಾರದು. ಏಕೆಂದರೆ, ಕುಂಬಾರ ಆತನ ಚಕ್ರ ಮೊದಲಾದ ಕಾರಣಗಳು ನಷ್ಟವಾದ ಮೇಲೂ ಕಾರ್ಯವಾದ ಮಡಕೆ ಇದ್ದೇ ಇರುತ್ತದೆ; ಆದರೆ ವಿಭಾವಾದಿಗಳು ನಷ್ಟವಾದ ಮೇಲೆ ರಸಾನುಭವ ಇರುವುದಿಲ್ಲ. ಆ ಸಂಬಂಧ 'ಜ್ಞಾಪ್ಯಜ್ಞಾಪಕಭಾವ'ವೆಂದೂ ಹೇಳುವಂತಿಲ್ಲ. ಕೋಣೆಯಲ್ಲಿ ಮೊದಲೇ ಸಿದ್ಧಮಾಡಿಟ್ಟಿದ್ದ ಗಡಿಗೆ ದೀಪದಿಂದ ಕಣ್ಣಿಗೆ ತೋರುವುದು 'ಜ್ಞಾಪ್ಯಜ್ಞಾಪಕಭಾವ'ಕ್ಕೆ ಒಂದು ಉದಾಹರಣೆ. ಅಲ್ಲಿ ಗಡಿಗೆ ಜ್ಞಾಪ್ಯ, ದೀಪ ಜ್ಞಾಪಕ. ಇಲ್ಲಿಯಾದರೋ ವಿಭಾವಾದಿಗಳು ಗೋಚರವಾದ ಮೇಲೆಯೇ ವಾಸನಾತ್ಮಕವಾದ ಸ್ಥಾಯಿ ಉದ್ಬೋಧಗೊಳ್ಳುತ್ತದೆ. ಸ್ಥಾಯಿಯೆಂಬುದು ಮಡಕೆಯಂತೆ ಅಣಿಮಾಡಿ ಇರಿಸಿರುವ ವಸ್ತುವಲ್ಲ. ಮೇಲಿನ ಎರಡು ಸಂಬಂಧಗಳೇ ಲೋಕದಲ್ಲಿ ಪ್ರಸಿದ್ಧವಾಗಿರುವಂಥವಾದರೂ, ಕಾವ್ಯಾದಿಗಳಲ್ಲಿನ ರಸ ಹಾಗೂ ವಿಭಾವಾದಿಗಳ ಸಂಬಂಧ ಈ ಎರಡು ಸಂಬಂಧಗಳಿಗಿಂತ ಬೇರೆಯಾಗಿದೆ. ಹಾಗೆ ಬೇರೆಯಾಗಿರುವುದು ಕಾವ್ಯಾದಿಗಳಿಗೆ ಭೂಷಣವೇ ಸರಿ. ರಸಕ್ಕೂ ವಿಭಾವಾದಿಗಳಿಗೂ ಇರುವ ಸಂಬಂಧ 'ವ್ಯಂಗ್ಯವ್ಯಂಜಕಭಾವ'. ವಿಭಾವಾದಿಗಳು ರಸವನ್ನು ಅಭಿವ್ಯಂಜಿಸುತ್ತವೆ; ರಸವು ವಿಭಾವಾದಿಗಳಿಂದ ಅಭಿವ್ಯಕ್ತವಾಗುತ್ತದೆ. ಅಂತೆಯೇ ವಿಭಾವಾದಿಗಳು ವ್ಯಂಜಕ, ರಸ ವ್ಯಂಗ್ಯ.

ಇನ್ನು ಪ್ರಸ್ತುತ ಗ್ರಂಥಕಾರರಾದ ಧನಂಜಯಧನಿಕರ ಮತವನ್ನೂ ಇಲ್ಲಿ ಸ್ವಲ್ಪದರಲ್ಲೆ ಹೀಗೆ ಸಂಗ್ರಹಿಸಬಹುದು : ಸ್ಥಾಯಿಭಾವ ಅಥವಾ ರಸ ಕಾವ್ಯಾದಿಗಳಿಂದ ವ್ಯಂಗ್ಯವಾಗುತ್ತದೆ ಎಂಬುದು ಸರಿಯಲ್ಲ. ವಾಕ್ಯಕ್ಕೆ ತಾತ್ಪರ್ಯ ಹೇಗೋ ಹಾಗೆ ಕಾವ್ಯಾದಿಗಳಿಗೆ ಸ್ಥಾಯಿ ಅಥವಾ ರಸವೇ ತಾತ್ಪರ್ಯವಾಗಿರುತ್ತದೆ. ರಸಿಕನಾದವನು ಕಾವ್ಯಾದಿಗಳಿಂದ ರಸವನ್ನು 'ಭಾವಿಸು'ತ್ತಾನೆ. ಅಂತೆಯೇ ರಸಕ್ಕೂ ಕಾವ್ಯಾದಿಗಳಿಗೂ ಇರುವ ಸಂಬಂಧ, 'ಭಾವ್ಯಭಾವಕ' ಸಂಬಂಧ. ಇವರ ಪ್ರಕಾರ ರಸಸೂತ್ರದಲ್ಲಿ ರಸನಿಷ್ಪತ್ತಿಯಾಗುತ್ತದೆ ಎಂದಿರುವುದರ ಅರ್ಥ 'ಭಾವಿತವಾಗುತ್ತದೆ' ಎಂದು. ಮಕ್ಕಳು ಮಣ್ಣಿನ ಆನೆ

ಮುಂತಾದವುಗಳಿಂದ – ಅವು ನಿಜವಾದ ಆನೆ ಮುಂತಾದವುಗಳೆಂಬಂತೆಯೇ – ಅಡಿ ಸವಿ ಪಡೆಯುವಂತೆ, ರಸಿಕರು ಅರ್ಜುನಾದಿಗಳ ಅನುಕರಣೆಯನ್ನು ಕಂಡು ಸವಿ ಪಡೆಯುತ್ತಾರೆ.

ಅಭಿಧಾದಿವೃತ್ತಿಗಳಿಂದಲೇ ಸ್ಥಾಯ್ಯಾದಿಗಳು ಪ್ರತೀತವಾಗುವುದೆಂಬ ಅಂಶವನ್ನು ಭಟ್ಟ ಲೊಲ್ಲಟನಿಂದಲೂ, ರಸವು ಭಾವಿತವಾಗುವುದೆಂಬ ಅಂಶವನ್ನು ಭಟ್ಟನಾಯಕನ ವಾದ ಪರಂಪರೆಯಿಂದಲೂ, ಮಕ್ಕಳ ಆಟದಂತೆ ರಸಿಕರು ಕಾವ್ಯರಸಾಸ್ವಾದ ಹೊಂದುವರೆಂಬ ಅಂಶವನ್ನು ಶಂಕುಕನ ಚಿತ್ರತುರಗನ್ಯಾಯವಾದದಿಂದಲೂ – ಇವರು ಎತ್ತಿಕೊಂಡು ತಮ್ಮ ಅಭಿಪ್ರಾಯವನ್ನು ನಿರ್ಮಿಸಿಕೊಂಡಿರಬಹುದೆಂದು ತೋರುತ್ತದೆ. ರಸ ರಸಿಕನಲ್ಲೇ ವರ್ತಿಸುತ್ತದೆ ಎಂಬ ಇವರ ಮಾತಿಗೆ ಅಭಿನವಗುಪ್ತನ ವಾದ ಪರಂಪರೆಯ ಛಾಯೆಯೂ ಸೋಂಕಿರಬಹುದು.

[ರಸನಿಷ್ಪತ್ತಿಯನ್ನು ಕುರಿತ ಮೇಲಿನ ವಾದಗಳನ್ನು ವಿವರವಾಗಿ ತಿಳಿಯಬೇಕೆನ್ನುವವರು ಶ್ರೀ ತೀ.ನಂ. ಶ್ರೀಕಂಠಯ್ಯನವರ 'ಭಾರತೀಯ ಕಾವ್ಯಮೀಮಾಂಸೆ'ಯ ೨೧ ಮತ್ತು ೨೨ನೆಯ ಅಧ್ಯಾಯಗಳನ್ನು , ಡಾ.ಕೆ. ಕೃಷ್ಣಮೂರ್ತಿ ಅವರ 'ಕನ್ನಡ ಕಾವ್ಯಪ್ರಕಾಶ'ದ ನಾಲ್ಕನೆಯ ಉಲ್ಲಾಸ(ಅಡಿ ಟಿಪ್ಪಣಿ ಸಹಿತ)ವನ್ನೂ (ಪ್ರಬುದ್ಧ ಕರ್ಣಾಟಕ : ಸಂಪುಟ : ೩೭. ಸಂಚಿಕೆ : ೩ರಲ್ಲಿ ಪ್ರಕಟವಾಗಿವೆ) ನೋಡಬಹುದು.]

## ಅನುಬಂಧ : ೩

(೨–೨೪ರಿಂದ ೪೪ಕ್ಕೆ ಸಂಬಂಧಿಸಿ)

# ನಾಯಿಕಾಭೇದ

ಈ ಗ್ರಂಥಕಾರರು ಗುರುತಿಸಿರುವ ನಾಯಿಕಾಭೇದಗಳನ್ನು ರೇಖಾಸೂಚಿಯ ಮೂಲಕ ಮುಂದಿನ ಪುಟದಲ್ಲಿ ಕೊಟ್ಟಿದೆ. ಈ ಗ್ರಂಥವನ್ನನುಸರಿಸಿ, ನಾಯಿಕೆಯರಲ್ಲಿನ ಹದಿನಾರು ಮುಖ್ಯ ಭೇದಗಳನ್ನು ಇಲ್ಲಿ ತೋರಿಸಿದೆ. ಈ ಒಂದೊಂದಕ್ಕೂ ಪುನಃ ಉತ್ತಮಮಧ್ಯಮಾಧಮ ಭೇದಗಳಿವೆ (ನೋಡಿ : ೨–೭೫). ಅಲ್ಲಿಗೆ ನಾಯಿಕೆಯರ ಒಟ್ಟು ಭೇದಗಳು ನಲವತ್ತೆಂಟು ಆಗುತ್ತವೆ.

ಇನ್ನು ನಾಯಿಕೆಯರ ಅವಸ್ಥಾಭೇದಗಳು : ಸ್ವೀಯಾಭೇದಗಳು ಹದಿಮೂರು (ರೇಖಾಸೂಚಿಯಲ್ಲಿ ೧ರಿಂದ ೧೩), ಅನ್ಯಾಭೇದಗಳು ಎರಡು (ರೇ.ಸೂ.ಯಲ್ಲಿ ೧೪, ೧೫), ಸಾಧಾರಣಾ ಒಂದು (ರೇ.ಸೂ.ಯಲ್ಲಿ ೧೬) ಸರಿಯಷ್ಟೆ. ಇವುಗಳಲ್ಲಿ ಸ್ವೀಯಾಭೇದಗಳೊಂದೊಂದಕ್ಕೂ ಎಂಟೆಂಟು ಅವಸ್ಥೆಗಳು (ನೋಡಿ : ೨–೨೬); ಅನ್ಯಾಭೇದಗಳೆರಡರಲ್ಲಿ ಒಂದೊಂದಕ್ಕೂ ಮೂರು ಮೂರು ಅವಸ್ಥೆಗಳು (ನೋಡಿ : ೨–೪೫ರ ವ್ಯಾಪ್ತಿ), ಸಾಧಾರಣಾಳಿಗೆ ಎಂಟು ಅವಸ್ಥೆಗಳು. ಅಲ್ಲಿಗೆ, ಸ್ವೀಯಾಭೇದದಲ್ಲಿ (೧೩X೮) ನೂರಾನಾಲ್ಕು ಅವಸ್ಥೆಗಳೂ, ಅನ್ಯಾಭೇದದಲ್ಲಿ (೨X೩) ಆರು ಅವಸ್ಥೆಗಳೂ, ಸಾಧಾರಣಾಭೇದದಲ್ಲಿ (೧X೮) ಎಂಟು ಅವಸ್ಥೆಗಳೂ ಆಗುತ್ತವೆ. ಹೀಗೆ ಒಟ್ಟು ಅವಸ್ಥೆಗಳು ನೂರಾಹದಿನೆಂಟು. ನಾಯಿಕಾಭೇದಗಳೊಂದೊಂದಕ್ಕೂ ಉತ್ತಮಾದಿವರ್ಗ ಹಚ್ಚಿಕೊಂಡರೆ ಒಟ್ಟು ಅವಸ್ಥಾಭೇದಗಳು ಮುನ್ನೂರ ಐವತ್ತನಾಲ್ಕು ಆಗುತ್ತವೆ. (ಸ್ವೀಯಾ : ೧೩X೩X೮ = ೩೧೨; ಅನ್ಯಾ : ೨X೩X೪ =೧೮; ಸಾಧಾರಣಾ : ೧X೩X೮=೨೪. ೩೧೨+೧೮+೨೪ = ೩೫೪). 'ಸರಸ್ವತೀಕಂಠಾಭರಣ'ವೇ ಮುಂತಾದ ಗ್ರಂಥಗಳು ಅನ್ಯಾಭೇದ ಗಳೊಂದೊಂದಕ್ಕೂ (ಇಲ್ಲಿನಂತೆ ಕೇವಲ ಮೂರು ಮೂರು ಅವಸ್ಥೆಗಳೆನ್ನದೆ) ಎಂಟೆಂಟು ಅವಸ್ಥೆಗಳನ್ನೇ ಹೇಳುವುದರಿಂದ, ಆ ಗ್ರಂಥಗಳ ಪ್ರಕಾರ ನಾಯಿಕೆಯರ ಅವಸ್ಥಾಭೇದ ಒಟ್ಟಿನಲ್ಲಿ ಮುನ್ನೂರ ಎಂಬತ್ತುನಾಲ್ಕು ಆಗುತ್ತವೆ. (೨–೪೫ರ ಟಿಪ್ಪಣಿ ನೋಡಿ.)

- ನಾಯಿಕೆ (೨-೨೪)
  - ಸ್ವೀಯಾ (೨-೨೫)
  - ಅನ್ಯಾ (೨-೩೨)
    - ॥ ೧೪ ॥ ಕನ್ಯಕಾ (೨-೩೨)
    - ॥ ೧೫ ॥ ಊಢಾ (೨-೩೨)
  - ॥ ೧೬ ॥ ಸಾಧಾರಣಾ (೨-೩೩)
- ॥ ೧ ॥ ಮುಗ್ಧಾ (೨-೨೬)
- ಮಧ್ಯಾ (೨-೨೭)
  - ಧೀರಾ (೨-೨೮)
    - ॥ ೨ ॥ ಜ್ಯೇಷ್ಠಾ (೨-೩೧)
    - ॥ ೩ ॥ ಕನಿಷ್ಠಾ (೨-೩೧)
  - ಧೀರಾಧೀರಾ (೨-೨೮)
    - ॥ ೪ ॥ ಜ್ಯೇಷ್ಠಾ (೨-೩೧)
    - ॥ ೫ ॥ ಕನಿಷ್ಠಾ (೨-೩೧)
  - ಅಧೀರಾ (೨-೨೮)
    - ॥ ೬ ॥ ಜ್ಯೇಷ್ಠಾ (೨-೩೧)
    - ॥ ೭ ॥ ಕನಿಷ್ಠಾ (೨-೩೧)
- ಪ್ರಗಲ್ಭಾ (೨-೨೯)
  - ಧೀರಾ(೨-೩೦)
    - ॥ ೮ ॥ ಜ್ಯೇಷ್ಠಾ (೨-೩೧)
    - ॥ ೯ ॥ ಕನಿಷ್ಠಾ (೨-೩೧)
  - ಧೀರಾಧೀರಾ(೨-೩೦)
    - ॥ ೧೦ ॥ ಜ್ಯೇಷ್ಠಾ (೨-೩೧)
    - ॥ ೧೧ ॥ ಕನಿಷ್ಠಾ (೨-೩೧)
  - ಅಧೀರಾ(೨-೩೦)
    - ॥ ೧೨ ॥ ಜ್ಯೇಷ್ಠಾ (೨-೩೧)
    - ॥ ೧೩ ॥ ಕನಿಷ್ಠಾ (೨-೩೧)



*ಆವರಣಗಳಲ್ಲಿ ಕೊಟ್ಟಿರುವ ಸಂಖ್ಯೆ ಆಯಾ ವರ್ಗದ ಲಕ್ಷಣ ಬಂದಿರುವ ಪ್ರಕಾಶ ಹಾಗೂ ಖಂಡಗಳನ್ನು ಸೂಚಿಸುತ್ತದೆ.

**ಅನುಬಂಧ : ೪**

(೩ನೆಯ ಪ್ರಕಾಶಕ್ಕೆ ಸಂಬಂಧಿಸಿ)

# ದಶರೂಪಕಗಳು

ಹೋಲಿಕೆಯ ಸೌಕರ್ಯಕ್ಕಾಗಿ ರೂಪಕದ ಬೇರೆ ಬೇರೆ ಪ್ರಕಾರಗಳ ವಿಶೇಷಾಂಶಗಳನ್ನು ಇಲ್ಲಿ ಪಟ್ಟಿಮಾಡಿದೆ. ದ.ರೂ.ದಲ್ಲಿ ಎಲ್ಲಾ ರೂಪಕ ಪ್ರಕಾರಗಳಿಗೂ ಉದಾ., ಕೊಟ್ಟಿಲ್ಲ. ಈ ಪಟ್ಟಿಯಲ್ಲಿ ಅವಶ್ಯವಿದ್ದೆಡೆ ಆಯಾ ರೂಪಕದ ಹೆಸರಿನ ಮುಂದೆ 'ಸಾಹಿತ್ಯ ದರ್ಪಣ'ಕಾರ ಕೊಟ್ಟಿರುವ ಉದಾ.ಗಳನ್ನು–ಆವರಣಗಳಲ್ಲಿ–ಕೊಟ್ಟಿದೆ.

| *ರೂಪಕದ ಹೆಸರು* | *ವಸ್ತು* | *ನಾಯಕ ಇ.,* | *ರಸ* | *ಇತರ ವಿಷಯಗಳು* |
|---|---|---|---|---|
| ೧. **ನಾಟಕ :**<br>೩–೧ರಿಂದ ೪೩ರ ವರೆಗೆ ನೋಡಿ.<br>ಉದಾ.:–ಶಾಕುಂತಲ, ಉತ್ತರರಾಮಚರಿತ (ಬಾಲರಾಮಾಯಣ) ಇ., | ಪ್ರಖ್ಯಾತ | ನಾಯಕ : ಧೀರೋದಾತ್ತ | ವೀರ ಶೃಂಗಾರಗಳಲ್ಲಿ ಒಂದು ಪ್ರಧಾನ; ಅಂಗವಾಗಿ ಇತರ ಎಲ್ಲ ರಸಗಳು; ನಿರ್ವಹಣ ಸಂಧಿಯಲ್ಲಿ ಅದ್ಭುತರಸ. | ಸಂಧಿಗಳು : ಎಲ್ಲ ಸಂಧಿಗಳೂ ಸಾಂಗವಾಗಿ ಇರತಕ್ಕದ್ದು.<br>ಅಂಕಗಳು : ಐದರಿಂದ ಹತ್ತು |

| ರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| **೨. ಪ್ರಕರಣ :**<br>೩-೪೪, ೪೫ ನೋಡಿ.<br>ಉದಾ.:- ತರಂಗದತ್ತ<br>ಪುಷ್ಪದೂಷಿತಕ,<br>ಮೃಚ್ಛಕಟಿಕ,<br>(ಮಾಲತೀ ಮಾಧವ) ಇ., | ಉತ್ಪಾದ್ಯ<br>(ಲೋಕಸಂಶ್ರಿತ) | ನಾಯಕ : ಧೀರಶಾಂತನಾದ ಮಂತ್ರಿ, ಬ್ರಾಹ್ಮಣ ಅಥವಾ ವರ್ತಕ; ಧರ್ಮಾರ್ಥಕಾಮ ಗಳಲ್ಲಿ ಆಸಕ್ತ; ಕಷ್ಟಕ್ಕೆ ಸಿಲುಕಿ ದವನು.<br>ನಾಯಿಕೆ : ಕುಲಸ್ತ್ರೀ ಅಥವಾ ಗಣಿಕೆ ಅಥವಾ ಇಬ್ಬರೂ. | ನಾಟಕದಂತೆಯೇ | ಸಂಧಿ ಅಂಕ ಇ., ಗಳಲ್ಲಿ ನಾಟಕದಂತೆಯೇ<br>ಪ್ರಕರಣದಲ್ಲಿ ನಾಲ್ಕು ಭೇದಗಳು :<br>೧. ಕುಲಸ್ತ್ರೀ ನಾಯಿಕೆಯಾಗಿರುವುದು.<br>೨. ಗಣಿಕೆ ನಾಯಿಕೆಯಾಗಿರುವುದು.<br>೩. ಉಭಯ ನಾಯಿಕೆಯರೂ ಇರುವುದು.<br>೪. ಧೂರ್ತಸಂಕುಲವುಳ್ಳದ್ದು (ಸಂಕೀರ್ಣ). |
| **೩. ಭಾಣ :**<br>೩-೫೩ ನೋಡಿ.<br>ಉದಾ. :<br>(ಲೀಲಾಮಧುಕರ) ಇ., | ಕಲ್ಪಿತ<br>(ಧೂರ್ತಚರಿತೆ) | ನಾಯಕ : ವಿಟ-ಏಕಪಾತ್ರ; ಆಕಾಶಭಾಷಿತಾದಿಗಳಿಂದ ಒಬ್ಬನೇ ಸಂಭಾಷಿಸುವುದು; ತನ್ನ ಅಥವಾ ಬೇರೆಯವರ ವೃತ್ತಾಂತವನ್ನು ಹೇಳುವುದು. | ವೀರಶೃಂಗಾರಗಳ ಕೇವಲ ಸೂಚನೆ. | ಸಂಧಿಗಳು : ಸಾಂಗವಾದ ಮುಖ ಮತ್ತು ನಿರ್ವಹಣ ಹಾಗೂ ಹತ್ತು ಲಾಸ್ಯಾಂಗಗಳು.<br>ಅಂಕ : ಒಂದೇ.<br>ವೃತ್ತಿ : ಭಾರತೀಪ್ರಧಾನ. |

| ರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| **೪. ಪ್ರಹಸನ :**<br>೩-೫೫ರಿಂದ ೫೭ ನೋಡಿ.<br>ಉದಾ.:- (ಕಂದರ್ಪಕೇಲಿ, ಲಟಕಮೇಲಕ ಇ.,) | ಕಲ್ಪಿತ<br>(ಕೀಳುಜನರ ಧೂರ್ತರ ಚರಿತ್ರೆ) | ಬ್ರಾಹ್ಮಣ, ಪಾಖಂಡಿ, ವಿಟ, ಚೇಟ ಚೇಟಿಯರು, ಷಂಡ, ಕಂಚುಕಿ, ತಾಪಸ ಇ., ಪಾತ್ರಗಳು. | ಹಾಸ್ಯ. | ಸಂಧಿ ಅಂಕ ಇ., ಗಳು ಭಾಣದಂತೆಯೇ.<br>೧. ಪಾಖಂಡಿ ವಿಟಾದಿಗಳಿರುವುದು (ಶುದ್ಧ)<br>೨. ಷಂಡ ಮೊದಲಾದವರ ಕಾಮಾನುಕರಣೆ ಉಳ್ಳದ್ದು (ವಿಕೃತ).<br>೩. ಧೂರ್ತಪಾತ್ರಗಳಿಂದ 'ವೀಥಿ'ಯೊಡನೆ ಬೆರೆತಿರುವುದು (ಸಂಕೀರ್ಣ). |
| **೫. ಡಿಮ :**<br>೩-೫೯ ನೋಡಿ.<br>ಉದಾ.:- ತ್ರಿಪುರದಾಹ ಇ., | ಪ್ರಖ್ಯಾತ<br>(ಮಾಯೇಂದ್ರಜಾಲ ಸಂಗ್ರಾಮ ಕ್ರೋಧಾದಿಗಳಿಂದ ಕೂಡಿದ್ದು.) | ಉದ್ಧತರಾದ ದೇವಗಂಧರ್ವ ಯಕ್ಷರಾಕ್ಷಸ ಭೂತಪ್ರೇತಾದಿಗಳು ಇ., ಪಾತ್ರಗಳು. | ರೌದ್ರ ಪ್ರಧಾನ;<br>ವೀರ ಕರುಣ ಅದ್ಭುತ ಭಯಾನಕ ಬೀಭತ್ಸಗಳು ಪೋಷಕ. | ಸಂಧಿಗಳು: ವಿಮರ್ಶವನ್ನುಳಿದು ಇತರ ಎಲ್ಲಾ ಸಂಧಿಗಳು.<br>ಅಂಕಗಳು: ನಾಲ್ಕು.<br>ವೃತ್ತಿಗಳು: ಕೈಶಿಕೀ ಬಿಟ್ಟು ಉಳಿದ ಮೂರು. |

| ರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
| --- | --- | --- | --- | --- |
| ೬. ವ್ಯಾಯೋಗ :<br>೩-೬೦ ನೋಡಿ.<br>ಉದಾ.:- (ಸೌಗಂಧಿಕಾ ಹರಣ) ಇ., | ಪ್ರಖ್ಯಾತ<br>(ಒಂದೇ ದಿನದಲ್ಲಿ ನಡೆದ ಕಥೆ ;<br>ಸ್ತ್ರೀನಿಮಿತ್ತವಾಗಿಲ್ಲದ ಯುದ್ಧವೇ ವಸ್ತು.) | ಧೀರೋದ್ಧತ ನಾಯಕ<br>ಅನೇಕ ಪುರುಷಪಾತ್ರಗಳು. | ಡಿಮದಂತೆಯೇ | ಸಂಧಿಗಳು: ಗರ್ಭವಿಮರ್ಶ ಗಳನ್ನು ಉಳಿದು ಇತರ ಸಂಧಿಗಳು.<br>ಅಂಕ: ಒಂದೇ. |
| ೭. ಸಮವಕಾರ :<br>೩-೬೧ ನೋಡಿ.<br>ಉದಾ.:- ಸಮುದ್ರಮಂಥನ ಇ., | ಪ್ರಖ್ಯಾತ<br>(ದೇವಾಸುರರನ್ನು ಕುರಿತದ್ದು.) | ಉದಾತ್ತರಾದ ಬೇರೆ ಬೇರೆ ಫಲ ಹೊಂದುವ ಹನ್ನೆರಡು ಪ್ರಕಾರದ ದೇವದಾನವರು ಇ., ಪಾತ್ರಗಳು. | ವೀರ ಪ್ರಧಾನ;<br>ಉಳಿದವು ಪೋಷಕ. | ಸಂಧಿಗಳು: ವಿಮರ್ಶ ವನ್ನುಳಿದು ಇತರ ನಾಲ್ಕು.<br>ಅಂಕಗಳು: ಮೂರು; ಮೊದಲ ಅಂಕದ ಕಾಲಪ್ರಮಾಣ ಹನ್ನೆರಡು ನಾಲಿಕೆ;<br>ಎರಡನೆಯದಕ್ಕೆ ನಾಲ್ಕು;<br>ಮೂರನೆಯದಕ್ಕೆ ಎರಡು.<br>ಮೊದಲ ಅಂಕದಲ್ಲಿ ಎರಡು ಸಂಧಿಗಳು. |

| ರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| | | | | ಬಿಂದು ಪ್ರವೇಶಕಗಳು ಇರುವುದಿಲ್ಲ. ವಸ್ತುಸ್ವಭಾವ ದೈವ ಶತ್ರು–ಇವುಗಳಿಂದುಂಟಾದ ಮೂರು ಕಪಟಗಳು, ಧರ್ಮಾರ್ಥ ಕಾಮವೆಂಬ ಮೂರು ಶೃಂಗಾರಗಳು, ಯುದ್ಧ, ಗಾಳಿ, ಬೆಂಕಿ ಈ ಮೂರು ವಿದ್ರವಗಳು– ಅಂಕಕ್ಕೊಂದರಂತೆ ಬರತಕ್ಕದ್ದು. ಪ್ರಹಸನದಂತೆ ವೀಥ್ಯಂಗಗಳನ್ನು ಬಳಸಿಕೊಳ್ಳಬಹುದು. |
| ೮. ವೀಥಿ :<br>೩–೬೨ ನೋಡಿ.<br>ಉದಾ.:–(ಮಾಲವಿಕಾ)ಇ., | ಭಾಣದಂತೆಯೇ | ಒಂದು ಅಥವಾ ಎರಡು ಪಾತ್ರಗಳು. | ಶೃಂಗಾರದ ಸೂಚನೆ, ಕ್ವಚಿತ್ತಾಗಿ ಇತರ ರಸಗಳು. | ಸಂಧಿ: ಭಾಣದಂತೆ.<br>ಅಂಕ: ಭಾಣದಂತೆ.<br>ವೃತ್ತಿ : ಕೈಶಿಕೀ. |

| ರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| ೯. ಉತ್ಸೃಷ್ಟಿಕಾಂಕ (ಅಂಕ) : ೩-೬೩ ನೋಡಿ. ಉದಾ.:- (ಶರ್ಮಿಷ್ಠಾ-ಯಯಾತಿ) ಇ., | ಕಲ್ಪಿತ (ಸ್ತ್ರೀಯರ ದುಃಖ) | ಸಾಮಾನ್ಯ ಮನುಷ್ಯ ಪಾತ್ರಗಳು. | ಕರುಣ ಪ್ರಧಾನ | ಸಂಧಿ: ಭಾಣದಂತೆ ವೃತ್ತಿ: ಭಾಣದಂತೆ. ಯುದ್ಧ ಹಾಗೂ ಜಯಪರಾಜಯಗಳನ್ನು ಮಾತಿನಲ್ಲಿ ತೋರಿಸತಕ್ಕದ್ದು. |
| ೧೦. ಈಹಾಮೃಗ : ೩-೬೪ ನೋಡಿ. ಉದಾ.:-(ಕುಸುಮಶೇಖರ-ವಿಜಯ) ಇ., | ಮಿಶ್ರ (ಇಚ್ಛೆಯಿಲ್ಲದ ದಿವ್ಯಸ್ತ್ರೀಯನ್ನು ಅಪಹರಿಸಿಕೊಂಡು ಹೋಗುವುದು ಇ.,) | ಉದ್ಧತ ನಾಯಕರು ಹಾಗೂ ಪ್ರತಿನಾಯಕರು; ದಿವ್ಯಮರ್ತ್ಯಾದಿಗಳಾರಾದರೂ ಆಗಬಹುದು. | ಶೃಂಗಾರಾಭಾಸ | ಸಂಧಿಗಳು: ಮೂರು. ಅಂಕಗಳು: ನಾಲ್ಕು. ವಿರೋಧಕ್ರೋಧಗಳಿದ್ದರೂ ಯುದ್ಧವಿಲ್ಲ; ಮಹಾತ್ಮನ ವಧೆ ಕೂಡದು. |

**ಅನುಬಂಧ : ೫**

(೧–೧೦ಕ್ಕೆ ಸಂಬಂಧಿಸಿ)

# ಅಷ್ಟಾದಶ ಉಪರೂಪಕಗಳು

ಪ್ರಸ್ತುತ ಗ್ರಂಥದಲ್ಲಿ 'ಉಪರೂಪಕ'ಗಳನ್ನು ಹೇಳಿಲ್ಲ(ನೋಡಿ : ೧–೧೦ರ ಟಿಪ್ಪಣಿ). ಭರತಮುನಿಯ 'ನಾಟ್ಯಶಾಸ್ತ್ರ'ದಲ್ಲಿ ಕೂಡ ಉಪರೂಪಕಗಳನ್ನು ಉಲ್ಲೇಖಿಸಿಲ್ಲ. ಆದರೆ ನಾ.ಶಾ.ದಲ್ಲಿ ಉಪರೂಪಕಗಳಲ್ಲಿ ಮೊದಲನೆಯದಾದ 'ನಾಟಿಕಾ'ವನ್ನು ಮಾತ್ರ ಲಕ್ಷಿಸಿದೆ. ಅದನ್ನನುಸರಿಸಿ ಈ ಗ್ರಂಥದಲ್ಲೂ ನಾಟಿಕೆಯ ಲಕ್ಷಣ ಬಂದಿದೆ(೩–೪೬ರಿಂದ ೫೨ ನೋಡಿ; ೩–೪೬ರ ವ್ಯಾಖ್ಯಾದಿಗಳನ್ನೂ ಗಮನಿಸಿ).

ಮುಂದೆ, ಪ್ರಸಿದ್ಧವಾಗಿರುವ ಹದಿನೆಂಟು ಉಪರೂಪಕಗಳನ್ನು ಪಟ್ಟಿಮಾಡಿಕೊಟ್ಟಿದೆ. ಉಪರೂಪಕಗಳ ಸಂಖ್ಯೆಯನ್ನು ಬೇರೆ ಬೇರೆ ಅಲಂಕಾರಿಕರು ಬೇರೆಬೇರೆಯಾಗಿ (೭ರಿಂದ ೨೦ರವರೆಗೆ) ಹೇಳಿರುವುದುಂಟು; ಲಕ್ಷಣವೂ ಬೇರೆಬೇರೆ ಗ್ರಂಥಗಳಲ್ಲಿ ಸ್ವಲ್ಪ ಬೇರೆಬೇರೆಯಾಗಿರುವುದುಂಟು.

ಕೆಳಗಿನ ಪಟ್ಟಿಯಲ್ಲಿ–ನಾಟಿಕಾಲಕ್ಷಣಕ್ಕಾಗಿ ಈ ಗ್ರಂಥವನ್ನೆ ಆಧಾರವಾಗಿಟ್ಟುಕೊಂಡಿದೆ; ಉಳಿದವುಗಳ ಲಕ್ಷಣ ಹಾಗೂ ಉದಾಹರಣೆಗಳಿಗಾಗಿ 'ಸಾಹಿತ್ಯದರ್ಪಣ'ವನ್ನು ಆಧರಿಸಿದೆ. ಸಾ.ದ.ದ ೬ನೆಯ ಪರಿಚ್ಛೇದದಲ್ಲಿ (ಕಾರಿಕೆ : ೨೭೬ರಿಂದ ೩೧೩) ಉಪರೂಪಕಗಳನ್ನು ಲಕ್ಷಿಸಲಾಗಿದೆ.

| ಉಪರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| ೧. ನಾಟಿಕಾ :<br>ಉದಾ.:- ರತ್ನಾವಲೀ,<br>ವಿದ್ಧಶಾಲಭಂಜಿಕಾ | ಕಲ್ಪಿತ | ಧೀರಲಲಿತನೂ ಪ್ರಖ್ಯಾತನೂ<br>ಆದ ರಾಜ ನಾಯಕ;<br>ರಾಜವಂಶಜಳೂ ಪ್ರಗಲ್ಭೆಯೂ<br>ಗಂಭೀರೆಯೂ ಮಾನವತಿಯೂ,<br>ನಾಯಕನು ಕನಿಷ್ಠೆಯನ್ನು<br>ಪ್ರೇಮಿಸುವಲ್ಲಿ ಕಷ್ಟ ತರು<br>ವವಳೂ ಆದ ಜ್ಯೇಷ್ಠೆ;<br>ರಾಜವಂಶಜಳೂ ಮುಗ್ಧೆಯೂ<br>ದಿವ್ಯಳೂ ಮನೋಹರೆಯೂ<br>ಅಂತಃಪುರಾದಿ ಸಂಬಂಧದಿಂದ<br>ನಾಯಕನಿಗೆ<br>ಸಮೀಪಳೂ ಆದ ಕನಿಷ್ಠೆ;<br>ವಿಶೇಷ ಸ್ತ್ರೀ ಪಾತ್ರಗಳು.<br>(ಸಾ.ದ.ದ ಪ್ರಕಾರ ನಾಯಕ<br>ಧೀರೋದಾತ್ತನಾದ ರಾಜ.) | ಶೃಂಗಾರ ಪ್ರಧಾನ | ಅಂಕ: ನಾಲ್ಕು.<br>ವೃತ್ತಿ: ಕೈಶಿಕಿಯ ನಾಲ್ಕು<br>ಅಂಗಗಳು ನಾಲ್ಕು<br>ಅಂಕಗಳೊಡನೆ<br>ಕೂಡಿಕೊಂಡಂತೆ ಇರತಕ್ಕದ್ದು. |

| ಉಪರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| **೨. ತ್ರೋಟಕ :**<br>ಉದಾ:- ಸ್ತಂಭಿತರಂಭ,<br>ವಿಕ್ರಮೋರ್ವಶೀಯ | ದಿವ್ಯಮಾನುಷ ಸಂಬಂಧಿಯಾದ ವಸ್ತು | ಪ್ರತಿ ಅಂಕದಲ್ಲೂ ವಿದೂಷಕ ಬರತಕ್ಕದ್ದು. | ಶೃಂಗಾರ ಪ್ರಧಾನ | ಅಂಕಗಳು: ಐದು, ಏಳು, ಎಂಟು ಅಥವಾ ಒಂಬತ್ತು. |
| **೩. ಗೋಷ್ಠೀ :**<br>ಉದಾ:- ರೈವತಮದನಿಕಾ | ಅನುದಾತ್ತ | ಒಂಬತ್ತು ಅಥವಾ ಹತ್ತು ಪ್ರಾಕೃತ ಪುರುಷ ಪಾತ್ರಗಳು; ಐದಾರು ಸ್ತ್ರೀ ಪಾತ್ರಗಳು. | ಕಾಮಶೃಂಗಾರ | ಸಂಧಿ: ಗರ್ಭವಿಮರ್ಶಗಳಿಲ್ಲ.<br>ಅಂಕ: ಒಂದೇ.<br>ವೃತ್ತಿ : ಕೈಶಿಕೀ. |
| **೪. ಸಟ್ಟಕ :**<br>ಉದಾ:- ಕರ್ಪೂರಮಂಜರೀ | ನಾಟಿಕೆಯಂತೆ | ನಾಟಿಕೆಯಂತೆ | ಅದ್ಭುತ ಪ್ರಧಾನ | ಪ್ರವೇಶಕ ವಿಷ್ಕಂಭಗಳಿಲ್ಲ.<br>ಅಂಕಗಳಿಗೆ 'ಜವನಿಕೆ' ಎನ್ನುತ್ತಾರೆ.<br>ಪೂರ್ಣ ಪ್ರಾಕೃತಪಾತ್ಯ. |
| **೫. ನಾಟ್ಯರಾಸಕ :**<br>ಉದಾ:- ನರ್ಮವತೀ,<br>ವಿಲಾಸವತೀ | ? | ಉದಾತ್ತನಾಯಕ; ಅವನಂಥ ಪೀಠಮರ್ದ ಉಪನಾಯಕ; ವಾಸಕಸಜ್ಜಾ ನಾಯಿಕೆ. | ಹಾಸ್ಯಪ್ರಧಾನ; ಶೃಂಗಾರಪೋಷಕ | ಸಂಧಿ: ಮುಖನಿರ್ವಹಣಗಳು (ಕೆಲವರ ಮತದಂತೆ ಪ್ರತಿಮುಖ ಮಾತ್ರ ಇಲ್ಲ.)<br>ಹತ್ತು ಲಾಸ್ಯಾಂಗಗಳು.<br>ಅಂಕ : ಒಂದೇ.<br>ಬಹುತಾಲಲಯಗಳನ್ನುಳ್ಳದ್ದು. |

| ಉಪರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| ೬. ಪ್ರಸ್ಥಾನಕ :<br>ಉದಾ:- ಶೃಂಗಾರತಿಲಕ | ಸುರಾಪಾನದಿಂದ<br>ಇಷ್ಟಾರ್ಥ<br>ನೆರವೇರುವ<br>ಬಹುವಿಲಾಸದ ಕಥೆ. | ನಾಯಕ ದಾಸ;<br>ಉಪನಾಯಕ ಹೀನ; ನಾಯಿಕೆ<br>ದಾಸಿ. | ? | ಅಂಕ: ಎರಡು.<br>ವೃತ್ತಿ: ಭಾರತೀ ಕೈಶಿಕೀ.<br>ಲಯತಾಲಾದಿಗಳಿರುತ್ತವೆ. |
| ೭. ಉಲ್ಲಾಪ್ಯ :<br>ಉದಾ:- ದೇವೀಮಹಾದೇವ | ದಿವ್ಯ;<br>ಯುದ್ಧಾದಿಗಳು<br>ಬಹಳ | ಉದಾತ್ತನಾಯಕ;<br>ನಾಲ್ವರು<br>ನಾಯಿಕೆಯರು. | ಹಾಸ್ಯ<br>ಶೃಂಗಾರಕರುಣ. | ಅಂಕ: ಒಂದೇ(ಮೂರು ಎಂದು<br>ಕೆಲವರ ಮತ).<br>'ಶಿಲ್ಪಕ'ದ ಅಂಗಗಳಿಂದ<br>ಕೂಡಿದ್ದು.(ಶಿಲ್ಪಕ : ೧೩ನೆಯದು<br>ನೋಡಿ.) ಅಸ್ರಗೀತಗಳಿಂದ<br>ಮನೋಹರವಾದದ್ದು. |
| ೮. ಕಾವ್ಯ :<br>ಉದಾ:- ಯಾದವೋದಯ | ? | ಉದಾತ್ತ ನಾಯಕ<br>ನಾಯಿಕೆಯರು; ವರ್ಣಮಾತ್ರದಲ್ಲಿ<br>ಶುದ್ಧಳಾದ<br>ಗಣಿಕೆ(?) | ಹಾಸ್ಯ ಪ್ರಧಾನ;<br>ಶೃಂಗಾರಪೋಷಕ. | ಸಂಧಿ: ಮುಖ, ಪ್ರತಿಮುಖ,<br>ನಿರ್ವಹಣ.<br>ಅಂಕ: ಒಂದೇ.<br>ವೃತ್ತಿ : ಆರಭಟೀ ಇಲ್ಲ.<br>ಖಂಡಮಾತ್ರಾ, ದ್ವಿಪದಿ,<br>ಭಗ್ನತಾಳ–ಇವುಗಳಿಂದ<br>ಕೂಡಿದ್ದು. |

| ಉಪರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| ೯. ಪ್ರೇಂಖಣ :<br>ಉದಾ:- ವಾಲೀವಧ | ದ್ವಂದ್ವಯುದ್ಧ ಸಂಫೇಟಗಳಿಂದ ಕೂಡಿದ ವಸ್ತು. | ಹೀನನಾಯಕ; ಸೂತ್ರಧಾರನಿಲ್ಲ. | ? | ಸಂಧಿ: ಗರ್ಭಾವಮರ್ಶಗಳಿಲ್ಲ.<br>ಅಂಕ : ಒಂದೇ.<br>ವಿಷ್ಕಂಭಪ್ರವೇಶಕಗಳಿಲ್ಲ.<br>ವೃತ್ತಿಗಳು: ಎಲ್ಲವೂ.<br>ನಾಂದೀಪ್ರರೋಚನಗಳು ನೇಪಥ್ಯದಲ್ಲಿ. |
| ೧೦. ರಾಸಕ :<br>ಉದಾ:- ಮೇನಕಾಹಿತ | ಉತ್ತರೋತ್ತರ ಉದಾತ್ತಭಾವಗಳು ವಿಶೇಷವಾಗಿರುವಂಥದು. | ಮೂರ್ಖನಾಯಕ;<br>ಖ್ಯಾತನಾಯಿಕೆ;<br>ಐದು ಪಾತ್ರಗಳು;<br>ಸೂತ್ರಧಾರನಿಲ್ಲ. | ? | ಸಂಧಿ: ಮುಖನಿರ್ವಹಣಗಳು (ಕೆಲವರ ಮತದಂತೆ ಪ್ರತಿಮುಖವೂ ಉಂಟು).<br>ಅಂಕ : ಒಂದೇ.<br>ವೀಥ್ಯಂಗ ಹಾಗೂ ಕಲೆಗಳಿಂದ ಕೂಡಿದ್ದು.<br>ವೃತ್ತಿ: ಭಾರತೀ ಕೈಶಿಕೀ.<br>ಭಾಷಾವಿಭಾಷಾಭೂಯಿಷ್ಠ.<br>ಶ್ಲೇಷೆಯುಳ್ಳ ನಾಂದಿಯಿರುತ್ತದೆ. |

| ಉಪರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| ೧೧. **ಸಂಲಾಪಕ :** ಉದಾ:- ಮಾಯಕಾಪಾಲಿಕ | ಪುರದ ಮುತ್ತಿಗೆ ಛಲ ಸಂಗ್ರಾಮ ವಿದ್ರವ ಗಳಿಂದ ಕೂಡಿದ್ದು. | ಪಾಷಂಡ ನಾಯಕ. | ಶೃಂಗಾರಕರುಣ ಗಳಲ್ಲದೆ ಉಳಿದ ರಸಗಳು | ಅಂಕ: ಮೂರು ಅಥವಾ ನಾಲ್ಕು. ವೃತ್ತಿ: ಭಾರತೀ ಕೈಶಿಕೀಗಳಿಲ್ಲ. |
| ೧೨. **ಶ್ರೀಗದಿತ :** ಉದಾ:- ಕ್ರೀಡಾರಸಾತಲ | ಪ್ರಖ್ಯಾತ | ಪ್ರಖ್ಯಾತ ಹಾಗೂ ಉದಾತ್ತ ನಾಯಕ; ಪ್ರಸಿದ್ಧ ನಾಯಿಕೆ. | ? | ಸಂಧಿ: ಗರ್ಭವಿಮರ್ಶಗಳಿಲ್ಲ. ಅಂಕ: ಒಂದೇ. ವೃತ್ತಿ : ಭಾರತೀಪ್ರಚುರ. 'ಶ್ರೀ' ಎಂಬ ಶಬ್ದ ವಿಶೇಷ ವಾಗಿರುತ್ತದೆ. (ಲಕ್ಷ್ಮಿಯ ಪಾತ್ರವಿದ್ದು ಗಾಯನ ಪಾತ್ರಗಳಿರುವ ಭಾರತೀಪ್ರಾಯ ಏಕಾಂಕವೇ ಶ್ರೀಗದಿತವೆಂದು ಕೆಲವರ ಮತ.) |

| ಉಪರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| ೧೩. ಶಿಲ್ಪಕ :<br>ಉದಾ:- ಕನಕಾವತೀ - ಮಾಧವ | ಶ್ಮಶಾನಾದಿಗಳ ವರ್ಣನೆಯಿರುವಂಥದು. | ಬ್ರಾಹ್ಮಣ ನಾಯಕ;<br>ನೀಚ ಉಪನಾಯಕ. | ಶಾಂತಹಾಸ್ಯಗಳಿಲ್ಲ. | ಅಂಕ: ನಾಲ್ಕು.<br>ವೃತ್ತಿ: ಎಲ್ಲವೂ.<br>ಈ ಇಪ್ಪತ್ತೇಳು ಅಂಗಗಳಿಂದ ಕೂಡಿದ್ದು: ಆಶಂಸಾ, ತರ್ಕ, ಸಂದೇಹ, ತಾಪ, ಉದ್ವೇಗ, ಪ್ರಸಕ್ತಿ, ಪ್ರಯತ್ನ, ಗ್ರಥನ, ಉತ್ಕಂಠಾ, ಅವಹಿತ್ಥಾ, ಪ್ರತಿಪತ್ತಿ, ವಿಲಾಸ, ಆಲಸ್ಯ, ಬಾಷ್ಪ, ಪ್ರಹರ್ಷ, ಆಶ್ವಾಸ, ಮೂಢತೆ, ಸಾಧನಾ, ಅನುಗಮ, ಉಚ್ಛ್ವಾಸ, ವಿಸ್ಮಯ, ಲಾಭ, ಸ್ಮೃತಿ, ಸಂಫೇಟ, ವೈಶಾರದ್ಯ, ಪ್ರಬೋಧನ, ಚಮತ್ಕೃತಿ. |
| ೧೪. ವಿಲಾಸಿಕಾ :<br>ಉದಾ : ?<br>(ಕೆಲವರು ಇದಕ್ಕೆ ವಿನಾಯಿಕಾ ಎನ್ನುತ್ತಾರೆ?) | ಸ್ವಲ್ಪ ಕಥಾವಸ್ತು. | ಹೀನನಾಯಕ; ವಿದೂಷಕ ವಿಟ ಪೀಠಮರ್ದರಿರುತ್ತಾರೆ. | ಶೃಂಗಾರಪ್ರಧಾನ | ಸಂಧಿ: ಗರ್ಭವಿಮರ್ಶಗಳಿಲ್ಲ.<br>ಅಂಕ: ಒಂದೇ.<br>ಹತ್ತು ಲಾಸ್ಯಾಂಗಗಳೂ ಇರುತ್ತವೆ.<br>ಒಳ್ಳೆಯ ನೇಪಥ್ಯವಿರುತ್ತದೆ. |

| ಉಪರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| ೧೫. ದುರ್ಮಲ್ಲಿಕಾ :<br>ಉದಾ :– ಬಿಂದುಮತೀ | ಮೂರು ನಾಲಿಕೆಯ ಮೊದಲ ಅಂಕದಲ್ಲಿ ವಿಟಕ್ರೀಡೆ, ಐದು ನಾಲಿಕೆಯ ಎರಡನೆಯದರಲ್ಲಿ ವಿದೂಷಕವಿಲಾಸ, ಆರು ನಾಲಿಕೆಯ ಮೂರನೆಯದರಲ್ಲಿ ಪೀಠಮರ್ದವಿಲಾಸ, ಹತ್ತು ನಾಲಿಕೆಯ ನಾಲ್ಕನೆಯದರಲ್ಲಿ ನಾಗರಿಕವಿಲಾಸ–<br>ಹೀಗಿರುತ್ತದೆ. | ನ್ಯೂನನಾಯಕ;<br>ನಾಗರಿಕ ಪಾತ್ರಗಳು. | ? | ಸಂಧಿ: ಗರ್ಭವಿಲ್ಲ.<br>ಅಂಕ: ನಾಲ್ಕು.<br>ವೃತ್ತಿ: ಕೈಶಿಕೀ ಭಾರತೀಗಳು. |
| ೧೬. ಪ್ರಕರಣಿಕಾ :<br>ಉದಾ:– ? | ನಾಟಿಕೆಯಂತೆಯೇ. | ವರ್ತಕಾದಿನಾಯಕ;<br>ನಾಯಕ ವಂಶಜಳಾದ ನಾಯಿಕೆ. | ನಾಟಿಕೆಯಂತೆಯೇ. | ನಾಟಿಕೆಯಂತೆಯೇ. |

| ಉಪರೂಪಕದ ಹೆಸರು | ವಸ್ತು | ನಾಯಕ ಇ., | ರಸ | ಇತರ ವಿಷಯಗಳು |
|---|---|---|---|---|
| ೧೭. ಹಲ್ಲೀಶ :<br>ಉದಾ:– ಕೇಲಿರೈವತಕ | ? | ಒಬ್ಬ ಪುರುಷ; ಏಳು ಎಂಟು ಅಥವಾ ಹತ್ತು ಸ್ತ್ರೀಯರು. | ? | ಸಂಧಿ: ಮುಖನಿರ್ವಹಣಗಳು.<br>ಅಂಕ: ಒಂದೇ.<br>ವೃತ್ತಿ: ಕೈಶಿಕೀಪ್ರಚಾರ.<br>ಉದಾತ್ತವಾದ ಮಾತು.<br>ಬಹುತಾಲಲಯವುಳ್ಳದ್ದು. |
| ೧೮. ಬಾಣಿಕಾ :<br>ಉದಾ:–ಕಾಮದತ್ತಾ | ? | ಮಂದನಾಯಕ,<br>ಉದಾತ್ತನಾಯಿಕೆ | ? | ಸಂಧಿ : ಮುಖನಿರ್ವಹಣಗಳು.<br>ಅಂಕ: ಒಂದೇ.<br>ವೃತ್ತಿ: ಕೈಶಿಕೀ ಭಾರತೀಗಳು.<br>ಸುಂದರ ನೇಪಥ್ಯವುಳ್ಳದ್ದು.<br>ಈ ಏಳು ಅಂಗಗಳಿರುತ್ತವೆ:<br>ಉಪನ್ಯಾಸ, ವಿನ್ಯಾಸ, ವಿಬೋಧ,<br>ಸಾಧ್ವಸ, ಸಮರ್ಪಣ, ನಿವೃತ್ತಿ,<br>ಸಂಹಾರ. |

## ಪಾರಿಭಾಷಿಕ ಪದಗಳ

# ಅಕಾರಾದಿ ಮತ್ತು ಲಕ್ಷಣಸ್ಥಲಸೂಚಿ

ಉಪಗೂಹನ : ನಿರ್ವಹಣಾಂಗ ೧-೧೦೮
ಉಪನ್ಯಾಸ : ಪ್ರತಿಮುಖಾಂಗ ೧-೬೩
ಉಪಚಾರ : ಮಾನವ ಉಪಚಾರ ೪-೬೮
ಉಪಸಂಹಾರ : ಕಾವ್ಯಸಂಹಾರ ನೋಡಿ ೧-೧೦೯
ಉಪಸಂಹೃತಿ : ನಿರ್ವಹಣ ನೋಡಿ ೧-೯೬
ಉಪಹಸಿತ : ಹಾಸಭೇದ ೪-೮೩
ಉಪೇಕ್ಷಾ : ಉಪಚಾರ ೪-೬೯
ಊಢಾ : ಅನ್ಯಾಭೇದ ೨-೩೨
ಚಿಂತಾ : ಅಯೋಗಾವಸ್ಥೆ ೪-೬೨
ಚೂಲಿಕಾ : ಅರ್ಥೋಪಕ್ಷೇಪಕ ೧-೧೧೯
ಛಲ : ವೀಥ್ಯಂಗ ೩-೧೮
ಛಲನ : ಅವಮರ್ಶಾಂಗ ೧-೯೦
ಜಡತಾ : ವ್ಯಭಿಚಾರಿ ೪-೧೫
ಜಡತಾ : ಅಯೋಗಾವಸ್ಥೆ ೪-೬೦
ಜನಾಂತ (ಜನಾಂತಿಕ) : ನಿಯತಶ್ರಾವ್ಯ ೧-೧೨೬
ಜುಗುಪ್ಸಾ : ಸ್ಥಾಯಿಭಾವ ೪-೮೦
ಜ್ಯೇಷ್ಠ (ಉತ್ತಮ) : ಪಾತ್ರಭೇದ ೨-೭೫
ಜ್ಯೇಷ್ಠಾ : ನಾಯಿಕಾಭೇದ ೨-೩೦
ಡಿಮ : ರೂಪಕಭೇದ ೩-೫೯
ತರ್ಕ : ವ್ಯಭಿಚಾರಿ ೪-೩೬
ತಾಂಡವ : ನರ್ತನಭೇದ ೧-೧೫
ತಾತ : ಸಂಬೋಧನೆ ೨-೧೦೧
ತೇಜ(ಸ್) : ನಾಯಕನ ಸತ್ತ್ವಗುಣ ೨-೨೧
ತ್ರೋಟಕ : ಗರ್ಭಾಂಗ ೧-೭೭, ೭೭ (ಅ)
ತ್ರಾಸ : ವ್ಯಭಿಚಾರಿ ೪-೨೦
ತ್ರಿಗತ : ವೀಥ್ಯಂಗ ೩-೧೭
ತ್ರಿಗೂಢ : ಲಾಸ್ಯಾಂಗ ೩-೫೪
ತ್ರಿವರ್ಗ: ಕಾರ್ಯ ನೋಡಿ ೧-೨೪
ದಕ್ಷಿಣ : ಶೃಂಗಾರನಾಯಕಭೇದ ೨-೮
ದಶರೂಪ(ಕ) : ರೂಪಕಭೇದಗಳು ೧-೧೧
ದಶಾವಸ್ಥೆ : ಅಯೋಗಾವಸ್ಥೆ ೪-೬೦
ದಾನ : ಉಪಚಾರ ೪-೬೯

ಗರ್ಭ : ಸಂಧಿಭೇದ ೧-೬೬, ೬೭
ಗರ್ವ : ವ್ಯಭಿಚಾರಿ ೪-೨೩
ಗಾಂಭೀರ್ಯ : ನಾಯಕನ ಸತ್ತ್ವಗುಣ ೨-೧೯
ಗುಣಕಥಾ : ಅಯೋಗಾವಸ್ಥೆ ೪-೬೦
ಗೇಯಪದ : ಲಾಸ್ಯಾಂಗ ೩-೫೪
ಗ್ರಥನ : ನಿರ್ವಹಣಾಂಗ ೧-೧೦೦
ಗ್ಲಾನಿ : ವ್ಯಭಿಚಾರಿ ೪-೧೧
ಚಾಪಲ (ಚಪಲತಾ) : ವ್ಯಭಿಚಾರಿ ೪-೪೨
ಚಿಂತಾ : ವ್ಯಭಿಚಾರಿ ೪-೧೯
ಧೀರಾ : ಪ್ರಗಲ್ಭಾಭೇದ ೨-೩೦
ಧೀರಾಧೀರಾ : ಮಧ್ಯಾಭೇದ ೨-೨೮
ಧೀರಾಧೀರಾ : ಪ್ರಗಲ್ಭಾಭೇದ ೨-೩೦
ಧೀರೋದಾತ್ತ : ನಾಯಕಭೇದ ೨-೫
ಧೀರೋದ್ಧತ : ನಾಯಕಭೇದ ೨-೬
ಧೃತಿ : ವ್ಯಭಿಚಾರಿ ೪-೧೪
ಧೃಷ್ಟ : ಶೃಂಗಾರನಾಯಕಭೇದ ೨-೧೧
ಧೈರ್ಯ: ನಾಯಿಕೆಯ ಗುಣಾಲಂಕಾರ ೨-೫೯
ನತಿ : ಉಪಚಾರ ೪-೬೯
ನರ್ಮ : ಪ್ರತಿಮುಖಾಂಗ ೧-೫೭
ನರ್ಮ : ಕೈಶಿಕ್ಯಂಗ ೨-೭೯
ನರ್ಮಗರ್ಭ : ಕೈಶಿಕ್ಯಂಗ ೨-೮೨
ನರ್ಮದ್ಯುತಿ : ಪ್ರತಿಮುಖಾಂಗ ೧-೫೮
ನರ್ಮಸ್ಫಿಂಜ(ನ.ಸ್ಫೂರ್ಜ, ನ.ಸ್ಫುಂಜ ಇ.,) : ಕೈಶಿಕ್ಯಂಗ ೨-೮೦
ನರ್ಮಸ್ಫೋಟ : ಕೈಶಿಕ್ಯಂಗ ೨-೮೧
ನಾಟಕ : ರೂಪಕಭೇದ ೩-೧
ನಾಟಿಕಾ : ಉಪರೂಪಕ ೩-೪೬ರಿಂದ ೫೨
ನಾಟ್ಯ : ರೂಪಕಪ್ರದರ್ಶನ ೧-೭
ನಾಯಕ : ಪಾತ್ರಭೇದ ೨-೧
ನಾಯಿಕಾ : ಪಾತ್ರಭೇದ ೨-೨೪
ನಾಲಿಕಾ : ವೀಥ್ಯಂಗ ೩-೨೩
ನಿದ್ರಾ : ವ್ಯಭಿಚಾರಿ ೪-೨೮

# ಉದ್ಧೃತ ಶ್ಲೋಕಗಳ ಅಕಾರಾದಿ



---

‘ಶ್ಲೋಕಾರಂಭ’ದ ಮುಂದೆ ಕೊಟ್ಟಿರುವುದು, ಆಯಾ ಶ್ಲೋಕಗಳು ಈ ಗ್ರಂಥದ ಯಾವ ಪುಟದಲ್ಲಿ ಉದ್ಧೃತವಾಗಿರುವುವೆಂಬುದನ್ನು ಸೂಚಿಸುವ ಸಂಖ್ಯೆ.

# ಸಹಾಯಕ ಸಾಹಿತ್ಯ

ಪ್ರಸ್ತುತ ಗ್ರಂಥದಲ್ಲಿ ಉದ್ಧೃತವಾದ ಪ್ರಾಚೀನ ಗ್ರಂಥಗಳ ಹಾಗೂ ಪ್ರಾಚೀನ ಗ್ರಂಥಕಾರರ ಸಮಗ್ರ ಪಟ್ಟಿ ಮುಂದಿನ 'ಉದ್ಧೃತ ಗ್ರಂಥಗಳು' ಮತ್ತು 'ಉದ್ಧೃತ ಗ್ರಂಥಕರ್ತರು'ಎಂಬವುಗಳ ಅಡಿಯಲ್ಲಿದೆ. ಉಳಿದ ಗ್ರಂಥಗಳನ್ನು 'ಇತರ ಸಹಾಯಕ ಗ್ರಂಥಗಳು' ಎಂಬುದರ ಕೆಳಗೆ ಹೆಸರಿಸಿದೆ.

ಧನಿಕನಿಂದ ಮಾತ್ರವೇ ಉದ್ಧೃತವಾದ ಗ್ರಂಥಗಳ ಪಟ್ಟಿಗೆ ಪು. xxxviii (ಪೀಠಿಕೆ) ನೋಡಿ. ಪ್ರಸ್ತುತ ಗ್ರಂಥವನ್ನು ಸಿದ್ಧಗೊಳಿಸಲು ಸಹಾಯಕವಾದ 'ದಶರೂಪಕ' ಸಂಸ್ಕರಣಗಳು ಹಾಗೂ ಅನುವಾದಗಳು–ಇವುಗಳ ವಿವರಕ್ಕೆ ಪು. xlvii-l (ಪೀಠಿಕೆ) ನೋಡಿ.

## ೧. ಉದ್ಧೃತ ಗ್ರಂಥಗಳು

**ಅಗ್ನಿಪುರಾಣ** : ಭಾಗಶಃ ಅಲಂಕಾರಶಾಸ್ತ್ರವಿಷಯಗಳನ್ನೊಳಗೊಂಡ ಪುರಾಣ; ಕರ್ತೃ–ತಿಳಿಯದು; ಕಾಲ–ಕ್ರಿ.ಶ.೯ನೆಯ ಶ.ದಿಂದ ಈಚಿನದು.

**ಅನರ್ಘರಾಘವ** : ನಾಟಕ; ಕರ್ತೃ–ಮುರಾರಿ; ಕಾಲ–ಕ್ರಿ.ಶ. ೭೦೦–೯೦೦ರ ನಡುವೆ(?)

**ಅಭಿಜ್ಞಾನಶಾಕುಂತಲಾ** : ನಾಟಕ; ಕರ್ತೃ–ಕಾಳಿದಾಸ; ಕಾಲ–ಕ್ರಿ.ಶ. ಸು. ೪೦೦

**ಅಭಿದಾನರತ್ನಮಾಲಾ** : ಕೋಶ ; ಕರ್ತೃ–ಭಟ್ಟಹಲಾಯುಧ; ಕಾಲ–ಕ್ರಿ.ಶ. ೯೫೦

**ಅಭಿನಯದರ್ಪಣ** : ನರ್ತನಶಾಸ್ತ್ರ; ಕರ್ತೃ–ನಂದಿಕೇಶ್ವರ; ಕಾಲ–ಕ್ರಿ.ಶ. ೧೩ನೇ ಶ.ಕ್ಕಿಂತ ಹಿಂದೆ.

**ಅಭಿನವಭಾರತೀ** : ಭರತನಾಟ್ಯಶಾಸ್ತ್ರದ ವ್ಯಾಖ್ಯಾನ; ಕರ್ತೃ–ಅಭಿನವಗುಪ್ತ; ಕಾಲ–ಕ್ರಿ.ಶ. ೯೮೦–೧೦೨೦; ಬರೋಡಾದ 'ಗಾಯಕ್‌ವಾಡ್ ಓರಿಯಂಟಲ್ ಸೀರೀಸ್'ನಲ್ಲಿ ನಾಟ್ಯಶಾಸ್ತ್ರಸಮೇತವಾಗಿ ಮೊದಲ ಮೂರು ಭಾಗಗಳು ಮಾತ್ರ ಪ್ರಕಟವಾಗಿವೆ.

**ಅಮರುಶತಕ** : ಶೃಂಗಾರಮುಕ್ತಕಗಳು; ಕರ್ತೃ–ಅಮರುಕ; ಕಾಲ–ಕ್ರಿ.ಶ. ೮೦೦ಕ್ಕಿಂತ ಹಿಂದೆ.

**ಅಲಂಕಾರಶೇಖರ** : ಅಲಂಕಾರಗ್ರಂಥ; ಕರ್ತೃ–ಕೇಶವ ಮಿಶ್ರ; ಕಾಲ–ಕ್ರಿ.ಶ. ೧೬ನೇ ಶ.ದ ಉತ್ತರಭಾಗ.

**ಉತ್ತರರಾಮಚರಿತ** : ನಾಟಕ; ಕರ್ತೃ–ಭವಭೂತಿ; ಕಾಲ–ಕ್ರಿ.ಶ.ಸು. ೭೦೦.

**ಉದಾತ್ತರಾಘವ** : ನಾಟಕ; ಕರ್ತೃ–ಮಾಯುರಾಜ; ಅನುಪಲಬ್ಧ.

**ಏಕಾವಳೀ** : ಅಲಂಕಾರಗ್ರಂಥ; ಕರ್ತೃ–ವಿದ್ಯಾಧರ; ಕಾಲ–ಕ್ರಿ.ಶ.ಸು. ೧೩೦೦

**ಔಚಿತ್ಯವಿಚಾರಚರ್ಚಾ** : ಕಾವ್ಯಶಾಸ್ತ್ರವಿಷಯಕ; ಕರ್ತೃ–ಕ್ಷೇಮೇಂದ್ರ; ಕಾಲ–ಕ್ರಿ.ಶ. ೧೦೩೭–೧೦೬೬.

**ಕರ್ಪೂರಮಂಜರಿ** : ಪ್ರಾಕೃತ ರೂಪಕ (ಸಟ್ಟಕ); ಕರ್ತೃ–ರಾಜಶೇಖರ; ಕಾಲ–ಕ್ರಿ.ಶ. ಸು. ೯೦೦.

**ಕವಿಕಂಠಾಭರಣ** : ಕಾವ್ಯವಿಷಯಕ; ಕರ್ತೃ–ಕ್ಷೇಮೇಂದ್ರ; ಕಾಲ–ಕ್ರಿ.ಶ. ೧೦೩೭–೧೦೬೬.

**ಕಾದಂಬರೀ** : ಗದ್ಯಕಾವ್ಯ; ಕರ್ತೃ–ಭಟ್ಟಬಾಣ (ಉತ್ತರಾರ್ಧ ಆತನ ಪುತ್ರನಿಂದ ರಚಿತವಾಯಿತೆಂದು ಪ್ರತೀತಿ); ಕಾಲ–ಕ್ರಿ.ಶ. ೬೦೬–೬೪೬.

**ಕಾಮಸೂತ್ರ** : ಕಾಮಶಾಸ್ತ್ರ; ಕರ್ತೃ–ವಾತ್ಸ್ಯಾಯನ.

**ಕಾವ್ಯನಿರ್ಣಯ** : ಅಲಂಕಾರಗ್ರಂಥ; ಕರ್ತೃ–ಧನಿಕ(ಪ್ರಸ್ತುತ 'ದಶರೂಪಕ'ದ ವ್ಯಾಖ್ಯಾಕರ್ತೃ); ಅನುಪಲಬ್ಧ.

**ಕಾವ್ಯಪ್ರಕಾಶ** : ಕಾವ್ಯಶಾಸ್ತ್ರ; ಕರ್ತೃ–ಮಮ್ಮಟ; ಕಾಲ–ಕ್ರಿ.ಶ. ೧೦೫೦–೧೧೦೦.

**ಕಾವ್ಯಾನುಶಾಸನ** : ಅಲಂಕಾರಶಾಸ್ತ್ರ; ಕರ್ತೃ–ವಾಗ್ಭಟ; ಕಾಲ–ಕ್ರಿ.ಶ. ಸು.೧೪ನೇ ಶ.

**ಕಾವ್ಯಾನುಶಾಸನ** : ಅಲಂಕಾರಶಾಸ್ತ್ರ; ಕರ್ತೃ–ಹೇಮಚಂದ್ರ; ಕಾಲ–ಕ್ರಿ.ಶ. ೧೦೮೮–೧೧೭೨.

**ಕಾವ್ಯಾಲಂಕಾರ** : ಅಲಂಕಾರಶಾಸ್ತ್ರ; ಕರ್ತೃ–ಭಾಮಹ; ಕಾಲ–ಕ್ರಿ.ಶ. ೭೦೦–೭೫೦.

**ಕಾವ್ಯಾಲಂಕಾರ** : ಅಲಂಕಾರಶಾಸ್ತ್ರ; ಕರ್ತೃ–ರುದ್ರಟ; ಕಾಲ–ಕ್ರಿ.ಶ. ೮೨೫–೮೭೫.

**ಕಾವ್ಯಾಲಂಕಾರಸಂಗ್ರಹ** : ಅಲಂಕಾರಶಾಸ್ತ್ರ; ಕರ್ತೃ–ಉದ್ಭಟ; ಕಾಲ–ಕ್ರಿ.ಶ. ಸು. ೮೦೦.

**ಕಿರಾತಾರ್ಜುನೀಯ** : ಕಾವ್ಯ; ಕರ್ತೃ–ಭಾರವಿ; ಕಾಲ–ಕ್ರಿ.ಶ. ಸು. ೭ನೇ ಶ.

**ಕುಮಾರಸಂಭವ** : ಕಾವ್ಯ; ಕರ್ತೃ–ಕಾಳಿದಾಸ; ಕಾಲ–ಕ್ರಿ.ಶ. ಸು.೪೦೦.

**ಕುವಲಯಾನಂದ** : ಅಲಂಕಾರಗ್ರಂಥ; ಕರ್ತೃ–ಅಪ್ಪಯ್ಯದೀಕ್ಷಿತ; ಕಾಲ–ಕ್ರಿ.ಶ. ಸು. ೧೬೦೦.

**ಗಾಥಾಸಪ್ತಶತಿ(ಹಾಲಸಪ್ತಶತಿ)** : ಸಂಕಲನ (ಪ್ರಾಕೃತ); ಕರ್ತೃ–ಸಾತವಾಹನ ಹಾಲ; ಕಾಲ–ಕ್ರಿ.ಶ. ೧ ಅಥವಾ ೨ನೇ ಶ.

**ಗೌಡವಾಹೋ** : ಪ್ರಾಕೃತಗ್ರಂಥ; ಕರ್ತೃ–ಮುಂಜ; ಕಾಲ–ಕ್ರಿ.ಶ. ೮ನೇ ಶ.ದ ಪೂರ್ವಾರ್ಧ.

**ಛಲಿತರಾಮ (ಚಲಿತರಾಮ) :** ಅಪ್ರಕಟಿತ ನಾಟಕ.

**ತರಂಗದತ್ತ :** ರೂಪಕ (ಪ್ರಕರಣ) : ಅನುಪಲಬ್ಧ.

**ತಿಲಕಮಂಜರೀ :** ಕಥೆ, ಕರ್ತೃ–ಧನಪಾಲ; ಕಾಲ–ಕ್ರಿ.ಶ. ೧೧ನೇ ಶ.ದ ಉತ್ತರಾರ್ಧ.

**ತ್ರಿಪುರದಾಹ :** ರೂಪಕ(ಡಿಮ); ಅನುಪಲಬ್ಧ.

**ದಶರೂಪಾವಲೋಕ :** ಪ್ರಸ್ತುತ 'ದಶರೂಪಕ'ದಲ್ಲಿ ಬಳಸಿಕೊಂಡಿರುವ ಧನಿಕನ ವ್ಯಾಖ್ಯೆ.

**ದ್ವಿಸಂಧಾನ :** ಕಾವ್ಯ; ಕರ್ತೃ–ಧನಂಜಯ (ದಶರೂಪಕಕರ್ತೃವಲ್ಲ).

**ದೇವಪಾಣಿಕೃತಟೀಕಾ :** 'ದಶರೂಪಕ'ದ ವ್ಯಾಖ್ಯೆ; ಕರ್ತೃ–ದೇವಪಾಣಿ; ಅನುಪಲಬ್ಧ.

**ಧ್ವನ್ಯಾಲೋಕ :** ಕಾವ್ಯಶಾಸ್ತ್ರ; ಕರ್ತೃ–ಆನಂದವರ್ಧನ; ಕಾಲ–ಕ್ರಿ.ಶ. ಸು. ೮೫೦.

**ನವಸಾಹಸಾಂಕಚರಿತ :** ಇತಿಹಾಸಕಾವ್ಯ; ಕರ್ತೃ–ಪದ್ಮಗುಪ್ತ ಅಥವಾ ಪರಿಮಲ; ಕಾಲ–ಕ್ರಿ.ಶ. ೧೧ನೇ ಶ.ದ ಉತ್ತರಭಾಗ.

**ನಾಗಾನಂದ :** ನಾಟಕ; ಕರ್ತೃ–ಹರ್ಷವರ್ಧನ; ಕಾಲ–ಕ್ರಿ.ಶ. ೫೯೦–೬೪೭.

**ನಾಟಕದರ್ಪಣ (ನಾಟ್ಯದರ್ಪಣ) :** ನಾಟ್ಯಶಾಸ್ತ್ರವಿಷಯಕ; ಕರ್ತೃಗಳು–ರಾಮಚಂದ್ರ ಮತ್ತು ಗುಣಚಂದ್ರ; ಕಾಲ–ಕ್ರಿ.ಶ. ಸು. ೧೧೦೦–೧೧೭೫.

**ನಾಟಕಪರಿಭಾಷಾ :** ನಾಟ್ಯಶಾಸ್ತ್ರವಿಷಯಕ; ಕರ್ತೃ–ಶಿಂಗಭೂಪಾಲ; ಕಾಲ–ಕ್ರಿ.ಶ. ಸು. ೧೩೫೦.

**ನಾಟಕಲಕ್ಷಣರತ್ನಕೋಶ :** ನಾಟ್ಯಶಾಸ್ತ್ರವಿಷಯಕ; ಕರ್ತೃ–ಸಾಗರನಂದಿ; ಕಾಲ–ಕ್ರಿ.ಶ. ೯೨೦–೧೧೦೦ರ ನಡುವೆ.

**ನಾಟ್ಯದರ್ಪಣ :** ನಾಟಕದರ್ಪಣ ನೋಡಿ.

**ನಾಟ್ಯಮೀಮಾಂಸಾ (ನಾಟಕಮೀಮಾಂಸಾ) :** ನಾಟ್ಯವಿಷಯಕ; ಕರ್ತೃ–ರುಯ್ಯಕ; ಕಾಲ–ಕ್ರಿ.ಶ. ಸು. ೧೧೫೦; ಅನುಪಲಬ್ಧ.

**ನಾಟ್ಯಶಾಸ್ತ್ರ :** ನಾಟ್ಯವಿಷಯಕವಾದ ಬೃಹದ್ಗ್ರಂಥ; ಕರ್ತೃ–ಭರತಮುನಿ ಎಂದು ಪ್ರತೀತ; ಕಾಲ–ಕ್ರಿ.ಶ. ೧–೨ನೇ ಶತಮಾನಗಳಿಗಿಂತ ಹಿಂದಿನದು.

ಇದರ ಮುದ್ರಣಗಳು :

೧. ಅ. ೧ರಿಂದ ೧೪; ಪ್ಯಾರಿಸ್‌ನಲ್ಲಿ ಮುದ್ರಿತವಾದ್ದು (೧೮೯೮);
ಸಂ : ಜೆ. ಗ್ರೊಸೆಟ್.

೨. ನಿರ್ಣಯಸಾಗರ ಮುದ್ರಣ (ಮೊದಲ ಮುದ್ರಣ : ೧೮೯೪;
ಎರಡನೆಯ ಮುದ್ರಣ : ೧೯೪೩).

೩. ಚೌಖಂಬಾ ಸಂಸ್ಕೃತ ಸೀರೀಸ್ ಮುದ್ರಣ (೧೯೨೬).

೪. ಬರೋಡಾ ಓರಿಯಂಟಲ್ ಸೀರೀಸ್ ಮುದ್ರಣ : ಮೊದಲ ಭಾಗ : ೧೯೨೬; ಎರಡನೆಯ ಭಾಗ : ೧೯೩೪; ಮೂರನೆಯ ಭಾಗ : ೧೯೫೪; ಸಂ : ರಾಮಕೃಷ್ಣ ಕವಿ.

೫. ಆಂಗ್ಲಾನುವಾದ (೧೯೫೦) : ಡಾ॥ ಮನಮೋಹನ್ ಘೋಷ್ ಅವರದು; ಅ. ೧ರಿಂದ ೨೭; ಪ್ರ : ರಾಯಲ್ ಏಸಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್, ಕಲ್ಕತ್ತ.

**ನಾಮಮಾಲಾ :** ಕೋಶ; ಕರ್ತೃ–ಧನಂಜಯ (ದಶರೂಪಕಕರ್ತೃವಲ್ಲ).

**ನೀತಿಶತಕ :** ಕಾವ್ಯ; ಕರ್ತೃ–ಭರ್ತೃಹರಿ; ಕಾಲ–ಕ್ರಿ.ಶ. ಸು. ೭ನೇ ಶ.

**ಪಾಂಡವಾನಂದ :** ನಾಟಕ; ಅನುಪಲಬ್ಧ.

**ಪುಷ್ಪದೂಷಿತಕ :** ರೂಪಕ (ಪ್ರಕರಣ); ಅನುಪಲಬ್ಧ.

**ಪ್ರತಾಪರುದ್ರೀಯ (ಪ್ರತಾಪರುದ್ರಯಶೋಭೂಷಣ) :** ಕಾವ್ಯಾದಿವಿಷಯಕ; ಕರ್ತೃ–ವಿದ್ಯಾನಾಥ; ಕಾಲ–ಕ್ರಿ.ಶ. ೧೪ನೇ ಶ.ದ ಮೊದಲು.

**ಪ್ರತ್ಯಾಭಿಜ್ಞಾನಸೂತ್ರ :** ಶೈವಗ್ರಂಥ; ಕರ್ತೃ–ಉತ್ಪಲದೇವ; ಕಾಲ–ಕ್ರಿ.ಶ. ಸು. ೧೦ನೇ ಶ.

**ಪ್ರಬಂಧಚಿಂತಾಮಣಿ :** ಕರ್ತೃ–ಮೇರುತುಂಗ; ಕಾಲ–ಕ್ರಿ.ಶ. ೧೧ನೇ ಶ.

**ಪ್ರಿಯದರ್ಶಿಕಾ :** ಉಪರೂಪಕ (ನಾಟಿಕಾ); ಕರ್ತೃ–ಹರ್ಷವರ್ಧನ; ಕಾಲ–ಕ್ರಿ.ಶ. ೫೯೦–೬೪೭.

**ಬುದ್ಧಚರಿತ :** ಕಾವ್ಯ; ಕರ್ತೃ–ಅಶ್ವಘೋಷ; ಕಾಲ–ಕ್ರಿ.ಶ. ಸು. ೧೦೦.

**ಬೃಹತ್ಕಥಾ :** ಪೈಶಾಚೀಭಾಷೆಯ ಕಥಾಕೋಶ; ಕರ್ತೃ–ಗುಣಾಢ್ಯ; ಕಾಲ–ಕ್ರಿ.ಶ. ಸು. ೪೦೦–೬೦೦ರ ನಡುವೆ; ಅನುಪಲಬ್ಧ.

**ಬೃಹತ್ಕಥಾಮಂಜರಿ :** ಸಂಸ್ಕೃತ ಬೃಹತ್ಕಥೆ : ಕರ್ತೃ–ಕ್ಷೇಮೇಂದ್ರ; ಕಾಲ–ಕ್ರಿ.ಶ. ೧೦೩೭–೧೦೬೬.

**ಭರ್ತೃಹರಿಶತಕಗಳು :** ನೀತಿಶತಕ, ವೈರಾಗ್ಯಶತಕ, ಶೃಂಗಾರಶತಕ – ನೋಡಿ.

**ಭಾವಪ್ರಕಾಶನ (ಭಾವಪ್ರಕಾಶಿಕಾ) :** ನಾಟ್ಯವಿಷಯಕ; ಕರ್ತೃ–ಶಾರದಾತನಯ; ಕಾಲ–ಕ್ರಿ.ಶ. ೧೧೭೫–೧೨೫೦ರ ನಡುವೆ.

**ಭಾಷಾಭೂಷಣ :** ಕಾವ್ಯಾದಿವಿಷಯಕ; ಕರ್ತೃ–ಜಶವಂತಸಿಂಗ್.

**ಭೋಜಪ್ರಬಂಧ :** ಗದ್ಯಕಾವ್ಯ; ಕರ್ತೃ–ಬಲ್ಲಾಳಕವಿ; ಕಾಲ–ಕ್ರಿ.ಶ. ೧೧ನೇ ಶ.

**ಮಹಾನಾಟಕ** : ೧೦ ಅಂಕಗಳ ಬೃಹತ್ ನಾಟಕ; ಕರ್ತೃ;ಕಾಲ- ತಿಳಿಯದು; ಸಂಕಲನಗಳಲ್ಲದೆ ಮೂಲ ಸರಿಯಾಗಿ ದೊರೆತಿಲ್ಲ.

**ಮಹಾಭಾರತ**

**ಮಹಾವೀರಚರಿತ** : ನಾಟಕ; ಕರ್ತೃ-ಭವಭೂತಿ; ಕಾಲ-ಕ್ರಿ.ಶ. ಸು. ೭೦೦.

**ಮಾಲತೀಮಾಧವ** : ರೂಪಕ (ಪ್ರಕರಣ); ಕರ್ತೃ-ಭವಭೂತಿ.

**ಮಾಲವಿಕಾಗ್ನಿಮಿತ್ರ** : ನಾಟಕ; ಕರ್ತೃ-ಕಾಳಿದಾಸ; ಕಾಲ-ಕ್ರಿ.ಶ. ಸು. ೪೦೦.

**ಮುದ್ರಾರಾಕ್ಷಸ** : ನಾಟಕ; ಕರ್ತೃ-ವಿಶಾಖದತ್ತ; ಕಾಲ-ಕ್ರಿ.ಶ. ಸು. ೪೫೦.

**ಮೃಚ್ಛಕಟಿಕಾ** : ನಾಟಕ; ಕರ್ತೃ-ಶೂದ್ರಕ; ಕಾಲ-ಕ್ರಿ.ಶ. ಸು. ೪೦೦.

**ಮೇಘದೂತ** : ಖಂಡಕಾವ್ಯ; ಕರ್ತೃ-ಕಾಳಿದಾಸ; ಕಾಲ-ಕ್ರಿ.ಶ. ಸು. ೪೦೦.

**ರಘುವಂಶ** : ಕಾವ್ಯ; ಕರ್ತೃ-ಕಾಳಿದಾಸ.

**ರತ್ನಾವಲೀ** : ಉಪರೂಪಕ (ನಾಟಿಕಾ); ಕರ್ತೃ-ಹರ್ಷವರ್ಧನ; ಕಾಲ-ಕ್ರಿ.ಶ. ೫೯೦-೬೪೭.

**ರಸಗಂಗಾಧರ** : ಅಲಂಕಾರಗ್ರಂಥ; ಕರ್ತೃ-ಜಗನ್ನಾಥಪಂಡಿತ; ಕಾಲ-ಕ್ರಿ.ಶ. ೧೬೨೦-೧೬೬೫.

**ರಸತರಂಗಿಣೀ** : ಅಲಂಕಾರಗ್ರಂಥ; ಕರ್ತೃ-ಭಾನುದತ್ತ; ಕಾಲ-ಕ್ರಿ.ಶ. ಸು. ೧೫೦೦.

**ರಸಮಂಜರೀ** : ಅಲಂಕಾರಗ್ರಂಥ; ಕರ್ತೃ-ಭಾನುದತ್ತ; ಕಾಲ-ಕ್ರಿ.ಶ. ಸು. ೧೫೦೦.

**ರಸರತ್ನಹಾರ** : ಅಲಂಕಾರಗ್ರಂಥ; ಕರ್ತೃ-ಶಿವರಾಮ ತ್ರಿಪಾಠಿ; ಕಾಲ-ಕ್ರಿ.ಶ. ೧೮ನೇ ಶ.ದ ಮೊದಲು.

**ರಸಾರ್ಣವಸುಧಾಕರ** : ಅಲಂಕಾರಶಾಸ್ತ್ರ; ಕರ್ತೃ-ಶಿಂಗಭೂಪಾಲ; ಕಾಲ-ಕ್ರಿ.ಶ. ಸು. ೧೩೫೦.

**ರಸಿಕಸಂಜೀವಿನೀ** : 'ಅಮರುಶತಕ'ದ ವ್ಯಾಖ್ಯೆ; ಕರ್ತೃ-ಅರ್ಜುನವರ್ಮ; ಕಾಲ-ಕ್ರಿ.ಶ. ೧೩ನೇ ಶ.ದ ಮೊದಲು.

**ರಾಘವಪಾಂಡವೀಯ** : ದ್ವಿಸಂಧಾನ ನೋಡಿ.

**ರಾಮಾಭ್ಯುದಯ** : ನಾಟಕ; ಕರ್ತೃ-ಯಶೋವರ್ಮ; ಕಾಲ-ಕ್ರಿ.ಶ. ೭ನೇ ಶ.ದ ಕೊನೆ; ಅಪ್ರಕಟಿತ.

**ರಾಮಾಯಣ**

**ವಾಕ್ಯಪದೀಯಕಾರಿಕಾ** : ಸಿದ್ಧಾಂತಗ್ರಂಥ; ಕರ್ತೃ-ಭರ್ತೃಹರಿ (?);ಕಾಲ-ಕ್ರಿ.ಶ. ಸು. ೭ನೇ ಶ.

**ವಾಗ್ಭಟಾಲಂಕಾರ :** ಅಲಂಕಾರಶಾಸ್ತ್ರ; ಕರ್ತೃ–ವಾಗ್ಭಟ; ಕಾಲ–ಕ್ರಿ.ಶ. ೧೨ನೇ ಶ.ದ ಪೂರ್ವಾರ್ಧ.

**ವಿಕ್ರಮೋರ್ವಶೀಯ :** ನಾಟಕ; ಕರ್ತೃ–ಕಾಳಿದಾಸ; ಕಾಲ–ಕ್ರಿ.ಶ. ಸು. ೪೦೦.

**ವಿದ್ಧಶಾಲಭಂಜಿಕಾ :** ಉಪರೂಪಕ (ನಾಟಿಕಾ); ಕರ್ತೃ–ರಾಜಶೇಖರ; ಕಾಲ–ಕ್ರಿ.ಶ. ಸು. ೯೦೦.

**ವೀರಚರಿತ :** ಮಹಾವೀರಚರಿತ ನೋಡಿ.

**ವೇಣೀಸಂಹಾರ :** ನಾಟಕ; ಕರ್ತೃ–ಭಟ್ಟನಾರಾಯಣ; ಕ್ರಿ.ಶ. ೮ನೇ ಶ.

**ವೈರಾಗ್ಯಶತಕ :** ಕಾವ್ಯ; ಕರ್ತೃ–ಭರ್ತೃಹರಿ; ಕಾಲ–ಕ್ರಿ.ಶ. ಸು. ೭ನೇ ಶ.

**ಶಾಕುಂತಲಾ :** ಅಭಿಜ್ಞಾನಶಾಕುಂತಲಾ ನೋಡಿ.

**ಶಾರ್ಙ್ಗಧರಪದ್ಧತಿ :** ಸಂಕಲನ; ಕರ್ತೃ–ಶಾರ್ಙ್ಗಧರ; ಕಾಲ–ಕ್ರಿ.ಶ. ೧೩೬೩.

**ಶಿಶುಪಾಲವಧ :** ಕಾವ್ಯ; ಕರ್ತೃ–ಮಾಘ; ಕಾಲ–ಕ್ರಿ.ಶ. ಸು. ೭ನೇ ಶ.ದ ಉತ್ತರಾರ್ಧ.

**ಶೃಂಗಾರತಿಲಕ :** ಕಾವ್ಯ; ಕರ್ತೃ–ಕಾಳಿದಾಸ (?)

**ಶೃಂಗಾರಪ್ರಕಾಶ :** ಅಲಂಕಾರಶಾಸ್ತ್ರ; ಕರ್ತೃ–ಭೋಜ; ಕಾಲ–ಕ್ರಿ.ಶ. ೧೦೦೫–೧೦೫೪; ಭಾಗಶಃ ಪ್ರಕಟಿತ.

**ಶೃಂಗಾರಶತಕ :** ಕಾವ್ಯ; ಕರ್ತೃ–ಭರ್ತೃಹರಿ; ಕಾಲ–ಕ್ರಿ.ಶ. ಸು. ೭ನೇ ಶ.

**ಸದುಕ್ತಿಕರ್ಣಾಮೃತ :** ಸಂಕಲನ; ಕರ್ತೃ–ಶ್ರೀಧರದಾಸ; ಕಾಲ–ಕ್ರಿ.ಶ. ಸು. ೧೨ನೇ ಶ.

**ಸಮುದ್ರಮಂಥನ :** ಸಮವಕಾರ (?)

**ಸರಸ್ವತೀಕಂಠಾಭರಣ :** ಅಲಂಕಾರಶಾಸ್ತ್ರ; ಕರ್ತೃ–ಭೋಜ; ಕಾಲ–ಕ್ರಿ.ಶ. ೧೦೦೫–೧೦೫೪.

**ಸಾಹಸಾಂಕೀಯಟೀಕಾ :** 'ದಶರೂಪಕ'ದ ಒಂದು ವ್ಯಾಖ್ಯೆ; ಕರ್ತೃ–ಸಾಹಸಾಂಕ; ಅನುಪಲಬ್ಧ.

**ಸಾಹಿತ್ಯದರ್ಪಣ :** ಅಲಂಕಾರಶಾಸ್ತ್ರ; ಕರ್ತೃ–ವಿಶ್ವನಾಥಕವಿರಾಜ; ಕಾಲ–ಕ್ರಿ.ಶ. ೧೩೦೦–೧೩೮೦ರ ನಡುವೆ.

**ಸಾಹಿತ್ಯಸಾರ :** ಅಲಂಕಾರಶಾಸ್ತ್ರ; ಕರ್ತೃ–ಅಚ್ಯುತರಾಯ.

**ಸುಭಾಷಿತರತ್ನಸಂದೋಹ :** ಸಂಕಲನಗ್ರಂಥ; ಕರ್ತೃ–ಅಮಿತಗತಿ; ಕಾಲ–ಕ್ರಿ.ಶ. ೯೯೩.

**ಸುಭಾಷಿತಾವಲೀ :** ಸಂಕಲನ; ಕರ್ತೃ–ವಲ್ಲಭದೇವ; ಕಾಲ–ಕ್ರಿ.ಶ. ಸು. ೧೫ನೇ ಶ.

**ಸುವೃತ್ತತಿಲಕ** : ಛಂದಶ್ಶಾಸ್ತ್ರವಿಷಯಕ; ಕರ್ತೃ–ಕ್ಷೇಮೇಂದ್ರ; ಕಾಲ–ಕ್ರಿ.ಶ. ೧೦೩೭–೧೦೬೬.

**ಸೌಂದರನಂದ**: ಕಾವ್ಯ; ಕರ್ತೃ–ಅಶ್ವಘೋಷ; ಕಾಲ–ಕ್ರಿ.ಶ. ಸು. ೧೦೦.

**ಸಂಗೀತರತ್ನಾಕರ** : ಸಂಗೀತಾದಿಶಾಸ್ತ್ರ; ಕರ್ತೃ–ನಿಃಶಂಕ ಶಾರ್ಙ್ಗದೇವ; ಕಾಲ–ಕ್ರಿ.ಶ. ೧೨೧೦–೧೨೪೭.

**ಹನುಮನ್ನಾಟಕ** : ಮಹಾನಾಟಕ ನೋಡಿ.

**ಹಾಲಸಪ್ತಶತಿ** : ಗಾಥಾಸಪ್ತಶತಿ ನೋಡಿ.

---

# ೨. ಉದ್ಧೃತ ಗ್ರಂಥಕರ್ತರು

**ಅಪ್ಪಯ್ಯದೀಕ್ಷಿತ :** (ಕ್ರಿ.ಶ. ಸು. ೧೬೦೦) 'ಕುವಲಯಾನಂದ' ಇ., ಕರ್ತೃ.

**ಅಭಿನವಗುಪ್ತ :** (ಕ್ರಿ.ಶ. ೯೮೦–೧೦೨೦) ಶೈವದಾರ್ಶನಿಕ ಹಾಗೂ ಆಲಂಕಾರಿಕ; 'ಅಭಿನವಭಾರತೀ' ಇ., ಕರ್ತೃ.

**ಅಮರ :** ಕವಿಯೆಂದು ಧನಿಕನ ಜೊತೆಯಲ್ಲಿ ಹೊಗಳಿಸಿಕೊಳ್ಳಲ್ಪಟ್ಟವ.

**ಅಮಿತಗತಿ :** (ಕ್ರಿ.ಶ. ೯೯೩) 'ಸುಭಾಷಿತರತ್ನಸಂದೋಹ' ಕರ್ತೃ.

**ಅಮೋಘವರ್ಷ :** ಮುಂಜರಾಜ.

**ಅರ್ಜುನವರ್ಮ :** (ಕ್ರಿ.ಶ. ೧೩ನೇ ಶ.ದ ಮೊದಲು) 'ಅಮರುಶತಕ'ಕ್ಕೆ 'ರಸಿಕ ಸಂಜೀವಿನೀ' ವ್ಯಾಖ್ಯೆ ಬರೆದ ಪರಮಾರವಂಶದ ಒಬ್ಬ ದೊರೆ.

**ಅಶ್ಮಕುಟ್ಟ :** ಪ್ರಾಚೀನ ನಾಟ್ಯಮೀಮಾಂಸಕ.

**ಅಶ್ವಘೋಷ :** (ಕ್ರಿ.ಶ. ಸು. ೧೦೦) ಕವಿ, ರೂಪಕಕಾರ; 'ಬುದ್ಧಚರಿತ' ಇ., ಕರ್ತೃ.

**ಆಚಾರ್ಯ :** ಭರತಮುನಿ.

**ಆನಂದವರ್ಧನ :** (ಕ್ರಿ.ಶ. ಸು. ೮೫೦) 'ಧ್ವನ್ಯಾಲೋಕ' ಕರ್ತೃ.

**ಆಶಾಧರ :** 'ಕುವಲಯಾನಂದ'ಕ್ಕೆ ವ್ಯಾಖ್ಯೆ ಬರೆದಾತ.

**ಉತ್ಪಲದೇವ :** (ಕ್ರಿ.ಶ. ಸು. ೧೦ನೇ ಶ.) 'ಪ್ರತ್ಯಾಭಿಜ್ಞಾನಸೂತ್ರ' ಕರ್ತೃ.

**ಉತ್ಪಲರಾಜ :** ಮುಂಜರಾಜ.

**ಉದ್ಭಟ :** (ಕ್ರಿ.ಶ. ಸು. ೮೦೦) 'ಕಾವ್ಯಾಲಂಕಾರಸಂಗ್ರಹ' ಕರ್ತೃ.

**ಉಪೇಂದ್ರ :** ಮಾಳವದ ಅರಸು.

**ಕಮಲಾಯುಧ :** ಒಬ್ಬ ಕವಿ.

**ಕಾಳಿದಾಸ :** (ಕ್ರಿ.ಶ. ಸು. ೪೦೦) ಕವಿ, ರೂಪಕಕಾರ.

**ಕೀರ್ತಿಧರ (ಆಚಾರ್ಯ ಕೀರ್ತಿಧರ) :** 'ನಾಟ್ಯಶಾಸ್ತ್ರ'ಕ್ಕೆ ವ್ಯಾಖ್ಯೆ ಬರೆದವ.

**ಕುಮಾರಿಲಭಟ್ಟ :** (ಕ್ರಿ.ಶ. ಸು. ೭ನೇ ಶ.) ಮೀಮಾಂಸಕ.

**ಕುರವಿರಾಮ :** 'ದಶರೂಪಕ'ಕ್ಕೆ ವ್ಯಾಖ್ಯೆ ಬರೆದವರಲ್ಲೊಬ್ಬ.

**ಕೃಷ್ಣಮಿಶ್ರ :** (ಕ್ರಿ.ಶ. ೧೧ನೇ ಶ.) 'ಪ್ರಬೋಧಚಂದ್ರೋದಯ' ಎಂಬ ನಾಟಕದ ಕರ್ತೃ.

**ಕೋಹಲ :** ಪ್ರಾಚೀನ ನಾಟ್ಯಮೀಮಾಂಸಕ.

**ಕ್ಷೇಮೇಂದ್ರ :** (ಕ್ರಿ.ಶ. ೧೦೩೭–೧೦೬೬); ಬೃಹತ್ಕಥಾಮಂಜರಿ ಇ., ಕರ್ತೃ.

**ಕ್ಷೋಣೀಧರಮಿಶ್ರ :** 'ದಶರೂಪಕ'ಕ್ಕೆ ಟೀಕೆ ಬರೆದವರಲ್ಲೊಬ್ಬ.

**ಗರ್ಗ :** ಪ್ರಾಚೀನ ನಾಟ್ಯಮೀಮಾಂಸಕ.

**ಗುಣಚಂದ್ರ :** (ಕ್ರಿ.ಶ. ಸು. ೧೧೦೦–೧೧೭೫) 'ನಾಟಕದರ್ಪಣ'ದ ಕರ್ತೃಗಳಲ್ಲೊಬ್ಬ.

**ಗುಣಾಢ್ಯ :** (ಕ್ರಿ.ಶ. ೪೦೦–೬೦೦ರ ನಡುವೆ) 'ಬೃಹತ್ಕಥಾ' ಕರ್ತೃ.

**ಗೋವರ್ಧನ :** ಒಬ್ಬ ಕವಿ.

**ಚಂದ್ರಕ :** ಒಬ್ಬ ಕವಿ.

**ಜಗದ್ಧರ :** 'ಮಾಲತೀಮಾಧವ'ಕ್ಕೆ ವ್ಯಾಖ್ಯೆ ಬರೆದವ.

**ತೈಲಪ II :** ಚಾಳುಕ್ಯರ ಅರಸು.

**ದಾಮೋದರಮಿಶ್ರ :** (ಕ್ರಿ.ಶ. ೧೧ನೇ ಶ.) 'ಮಹಾನಾಟಕಾ'ವನ್ನು ಸಂಕಲಿಸಿದಾತ.

**ದೇವಪಾಣಿ :** 'ದಶರೂಪಕ'ಕ್ಕೆ ಟೀಕೆ ಬರೆದವರಲ್ಲೊಬ್ಬ.

**ಧನಪಾಲ :** (ಕ್ರಿ.ಶ. ೧೦ನೇ ಶ.ದ ಉತ್ತರಾರ್ಧ) 'ತಿಲಕಮಂಜರೀ' ಇ.,ಗಳ ಕರ್ತೃ.

**ಧನಿಕ :** ಪ್ರಸ್ತುತ 'ದಶರೂಪಕ'ಕ್ಕೆ 'ದಶರೂಪಾವಲೋಕ' ವ್ಯಾಖ್ಯೆ ಬರೆದವ; 'ಕಾವ್ಯನಿರ್ಣಯ'ಕರ್ತೃ, ಕವಿ.

**ಧನಂಜಯ :** ಪ್ರಸ್ತುತ 'ದಶರೂಪಕ'ದ ಕಾರಿಕಾಕಾರ.

**ಧನಂಜಯ :** 'ದ್ವಿಸಂಧಾನ' 'ನಾಮಮಾಲಾ'ಗಳ ಕರ್ತೃ.

**ಧ್ವನಿಕಾರ :** ಆನಂದವರ್ಧನ.

**ನಖಕುಟ್ಟ :** ಪ್ರಾಚೀನ ನಾಟ್ಯಮೀಮಾಂಸಕ.

**ನಂದಿಕೇಶ್ವರ :** (ಕ್ರಿ.ಶ. ೧೩ನೇ ಶ.ಕ್ಕಿಂತ ಹಿಂದೆ) 'ಅಭಿನಯದರ್ಪಣ' ಕರ್ತೃ.

**ನಾನ್ಯದೇವ :** 'ನಾಟ್ಯಶಾಸ್ತ್ರ'ಕ್ಕೆ ವ್ಯಾಖ್ಯೆ ಬರೆದಾತ.

**ನಿಃಶಂಕ ಶಾರ್ಙ್ಗದೇವ :** (ಕ್ರಿ.ಶ. ೧೨೧೦–೧೨೪೭) 'ಸಂಗೀತರತ್ನಾಕರ' ಕರ್ತೃ.

**ಪದ್ಮಗುಪ್ತ :** (ಕ್ರಿ.ಶ. ೧೦ನೇ ಶ.ದ ಕೊನೆ, ೧೧ರ ಮೊದಲು) 'ನವಸಾಹಸಾಂಕಚರಿತ' ಕರ್ತೃ.

**ಪರಮಾರ :** ಪರಮಾರವಂಶದ ಮೂಲಿಕ.

**ಪರಿಮಳ :** ಪದ್ಮಗುಪ್ತ.

**ಪೃಥ್ವೀವಲ್ಲಭ :** ಮುಂಜರಾಜ.

ಪ್ರಭಾಕರಭಟ್ಟ : (ಕ್ರಿ.ಶ. ಸು. ೬೦೦) ಮೀಮಾಂಸಕ.

ಬಲ್ಲಾಳಕವಿ : (ಕ್ರಿ.ಶ. ೧೧ನೇ ಶ.) 'ಭೋಜಪ್ರಬಂಧ' ಕರ್ತೃ.

ಬಹುರೂಪಮಿಶ್ರ : (ಕ್ರಿ.ಶ. ೧೨೫೦ರ ಈಚಿನವ) 'ದಶರೂಪಕ'ಕ್ಕೆ ವ್ಯಾಖ್ಯೆ ಬರೆದಾತ.

ಬಾದರಿ : ಪ್ರಾಚೀನ ನಾಟ್ಯಮೀಮಾಂಸಕ.

ಬಾಣಭಟ್ಟ : (ಕ್ರಿ.ಶ. ೬೦೬–೬೪೮) ಕಾದಂಬರೀಕರ್ತೃ.

ಬಿಲ್ಹಣ : 'ರಾಜತರಂಗಿಣೀ' ಕರ್ತೃ.

ಭರ್ತೃಹರಿ : (ಕ್ರಿ.ಶ. ಸು. ೭ನೇ ಶ.) 'ಭರ್ತೃಹರಿಶತಕ' (ನೀತಿವೈರಾಗ್ಯಶೃಂಗಾರ ಶತಕ)ಗಳ ಕರ್ತೃ.

ಭಟ್ಟತೌತ : (ಕ್ರಿ.ಶ. ೧೦ನೇ ಶ.) 'ನಾಟ್ಯಶಾಸ್ತ್ರ'ಕ್ಕೆ ವ್ಯಾಖ್ಯೆ ಬರೆದಾತ.

ಭಟ್ಟನಾರಾಯಣ : (ಕ್ರಿ.ಶ. ೮ನೇ ಶ.) 'ವೇಣೀಸಂಹಾರ' ನಾಟಕಕರ್ತೃ.

ಭಟ್ಟನಾಯಕ : (ಕ್ರಿ.ಶ. ಸು. ೯೦೦–೯೨೫) 'ನಾಟ್ಯಶಾಸ್ತ್ರ'ಕ್ಕೆ ವ್ಯಾಖ್ಯೆ ಬರೆದಾತ.

ಭಟ್ಟನೃಸಿಂಹ : 'ದಶರೂಪಕ'ಕ್ಕೆ ವ್ಯಾಖ್ಯೆ ಬರೆದವ.

ಭಟ್ಟಬಾಣ : ಬಾಣಭಟ್ಟ.

ಭಟ್ಟಯಂತ್ರ : 'ನಾಟ್ಯಶಾಸ್ತ್ರ'ಕ್ಕೆ ವ್ಯಾಖ್ಯೆ ಬರೆದವ.

ಭಟ್ಟಲೊಲ್ಲಟ : (ಕ್ರಿ.ಶ. ಸು. ೮೦೦–೮೪೦) 'ನಾಟ್ಯಶಾಸ್ತ್ರ'ಕ್ಕೆ ವ್ಯಾಖ್ಯೆ ಬರೆದವ.

ಭಟ್ಟಹಲಾಯುಧ : (ಕ್ರಿ.ಶ. ೯೫೦) 'ಮೃತಸಂಜೀವಿನೀವ್ಯಾಖ್ಯೆ' 'ಅಭಿಧಾನ ರತ್ನ ಮಾಲಾ' ಕರ್ತೃ.

ಭರತ (ಭರತಮುನಿ) : (ಕ್ರಿ.ಶ. ಸು. ೧–೨ನೇ ಶ.) 'ನಾಟ್ಯಶಾಸ್ತ್ರ' ಕರ್ತೃವೆಂದು ಹೆಸರಾದವ.

ಭವಭೂತಿ : (ಕ್ರಿ.ಶ. ಸು. ೭೦೦) 'ಉತ್ತರರಾಮಚರಿತ' 'ಮಾಲತೀಮಾಧವ' 'ಮಹಾವೀರಚರಿತ'ಗಳ ಕರ್ತೃ.

ಭಾಸ : (ಕ್ರಿ.ಶ. ಸು. ೩೦೦) ಪ್ರಸಿದ್ಧ ರೂಪಕಕಾರ.

ಭೋಜ : (ಕ್ರಿ.ಶ. ೧೦೦೫–೧೦೫೪) 'ಶೃಂಗಾರಪ್ರಕಾಶ' 'ಸರಸ್ವತೀಕಂಠಾಭರಣ'ಗಳ ಕರ್ತೃ.

ಮನು : 'ಮನುಧರ್ಮಶಾಸ್ತ್ರ' ಕರ್ತೃ.

ಮಮ್ಮಟ : (ಕ್ರಿ.ಶ. ೧೦೫೦–೧೧೦೦) 'ಕಾವ್ಯಪ್ರಕಾಶ' ಕರ್ತೃ.

ಮಹೇಂದ್ರ : ಒಬ್ಬ ಕವಿ.

**ಮಾಘ :** (ಕ್ರಿ.ಶ. ಸು. ೭ನೇ ಶ.ದ ಉತ್ತರಾರ್ಧ) 'ಶಿಶುಪಾಲವಧ' ಕರ್ತೃ.

**ಮಾತೃಗುಪ್ತ :** ಪ್ರಾಚೀನ ನಾಟ್ಯಮೀಮಾಂಸಕ.

**ಮಾಯುರಾಜ :** 'ಉದಾತ್ತರಾಘವ' ಕರ್ತೃ.

**ಮುಂಜರಾಜ :** (ಕ್ರಿ.ಶ. ಸು. ೯೭೪–೯೯೬) ಪರಮಾರ ವಂಶದ ದೊರೆ; ಧನಂಜಯನ ಆಶ್ರಯದಾತ.

**ಮುಂಜ :** (ಕ್ರಿ.ಶ. ೮ನೇ ಶ.ದ ಪೂರ್ವಾರ್ಧ) 'ಗೌಡವಾಹೋ' ಕರ್ತೃ.

**ಮೇರುತುಂಗ :** 'ಪ್ರಬಂಧಚಿಂತಾಮಣಿ' ಕರ್ತೃ.

**ಯಶೋವರ್ಮ :** (೭ನೇ ಶ.ದ ಕೊನೆ) 'ರಾಮಾಭ್ಯುದಯ' ಕರ್ತೃ.

**ಯಶೋವರ್ಮ :** (ಕ್ರಿ.ಶ. ೮ನೇ ಶ.ದ ಪೂರ್ವಾರ್ಧ) 'ಗೌಡವಾಹೋ' ಕರ್ತೃ; ಮುಂಜನ ಆಶ್ರಯದಾತ.

**ರಾಮಚಂದ್ರ :** (ಕ್ರಿ.ಶ. ಸು. ೧೧೦೦–೧೧೭೫) 'ನಾಟಕದರ್ಪಣ'ದ ಕರ್ತೃಗಳಲ್ಲಿ ಒಬ್ಬ.

**ರುದ್ರ :** ಒಬ್ಬ ಕವಿ.

**ರುದ್ರಟ :** (ಕ್ರಿ.ಶ. ೮೨೫–೮೭೫) 'ಕಾವ್ಯಾಲಂಕಾರ' ಕರ್ತೃ.

**ರುಯ್ಯಕ :** (ಕ್ರಿ.ಶ. ಸು. ೧೧೫೦) ಆಲಂಕಾರಿಕ, 'ನಾಟ್ಯ(ಟಕ)ಮೀಮಾಂಸಾ' ಕರ್ತೃ.

**ರಂಗನಾಥದೀಕ್ಷಿತ :** 'ವಿಕ್ರಮೋರ್ವಶೀಯ'ಕ್ಕೆ ವ್ಯಾಖ್ಯೆ ಬರೆದವ.

**ವಲ್ಲಭದೇವ :** (ಕ್ರಿ.ಶ. ಸು. ೧೫ನೇ ಶ.) 'ಸುಭಾಷಿತಾವಳಿ' ಕರ್ತೃ.

**ವಸಂತಾಚಾರ್ಯ :** ವಾಕ್ಪತಿರಾಜನ ಕ್ರಿ.ಶ. ೯೭೪ರ ಶಾಸನವೊಂದರಲ್ಲಿ, ದತ್ತಿ ಪಡೆದಾತನೆಂದು, ಉದ್ಧೃತನಾದವ.

**ವಾಕ್ಪತಿ I :** ಪರಮಾರವಂಶದ ಒಬ್ಬ ಅರಸು.

**ವಾಕ್ಪತಿದೇವರಾಜ (ವಾಕ್ಪತಿ II) :** ಮುಂಜರಾಜ.

**ವಿಕಟನಿತಂಬಾ :** ಕವಯಿತ್ರಿ.

**ವಿಜ್ಜಕಾ :** ಕವಯಿತ್ರಿ.

**ವಿದ್ಯಾಧರ :** (ಕ್ರಿ.ಶ. ಸು. ೧೩೦೦) 'ಏಕಾವಳೀ' ಕರ್ತೃ.

**ವಿದ್ಯಾನಾಥ :** (ಕ್ರಿ.ಶ. ೧೪ನೇ ಶ.ದ ಮೊದಲು) 'ಪ್ರತಾಪರುದ್ರೀಯ' ಕರ್ತೃ.

**ವಿಶ್ವನಾಥಕವಿರಾಜ :** (ಕ್ರಿ.ಶ. ೧೩೦೦–೧೩೮೦) 'ಸಾಹಿತ್ಯದರ್ಪಣ' ಕರ್ತೃ.

**ವಿಷ್ಣು :** 'ದಶರೂಪಕ'ಕಾರ ಧನಂಜಯನ ತಂದೆ.

**ವೈರಿಸಿಂಹ I :** ಪರಮಾರವಂಶದ ಒಬ್ಬ ದೊರೆ.

**ವೈರಿಸಿಂಹ II :** ಪರಮಾರವಂಶದ ಒಬ್ಬ ದೊರೆ.

**ಶಂಕುಕ (ಶ್ರೀಶಂಕುಕ) :** (ಕ್ರಿ.ಶ. ಸು. ೮೫೦ ?) 'ನಾಟ್ಯಶಾಸ್ತ್ರ'ಕ್ಕೆ ವ್ಯಾಖ್ಯೆ ಬರೆದವ.

**ಶಂಖ :** ಧನಿಕನೊಡನೆ ಹೊಗಳಲ್ಪಟ್ಟ ಒಬ್ಬ ಕವಿ.

**ಶಾರ್ಙ್ಗದೇವ :** ನಿಃಶಂಕ ಶಾರ್ಙ್ಗದೇವ.

**ಶಾರ್ಙ್ಗಧರ :** (ಕ್ರಿ.ಶ. ೧೩೬೩) 'ಶಾರ್ಙ್ಗಧರಪದ್ಧತಿ' ಕರ್ತೃ.

**ಶಾರದಾತನಯ :** (ಕ್ರಿ.ಶ. ೧೧೭೫–೧೨೫೦ರ ನಡುವೆ) 'ಭಾವಪ್ರಕಾಶನ' ಕರ್ತೃ.

**ಶಿಂಗಭೂಪಾಲ :** (ಕ್ರಿ.ಶ. ಸು. ೧೩೫೦) 'ರಸಾರ್ಣವಸುಧಾಕರ' 'ನಾಟಕಪರಿಭಾಷಾ'ಗಳ ಕರ್ತೃ.

**ಶ್ರೀಧರದಾಸ :** (ಕ್ರಿ.ಶ. ಸು. ೧೨ನೇ ಶ.) 'ಸದುಕ್ತಿಕರ್ಣಾಮೃತ' ಕರ್ತೃ.

**ಶ್ರೀವಲ್ಲಭ :** ಮುಂಜರಾಜ.

**ಷಟ್ಸಹಸ್ರೀಕಾರ :** ಭರತಮುನಿ.

**ಸಾಗರನಂದಿ :** (ಕ್ರಿ.ಶ. ೯೨೦–೧೧೦೦ರ ನಡುವೆ) 'ನಾಟಕಲಕ್ಷಣರತ್ನಕೋಶ' ಕರ್ತೃ.

**ಸಾಹಸಾಂಕ :** 'ದಶರೂಪಕ'ಕ್ಕೆ 'ಸಾಹಸಾಂಕೀಯಟೀಕಾ' ಎಂಬ ವ್ಯಾಖ್ಯೆ ಬರೆದವ.

**ಸಿಂಧುರಾಜ :** ಪರಮಾರವಂಶದ ಒಬ್ಬ ಅರಸು.

**ಸೀಯಕ I :** ಪರಮಾರವಂಶದ ಒಬ್ಬ ದೊರೆ.

**ಸೀಯಕ II (ಶ್ರೀಹರ್ಷ) :** ಪರಮಾರವಂಶದ ಒಬ್ಬ ದೊರೆ.

**ಸುಬಂಧು :** ಪ್ರಾಚೀನ ನಾಟ್ಯಮೀಮಾಂಸಕ.

**ಸುಂದರ :** ಧನಿಕನೊಡನೆ ಹೊಗಳಲ್ಪಟ್ಟ ಒಬ್ಬ ಕವಿ.

**ಹರ್ಷ :** ಪ್ರಾಚೀನ ನಾಟ್ಯಮೀಮಾಂಸಕ.

**ಹರ್ಷವರ್ಧನ (ಶ್ರೀಹರ್ಷ) :** (ಕ್ರಿ.ಶ. ೫೯೦–೬೪೭) 'ರತ್ನಾವಲೀ' 'ಪ್ರಿಯದರ್ಶಿಕಾ' 'ನಾಗಾನಂದ'ಗಳ ಕರ್ತೃ.

**ಹರ್ಷವಿಕ್ರಮ :** ಪ್ರಾಚೀನ ನಾಟ್ಯಮೀಮಾಂಸಕ.

**ಹಲಾಯುಧ :** ಭಟ್ಟಹಲಾಯುಧ.

---

# ೩. ಇತರ ಸಹಾಯಕ ಗ್ರಂಥಗಳು


೧. ಆನಂದವರ್ಧನನ ಕಾವ್ಯಮೀಮಾಂಸೆ ಮತ್ತು ಕನ್ನಡ ಧ್ವನ್ಯಾಲೋಕ — ಡಾ|| ಕೆ. ಕೃಷ್ಣಮೂರ್ತಿ

೨. ಕನ್ನಡ ಕಾವ್ಯಪ್ರಕಾಶ (ಭಾಗ : ೧) — ಡಾ|| ಕೆ. ಕೃಷ್ಣಮೂರ್ತಿ

೩. 'ಕನ್ನಡ ಕೈಪಿಡಿ'ಯಲ್ಲಿನ 'ಅಲಂಕಾರಶಾಸ್ತ್ರವಿಭಾಗ' — ಶ್ರೀ ಎ.ಆರ್. ಕೃಷ್ಣಶಾಸ್ತ್ರೀ

೪. ಭಾರತೀಯ ಕಾವ್ಯಮೀಮಾಂಸೆ — ಶ್ರೀ ತೀ.ನಂ. ಶ್ರೀಕಂಠಯ್ಯ

೫. ಸಂಸ್ಕೃತ ನಾಟಕ — ಶ್ರೀ ಎ.ಆರ್. ಕೃಷ್ಣಶಾಸ್ತ್ರೀ

೬. History and Culture of the Indian People : Vol. 4 - The Age of Imperial Kanauj — (ಭಾರತೀಯ ವಿದ್ಯಾಭವನ)

೭. History of Sanskrit Poetics — Dr. P.V. Kane

೮. History of Sanskrit Poetics — Dr. S.K. De

೯. History of the Paramara Dynasty — Dr. D.C. Ganguly

೧೦. Natyasastra — Dr. Manmohan Ghosh

೧೧. Select Specimens of the Theatre of the Hindus — H.H. Wilson

ಮತ್ತು –

Epigraphia Indica,
Journal of the Royal Asiatic Society,
The Indian Antiquary - ಇವುಗಳ ಕೆಲಕೆಲವು ಸಂಚಿಕೆಗಳು;

Journal of the Oriental Researchನಲ್ಲಿನ ಡಾ.ವಿ. ರಾಘವನ್ ಅವರ ಕೆಲವು ಲೇಖನಗಳು – ಇತ್ಯಾದಿ.

ಧನಂಜಯನ

# ದಶರೂಪಕ

ಅನುವಾದ : ಕೆ. ವಿ. ಸುಬ್ಬಣ್ಣ

ಧನಿಕಕೃತ ದಶರೂಪಾವಲೋಕವ್ಯಾಖ್ಯೆಯ ಅನುವಾದ
ಹಾಗೂ ಇತರ ಸಹಾಯಕ ಸಾಮಗ್ರಿಗಳ ಸಮೇತ

